# ಶೂನ್ಯ ಸಿಂಹಾಸನ





ಗ್ರಂಥಕರ್ತರು :
ವಿದ್ಯಾವಿಭೂಷಣ ಸಾಹಿತ್ಯ ಪ್ರವೀಣ
**ಓ. ಎಲ್. ಲಿಂಗಣ್ಣಯ್ಯ, ಬಿ. ಎ., (ಆನರ್ಸ್)**

ಶ್ರೀ. ಕೇದಾರೇಶ್ವರ ಪ್ರಸನ್ನ :

ಶ್ರೀ ೧೦೦೮ ಕೇದಾರ ಜಗದ್ಗುರು ಮಹಾಸನ್ನಿಧಿಯವ
ರಿಂದ ಶ್ರೀ ಶಾಂತ ಶಿವಾರ್ಯ ಹಿರೇಮಠ ಇವರಿಗೆ
ಈ ಗ್ರಂಥವನ್ನು ಆಶೀರ್ವದಿಸಿದೆ.

ತಾ॥:- 30-6-69

19

ಶ್ರೀ ಶೈಲಕುಮಾರೀ ಗ್ರಂಥಮಾಲೆ — ೨೫ ನೆಯ ಕುಸುಮ

# ಶೂನ್ಯ ಸಿಂಹಾಸನ



ಗ್ರಂಥಕರ್ತರು :

ವಿದ್ಯಾವಿಭೂಷಣ, ಸಾಹಿತ್ಯಪ್ರವೀಣ

ಶ್ರೀ ಓ. ಎಸ್. ಲಿಂಗಣ್ಣಯ್ಯ, ಬಿ.ಎ., (ಆನರ್ಸ್)

೧೯೬೮

೧೯೬೮ — ೧೦೦೦ ಪ್ರತಿಗಳು.



ಶ್ರೀ ಸಾಮಾನ್ಯ ಪ್ರತಿ: ಆರು ರೂಪಾಯಿ
ಶ್ರೀಮಂತಮಾನ್ಯ ಪ್ರತಿ: ಹತ್ತು ರೂಪಾಯಿ

೧೯೬೮



ಮುದ್ರಕರು :
ಸಹಕಾರ ಮುದ್ರಣಾಲಯ, ಚಿತ್ರದುರ್ಗ.

# ಮುನ್ನುಡಿ

''ಶೂನ್ಯ ಸಿಂಹಾಸನ' ಗ್ರಂಥವನ್ನು ಸುಪ್ರಸಿದ್ಧ ಸಾಹಿತಿಗಳೂ, ಇತಿಹಾಸ ತತ್ತ್ವಜ್ಞರೂ ಆದ ಶರಣ ಓ. ಎಸ್. ಲಿಂಗಣ್ಣಯ್ಯನವರು ಬರೆದು "ಮುನ್ನುಡಿ"ಯನ್ನು ಬರೆಯುವ ಅವಕಾಶವನ್ನು ನನಗೆ ಕೊಟ್ಟಿದ್ದಾರೆ. ಇವರು ಶೂನ್ಯ ಸಿಂಹಾಸನವನ್ನು ಜಡವಸ್ತುವೆಂದು ತಿಳಿದಿಲ್ಲ; ಅದೊಂದು ತತ್ವ; ಅದೊಂದು ಅವಸ್ಥೆಯೆಂದು ಹೇಳುತ್ತಾ ಅದಕ್ಕೆ ಒಂದು ಸ್ಥಳ ಇರಬೇಕಾಗಿಲ್ಲ; ಯಾವ ವ್ಯಕ್ತಿಯು ಈ ಶೂನ್ಯಾವಸ್ಥೆಯನ್ನು ಪಡೆಯುತ್ತಾನೋ ಆ ವ್ಯಕ್ತಿಯು ಇದ್ದಲ್ಲೆಲ್ಲಾ ಇರುತ್ತದೆಂದು ಅಭಿಪ್ರಾಯಪಟ್ಟಿದ್ದಾರೆ. ಕೆಲವರು ಶೂನ್ಯಸಿಂಹಾಸನವನ್ನು ಜಡವಸ್ತುವೆಂದು ತಿಳಿದು ಅದರ ಮೇಲೆ ಪ್ರಭು ಅಲ್ಲಮ, ಚನ್ನಬಸವ, ಸಿದ್ಧರಾಮ ಮೊದಲಾದವರು ಮಂಡಿಸಿದ್ದರು; ಅದು ಕಲ್ಯಾಣದ ಕ್ರಾಂತಿಯ ನಂತರ ದೆಹಲಿಗೆ ಸುರಕ್ಷಣೆಯ ದೃಷ್ಟಿಯಿಂದ ಸ್ಥಳಾಂತರಿಸಲ್ಪಟ್ಟಿತು; ಅನಂತರ ನಮ್ಮವರು ಹೋಗಿ ತಂದರು ಎಂದು ಹೇಳುತ್ತಾರೆ. ಅಂತಹವರು ಶೂನ್ಯ ಸಿಂಹಾಸನ ನಮ್ಮ ಗುತ್ತಿಗೆಯ ಸ್ವತ್ತು ಎಂದುಕೊಂಡಿದ್ದಾರೆ. ಈ ವಾದವನ್ನು ತಾತ್ವಿಕ ಹಾಗೂ ಐತಿಹಾಸಿಕ ದೃಷ್ಟಿಗಳಿಂದ ಶರಣ ಓ. ಎಸ್. ಲಿಂಗಣ್ಣಯ್ಯನವರು ಖಂಡಿಸಿದ್ದಾರೆ. ಜಗತ್ತಿನಲ್ಲಿ, ಇಂತಹವಾದಗಳು ನಡೆದುಕೊಂಡೇ ಬಂದಿವೆ. ಲಿಂಗವಂತರಲ್ಲೂ ಇಂಥ ಕೆಲವು ವಾದಗಳಿವೆ. ಪಂಚಾಚಾರ್ಯರ ಲಿಂಗೋದ್ಭವ ಕಲ್ಪನೆ ಮತ್ತು ಶೂನ್ಯ ಸಿಂಹಾಸನದ ಜಡತ್ವದ ಕಲ್ಪನೆ ಇವೆರಡೂ ವಿಚಾರಕ್ಕೆ ಮತ್ತು ತತ್ವಕ್ಕೆ ವಿರೋಧವಾದವುಗಳೇ; ಇತಿಹಾಸಕ್ಕಂತೂ ಇವು ಅಸಂಗತ.

ಈ ದೃಷ್ಟಿಯಿಂದ ಶರಣ ಓ. ಎಸ್. ಲಿಂಗಣ್ಣಯ್ಯನವರು ಶೂನ್ಯ ಸಿಂಹಾಸನದ ಬಗ್ಗೆ ಒಳ್ಳೆಯ ಬೆಳಕನ್ನು ನೀಡಿದ್ದಾರೆ. ಶೂನ್ಯವೆಂದರೆ ಲಿಂಗವಂತ ಧರ್ಮದ ಅರ್ಥದಲ್ಲಿ "ಬಯಲು" ಎಂದರ್ಥ. ಇದನ್ನೇ ನಾವು "ದೇವರು" ಎಂದು ವ್ಯವಹರಿಸುತ್ತೇವೆ. ಈ ದೃಷ್ಟಿಯಿಂದ ಶೂನ್ಯ ಎಂದರೆ ದೇವರೆಂದೂ,

ಸಿಂಹ ಎಂದರೆ ಶ್ರೇಷ್ಠವಾದ ಆಸನ ಎಂದರೆ ಸ್ಥಾನವೆಂದೂ ಅರ್ಥೈಸಬಹುದು. ಇದು ಅವಸ್ಥೆಯೇ ವಿನಾ ಲೋಹದ ಕುಳಿತುಕೊಳ್ಳುವ ಉಪಕರಣವಾಗಲಾಗ ಲಾರದು. ಮಾನವ ಮಾತ್ರರೆಲ್ಲರೂ ದೇವರಿಂದ ಬಂದವರು, ದೇವರಾಗ ಬೇಕಾದವರು. ಈ ತತ್ವದ ಪ್ರಕಾರ ಯಾವುದೇ ಕುಲ, ಗೋತ್ರ, ಲಿಂಗ, ದೇಶ, ಭಾಷೆಗಳ ತಾರತಮ್ಯವಿಲ್ಲದೆ ಪ್ರತಿಯೊಬ್ಬ ವ್ಯಕ್ತಿ "ಶೂನ್ಯ ಸಿಂಹಾಸನ" ವನ್ನೇರಬಲ್ಲನು; ಏರಲೇ ಬೇಕು; ಅಂದರೆ ಶೂನ್ಯಾವಸ್ಥೆಯನ್ನು ಪಡೆಯಲೇ ಬೇಕು. ಇದುವೇ ಪ್ರತಿಯೊಬ್ಬ ವ್ಯಕ್ತಿಯ ಹಕ್ಕು ಮತ್ತು ಲಿಂಗವಂತ ಧರ್ಮದ ಧ್ಯೇಯ.

ಶರಣ ಓ. ಎಸ್. ಲಿಂಗಣ್ಣಯ್ಯನವರು ಲಿಂಗವಂತ ಧರ್ಮದ ನಿಜ ಮರ್ಮವನ್ನು ಬಯಲಿಗಿಟ್ಟು ಪಟ್ಟಭದ್ರರ ಆಕ್ರೋಶಕ್ಕೆ ಗುರಿಯಾಗಿದ್ದಾರೆ. ಈ ಫಲವಾಗಿಯೇ ಈ "ಶೂನ್ಯಸಿಂಹಾಸನ" ಪ್ರಕಟವಾಗುವುದಕ್ಕೆ ಮುಂಚೆಯೇ ಶರಣ ಟಿ. ಜಿ, ಸಿದ್ದಪ್ಪಾರಾಧ್ಯ, ಎಂ. ಎ., ಪಿಹೆಚ್. ಡಿ., ಅವರು ಟೀಕಿ ಸಿದ್ದಾರೆ. ಇವರ ಟೀಕೆಗಳಿಗೆ ತತ್ವದ ಹಾಗೂ ಇತಿಹಾಸದ ಆಧಾರವೇ ಇಲ್ಲ. "ಶೂನ್ಯ ಸಿಂಹಾಸನ" ಒಂದು ಲೋಹದ ಉಪಕರಣವೆಂದೂ ಅದು ಏಕೈಕ ವ್ಯಕ್ತಿಯ ಗುತ್ತಿಗೆಯೆಂದೂ, ಅದನ್ನು ಚನ್ನಬಸವಣ್ಣನು ಮುಲ್ಲೊ ಖಾನನ ವಶಕ್ಕೆ ಕೊಟ್ಟು ದೆಹಲಿಗೆ ಸುರಕ್ಷಣೆಗಾಗಿ ಕಳುಹಿಸಿದನೆಂದೂ ಹೇಳಿ, ಶರಣ ಆರಾಧ್ಯರು ಇತಿಹಾಸ ಹಾಗೂ ವೀರಶೈವ ಧರ್ಮಗಳ ಬಗ್ಗೆ ಇರುವ ತಮ್ಮ ಪರಮಾವಧಿ ಅಜ್ಞಾನವನ್ನು ಪ್ರದರ್ಶಿಸಿಕೊಂಡಿದ್ದಾರೆ. ಇದಕ್ಕೆ ಚಿತ್ರದುರ್ಗದ ಜಗದ್ಗುರುಗಳವರು ಬೆಂಬಲ ಕೊಟ್ಟಿದ್ದಾರೆಂದೂ ಶರಣ ಆರಾಧ್ಯರು 'ಶೂನ್ಯ ಪೀಠದ ಪ್ರಭಾವ' ಎಂಬ ಅವರ ಪುಸ್ತಕದಲ್ಲಿ ಬರೆದು ಕೊಂಡಿದ್ದಾರೆ. ಇದು ನಿಜವಾದಲ್ಲಿ ತುಂಬಾ ವಿಷಾದ. ಧರ್ಮದ ಬಗ್ಗೆ ಧರ್ಮವೇದಿಕೆಯೇ ಇಷ್ಟೊಂದು ದುರ್ದೆಶೆಯಲ್ಲಿದೆಯೆಂಬುದರ ದ್ಯೋತಕ ವಾದೀತು. ಶರಣ ಆರಾಧ್ಯರು ಶೂನ್ಯ ಸಿಂಹಾಸನವನ್ನು ಯಾರಿಗೋ ಕೊಡ ಲಿಕ್ಕೆ ಹೋಗಿ ವೀರಶೈವ ಅನೇಕ ಪಂಗಡಗಳನ್ನು ಅಂದರೆ ಗೌಡ, ಸಾದರು, ನೊಣಬ ವೀರಶೈವರನ್ನು ಶುದ್ಧ ವೀರ್ಯದವರಲ್ಲವೆಂದೂ ತಾವು ಕೆಲವರು ಶುದ್ಧ ವೀರ್ಯದವರೆಂದೂ ಬರೆದುಕೊಂಡಿದ್ದಾರೆ. ಇದಂತೂ ಪರಮಾವಧಿ

ತಿಳಿಗೇಡಿತನ; ಕ್ಷುಲ್ಲಕತನ. ಶುದ್ಧ ಹಾಗೂ ಅಶುದ್ಧತನವನ್ನೂ ಸಿದ್ಧಮಾಡಿ ಕೊಡುವ ಕಾಲವೂ ಬಂದೀತು. ಈ ಮೂಲಕ ಅವರು ವೀರಶೈವರಲ್ಲಿ ವಿಷಬೀಜವನ್ನು ಬಿತ್ತಿದ್ದಾರೆ. ಇದಂತೂ ತುಂಬಾ ಖಂಡನೀಯ ಹಾಗೂ ಅಸಹನೀಯ.

ಒಟ್ಟಾಗಿ ಶರಣ ಓ. ಎನ್. ಲಿಂಗಣ್ಣಯ್ಯನವರು ನೀಡಿರುವ ಬೆಳಕು ವೀರಶೈವರು ಕಣ್ಣು ತೆರೆಯಲೂ ಮತ್ತು ಅಜ್ಞಾನಾಂಧಕಾರದಲ್ಲಿ ಮುಳುಗಿರುವವರ ದಾರಿದೀಪವಾಗಲೂ ನೆರವಾಗಲಿ ಎಂದು ಹಾರೈಸುತ್ತೇನೆ. ಈ ಮುನ್ನುಡಿಯನ್ನು ಬರೆಯಲು ನನಗೆ ಅವಕಾಶ ದೊರೆತುದಕ್ಕಾಗಿ ನಾನು ಕೃತಜ್ಞನಾಗಿದ್ದೇನೆ.

ತಾ|| ೧೧-೪-೧೯೭೮
ಮೈಸೂರು

ಹೆಚ್. ಗಂಗಾಧರನ್, M.A., B.L.,

ಪುಸ್ತಕಗಳು ದೊರೆಯುವ ವಿಳಾಸ :—

೧) ಬಿ. ಎಚ್. ಗಂಗಾಧರಶಾಸ್ತ್ರೀ
4194. ವಿ. ಪಿ. ಬಡಾವಣೆ
ಚಿತ್ರದುರ್ಗ.

೨) ಟಿ. ಎಲ್. ಉಮಾಪತಿಸ್ವಾಮಿ
'ಅಭ್ಯುದಯ' ನಂ. 29. ಹೊರಮನೆ.
13 ನೆಯ ಕ್ರಾಸ್, ವಿಲ್ಸನ್‌ಗಾರ್ಡನ್ಸ್
ಬೆಂಗಳೂರು-27.

ಸೂಚನೆ :- ಐದು ಗ್ರಂಥಗಳಿಗಿಂತ ಕಡಿಮೆಯಾಗಿ ಒಮ್ಮೆ ಕಳಿಸುವುದಿಲ್ಲ. ಅಂಚೆ ವೆಚ್ಚ ಉಚಿತ.

# ಅರ್ಘ್ಯ-ಪಾದ್ಯ

ಚಿತ್ರದುರ್ಗದ ವಿರಕ್ತ ಮುರುಘಾ ಬೃಹನ್ಮಠದಲ್ಲಿ ತಾ॥ ೧೫-೧೦-೧೯೬೪ ನೆಯ ದಿನ ಹಾವೇರಿ ವಿರಕ್ತ ಮ ಠ ದ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳೆಂಬುವರಿಗೆ ಚಿತ್ರದುರ್ಗ ಬೃಹನ್ಮಠದ ವಿರಕ್ತ ಪಟ್ಟಾಧಿಕಾರ ಸಮಾರಂಭ ವಿಜೃಂಭಣೆಯಿಂದ ನಡೆಯಿತು. ಹಾವೇರಿ ವಿರಕ್ತ ಮಠದ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಅಂದು ಚಿತ್ರದುರ್ಗ ವಿರಕ್ತ ಬೃಹನ್ಮಠದ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಮಲ್ಲಿಕಾರ್ಜುನ ಮುರುಘರಾಜೇಂದ್ರ ಮಹಾಸ್ವಾಮಿಗಳಾದರು. ಈ ಸಮಾರಂಭದ ಸ್ವಾಗತ ಸಮಿತಿಯ ಆಶ್ರಯದಲ್ಲಿ ವಿದ್ವದ್ಗೋಷ್ಠಿಯನ್ನು ನಡೆಸಲು ವಿದ್ವತ್ಸಂಭಾವನಾ ಸಮಿತಿಯೊಂದು ಏರ್ಪಟ್ಟಿತ್ತು. ವಿದ್ಯಾ ವಿಭೂಷಣ, ಸಾಹಿತ್ಯ ಪ್ರವೀಣ ಶ್ರೀ ಪಿ. ಎಸ್. ಲಿಂಗಣ್ಣಯ್ಯ, ಬಿ. ಎ., (ಆನರ್ಸ್) ಈ ಸಮಿತಿಯ ಅ ಧ್ಯ ಕ್ಷ ರಾ ಗಿ ಯೂ, ಶ್ರೀ ಆರ್. ಎಂ. ಬಸವಲಿಂಗಯ್ಯನವರು ಮತ್ತು ಪಂಡಿತ ಶ್ರೀ ಚನ್ನಪ್ಪ ಎರೆಸೀಮೆ ಅವರು-ಕಾರ್ಯದರ್ಶಿಗಳಾಗಿಯೂ ಕಾರ್ಯಕಲಾಪಗಳನ್ನು ಅತ್ಯಂತ ಆಸಕ್ತಿಯಿಂದ ನೆರವೇರಿಸಿದರು. ಪಟ್ಟಾಧಿಕಾರ ಸಮಾರಂಭದ ಸಮಯದಲ್ಲಿ ವಿದ್ವದ್ಗೋಷ್ಠಿಯನ್ನು ನಡಸಲು ಸ್ವಾಗತ ಸಮಿತಿಯವರು ಪೂರ್ಣ ಅಭಿಮಾನದಿಂದ ಈ ಉಪ ಸಮಿತಿಗೆ ಒಂದು ಸಾವಿರ ರೂಪಾಯಿಗಳನ್ನು ಕೊಟ್ಟರು. ಅದೇ ಸಮಯದಲ್ಲಿ 'ಚಿನ್ಮೂಲಾದ್ರಿ ದರ್ಶಿನಿ' ಎಂಬ ಪಟ್ಟಾಧಿಕಾರ ಸಂಪುಟ ಗ್ರಂಥವನ್ನು ಪ್ರಕಟಿಸಬೇಕೆಂದೂ ನಿರ್ಧಾರವಾಯಿತು. ಆ ವಿದ್ವದ್ಗೋಷ್ಠಿಗೆ ಸುಮಾರು ಇಪ್ಪತ್ತು ಮಂದಿ ವಿದ್ವಾಂಸರನ್ನು ಆಹ್ವಾನಿಸ ಬಹುದೆಂದೂ ಪ್ರತಿಯೊಬ್ಬ ವಿದ್ವಾಂಸರಿಗೂ ಸ್ವಾಗತ ಸಮಿತಿಯವರು ಶಾಲು ಜೋಡಿಯನ್ನು ಕೊಟ್ಟು ಸಮಾರಂಭದಲ್ಲಿ ಗೌರವಿಸಬಹುದೆಂದೂ, ಆ ವಿದ್ವಾಂಸರಿಗೆ ಚಿತ್ರದುರ್ಗದಲ್ಲಿ ವಸತಿ ಸೌಕರ್ಯ, ಭೋಜನ ವ್ಯವಸ್ಥೆ ಏರ್ಪಡಿಸಿ, ಅವರಿಗೆಲ್ಲಾ ಪ್ರಯಾಣದ ವೆಚ್ಚವನ್ನು ಕೊಡಬಹುದೆಂದೂ ಗೊತ್ತಾಯಿತು. ಕಾರಣಾಂತರದಿಂದ ಅಂದು ಸ್ವಾಗತ ಸಮಿತಿಯ ಸಭೆಗೆ ನಾನೇ ಅಧ್ಯಕ್ಷನಾಗಿದ್ದೆನು. ಈ ಎಲ್ಲಾ ವಿವರಗಳನ್ನೂ ವಿದ್ವತ್ಸಂಭಾವನಾ ಸಮಿತಿಯ ಅಧ್ಯಕ್ಷರೂ

ಇಬ್ಬರು ಕಾರ್ಯದರ್ಶಿಗಳೂ ಶ್ರೀ ಮಠದಲ್ಲಿ ಶ್ರೀ ವಿರಕ್ತಪರ್ಯಾಯ ಮಲ್ಲಿಕಾರ್ಜುನ ಸ್ವಾಮಿಗಳನ್ನು ಕಂಡು ಅವರಿಗೆ ನಿವೇದಿಸಿ ಪ್ರತಿಯೊಬ್ಬ ವಿದ್ವಾಂಸರಿಗೂ ಶ್ರೀ ಮಠದಿಂದ ಇಪ್ಪತ್ತೈದು ರೂಪಾಯಿ ವಿದ್ವತ್ಸಂಭಾವನೆಯನ್ನು ಕೊಡಬೇಕೆಂದೂ ಸಲಹೆ ಮಾಡಿದೆವು. ಅವರು ಪ್ರಸನ್ನ ಚಿತ್ತದಿಂದ ಎಲ್ಲ ವಿವರಗಳನ್ನೂ ಕೇಳಿ, ವಿದ್ವದ್ಗೋಷ್ಠಿಯನ್ನು ಯಶಸ್ವಿಯಾಗಿ ನಡೆಸಬೇಕೆಂದೂ ಶ್ರೀ ಮಠದಿಂದ ನಾಲ್ಕು ಸಾವಿರ ರೂಪಾಯಿ ವೆಚ್ಚವಾದರೂ ಚಿಂತೆಯಿಲ್ಲ; ಪ್ರತಿಯೊಬ್ಬ ವಿದ್ವಾಂಸರಿಗೂ ಇಪ್ಪತ್ತೈದು ರೂಪಾಯಿ ಎಂದರೆ ಕಡಿಮೆ; ನೂರೊಂದು ರೂಪಾಯಿ ವಿದ್ವತ್ಸಂಭಾವನೆಯನ್ನು ಕೊಡಬಹುದೆಂದೂ ಸಮಿತಿಯವರಿಗೆ ವಾಗ್ದಾನ ಮಾಡಿ ಪ್ರೋತ್ಸಾಹಿಸಿದರು. ನೂತನ ಶ್ರೀಗಳವರ ಉದಾರ ಚಿತ್ತವೃತ್ತಿಯನ್ನು ತಿಳಿದು ವಿದ್ವತ್ಸಂಭಾವನಾ ಸಮಿತಿಯವರು ಸನ್ನಿಧಿಯಲ್ಲಿ ತಮ್ಮ ಕೃತಜ್ಞತೆಯನ್ನು ಸಲ್ಲಿಸಿ ಕಾರ್ಯತತ್ಪರರಾದರು. ಸಮಾರಂಭ ನಡೆಯಲು ಕೇವಲ ಹದಿನೈದು ದಿನಗಳ ಕಾಲಾವಕಾಶವಿತ್ತು. 'ಚಿನ್ಮೂಲಾದ್ರಿ ದರ್ಶಿನಿ' ಸಂಪುಟವನ್ನು ಪ್ರಕಟಿಸಲು ಸಾಕಾದಷ್ಟು ಸಮಯವಿಲ್ಲವೆಂದು ಆ ಪ್ರಯತ್ನವನ್ನು ನಿಲ್ಲಿಸಲಾಯಿತು. ಆದರೂ, ವಿದ್ವದ್ಗೋಷ್ಠಿಯನ್ನು ಆ ಮಹಾ ಸಮಾರಂಭದ ಘನತೆಗೆತಕ್ಕಂತೆ ನಡೆಸಲು ಉಪ ಸಮಿತಿಯವರು ಶ್ರದ್ಧಾಸಕ್ತಿಗಳಿಂದ ಶ್ರಮಿಸಿದರು. ಎಲ್ಲಾ ಮತೀಯ ವಿದ್ವಾಂಸರನ್ನೂ ವಿದ್ವದ್ಗೋಷ್ಠಿಯಲ್ಲಿ ಭಾಗವಹಿಸಬೇಂದು ಪ್ರಾರ್ಥಿಸಿ ಉಪ ಸಮಿತಿಯವರು ಸುಮಾರು ಇಪ್ಪತ್ತು ಮಂದಿ ವಿದ್ವಾಂಸರನ್ನು ವಿಶ್ವಾಸದಿಂದ ಆಹ್ವಾನಿಸಿದರು ಬಾಗಲಕೋಟೆಯ ಶ್ರೀ ಬಸವೇಶ್ವರ ಕಾಲೇಜಿನ ಪ್ರಿನ್ಸಿಪಾಲರೂ, ಪ್ರಾಜ್ಞರೂ, ಹಿರಿಯರೂ ಆದ ಡಾ|| ಎಸ್. ಸಿ. ನಂದಿಮಠ್, ಎಂ.ಎ.,ಪಿ.ಹೆಚ್.ಡಿ., ಅವರು ಉಪ ಸಮಿತಿಯ ಪ್ರಾರ್ಥನೆಯನ್ನು ಅಂಗೀಕರಿಸಿ ವಿದ್ವದ್ಗೋಷ್ಠಿಯ ಅಧ್ಯಕ್ಷರಾಗಲು ಕೃಪೆಯಿಟ್ಟು ಒಪ್ಪಿದರು. ಆಹ್ವಾನಿತರಾಗಿದ್ದ ಎಲ್ಲಾ ವಿದ್ವಾಂಸರೂ ಗೋಷ್ಠಿಯಲ್ಲಿ ಭಾಗವಹಿಸಿದರು. ತಾ|| ೧೪-೧೦-೧೯೬೪ ರ ದಿನ ಚಿತ್ರದುರ್ಗ ವಿರಕ್ತ ಮಠದ ಆವರಣದಲ್ಲಿ ಶ್ರೀ ಶ್ರೀ ಮಲ್ಲಿಕಾರ್ಜುನಸ್ವಾಮಿಗಳವರ ಸಮ್ಮುಖದಲ್ಲಿ ವಿದ್ವದ್ಗೋಷ್ಠಿ 'ನಭೋತ ನ ಭವಿಷ್ಯತಿ' ಎಂಬಂತೆ ನಡೆಯಿತು. ಕಡೆಯ ದಿನ ಸ್ವಾಗತ ಸಮಿತಿಯವರು ಪ್ರತಿಯೊಬ್ಬ ವಿದ್ವಾಂಸರಿಗೂ

ಶಾಲು ಜೋಡಿ ಮತ್ತು ಪ್ರಶಸ್ತಿ ಪತ್ರಗಳನ್ನು ನೀಡಿ ಫಲ ತಾಂಬೂಲ ಪುಷ್ಪ ಹಾರಗಳನ್ನಿತ್ತು ತುಂಬಿದ ಸಭೆಯಲ್ಲಿ ಗೌರವಿಸಿದರು.

ಮರು ದಿನ ಬೆಳಿಗ್ಗೆ ಶ್ರೀ ಮಠದಲ್ಲಿ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳಿಗೆ ನೂತನ ವಿರಕ್ತ ಪಟ್ಟಾಧಿಕಾರ ಪ್ರದಾನ ಸಮಾರಂಭ ನಡೆಯಿತು. ಆಗ ಅವರು ಸಂದರ್ಭೋಚಿತ ಅನುಗ್ರಹ ಭಾಷಣವನ್ನು ಮಾಡಿದರು. ಅದೇ ದಿನ ಮಧ್ಯಾಹ್ನ ಡಾ॥ ನಂದಿಮಠ್ ಅವರೂ, ಡಾ॥ ಆರ್. ಸಿ. ಹಿರೇಮಠ್, ಎಂ. ಎ, ಪಿಹೆಚ್. ಡಿ., ಅವರೂ ನಾನೂ ನನ್ನ ಕಾರಿನಲ್ಲಿ ಕುಳಿತು ಚಿತ್ರದುರ್ಗದ ಪ್ರೇಕ್ಷಣೀಯ ಸ್ಥಳಗಳನ್ನು ನೋಡಲು ಹೋಗಿ ಬಂದೆವು. ಆ ವಿದ್ವಾಂಸರು ಅಂಕಲಿಮಠ ಮೊದಲಾದ ಪ್ರಾಚೀನ ಸ್ಮಾರಕಗಳನ್ನೂ ಪುರಾತನ ಕೋಟೆ ಕೊತ್ತಲಗಳನ್ನೂ ನೋಡಿ ಸಂತೋಷಪಟ್ಟರು. ನಾವು ನಾನಾ ವಿಚಾರಗಳನ್ನು ಕುರಿತು ಮಾತನಾಡುತ್ತಾ ಆ ಬೆಟ್ಟದ ತಪ್ಪಲಿನಲ್ಲಿ ಸುತ್ತಾಡಿದೆವು. ಯಾವುದೋ ಮಾತಿನ ಪ್ರಸಂಗದಲ್ಲಿ ಡಾ॥ ನಂದಿಮಠ್ ಅವರು ಈ ದಿನ ಬೆಳಿಗ್ಗೆ ಮಠದಲ್ಲಿ ಸ್ವಾಮಿಗಳು ಅನುಗ್ರಹ ಭಾಷಣದಲ್ಲಿ ಅದೇನೋ ಶಿಖಾ, ಶೈಲ, ಶಿಖಾಪಟ್ಟ ಎಂದು ಹೇಳಿದರು. ಹಾಗೆಂದರೇನು ? ಎಂದು ಕೇಳಿದರು. ಡಾ॥ ಹಿರೇಮಠ್ ಅವರು "ಹೌದು ಅದೇನೋ ನನಗೂ ಗೊತ್ತಾಗಲಿಲ್ಲ" ಎಂದರು. ನಾನು "ಈದಿನ ಪ್ರಾತಃಕಾಲ ಸಮಾರಂಭಕ್ಕೆ ಬಂದಿರಲಿಲ್ಲ; ಆ ಅನುಗ್ರಹ ಭಾಷಣವನ್ನೂ ಓದಿಲ್ಲ" ಎಂದೆನು. ಆದರೂ, ಆ ವಿಚಾರದಲ್ಲಿ ನನಗೆ ಕುತೂಹಲವುಂಟಾಯಿಯಿತು. ನಾವೆಲ್ಲಾ ಅಲ್ಲಲ್ಲಿ ಸುತ್ತಾಡಿ ಬಿಡಾರಕ್ಕೆ ಬಂದಾಯಿತು. ಆ ವಿದ್ವಾಂಸರು ಅದೇ ದಿನ ಚಿತ್ರದುರ್ಗದಿಂದ ಪ್ರಯಾಣ ಮಾಡಿದರು. ನಾನು ಅಂದೇ ಜಗದ್ಗುರು ಶ್ರೀ ಮಲ್ಲಿಕಾರ್ಜುನ ಮುರುಘ ರಾಜೇಂದ್ರ ಮಹಾಸ್ವಾಮಿಗಳ ಅನುಗ್ರಹ ಭಾಷಣವನ್ನು ಓದಿದೆನು. ಆದರಿಂದ ನನ್ನ ಕುತೂಹಲ ಇನ್ನೂ ಹೆಚ್ಚಿತು. ನಾನು ಬಹಳ ಕಾಲ ಚಿತ್ರದುರ್ಗದಲ್ಲಿ ರೆವಿನ್ಯೂ ಅಸಿಸ್ಟೆಂಟ್ ಕಮೀಷನರ್ ಆಗಿದ್ದು ಆಗತಾನೆ ಚಿತ್ರದುರ್ಗ ಡಿಸ್ಟ್ರಿಕ್ಟ್ ಸೆಟ್ಲ್‌ಮೆಂಟ್ ಸೂಪರಿಂಟೆಂಡೆಂಟರಾಗಿ ಅಲ್ಲಿಯೇ ಸರ್ಕಾರಿ ಅಧಿಕಾರಿಯಾಗಿದ್ದೆನು. ನನಗೆ ಸಾಕಾದಷ್ಟು ಬಿಡುವು ದೊರೆಯುತ್ತಿರಲಿಲ್ಲ. ನಾನು ಯಾವಾಗಲೂ ಸಾಹಿತ್ಯಪ್ರೇಮಿ; ಇತಿಹಾಸ ಪ್ರಿಯ. ಸಂಶೋಧನೆಯಲ್ಲಿ ನನಗೆ ತೀವ್ರ

ಆಸಕ್ತಿ. ಆದರೆ ನಾನು ಸಾಹಿತಿಯಲ್ಲ; ಶಾಸ್ತ್ರಜ್ಞನಲ್ಲ; ಪಂಡಿತನಲ್ಲ; ವಿಮರ್ಶಕನಂತೂ ಮೊದಲೇ ಅಲ್ಲ. ಇವಲ್ಲದೆ ನನಗೆ ಕೈತುಂಬಾ ಸರ್ಕಾರಿ ಕೆಲಸ. ನಾನು ಎಂದೂ ಎಲ್ಲಿಯೂ ನನ್ನ ಅಧಿಕಾರ ಕ್ಷೇತ್ರದಲ್ಲಿ ನನ್ನ ಕರ್ತವ್ಯಗಳನ್ನೂ, ಜವಾಬ್ದಾರಿಯನ್ನೂ, ಕಾರ್ಯಗೌರವವನ್ನೂ ಅಲಕ್ಷಿಸಿದವನಲ್ಲ. ಒಂದು ಕಡೆ ಕಾರ್ಯಗೌರವ; ಇನ್ನೊಂದುಕಡೆ ಕುತೂಹಲ! ಆದರೂ, ಕಾರ್ಯಗೌರವಕ್ಕೆ ಚ್ಯುತಿಯಿಲ್ಲದಂತೆ, ಕುತೂಹಲದಿಂದ ಅನೇಕ ಗ್ರಂಥಗಳನ್ನು ಅವಲೋಕಿಸುತ್ತಿದ್ದೆನು. ಹೀಗಿರುವಲ್ಲಿ ತಾ|| ೧೨-೧೨-೧೯೬೫ ರಲ್ಲಿ ನಾನು ಅಧಿಕಾರದಿಂದ ನಿವೃತ್ತನಾದೆನು. ಅಖಂಡ ಮೂವತ್ತು ವರ್ಷಗಳ ಸರ್ಕಾರಿ ಉದ್ಯೋಗ ಮುಗಿಯಿತು. ಅಲ್ಲಿಂದ ಪೂರ್ಣಕಾಲ "ಕಾವ್ಯಶಾಸ್ತ್ರ ವಿನೋದೇನ ಕಾಲೋಗಚ್ಛತಿ ಧೀಮತಾಂ" ಎಂಬ ಪರಿಪಾಠ ನನ್ನಲ್ಲಿ ಬೆಳೆಯಿತು; ನನ್ನ ವ್ಯಾಸಂಗವೂ ತೀವ್ರವಾಯಿತು. ಶಿಖಾ, ಶೈಲ, ಶಿಖಾಪಟ್ಟವೆಂದರೇನು? ಎಂಬಂತೆಯೇ, ಶೂನ್ಯ ಸಿಂಹಾಸನವೆಂದರೇನು? ಅದು ಯಾವಾಗ ಎಲ್ಲಿ ಸ್ಥಾಪಿತವಾಯಿತು? ಮೂಲ ಶೂನ್ಯ ಸಿಂಹಾಸನ ಮಠ ಯಾವುದು? ವಿರಕ್ತನೆಂದರೇನು? ಈ ವಿರಕ್ತಪಂಥ ಪ್ರಾಚೀನವೆ? ಅರ್ವಾಚೀನವೇ? ಚಿತ್ರದುರ್ಗದ ವಿರಕ್ತಮಠ ಯಾವಾಗ ಸ್ಥಾಪಿತವಾಯಿತು? ಇದು ಆ ಸಂಪ್ರದಾಯದಲ್ಲಿ ಮೂಲ ಮಠವೇ? ಶಾಖ ಮಠವೇ? ಆನಂದಪುರ ಮುರಘಾ ಮಠ ಯಾವಾಗ ಉದಯವಾಯಿತು? ಅದು ಚಿತ್ರದುರ್ಗ ಮಠಕ್ಕಿಂತಲೂ ಪ್ರಾಚೀನವಾದುದೇ? ಹುಬ್ಬಳ್ಳಿ ಮೂರು ಸಾವಿರ ಮಠ ಮತ್ತು ಗದುಗು ತೋಂಟದಾರ್ಯ ಮಠ, ಸಿದ್ಧಗಂಗಾ ಮಠ, ಶಿವಗಂಗಾ ಮಠ, ಹರಪನಹಳ್ಳಿ ಮಠ, ಎಡೆಯೂರು ಮಠ, ಇವು ಚಿತ್ರದುರ್ಗ ಮಠಕ್ಕಿಂತಲೂ ಪ್ರಾಚೀನ ಮಠಗಳೇ? ಚಿತ್ರದುರ್ಗದ ಮಠದ ಸ್ಥಾನಮಾನವೇನು? ಅನುಗ್ರಹ ಭಾಷಣದಲ್ಲಿ ಹೇಳಿರುವಂತೆ ಶೂನ್ಯ ಸಿಂಹಾಸನ ದೆಹಲಿ ಬಾದಷಹನ ರಕ್ಷಣೆಯಲ್ಲಿತ್ತೇ? 'ಸಿರಜಂನ ವಂಶರತ್ನಾಕರ' ಚಿತ್ರದುರ್ಗ ವಿರಕ್ತ ಮಠದ ಪೂರ್ವ ಪರಂಪರೆಯನ್ನು ತಿಳಿಸುತ್ತದೆಯೇ? ಮುರಿಗೆಯ ಶಾಂತವೀರರು ಚಿತ್ರದುರ್ಗ ವಿರಕ್ತ ಮಠದ ಮೂಲ ಪುರುಷರೇ? ಹಾಗಾದರೆ ಅವರ ಹೆಸರು 'ನಿರಂಜನ ವಂಶ ರತ್ನಾಕರ'ದಲ್ಲಿಯೋ ಆಗಲಿ ಚಿತ್ರದುರ್ಗ ಮಠದ ವಿರಕ್ತ ಪಟ್ಟಾವಳಿಯಲ್ಲಿಯೋ ಆಗಲಿ ಏಕೆ ಬಂದಿಲ್ಲ? ಅವರ ಕಾಲ ಯಾವುದು? ಚಿತ್ರದುರ್ಗ ವಿರಕ್ತ ಮಠದ ಇಮ್ಮಡಿ ಮುರಿಗೆಯ

ಸ್ವಾಮಿ ಯಾರು ? ಅವರ ಕಾಲ ಯಾವುದು ? ಮುರಿಗೆಯ ಶಾಂತವೀರರೂ ಚಿತ್ರದುರ್ಗದ ಇಮ್ಮಡಿ ಮುರಿಗೆಯಸ್ವಾಮಿಯೂ ಬೇರೆ ಬೇರೆ ವ್ಯಕ್ತಿಗಳಲ್ಲವೆ ? ಬಿಚ್ಚುಗತ್ತಿ ಭರಮಪ್ಪನಾಯಕ ಪಾಳೆಯಗಾರನ ಆಳಿಕೆಯಲ್ಲಿ ಚಿತ್ರದುರ್ಗದ ಮಠ ಸ್ಥಾಪನೆಯಾಯಿತೆ ? ಅವನ ಕಾಲ ಯಾವುದು ? ಇದೇ ಹೆಸರಿನ ಇನ್ನೊಬ್ಬ ಪಾಳೆಯಗಾರನಿದ್ದನೆ ? ಶಿವಾನುಭವ ಪಟ್ಟವೆಂದರೇನು ? ಶಿಖಾ ಪಟ್ಟ ಶಾಸ್ತ್ರೀಯವೆ ? ಅಶಾಸ್ತ್ರೀಯವೆ ? ವಿರಕ್ತರಲ್ಲಿ ಪಂಚಸಮಯ ಗಳುಂಟೆ ? ಆ ಸಮಯಾಚಾರದ ಮಠಗಳು ಯಾವುವು ? ನಾಥ ಪಂಥವೆಂದರೇನು ? ನಾಥಪಂಥ ಈ ವಿರಕ್ತ ಪಂಥದಮೇಲೆ ತನ್ನ ಪ್ರಭಾವವನ್ನು ಬೀರಿತೇ ? ಶ್ರೀಮನ್ನಿರಂಜನ, ಮಹಾರಾಜ, ಜಗದ್ಗುರು ಎಂಬ ಉಪಾಧಿಗಳನ್ನು ಚಿತ್ರ ದುರ್ಗದ ವಿರಕ್ತ ಮಠದವರು ಪಡೆಯ ಬಹುದೆ ? ಈ ಮಠ ತಾನೂ ಜಗದ್ಗುರು ಪೀಠವೆಂದು ಹೇಳಿಕೊಳ್ಳಬಹುದೆ ? ಶೂನ್ಯ ಸಿಂಹಾಸನವೆಂದರೆ ಸಮಗ್ರ ವೀರ ಶೈವ ಧರ್ಮ ಸಿಂಹಾಸನವಲ್ಲವೆ ? ಶರಣ ವರ್ಗದ ಯಾವ ಪಂಗಡದವರಾದರೂ ಈ ಪೀಠಾಧಿಕಾರಿಗಳಾಗಲು ಅರ್ಹರಲ್ಲವೆ ? ಜಂಗಮ ಪದದ ಅರ್ಥ ವ್ಯಾಪ್ತಿ ಯಲ್ಲಿ ಎಲ್ಲ ವರ್ಗದ ಜಂಗಮರೂ ಸೇರಿಲ್ಲವೆ? ಎಲ್ಲಾ ವಿರಕ್ತರೂ ಸರ್ವ ಸಮಾನ ರಲ್ಲವೇ ? ವೀರಶೈವದಲ್ಲಿ ಮೇಲು, ಕೀಳುಗಳನ್ನು ಎಣಿಸಬಹುದೆ ? ವೀರಶೈವ ದಲ್ಲಿ ವಿರಕ್ತ ಧರ್ಮ ಒಂದು ನೂತನ ಪಂಥವಲ್ಲವೆ ? ಚಿತ್ರದುರ್ಗದ ವಿರಕ್ತ ಮಠದಲ್ಲಿ ಶಿಖಾಪಟ್ಟವಿರುವಂತೆ ಇತರ ವಿರಕ್ತ ಮಠಗಳಲ್ಲಿಯೂ ಶಿಖಾ ಪಟ್ಟ ವುಂಟೆ ? ಶಿಖಾಪಟ್ಟ ಶಿವಾನುಭವ ಪಟ್ಟದಿಂದ ಹುಟ್ಟಿದ್ದಲ್ಲವೆ ? ಆದ್ದರಿಂದ, ಶಿಖಾಪಟ್ಟ ಶಿವಾನುಭವ ಪಟ್ಟದ ಶಿಷ್ಯ ಸ್ಥಾನದಲ್ಲಿಡೆಯೆಂದು ಹೇಳಬಹುದಲ್ಲವೆ? ನೂರೊಂದು ವಿರಕ್ತಗಣ ಹದಿನಾರನೆಯ ಶತಮಾನದಲ್ಲಿ ಎಂದರೆ ಇಂದಿಗೆ ಸುಮಾರು ೪೦೦ ವರ್ಷಗಳ ಹಿಂದೆ ರೂಪುಗೊಂಡಿತೆಂದಮೇಲೆ, ಇದು ಪ್ರಾಚೀನ ಆಗಮೋಕ್ತ ವೀರಶೈವದಲ್ಲಿರಲು ಸಾಧ್ಯವೇ? ಬಸವಣ್ಣನವರಿಗಿಂತ ಹಿಂದೆಯೂ ವೀರಶೈವರಲ್ಲಿ ಶೂನ್ಯ ತತ್ವ ವಿರಲಿಲ್ಲವೆ ? ವೈರಾಗ್ಯ ಸಿಂಹಾಸನವೆಂದರೆ, ಕೇದಾರ ಪೀಠವಲ್ಲವೆ ? ಚಿತ್ರದುರ್ಗದ ವಿರಕ್ತ ಮಠ ಆ ಏಕೋರಾಮಾರಾಧ್ಯ ಪೀಠದ ಶಾಖಾ ಮಠವಾಗಿದ್ದ ಚಿತ್ರದುರ್ಗದ ಬೃಹನ್ಮಠವನ್ನು ಆಶ್ರಯಿಸಿ ತನ್ನ ಪಂಥ ವನ್ನು ಇಲ್ಲಿ ಬೆಳೆಯಿಸಿರಬಹುದೆ ? ಇವೇ ಮೊದಲಾದ ಅನೇಕ ವಿಚಾರಗಳನ್ನು ಪ್ರಾಸಂಗಿಕವಾಗಿ ನಾವು ಈ 'ಶೂನ್ಯ ಸಿಂಹಾಸನ' ಗ್ರಂಥದಲ್ಲಿ ವಿವೇಚಿಸಬೇಕಾ

ಯಿತು. ನಾವು 'ಶೂನ್ಯ ಸಿಂಹಾಸನ' ಗ್ರಂಥವನ್ನು ಬರೆಯುತ್ತೇವೆಂದು ಕೆಲವು ವಿವರಗಳನ್ನು ಸೂಚಿಸಿ ತಾ|| ೧-೩ ೧೯೬೬ ರಲ್ಲಿ ಒಂದು ಪ್ರಕಟಣೆಯನ್ನು ಹೊರಡಿಸಿ ಎಲ್ಲಾ ಪ್ರಮುಖ ಮಠಾಧೀಶ್ವರರಿಗೂ, ಸಂಘಗಳಿಗೂ, ಸಂಸ್ಥೆಗಳಿಗೂ, ಅನೇಕ ಧರ್ಮಾಭಿಮಾನಿಗಳಿಗೂ ಕಳಿಸಿದೆವು. ಈ ಗ್ರಂಥವನ್ನು ಅಪೇಕ್ಷಿಸುವವರು ೧೦೦ ರೂಪಾಯಿಗಳನ್ನು ಮುಂಗಡವಾಗಿಯೇ ಕಳುಹಿಸಿಕೊಡಬೇಕೆಂದೂ ಕೋರಿದೆವು. ನಮಗೆ ಅದರಿಂದ ಸಾಕಾದಷ್ಟು ಪ್ರೋತ್ಸಾಹವೂ ಲಭಿಸಿತು. ಆ ನಮ್ಮ ಯೋಜನೆಯ ಆಧಾರದ ಮೇಲೆ ಈ ಗ್ರಂಥವನ್ನು ರಚಿಸಲಾಯಿತು. ಹೀಗೆ ಸಹಾಯಮಾಡಿದ ಮಹನೀಯರಿಗೆಲ್ಲಾ ಆ ಹಣಕ್ಕೆ ತಕ್ಕಷ್ಟು ಮೌಲ್ಯದ ಪ್ರತಿಗಳನ್ನು ಕಳಿಸಿರುತ್ತೇವೆ. ಈ ಎಲ್ಲಾ ಅಭಿಮಾನಿಗಳಿಗೂ ಕೃತಜ್ಞರಾಗಿದ್ದೇವೆ.

ವೀರಶೈವ ಸಮಾಜದಲ್ಲಿ ಸಂಘಟನೆಯಾಗಬೇಕೆಂಬ ಉದ್ದೇಶದಿಂದ ಶರಣಯುಗದಲ್ಲಿ ಬಸವಣ್ಣನವರು ದೀನಾನಾಥರನ್ನೂ, ಶೋಷಿತರನ್ನೂ, ಅಂತ್ಯಜರನ್ನೂ, ಪತಿತರನ್ನೂ, ಸ್ತ್ರೀಕುಲವನ್ನೂ ಕರುಣಾರ್ದ್ರ ಹೃದಯದಿಂದ ಅನುಗ್ರಹಿಸಿ ಅವರನ್ನು ಧಾರ್ಮಿಕ ಕ್ಷೇತ್ರದಲ್ಲಿ ಉದ್ಧಾರಮಾಡಿದರು; ಕಾಯಕವೇ ಕೈಲಾಸವೆಂದು ಸಾರಿದರು. ಅವರು ವರ್ಣಾಶ್ರಮ ಧರ್ಮವನ್ನು ನಿರಾಕರಿಸಿ, ಮಾನವಕುಲವನ್ನು ಶಿವಕುಲವೆಂದು ಹೇಳಿದರು. ಅವರು ಗುರುಲಿಂಗ ಜಂಗಮರಲ್ಲಿ ಅತ್ಯಂತ ಪ್ರೇಮಿಗಳಾಗಿ, ಪ್ರತಿಯೊಬ್ಬ ಸಾಧಕನೂ ಭಕ್ತಸ್ಥಲದಿಂದ ಐಕ್ಯಸ್ಥಲದವರೆಗೂ ವಿಕಾಸಹೊಂದಬಹುದೆಂದು ಬೋಧಿಸಿದರು. ಯಾರು ಬೇಕಾದರೂ ಶಿವಭಕ್ತನಾಗಬಹುದು; ಯಾರು ಬೇಕಾದರೂ ಮಾಹೇಶ್ವರನಾಗಬಹುದು; ಅದು ಸಾಧನೆಯ ಫಲ-ಎಂದು ಹೇಳಿ ಅವರು ಮಾನವಕೋಟಿಯನ್ನು ನೀತಿಮಾರ್ಗದಲ್ಲಿ ನಡೆಯಿಸಿದರು. ಈ ಉದಾತ್ತ ತತ್ತ್ವ ವಿಚಾರ ಪ್ರಸಾರ ಗೋಷ್ಠಿಯ ಅಧ್ಯಕ್ಷ ಪೀಠವನ್ನು ಅವರು ಶೂನ್ಯ ಸಿಂಹಾಸನವೆಂದು ಗೌರವಿಸಿದರು. ಇದು ಅಧ್ಯಾತ್ಮ ಸಿಂಹಾಸನ! ಕಾಲಕ್ರಮದಲ್ಲಿ ಅದು ಧಾರ್ಮಿಕ ಸಿಂಹಾಸನವಾಯಿತು, ಇದು ಮೂಲತಃ ತಾತ್ತ್ವಿಕ ಸಿಂಹಾಸನ! ಪ್ರತಿಯೊಬ್ಬರ ಹೃದಯವೂ ಶೂನ್ಯ ಸಿಂಹಾಸನ! ಅದು ಎಲ್ಲೆಲ್ಲಿಯೂ ಇರಬಲ್ಲದು! ಇಂಥ ತತ್ತ್ವ ಪರಂಪರೆಯಲ್ಲಿ ಚಿತ್ರದುರ್ಗ ವಿರಕ್ತ ಮಠವೂ ಒಂದು. ಈ ಎಲ್ಲಾ ಅಂಶಗಳನ್ನೂ ವಿಮರ್ಶಾತ್ಮಕ ದೃಷ್ಟಿಯಿಂದ ನಾವು ಈ 'ಶೂನ್ಯ

ಸಿಂಹಾಸನ' ಗ್ರಂಥದಲ್ಲಿ ವಿವೇಚಿಸಿರುತ್ತೇವೆ. ನಮ್ಮ ದೃಷ್ಟಿಯೇ ಸರಿ; ನಮ್ಮ ಅಭಿಪ್ರಾಯವೇ ನಿಜ–ಎಂಬ ಮೂಢ ಹಠವಾಗಲಿ, ಶ್ರದ್ಧೆಯಾಗಲಿ ನಮಗಿಲ್ಲ. ಇದು ವಿಜ್ಞಾನಯುಗ. ಸಮಾಜ ಮೂಢ ಸಂಪ್ರದಾಯಗಳನ್ನು ಒಪ್ಪಲಾರದು! ಎಲ್ಲಾ ವಿಚಾರಗಳನ್ನೂ ವೈಜ್ಞಾನಿಕ ದೃಷ್ಟಿಯಿಂದ ಪರಿಶೀಲಿಸುವ ಮನೋಧರ್ಮ ಬೆಳೆಯುತ್ತಿದೆ. ಇದು ಶುಭಪ್ರದ. ಭಾವುಕರ ವೈಯಕ್ತಿಕ ಮನೋವೃತ್ತಿಯನ್ನು ನಾವು ನಿರೋಧಿಸಲಾರೆವು. ತತ್ತ್ವವನ್ನು ಇತಿಹಾಸ ಮುಟ್ಟಲಾರದು. ಆದರೆ, ಲೌಕಿಕ ಜೀವನದಲ್ಲಿ ತತ್ತ್ವವನ್ನು ಪ್ರಯೋಗ ಮಾಡಬಲ್ಲ ವ್ಯಕ್ತಿಯನ್ನಾಗಲಿ, ಸಂಸ್ಥೆಯನ್ನಾಗಲಿ ಇತಿಹಾಸ ಗುರುತಿಸುತ್ತದೆ. ಆ ವ್ಯಕ್ತಿ ಐತಿಹಾಸಿಕ ಪುರುಷನೇ? ಆ ಸಂಸ್ಥೆ ಐತಿಹಾಸಿಕ ಸಂಸ್ಥೆಯೇ? ಎಂದು ಆಧುನಿಕ ಲೋಕ ವಿಚಾರ ಮಾಡುತ್ತದೆ. ಆ ವ್ಯಕ್ತಿಯ ಅಥವಾ ಸಂಸ್ಥೆಯ ಮೂಲವನ್ನು ಇತಿಹಾಸ ಅನ್ವೇಷಣೆ ಮಾಡುತ್ತದೆ. ಅಂಥ ವ್ಯಕ್ತಿಯ ಅಥವಾ ಸಂಸ್ಥೆಯ ಸುತ್ತಲೂ ನಾನಾ ಪವಾಡಗಳ ಜಾಲವೇ ಹೆಣೆದುಕೊಂಡಿರಬಹುದು! ಅದು ಭಾವುಕರ ಮನೋಸುಗುಣದ ಮೇಲೆ ಹರಡಿರುತ್ತದೆ. ಅಂಥ ಜಾಲವನ್ನು ಬಿಡಿಸಿ, ಅದರ ಮರೆಯಲ್ಲಿರುವ ನಿಜವನ್ನು ವಿಚಾರವಂತರು ಹುಡುಕುತ್ತಾರೆ; ಅದರ ಸ್ವರೂಪವನ್ನು ಅರಿಯುತ್ತಾರೆ! ಇದೇ ಸಂಶೋಧನೆ! ಹಾಗೆ, ವಿಚಾರವಂತರು ನಿಜವನ್ನು ಅರಸುವಾಗ ಅವರು ಅದರ ಸುತ್ತಣ ಪವಾಡಗಳ ಜಾಲವನ್ನು ಹರಿಯುವುದಿಲ್ಲ; ಬಿಡಿಸುತ್ತಾರೆ! ಎಂಥ ಅಂಧಸಂಪ್ರದಾಯಗಳು ಆ ನಿಜವನ್ನು ಮುಚ್ಚಿರುತ್ತವೆ ಎಂಬುದನ್ನು ವಿಮರ್ಶೆಯಿಂದ ಅವರು ವಿಶ್ಲೇಷಿಸುತ್ತಾರೆ. ಈ ದೃಷ್ಟಿಯಿಂದಲೇ ನಾವು ಶಿಖಾ, ಶೈಲ, ಶಿಖಾ ಪಟ್ಟ, ಶೂನ್ಯ ಸಿಂಹಾಸನ, ಅದರ ಸಂಪ್ರದಾಯದ ಚಿತ್ರದುರ್ಗದ ವಿರಕ್ತ ಮಠದ ಸ್ಥಾನಮಾನ ಇವುಗಳನ್ನು ಕುರಿತು ಆಸಕ್ತಿಯಿಂದ ಅಭ್ಯಾಸಮಾಡಬೇಕಾಯಿತು. ನಮ್ಮ ವಿಚಾರಲಹರಿಯೇ ಪೂರ್ಣ ಪ್ರವಾಹವಲ್ಲ; ಪಾವನ ತೀರ್ಥವಲ್ಲ! ಇದಕ್ಕಿಂತಲೂ ಪೂರ್ಣತರ ಪ್ರವಾಹವನ್ನು ಕಾಣಲು ಬಯಸುತ್ತೇವೆ; ಇದಕ್ಕಿಂತಲೂ ಪಾವನತರ ತೀರ್ಥದಲ್ಲಿ ಮೀಯಲು ಅಪೇಕ್ಷಿಸುತ್ತೇವೆ! ಆ ಪ್ರವಾಹ ಯಾವ ಮೂಲದಿಂದಲೇ ಬರಲಿ; ಆ ತೀರ್ಥ ಯಾವ ಕ್ಷೇತ್ರದಲ್ಲಿಯೇ ಆವಿರ್ಭವಿಸಲಿ; ಅವು ನಮಗೆ ಪವಿತ್ರವೇ. ಇಲ್ಲದುದನ್ನು ಇದ್ದುದೆಂದು ಸಾಧಿಸುವುದಾಗಲಿ ಇದ್ದುದನ್ನು ಇಲ್ಲದುದೆಂದು ರೂಢಿಸು

ವೃದಾಗಲಿ ಸಂಶೋಧನೆಯ ಲಕ್ಷಣವಲ್ಲ. ಇಂಥ ವೈಚಾರಿಕ ಮನೋಧರ್ಮ ಸಮಾಜದಲ್ಲಿ ಮೂಡಿದರೆ ಅಮೃತ ಸತ್ವಪೂರ್ಣವಾಗುವುದರಲ್ಲಿ ಸಂಶಯವಿಲ್ಲ. ಈ ಮನೋಧರ್ಮ ಎಲ್ಲಾ ವಿರಕ್ತ ಮಠಾಧೀಶ್ವರರಲ್ಲಿಯೂ ಅಂಕುರಿಸಿ ಸಮಾಜ ಕಲ್ಯಾಣವಾಗುತ್ತದೆ. ಬಸವಣ್ಣನವರ ಧರ್ಮ ವಿಶ್ವಧರ್ಮವಾಗು ತ್ತದೆ. ಅಂದು ಮಹಾ ಮಂತ್ರಿ ಬಸವಣ್ಣನವರು ರಾಜತಂತ್ರ ನಿಪುಣರಾ ದ್ದಂತೆಯೇ ತತ್ವಾರ್ಥಚಿಂತಾಮಣಿಯೂ ಆಗಿದ್ದರು ! ಆದರೂ ಅವರು ವೀ ಶೈವ ಧರ್ಮವನ್ನು ವಿಶ್ವಧರ್ಮವಾಗಿ ಮಾಡುವ ಪ್ರಯತ್ನದಲ್ಲಿ ಸಫಲರಾಗಲಿಲ್ಲ! ರಾಜಕೀಯತಂತ್ರ ಪಂಜರದಲ್ಲಿ ಆ ಧರ್ಮ ವೃಷಭ ಸಿಕ್ಕಿಬಿತ್ತು ! ಅವರು ತಮ ಸಂಕಲ್ಪವನ್ನು ಸಾಧಿಸಲು ಮತ್ತೊಮ್ಮೆ ಕನ್ನಡನಾಡಿನಲ್ಲಿ ಮಂತ್ರಿವರ್ಯ 'ಅಭಿನವ ಬಸವ'ರಾಗಿಯೇ ಬಂದಾರು! ಅಂದು ಉತ್ತರ ಕಲ್ಯಾಣದಲ್ಲಿ ಹುಟ್ಟ ಪ್ರಮಥರೇ ಇಂದು ದಕ್ಷಿಣ ಕಲ್ಯಾಣದಲ್ಲಿ ಮೆರೆದಾರು ! ಹಾಗೇನಾದರ ಬಂದರೆ ಅವರು ಶರಣಧರ್ಮ ಪುರುಷ ಪುಂಗವನನ್ನು ರಾಜಕೀಯ ರಂಗಮಂ ಪದ ಮೇಲೆ ನಿಲ್ಲಿಸದಿರಲಿ ! ಅದು ತತ್ವಾರ್ಥಸಾಧನೆಗೆ ಯೋಗ್ಯಸ್ಥ ವಲ್ಲ. ಅದು ಪರಾರ್ಥ ಸಾಧನೆಗೆ ಯೋಗ್ಯವಾದ ಸ್ಥಳ ! ಅಲ್ಲಿ ರಾಜಕಾರ ಚಾತುರ್ಯದ ಸುಂಟರಗಾಳಿ ಬೀಸುತ್ತದೆ ! ಕಣ್ಣಿಗೆ ಮಣ್ಣು ತೂರುತ್ತದೆ! ಅದು ಹಿಡಿದ ದಾರಿಯನ್ನು ತಪ್ಪಿಸುತ್ತದೆ ! ಅದು ಮುಕ್ತಿಮಾರ್ಗದ ಮು ಹಾಸವನ್ನು ಬೀರುವುದಿಲ್ಲ! ಯುಕ್ತಿಮಾರ್ಗದ ಮುಮುನಗೆಯನ್ನು ಸೂಸುತ್ತದೆ "ಎನ್ನವರೊಲಿದು ಹೊನ್ನ ಶೂಲದಲ್ಲಿಕ್ಕಿದರೆನ್ನ ಹೊಗಳಿ, ಹೊಗಳಿ!" ಎಂದು ಬಸವಣ್ಣನವರು ಅಂದೇ ಅಂಗಲಾಚಿಕೊಂಡರು ! ಅವರು ಯೋಜಿಸಿ ಶೂನ್ಯ ಸಿಂಹಾಸನದ ಮೇಲೆ ವಿಶ್ವಧರ್ಮ ಪುರುಷನಿಗೆ ಪಟ್ಟಾಭಿಷೇಕವಾಗಲಿ ಆ ಮೂಲ ಶೂನ್ಯ ಸಿಂಹಾಸನ ಎಲ್ಲಿದೆಯೋ ಬಸವಣ್ಣನವರೇ ಬಂದು ತೋ ಸಲಿ ! ಶರಣದರ್ಮ ಸಂಕೇತವೇ ಶೂನ್ಯ ಸಿಂಹಾಸನ ! ಇದು ತತ್ವಪ್ರಕಾಶ ಭಾವಭದ್ರಾಸನ ! ಅದು ಯಾವ ವಿರಕ್ತನ ಸುಖಾಸನವೂ ಅಲ್ಲ ! ಅದ ಕಾಲಾಂತರದಲ್ಲಿ ಭೌತರೂಪದಲ್ಲಿ ಧಾರ್ಮಿಕ ಸಿಂಹಾಸನವಾಯಿತೇನೋ ಅದು ಹಾಗೆ ಧಾರ್ಮಿಕ ಸಿಂಹಾಸನವಾದಾಗಲೇ ಅದರ ಶಿಖಾ ಶೈಲ ರೂ ಗೊಂಡಿರಬಹುದು. ಪ್ರತಿಯೊಂದು ಮಠದಲ್ಲಿಯೂ ಆಯಾ ಮಠದ ಪರಂಪ ಯಿಂದ ಬಂದ ಶಿಖಾ (ಮೊಹರು) ಮತ್ತು ಶೈಲ (ಪಟ್ಟಮುದ್ರೆ) ಇದ್ದೇ ಇ

ತ್ತವೆ. ಅವು ಇಲ್ಲವೆ ಯಾವ ಮಠದಲ್ಲಿಯೂ ಪಟ್ಟಾಧಿಕಾರ ಪ್ರಧಾನ ನಡೆಯು ವಂತಿಲ್ಲ. ಅವು ಗುರು ಮಠಗಳಲ್ಲಿಯೂ ಉಂಟು; ವಿರಕ್ತಮಠಗಳಲ್ಲಿಯೂ ಉಂಟು. ಅಷ್ಟೇಕೆ, ಎಲ್ಲಾ ಮಠೀಯರ ಪಂಗಡಗಳಲ್ಲಿಯೂ ಇಂಥ ಸಂಕೇತ ಗಳಿರುತ್ತವೆ. ಅದರಂತೆ ಚಿತ್ರದುರ್ಗದ ವಿರಕ್ತಮಠದಲ್ಲಿಯೂ ಆ ಮಠದ ಶಿಖಾಶೈಲಗಳಿರಬೇಕು! ಅವೇನೂ ಕೈಲಾಸದಿಂದ ಇಳಿದು ಬಂದಿಲ್ಲ! ಬಸವಣ್ಣ ನವರು ಅಂಥ ಸಂಕೇತಗಳನ್ನು ನಿರ್ಮಿಸಿದರೆಂದು ಎಲ್ಲಿಯೂ ಹೇಳಿಲ್ಲ. ಚಿತ್ರ ದುರ್ಗದ ವಿರಕ್ತ ಮಠದ ಶಿಖಾ, ಶೈಲ, ಶೂನ್ಯ ಸಿಂಹಾಸನ ಇವು ಆ ಮಠದ ವೈಶಿಷ್ಟ್ಯವನ್ನು ಸ್ಥಾಪಿಸಲಾರವು. ಇವು ಚನ್ನಬಸವಣ್ಣನವರ ಕಾಲದಿಂದ ಸುಮಾರು ಆರು ನೂರು ವರ್ಷಕಾಲ ದೆಹಲಿ ಬಾದಷಹ ರಕ್ಷಣೆಯಲ್ಲಿದ್ದು ವೆಂಬುದ ವಿಶ್ವಾಸಾರ್ಹವಲ್ಲ. ಇತಿಹಾಸ ಈ ವಿಚಾರವನ್ನು ಒಪ್ಪುವುದಿಲ್ಲ. ವಚನವಾಙ್ಮಯವೂ ಇದನ್ನು ಅಂಗೀಕರಿಸಿರುವುದಿಲ್ಲ. ಆದರೆ, ಇಪ್ಪತ್ತನೆಯ ಶತಮಾನದಲ್ಲಿ ಹುಟ್ಟಿದ 'ನಿರಂಜನ ವಂಶ ರತ್ನಾಕರ'ದಲ್ಲಿ ಶೂನ್ಯ ಸಿಂಹಾಸ, ಶಿಖಾಶೈಲ ಮತ್ತು ಶಿಖಾ ಪಟ್ಟಗಳ ಕಥೆ ಮೊಟ್ಟಮೊದಲು ಮೂಡಿ ಬಂದಿದೆ. ಈ ವಿಚಾರವನ್ನು ಇತಿಹಾಸದ ಆಧಾರದಮೇಲೆ ನಾವು ಈ ಗ್ರಂಥದಲ್ಲಿ ನಿರೂಪಿ ಸಿರುತ್ತೇವೆ. ಶಿಖಾ ಎಂದರೆ ಅದೇನೋ ರತ್ನಖಚಿತ ಮೊಹರು ಅಲ್ಲ, ಶೈಲ ಎಂದರೆ, ಅದೇನೂ ವೈಡೂರ್ಯಖಚಿತ ಮುದ್ರಾಂಕಿತವಲ್ಲ! ಶಿಖಾಪಟ್ಟ ವೆಂಬುದು ಅಲ್ಲಮರಿಗಾಗಲಿ, ಚನ್ನಬಸವಣ್ಣರಿಗಾಗಲಿ, ಸಿದ್ಧರಾಮರಿಗಾಗಲಿ ಅಥವಾ ನಿರಂಜನವಂಶ ರತ್ನಾಕರದಲ್ಲಿ ಉಕ್ತವಾಗಿರುವ ಯಾವ ನಿರಾಭಾರಿಗೇ ಆಗಲಿ ಆಗಿರಲಿಲ್ಲವೆಂದು ನಿರಂಜನ ವಂಶ ರತ್ನಾಕರ ಸ್ಪಷ್ಟವಾಗಿ ತಿಳಿಸುತ್ತದೆ. ಅವರೆಲ್ಲರೂ ಶಿವಾನುಭವಪಟ್ಟಭದ್ರರು. ಈ ಶಿವಾನುಭವ ಪಟ್ಟ ಅನೂಚಾನವಾಗಿ ಅಲ್ಲಮರಿಂದ ಹಿಡಿದು ನೋಡಾ ಸಿದ್ಧಲಿಂಗರವರೆಗೂ ಬಂದು, ಅಲ್ಲಿಂದ ಅದು ವಾಜ್ಯದ ಕುಮಾರ ಸ್ವಾಮಿಗಳಿಗಾಯಿತು. ಅವರು ಹುಬ್ಬಳ್ಳಿ ಮೂರು ಸಾವಿರ ಮಠದ ಸ್ವಾಮಿಗಳಾದರು. ಆದ್ದರಿಂದ ಶಿವಾನುಭವಪಟ್ಟ ಅಲ್ಲಿ ಇಂದಿಗೂ ನಡೆದು ಬರುತ್ತಿದೆಯೆಂದು ಹೇಳಬಹುದು. ಇದೇ ನೋಡಾ ಸಿದ್ಧಲಿಂಗರಿಂದ ಎರಡ ನೆಯ ಮುರಿಗೀಸ್ವಾಮಿಗಳಿಗೆ ಶಿಖಾಪಟ್ಟವಾಯಿತೆಂದು 'ನಿರಂಜನ ವಂಶ ರತ್ನಾಕರ'ದಲ್ಲಿ ಹೇಳಿರುತ್ತದೆ. ಆದ್ದರಿಂದ ಹದಿನೆಂಟನೆಯ ಶತಮಾನದಲ್ಲಿ ಶಿಖಾ ಪಟ್ಟವೆಂಬುದು ಸೃಷ್ಟಿಯಾಯಿತು. ಇದನ್ನೇ ಶ್ರೀ ಮಲ್ಲಿಕಾರ್ಜುನ

ಮುರಿಗೀ ಸ್ವಾಮಿಗಳು ಅವರ ಪಟ್ಟಾಧಿಕಾರ ಭಾಷಣದಲ್ಲಿ ಹೇಳಿರುತ್ತಾರೆ. ಶಿಖಾಪಟ್ಟ ಅತ್ಯಾಧುನಿಕ ಸೃಷ್ಟಿ! ಚನ್ನಬಸವಣ್ಣನವರಿಗೇ ಶಿಖಾಪಟ್ಟವಾಗಿರಲಿಲ್ಲ ವೆಂದು 'ನಿರಂಜನ ವಂಶ ರತ್ನಾಕರ' ಉದ್ಘೋಷಿಸುತ್ತಿದೆ. ಅವರು ತಮ್ಮ ಲ್ಲಿದ್ದ ಶಿಖಾ ಶೈಲಗಳನ್ನು ಸಿದ್ಧರಾಮಯ್ಯನವರಿಗೆ ಒಪ್ಪಿಸಿ ಶೂನ್ಯ ಸಿಂಹಾಸನ ವನ್ನು ದೆಹಲಿಗೆ ಕಳಿಸಿದರೆಂದೂ 'ನಿರಂಜನ ವಂಶ ರತ್ನಾಕರ'ದಲ್ಲಿ ಹೇಳಿದೆ. ಆದ್ದರಿಂದ ಮೂಲ ಶಿಖಾ ಶೈಲಗಳು ಶಿವಾನುಭವ ಪಟ್ಟದಲ್ಲಿಯೇ ಇಂದಿಗೂ ನಡೆದುಕೊಂಡು ಬರುತ್ತಿವೆಯೆಂದು ನಿರ್ಧರವಾಗಿ ಹೇಳಬಹುದು. ಚನ್ನಬಸ ವಣ್ಣನವರಿಂದ ಶಿಖಾಪಟ್ಟ ಎರಡನೆಯ ಮುರಿಗೀಸ್ವಾಮಿಗಳಿಗಾಯಿತೆಂದು ಶ್ರೀ ಮಲ್ಲಿಕಾರ್ಜುನಸ್ವಾಮಿಗಳು ಪಟ್ಟಾಧಿಕಾರ ಭಾಷಣದಲ್ಲಿ ಹೇಳಿರುವುದನ್ನು ನಂಬುವಂತಿಲ್ಲ ಇದು ಶುದ್ಧ ಕಲ್ಪನೆಯೇ ಆಯಿತು! ದೆಹಲಿಯಿಂದ ಒಂದು ವೇಳೆ ಶಿಖಾಶೈಲ, ಶೂನ್ಯ ಸಿಂಹಾಸನಗಳನ್ನು ಇಮ್ಮಡಿ ಮುರಿಗಿಸ್ವಾಮಿಗಳು ತಂದಿ ದ್ದರೆ ಅವರು ಅವುಗಳನ್ನು ಇಸಳೂರಿಗಾಗಲೀ ಅಥವಾ ಅವರು ಇಸಳೂರನ್ನು ಬಿಟ್ಟುಬಂದಾಗ ಅವುಗಳನ್ನು ಚಿತ್ರದುರ್ಗಕ್ಕಾಗಲಿ ತಂದರೆಂದು ನಂಬಲು ಯಾವ ಪ್ರಮಾಣವೂ ಇಲ್ಲ. ಭೌತ ಶೂನ್ಯ ಸಿಂಹಾಸನವೇ ಇರಲಿಲ್ಲವೆಂದು ನಾವು ಸ್ಪಷ್ಟಪಡಿಸಿರುತ್ತೇವೆ. ಚಿತ್ರದುರ್ಗದ ವಿರಕ್ತ ಮಠ ಹದಿನೆಂಟನೆಯ ಶತಮಾನದಲ್ಲಿ ಗಾಳಿಯುಗಾರನ ಆಶ್ರಯದಲ್ಲಿ ಸಾಮಾನ್ಯ ಮಠವಾಗಿ ಸ್ಥಾಪನೆ ಯಾಯಿತು. ಇದು ಹೊಸ ಮಠ, ಅಂದು ಶ್ರೀ ಮಲ್ಲಿಕಾರ್ಜುನ ಮುರುಗೀ ಸ್ವಾಮಿಗಳು ಪಟ್ಟಾಧಿಕಾರ ಭಾಷಣದಲ್ಲಿ ಹೇಳಿರುವ ಶಿಖಾಶೈಲ, ಶಿಖಾಪಟ್ಟ ಇವು ನೂತನ ಕಲ್ಪನೆಗಳು, ಶಿಖಾ ಪಟ್ಟವೆಂಬುವಂತೂ ಅಶಾಸ್ತ್ರೀಯ, ದೆಹಲಿ ಯಿಂದ ಬಂದ ಶೂನ್ಯ ಸಿಂಹಾಸನವೂ ಅಷ್ಟೇ ವಿನೂತನ ಕಲ್ಪನೆ! ಚಿತ್ರದುರ್ಗದ ಮುರುಘಾ ವಿರಕ್ತ ಮಠ ಮುರುಘಾಸಮುಯದ ಮಠವೇ ಹೊರತು ಪ್ರಾಚೀನ ಶೂನ್ಯ ಸಿಂಹಾಸನ ಮಠವಲ್ಲ! ನಮ್ಮ 'ಶೂನ್ಯ ಸಿಂಹಾಸನ' ಗ್ರಂಥ ಮುದ್ರಣ ವಾಗುತ್ತಿದ್ದ ಕಾಲದಲ್ಲಿ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಬೆಂಗಳೂರು ನಗರ ದಲ್ಲಿ ತಾ|| ೨೯—೬—೬೭ ರಂದು ಮಾಡಿದ ಭಾಷಣದಲ್ಲಿ ಇಮ್ಮಡೀ ಮುರಿಗೀ ಸ್ವಾಮಿಗಳು ಬಿಚ್ಚುಕತ್ತಿ ಭರಮಪ್ಪ ನಾಯಕನನ್ನು ಆಶೀರ್ವದಿಸಿದರೆಂದೂ ಅವನು ಚಿತ್ರದುರ್ಗದ ಹನ್ನೆರಡನೆಯ ಪಾಳೆಯುಗಾರನೆಂದೂ ಮತ್ತು ಅವರು ಈ ವಿರಕ್ತ ಪೀಠಾಧಿಕಾರಿಗಳಾದರೆಂದೂ ಯಾವ ಸಂಶಯಕ್ಕೂ ಎಡೆಯಿಲ್ಲದಂತೆ ಹೇಳಿದ್ದಾರೆ. ಆ ಪಾಳೆಯುಗಾರನ ಕಾಲ ಕ್ರಿ. ಶ. ೧೬೮೯ ರಿಂದ ೧೭೨೧

ಎಂದು ಚರಿತ್ರೆ ಸ್ಪಷ್ಟವಾಗಿ ತಿಳಿಸುತ್ತದೆ. ಅದೇ ಹೆಸರಿನ ಇನ್ನೊಬ್ಬ ಪಾಳೆಯುಗಾರ ಈ ಭರಮಪ್ಪ ನಾಯಕನಿಗಿಂತ ಹಿಂದೆಯೂ ಆ ಮನೆತನದಲ್ಲಿರಲಿಲ್ಲ ಮತ್ತು ಅವನ ಅನಂತರವೂ ಇರಲಿಲ್ಲ. ಆದ್ದರಿಂದ ಇಮ್ಮಡಿ ಮುರಿಗೆಯ ಸ್ವಾಮಿಗಳು ಈ ಬಿಚ್ಚುಕತ್ತಿ ಭರಮಪ್ಪನಾಯಕನ ಕಾಲದಲ್ಲಿ ಚಿತ್ರದುರ್ಗದಲ್ಲಿ ಮುರಿಗೀ ಸಂಪ್ರದಾಯವನ್ನು ಪ್ರಾರಂಭಿಸಿದಂತಾಯಿತು. 'ನಿರಂಜನ ರತ್ನಾಕರ' ವಲ್ಲಿ ಚಿತ್ರದುರ್ಗದ ವಿರಕ್ತ ಮಠದ ಹೆಸರೇ ಇಲ್ಲ. ಇತ್ತೀಚಿನ 'ಶ್ರೀ ಜಯದೇವ ಲೀಲೆ' ಚಿತ್ರದುರ್ಗದ ಮಠದ ಕಥೆಯನ್ನು ಹೇಳುತ್ತದೆ. ಮುರಿಗೀ ಸ್ವಾಮಿಗಳು ಇಸಳೂರನ್ನು ಬಿಟ್ಟುಬಂದಮೇಲೆ, ಚಿತ್ರದುರ್ಗದತ್ತ ಬಂದರೆಂದು 'ಶ್ರೀ ಜಯದೇವ ಲೀಲೆ' ತಿಳಿಸುತ್ತದೆ. ಆ ಕಾಲದಲ್ಲಿ ಪಂಚ ಪೀಠಾಚಾರ್ಯರುಗಳ ಶಾಖಾ ಮಠಗಳೂ ಚಿತ್ರದುರ್ಗದಲ್ಲಿದ್ದವೆಂದು ಸ್ಥಳ ಪುರಾಣದಿಂದ ತಿಳಿದು ಬರುತ್ತದೆ. ಈಗಲೂ ಆ ಪುತ್ರವರ್ಗದ ಮಠಗಳು ಚಿತ್ರದುರ್ಗವಲ್ಲಿವೆ. ಆಗ ಹಿಮತ್ಕೇದಾರಪೀಠದ ಬೃಹನ್ಮಠವಿದ್ದ ಸ್ಥಳ ಇಂದು ಪ್ರವಾಸಿಗಳ ಪ್ರೇಕ್ಷಣೀಯ ಸ್ಥಳವಾಗಿದೆ. ಪಾಳೆಯಗಾರರು ಈ ಮಠಗಳಿಗೆ ಗ್ರಾಮಗಳನ್ನು ವತ್ತಿಯಾಗಿ ಬಿಟ್ಟುಕೊಟ್ಟಿದ್ದರು. ಇಮ್ಮಡಿ ಮುರಿಗೀ ಸ್ವಾಮಿಗಳು ತಮ್ಮ ಗುರುವಿನೊಂದಿಗೆ ಕಲಹಮಾಡಿಕೊಂಡು ಚಿತ್ರದುರ್ಗಕ್ಕೆ ಬಂದರೆಂದು ವಾಙ್ಮಯದಿಂದ ಗೊತ್ತಾಗುತ್ತದೆ, ಆಗ ಬಿಚ್ಚುಕತ್ತಿ ಭರಮಪ್ಪನಾಯಕ ಇಲ್ಲಿ ಪಾಳೆಯಗಾರನಾಗಿದ್ದನು. ಅವನು ಪರಮ ಶಿವಭಕ್ತ. ಆಗ ಹಿಮತ್ಕೇದಾರ ಮಠದ ಸ್ವಾಮಿಗಳು ಲಿಂಗೈಕ್ಯರಾಗಿದ್ದುದರಿಂದ ಆ ಮಠದಲ್ಲಿ ಯಾರೂ ಸ್ವಾಮಿಗಳಿರಲಿಲ್ಲ. ಈ ಇಮ್ಮಡೀ ಮುರಿಗೀ ಸ್ವಾಮಿಗಳು ಪಾಳೆಯಗಾರನ ಆಶ್ರಯದಲ್ಲಿ ಶ್ರೀ ಕೇದಾರ ಪೀಠದ ಬೃಹನ್ಮಠದಲ್ಲಿ ನೆಲಸಲು ಅವಕಾಶವಾಗಿರಬಹುದು. ಇದನ್ನು ನಂಬಲು ಸಾಕಾದಷ್ಟು ಪ್ರಮಾಣಗಳಿವೆ. ಚಿತ್ರದುರ್ಗದಲ್ಲಿ ಏಳು ಸುತ್ತಿನ ಕೋಟೆಗಳಿವೆ. ಎಲ್ಲಕ್ಕೂ ಮೇಲು ಭಾಗದಲ್ಲಿರುವುದೇ ಮೇಲುದುರ್ಗ. ಅಲ್ಲಿಯೇ ಪಾಳೆಯಗಾರನ ಅರಮನೆಯೂ ಮಂತ್ರಿಮಾನ್ಯರ ಮತ್ತು ದಂಡನಾಯಕರ ಗೃಹಗಳೂ ಇದ್ದುವು. ಪಂಚಪೀಠಗಳು ಒಂದೊಂದೂ ಬೇರೆ ಬೇರೆ ಕಡೆಗಳಲ್ಲಿದ್ದುವು. ಒಂದೊಂದು ಬೃಹನ್ಮಠದವರೂ ಒಂದೊಂದು ವರ್ಷಕಾಲ ಅರಮನೆಯಲ್ಲಿ ಪ್ರಮುಖ ಗುರುವಾಗಿರುತ್ತಿದ್ದರು. ಶ್ರೀಶೈಲ ಪೀಠದವರು ಪಾಳೆಯಗಾರರ ಕುಲ ಗುರುವಾಗಿದ್ದರು. ಕೇದಾರ ಪೀಠದವರು ಅರಮನೆಯ

ಜಂಗಮಮೂರ್ತಿಯಾಗಿದ್ದರು. ಕಾಲಧರ್ಮ ಸಂಯೋಗದಿಂದ ಇಸ್ಸಳೂರಿನಿಂ ಬಂದ ಇಮ್ಮಡಿ ಮುರಿಗೀಸ್ವಾಮಿಗಳು ಕೇದಾರಪೀಠದ ಬೃಹನ್ಮಠದಲ್ಲಿ ಆಶ್ರಯ ಪಡೆದರು. ಮುರಿಗೀಸ್ವಾಮಿಗಳಿಗೆ ಬೆಟ್ಟದಮೇಲೆ ಯಾವುದೊಂದು ಮಠವನ್ನೂ ಪಾಳೆಯಗಾರನು ಪ್ರತ್ಯೇಕವಾಗಿ ಕಟ್ಟಿಸಿಕೊಡಲಿಲ್ಲ. ಆದರೆ, ಅವನು ತನ್ನ ಕುಲಗುರುವಾದ ಶ್ರೀಶೈಲ ಪೀಠದ ಬೃಹನ್ಮಠದವರಿಗಾಗಿ ತನ್ನ ಅರಮನೆಯ ಹತ್ತಿರದಲ್ಲಿಯೇ ನೂತನ ಮಠವನ್ನು ನಿರ್ಮಿಸಿದನು. ಚಿತ್ರದುರ್ಗದ ಪಾಳೆಯ ಪಟ್ಟು ಹಾಳಾದ ಕಾಲದಲ್ಲಿ ಎಲ್ಲಾ ಮಠಗಳೂ ದುರ್ಗದ ತಪ್ಪಲಿನಲ್ಲಿ ಚಿತ್ರ ದುರ್ಗದಲ್ಲಿ ಸ್ಥಾಪನೆಯಾದವು. ಈಗಮೇಲುದುರ್ಗದಲ್ಲಿ ಶ್ರೀಶೈಲ ಪೀಠ ಮಠವೂ ಇಲ್ಲ, ಅಲ್ಲಿರುವ ಸಿದ್ಧೇಶ್ವರ ಚಾವಡಿಯನ್ನೇ ಅನೇಕರು ಮೇಲು ದುರ್ಗದ ಮಠವೆಂದೂ ಅದನ್ನೇ ಮುರುಗೀ ಮಠವೆಂದೂ ತಪ್ಪಾಗಿ ತಿಳಿದು ಕೊಂಡಿದ್ದಾರೆ. ಬಿಚ್ಚುಕತ್ತಿ ಭರಮಪ್ಪ ನಾಯಕನು ಮೇಲುದುರ್ಗದ ಶ್ರೀಶೈ ಪೀಠದ ಪಟ್ಟದ ಸ್ವಾಮಿಗಳು ಬೆಟ್ಟದ ತಪ್ಪಲಿನಲ್ಲಿ ಪ್ರಶಾಂತ ಸ್ಥಳದಲ್ಲಿ ಮಠ ವನ್ನು ಕಟ್ಟಿಸಿಕೊಡಬೇಕೆಂದು ತಿಳಿಸಿ, ಪಾಳೆಯಗಾರನೊಂದಿಗೆ ರುಂಡ ಬತೇರಿಯ ಮೇಲೆ ನಿಂತುಕೊಂಡು ತಮ್ಮ ಕೈಯಲ್ಲಿದ್ದ ಬೆತ್ತವನ್ನು ಕೆಳಕ್ಕೆ ಎ ಯಲು, ಅದು ಬಿದ್ದಸ್ಥಳದಲ್ಲಿ ಆ ಮಠವನ್ನು ಕಟ್ಟಿಸಿದರೆಂದು ಪ್ರತೀತಿ ಇದೆ ಈಗಲೂ ಆ ಮಠ ಬುರುಜನಹಟ್ಟಿಯಲ್ಲಿದೆ. ಇದನ್ನು ಅನೇಕರು ಈಗಿರು ಮುರಿಗೀ ಮಠದ ನಿರ್ಮಾಣಕ್ಕೆ ಸಂಬಂಧಿಸಿದಂತೆ ತಪ್ಪು ತಪ್ಪಾಗಿ ಹೇಳ ತ್ತಾರೆ. ಬೆಟ್ಟದ ಮೇಲ್ಗಡೆಯಲ್ಲಿ ನಿಂತುಕೊಂಡು ಯಾವ ಶೂರನೂ ಬೆತ್ತ ವನ್ನಾಗಲಿ, ಕಲ್ಲನ್ನಾಗಲಿ ಈಗ ಮುರುಗೀ ಮಠವಿರುವ ಸ್ಥಳದಲ್ಲಿ ಬೀಳುವಂ ಎಸೆಯಲು ಸಾಧ್ಯವೇ ಇಲ್ಲ. ಚಿತ್ರದುರ್ಗದಲ್ಲಿ ಕ್ರಿ. ಶ. ೧೭೦೩ ರ ಮೊಟ್ಟಮೊದಲು 'ಪ್ಲೇಗ್' ತಲೆದೋರಿತು. ಅದು ತುಂಬಾ ಉಲ್ಬಣವಾಗಿಯ ಇತ್ತು; ಸಹಸ್ರಾರು ಜನರು ಮಡಿದರು. ಪಾಳೆಯಗಾರರು ಕೋಟೆಯ ಬಾಗಿ ಗಳಿಗೆಲ್ಲಾ ಮುಳ್ಳು ಕಂಪೆಗಳನ್ನು ಹಾಕಿಸಿ ಜನರೆಲ್ಲಾ ಜೋಳುಗುಡ್ಡದ ಬಯ ನಲ್ಲಿ ವಾಸಮಾಡಬೇಕೆಂದು ಕಟ್ಟಾಜ್ಞೆ ಮಾಡಿದರು. ಅರಮನೆಯವರ ಅಂಕಲಿ ಮಠದ ಕಡೆ ಬಯಲಿನಲ್ಲಿ ಕೆಲವುಕಾಲ ನೆಲಸಿದರು. ಆಗಲೇ ಶ್ರಿ ಕೇದಾರ ಮಠದ ಕುಟೀರವನ್ನು ದುರ್ಗದ ಪಶ್ಚಿಮದ ತಿಟ್ಟಿನ ಮೇಲೆ ಕಟ್ಟಿಸಿ ರೆಂದು ತಿಳಿಯಬಹುದು. ಅಲ್ಲಿಂದ ಮುಂದೆ ಇದು ಪ್ರತ್ಯೇಕ ಮುರಿಗೀ ಮ

ವಾಗಿಯೇ ಬೆಳೆಯುತ್ತಾ ಬಂತು. ಈಗಿರುವ ಮುರಿಗೀ ಮಠ ಇಲ್ಲಿಯೇ ಸ್ಥಾಪನೆಯಾಯಿತು. ಧಾರ್ಮಿಕ ಜೀವನದಲ್ಲಿ ಶಬ್ದಪ್ರಮಾಣಗಳೂ ಅನುಮಾನ ಪ್ರಮಾಣಗಳೂ ಅನಿವಾರ್ಯವಾದರೂ ಇತಿಹಾಸ ಅತ್ಯಂತ ಸಮರ್ಪಕವಾದ ಪ್ರಮಾಣವೆಂಬುದನ್ನು ನಿರಾಕರಿಸುವಂತಿಲ್ಲ. ಇತಿಹಾಸ ಮುಟ್ಟಲಾರದ ಸಂದರ್ಭಗಳನ್ನು ಶಬ್ದ ಪ್ರಮಾಣದಿಂದಾಗಲಿ, ಅನುಮಾನ ಪ್ರಮಾಣದಿಂದಾಗಲಿ ಸಾಧಿಸಬೇಕಾದೀತು. ಯಾವುದೇ ಸಂಗತಿ ಪರಂಪರಾಗತವಾಗಿ ಬಂದಿದ್ದರೆ ಅದನ್ನು ಸುಲಭವಾಗಿ ನಿರಾಕರಿಸುವಂತಿಲ್ಲ. ಅದನ್ನು ಇತರ ಸಾಧನಗಳಿಂದ ವಿವೇಚಿಸಿ ಒಪ್ಪಬೇಕಾದೀತು. ಇವೆಲ್ಲವನ್ನೂ ಸಂಶೋಧಕರು ಮರೆಯಬಾರದು. ಈ ದೃಷ್ಟಿಯಿಂದ ಚಿತ್ರದುರ್ಗ ವಿರಕ್ತ ಮಠದ ಪೂರ್ವೋತ್ತರ ಚರಿತ್ರೆಯನ್ನು ಸಮಾಜ ಅರಿಯಬೇಕು.

ಇತ್ತೀಚಿಗೆ ಎಂದರೆ ಕ್ರಿ. ಶ. ೧೯೬೭ ನೆಯ ನವೆಂಬರ್ ತಿಂಗಳಿನಲ್ಲಿ 'ಶೂನ್ಯ ಪೀಠದ ಪ್ರಭಾವ' ಎಂಬ ಪುಸ್ತಕವನ್ನು ಪ್ರಕಟಿಸಿರುವ ಡಾ|| ಟಿ. ಜಿ. ಸಿದ್ಧಪ್ಪಾರಾಧ್ಯ, ಎಂ.ಎ;ಪಿಎಚ್.ಡಿ; ಅವರು ೧೯೬೨ ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರ ಪುಸ್ತಕ ಮಾಲೆಯ–'ಅಲ್ಲಮ ಪ್ರಭು' ಎಂಬ ಪುಸ್ತಕದ ೫೧ ನೆಯ ಪುಟದಲ್ಲಿ "ಪ್ರಭು ಒಬ್ಬನೇ ಶೂನ್ಯ ಪೀಠವನ್ನು ಹತ್ತಿದವನಲ್ಲ. ಇದು ಅವನ ಕಾಲಕ್ಕೆ ಸ್ಥಾಪಿತವಾದುದಲ್ಲ. ಅವನಿಗಿಂತ ಎಷ್ಟೋಕಾಲದ ಹಿಂದೆಯೇ ಪಂಚಾಚಾರ್ಯರಲ್ಲಿ ಒಬ್ಬರಾದ ಏಕೋರಾಮಾರಾಧ್ಯರು ಆಕಾಶ ತತ್ತ್ವವನ್ನು ಪ್ರತಿನಿಧಿಸುತ್ತ ಒಳಗೂ ಹೊರಗೂ ನಿರಂಜನ ಜಂಗಮರಾಗಿದ್ದರು. ಶಿವನ ಪಂಚಮುಖಗಳಿಂದ ಉದ್ಭವಿಸಿದ ಪಂಚಸಾದಾಖ್ಯಗಳನ್ನು ಪ್ರತಿನಿಧಿಸುವವರಲ್ಲಿ ಏಕೋರಾಮಾರಾಧ್ಯರು ಒಬ್ಬರು. ಇವರ ಶೂನ್ಯ ಪೀಠವು ಕೇದಾರದಲ್ಲಿ ಈಗಲೂ ಜಂಗಮರಿಗೆ ಆಕರ್ಷಣೀಯವಾಗಿ ನೆಲಸಿದೆ. ಭೂಲೋಕದಲ್ಲಿ ನಿರಂಜನ ಪೀಠವು ಭಕ್ತಾನುಗ್ರಹಕ್ಕಾಗಿ ನೆಲಸಿರುವುದಕ್ಕೆ ಇದೇ ಮೊದಲನೆಯ ನಿದರ್ಶನವಾಗಿದೆ. ಇದರ ಸೂತ್ರವನ್ನು ಅನುಸರಿಸಿಕೊಂಡು ಬಂದವನೇ ಅಲ್ಲಮ ಪ್ರಭು. ಈ ಶಾಖೆಯನ್ನು ಅವಲಂಬಿಸಿಕೊಂಡು ಬಂದಿರುವುದೇ ಚಿತ್ರದುರ್ಗದ "ಶೂನ್ಯ ಸಿಂಹಾಸನ" ಎಂದು ಸ್ಪಷ್ಟವಾಗಿ ನಿರೂಪಿಸಿರುತ್ತಾರೆ.

ಇದೇ ಡಾ|| ಸಿದ್ಧಪ್ಪಾರಾಧ್ಯರು ೧೯೬೩ ನೆಯ ಮಾರ್ಚಿ ೨೪ ನೆಯ

"ಪಂಚಾಚಾರ್ಯ ಪ್ರಭಾ" ಪತ್ರಿಕೆಯಲ್ಲಿ ೧೨ ನೆಯ ಶತಮಾನದಲ್ಲಿ ವಿರಕ್ತ ಮಠವೆಂಬುದೊಂದು ಪ್ರತ್ಯೇಕವಾಗಿ ಸ್ಥಾಪಿತವಾಯಿತೆಂದಾಗಲೀ ಅದಕ್ಕೆ ಸಂಬಂಧ ಪಟ್ಟಂತೆ ಶೂನ್ಯ ಪೀಠ ಒಂದು ಹೊಸದಾಗಿ ನಿರ್ಮಿತವಾಯಿತೆಂದಾಗಲಿ ಭಾವಿ ಸುವುದು ಯುಕ್ತವಲ್ಲ. ಬಸವಾದಿ ಪ್ರಮಥರು ಆಚಾರ್ಯರ ಕಾಲದಿಂದ ಆಚರಣೆಯಲ್ಲಿದ್ದ ವೈರಾಗ್ಯಕ್ಕೆ ಮಹತ್ವವನ್ನುಕೊಟ್ಟು ಅದನ್ನೇ ಜೀವನದಲ್ಲಿ ಸಮರಸವಾಗಿ ಆಚರಿಸಿ ತೋರಿಸಿರುವಾಗ ೧೨ ನೆಯ ಶತಮಾನದಲ್ಲಿ ವೈರಾಗ್ಯ ಪೀಠದ ನಿರ್ಮಾಣಕ್ಕೆ ಅವಕಾಶವೆಲ್ಲಿ ಬಂದೀತು? ಮಾನವನ ಸಾಧನೆಯ ಕೊನೆಯ ಹಂತವೇ ವೈರಾಗ್ಯ. ಇದೇ ಪರಮಾತ್ಮನ ಕೇವಲಾವಸ್ಥೆ; ನಿರಂಜನ ಸ್ಥಿತಿ; ಇಂದು ಪ್ರತಿಯೊಬ್ಬ ಪೀಠಾಚಾರ್ಯರಲ್ಲಿಯೂ ಇರುವುದರಿಂದಲೇ ಅವರು ನಿರಭಿಮಾನದಿಂದ ಲೋಕಾನುಗ್ರಹಲೀಲೆಯನ್ನು ಅನಾಯಾಸವಾಗಿ ನಡೆಸುತ್ತ ಬಂದಿರುವುದು ಸ್ತುತ್ಯರ್ಹವಾಗಿದೆ."

"ಶರಣರು ನಿತ್ಯಾಚರಣೆಯಲ್ಲಿ ಬರಬಹುದಾದ ಕ್ಲೇಶಗಳನ್ನು ತಮ್ಮ ಸ್ವಂತ ವೈರಾಗ್ಯದ ಉದಾಹರಣೆಯಿಂದ ಪರಿಹರಿಸಿಕೊಟ್ಟಿದ್ದಾರೆ. ಅವರಕಾಲ ದಿಂದೀಚೆಗೆ ಬಂದ ವೈರಾಗ್ಯ ಪರಂಪರೆಯ ಸ್ವಾಮಿಗಳು ವೈರಾಗ್ಯದ ಮಹತ್ವ ವನ್ನು ಮಾನವನಿಗೆ ದೃಢಪಡಿಸಲಿಕ್ಕಾಗಿ ಕೆಲವು ಮಠಗಳನ್ನು ಸ್ಥಾಪಿಸಿದರು. ಅವೇ ಈಚೆಗೆ ವಿರಕ್ತ ಮಠಗಳೆನಿಸಿದುವು. ಇವು ಎಡೆಯೂರು ಶ್ರೀ ತೋಂಟ ದಾರ್ಯರ ಕಾಲದಿಂದ ಹೆಚ್ಚು ರೂಢಿಗೆ ಬಂದವು."

"ಹೀಗೆ ಈ ಮಠಗಳು ಈಚೆಗೆ ಸ್ಥಾಪಿತವಾಗಿದ್ದರೂ ಇವೆಲ್ಲವೂ ಹಿಂದಿನ ಕೇದಾರದ ವೈರಾಗ್ಯ ಪರಂಪರೆಯನ್ನೇ ಹಿಡಿದುಕೊಂಡು ಬಂದಿವೆ. ಇದರಿಂದ ವಿರಕ್ತರು ವೈರಾಗ್ಯ ಪೀಠವನ್ನು ಕಸುಗೊಂಡರೆಂದು ಯಾರೂ ಭಾವಿಸಬೇಕಾ ಗಿಲ್ಲ. ಯಾಕೆಂದರೆ ವೈರಾಗ್ಯವೆಂಬುದು ಯಾವೊಬ್ಬ ವ್ಯಕ್ತಿಯ ಅಥವಾ ಸ್ವಾಮಿಯ ಸ್ವತ್ತಲ್ಲ. ಇದು ಎಲ್ಲಾ ಸ್ವಾಮಿಗಳಿಗೂ ದಿವ್ಯ ಸಂಜೀವಿನಿ. ನಿರಂಜನ ಸ್ಥಿತಿ ಎಂಬುದು ಈಚಿನ ವಿರಕ್ತ ಮಠಗಳ ಆಸ್ತಿಯಲ್ಲ. ಇದು ಮೂಲ ಪೀಠಾಚಾರ್ಯರ ಕಾಲದಿಂದಲೂ ರೂಢಿಯಲ್ಲಿ ಬಂದಿರುವ ಪರವೈಶ್ವರ್ಯ."

"ಈ ಸನ್ಯಾಸಾಶ್ರಮವು ಪಂಚ ಪೀಠಗಳೊಲ್ಲೊಂದಾದ ವೈರಾಗ್ಯ ಪೀಠ

ವನ್ನೇ ಅವಲಂಬಿಸಿದೆಯಾದ್ದರಿಂದ ಸನ್ಯಾಸ ಪ್ರಧಾನವಾದ ವಿರಕ್ತ ಮಠಗಳೆಲ್ಲಕ್ಕೂ ಪಂಚಪೀಠಗಳೇ ಮೂಲಾಧಾರವಾಗಿವೆ"–ಎಂದು ಬರೆದಿರುತ್ತಾರೆ.

ಚಿತ್ರದುರ್ಗದ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಇಂಥ ವಿದ್ವಾಂಸರಿಂದ 'ಶೂನ್ಯ ಪೀಠದ ಪ್ರಭಾವ'ವನ್ನು ಬರೆಯಿಸಿ ಅವರು ಬೆಂಗಳೂರು ಭಾಷಣದಲ್ಲಿ ಹೇಳಿದಂತೆ ಈ ಪೀಠವನ್ನು ಕುರಿತ ಅನೇಕ ಆಕ್ಷೇಪ ವಿಕ್ಷೇಪಗಳಿಗೆ ಸಮಾಧಾನವನ್ನು ಹೇಳಿರುತ್ತಾರೇನೋ! ಪಾಪ! ಶ್ರೀ ಆರಾಧ್ಯರೆತ್ತ! ಶ್ರೀಮಠವೆತ್ತ!

"ಹಿಂದಿನ ವಿರಕ್ತರು ಪಂಚಪೀಠಗಳಲ್ಲಿ ಒಂದಾದ ಕೇದಾರದ ವೈರಾಗ್ಯ ಸಿಂಹಾಸನಕ್ಕೆ ಶಿಷ್ಯರಾಗಿ ವರ್ತಿಸುತ್ತಿದ್ದರು." ಎಂದು ಆಯುರ್ವೇದಾಚಾರ್ಯ ಚಿಕ್ಕಮಣ್ಣೂರ ಬೃಹನ್ಮಠಾಧ್ಯಕ್ಷ ಪಂಡಿತ ಶ್ರೀ ಗುರುದೇವ ಶಿವಾಚಾರ್ಯ ಸ್ವಾಮಿಗಳು–ನವಿಲುಗುಂದ ಅವರು "ವೀರಶೈವ ಪಂಚಾಚಾರ್ಯರ ಚರಿತ್ರೆಯ ವಿಮರ್ಶೆ" ಎಂಬ ತಮ್ಮ ಗ್ರಂಥದ ೮೮ ನೆಯ ಪುಟದಲ್ಲಿ ಬರೆದಿರುತ್ತಾರೆ.

"ಶಿವಗಂಗಾ ಕ್ಷೇತ್ರದಲ್ಲಿ ಪಂಚ ಪೀಠಗಳ ಶಾಖಾ ಮಠಗಳನ್ನು ಕಂಡಂತೆ ಈ ಚಿನ್ಮೂಲಾದ್ರಿಯಲ್ಲಿಯೂ ಕಾಣಬಹುದು. ಅಂದ ಹಾಗೆ, ಕೇದಾರ ವೈರಾಗ್ಯ ಸಿಂಹಾಸನಕ್ಕೆ ಸಂಬಂಧಿಸಿದ ಹಿರೇಮಠವೊಂದು ಚಿತ್ರದುರ್ಗದ ನಾಯಕರ ಕಾಲದಲ್ಲಿ ಸ್ಥಾಪಿತವಾಗಿದ್ದು ಮುರುಘಾ ಮಠವೆಂದು ಪ್ರಸಿದ್ಧಿಯಾಗಿರುತ್ತದೆ" ಎಂದು ೧೯೫೫ ನೆಯ ಫೆಬ್ರುವರಿ ೨ ನೆಯ ತಾರೀಖಿನ 'ಪಂಚಾಚಾರ್ಯ ಪ್ರಭಾ' ಪತ್ರಿಕೆಯಲ್ಲಿ **'ಪ್ರಾಚೀನ ಸಂಸ್ಕೃತಿ ನಗರ ಚಿನ್ಮೂಲಾದ್ರಿ'** ಎಂಬ ಲೇಖನದಲ್ಲಿ "ಪ್ರತ್ಯಕ್ಷದರ್ಶಿ" ಎಂಬುವರು ಬರೆದಿರುತ್ತಾರೆ.

ಶ್ರೀ ಚನ್ನಮಲ್ಲಿಕಾರ್ಜುನರು ತಾವು ಬರೆದಿರುವ 'ಶ್ರೀ ರೇವಣ ಸಿದ್ಧರು' ಎಂಬ ಗ್ರಂಥದಲ್ಲಿ ೪೦೦ ನೆಯ ಪುಟದಲ್ಲಿ "ಹೀಗೆ ಏಕೋರಾಮಾರಾಧ್ಯರ ಪೀಠವೇ (ಕೇದಾರ ಪೀಠವೇ) ಶೂನ್ಯ ಸಿಂಹಾಸನ ಎಂದು ನಡೆದ ಉದಾಹರಣೆಯು ಸ್ವಲ್ಪ ಸ್ವಲ್ಪ ತೋರಿದೆ. ಚಿತ್ರದುರ್ಗ ಶ್ರೀ ಮನ್ನಿರಂಜನ ಜಗದ್ಗುರುಗಳ ಸ್ವಂತ ಒಕ್ಕಣೆಯಲ್ಲಿ ದ್ರಾಕ್ಷಾರಾಮಲಿಂಗೋದ್ಭವ ಎಂಬ ಪದಗಳೂ ಹಿಂದೆ ತೋರಿಬರುತ್ತಲಿದ್ದುವೆಂದು ತಿಳಿದಿದೆ" ಎಂದು ಬರೆದಿರುತ್ತಾರೆ. ಇದರಿಂದ

ಚಿತ್ರದುರ್ಗದ ವಿರಕ್ತ ಮುರಿಗೀ ಮಠ ಶ್ರೀ ಕೇದಾರ ಪೀಠದ ಶಾಖಾ ಬೃಹನ್ಮಠ
ಜೀವ ಸತ್ವವನ್ನು ಹೀರಿಕೊಂಡು ಬಹಳಕಾಲ ತಾನು ಶ್ರೀ ಕೇದಾರ ಪೀಠ
ಶಾಖಾ ಮಠವಾಗಿಯೇ ಬೆಳೆದು ಬರುತ್ತಿತ್ತೆಂದು ನಂಬಬಹುದು. ಇದರಿಂ
ಪ್ರಾಚೀನ ಆಚಾರ್ಯರು ಅರ್ವಾಚೀನ ಶೂನ್ಯ ಸಿಂಹಾಸನವನ್ನು ಆಕ್ರಮಿ
ಕೊಂಡರೆಂಬುದಾಗಲಿ ಮತ್ತು ಚಿತ್ರದುರ್ಗದ ಶೂನ್ಯ ಸಿಂಹಾಸನ ಪಂಚಾ
ಚಾರ್ಯ ಪೀಠಗಳಿಗಿಂತಲೂ ದೊಡ್ಡದೆಂಬುದಾಗಲಿ ಅಸಂಬದ್ಧ ಪ್ರಲಾಪವಾಗಿದೆ.
ಈ ಅಂಶ ನಮ್ಮ ಸಂಶೋಧನೆಯಿಂದ ಸ್ಥಿರಪಟ್ಟಿದೆ. ಬ್ಯಾಡಗಿ ಹಿರೇಮಠ
ವೇ|| ಅನ್ನದಾನಯ್ಯನವರು ತಾ|| ೧೦-೨-೧೯೬೮ ರ ದಿನ ನಮಗೆ ತುಂಬ
ಹಳೆಯ ದಾಖಲೆಯೊಂದನ್ನು ನಮ್ಮ ಮಿತ್ರರಾದ ಬ್ಯಾಡಗಿ ಪ್ರೌಢಶಾಲೆಯ
ಸಂಸ್ಕೃತ ಪಂಡಿತ ವೇ|| ವಿ. ಬಿ. ಆರಾಧ್ಯಮಠ ಎಂಬುವರ ಮೂಲಕ ವಹಿ
ಯಿಟ್ಟು ಒದಗಿಸಿದರು. ಅದು ನೃಪಶಾಲಿವಾಹನ ಶಕ ೧೭೬೩ ನೆಯ (ಕಿ. ಶ.
೧೮೪೧) ಪ್ಲವನಾಮ ಸಂವತ್ಸರದ ಪುಷ್ಯ ಬಹುಳ ದ್ವಾದಶಿಯ ದಿನ
"ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ಮುರಿಗಾರಾಜೇಂದ್ರ ಸ್ವಾಮಿನಾ
ಆಜ್ಞಪ್ರಕಾರೇಣ" ಹೊರಟ ನಿರೂಪವಾಗಿದೆ. ಅದನ್ನು ಕತ್ತಾಳೆಯ ಕಾಗದ
ಮೇಲೆ ರಾಗಿ ಮಸಿಯಲ್ಲಿ ಮೋಡಿ ಅಕ್ಷರದಲ್ಲಿ ಬರೆದಿದೆ. ಅದರಲ್ಲಿ ಬರೆದಿರು
ಒಕ್ಕಣೆಯಲ್ಲಿ "ಶ್ರೀ ಮದ್ವೀರಶೈವ ಶಿದ್ಧಾಂತ ಸಕಲ ಸಿಂಹಾಸನಾಧಿಪ ಪರ
ಷಟಸ್ತಲ ಸ್ಥಾಪನಾಚಾರ್ಯವರ್ಯಾಣಾಂ ! ಶ್ರೀ ಮುದ್ರಾಪುರಾಧೀಶ ದ್ರಾಕ್ಷ
ರಾಮಃಕ್ಷೇತ್ರ ರಾಮನಾಥ ಲಿಂಗೋದ್ಭವ ಶ್ರೀ ಮಚ್ಚಿನ್ಮೂಲಾದ್ರಿ ಬೃಹನ್ಮಠಾ
ರಾಳ ಪರಿಶೋಭಿತ ಸತ್ರಭಮುಂಡಿತೋರ್ವ್ಯ ಹೃದಯಾತ್ಮಕ ದ್ವಾರಾವ
ಸೂಂನ್ಯ ಸಿಂಹಾಸನಾಧೀಶ್ವರಾಣಾಂ"|| ಎಂದು ನಿರ್ದುಷ್ಟವಾಗಿ ಬರೆದಿರುತ್ತದೆ.
ಈ ದಾಖಲೆ ಸುಮಾರು ೧೨೭ ವರ್ಷಗಳಷ್ಟು ಹಳೆಯದು. ಇದರಿಂದ ಚಿತ್ರ
ದುರ್ಗದ ವಿರಕ್ತ ಮಠ ಹಿಮತ್ಕೇದಾರದ ಏಕೋರಾಮಾರಾಧ್ಯ ಮಹಾಚಾ
ಪೀಠ ಪರಂಪರಾಗತವಾದ ಶೂನ್ಯ ಸಿಂಹಾಸನ ಸಂಪ್ರದಾಯದ ಶಾಖಾ ಮ
ವೆಂಬುದರಲ್ಲಿ ಅನುಮಾನವಿಲ್ಲ. ಕಾಲಕ್ರಮದಲ್ಲಿ ಚಿತ್ರದುರ್ಗದ ವಿರಕ್ತ ಪೀಠ
ಧೀಶ್ವರರು "ದ್ರಾಕ್ಷಾ ರಾಮಕ್ಷೇತ್ರ ರಾಮನಾಥ ಲಿಂಗೋದ್ಭವ" ಎಂಬ ಪ
ಗಳನ್ನು ತಮ್ಮ ಒಕ್ಕಣಿಕೆಯಲ್ಲಿ ಬರೆದುಕೊಳ್ಳುವುದನ್ನು ಬಿಟ್ಟುಬಿಟ್ಟಿರುತ್ತಾರೆ
ಈ ನಿರೂಪದಲ್ಲಿರುವ 'ಜಗದ್ಗುರು' 'ಬೃಹನ್ಮಠ' ಎಂಬ ಪದಗಳನ್ನು ಮುರುಘ

ಸಂಪ್ರದಾಯದ ಚಿತ್ರದುರ್ಗದ ಮಠ ಕೇದಾರ ಪೀಠದ ಆಶ್ರಯದಲ್ಲಿ ನಿರಾಯಾಸವಾಗಿ ಬಳಸಿಕೊಳ್ಳುತ್ತ ಬಂದಿತೆಂಬುದನ್ನು ಗಮನಿಸಬಹುದು. ಚಿತ್ರದುರ್ಗದಲ್ಲಿ ಮುರಿಗೀ ಮಠ ಕ್ರಿ. ಶ. ೧೭೦೫ ರಲ್ಲಿ ಸ್ಥಾಪನೆಯಾಯಿತೆಂದರೆ ಈ ನಿರೂಪ ಹುಟ್ಟಿದ ಕ್ರಿ. ಶ. ೧೮೪೧ ರ ವರೆಗೆ ಎಂದರೆ ೧೩೭ ವರ್ಷಗಳ ಪರ್ಯಂತರ ಚಿತ್ರದುರ್ಗದ ವಿರಕ್ತ ಮಠದವರು 'ರಾಮನಾಥ ಲಿಂಗೋದ್ಭವ' ಏಕೋರಾಮಾರಾಧ್ಯರ ಶಾಖಾನುವರ್ತಿಗಳೇ ಆಗಿದ್ದರೆಂಬುದು ನಿರ್ವಿವಾದವಾಗಿದೆ. ಮುಂದೆ ಇನ್ನೂ ಎಷ್ಟು ಕಾಲದವರೆಗೆ ಈ ವಿರಕ್ತರು ಕೇದಾರ ಶಾಖಾನುವರ್ತಿಗಳಾಗಿದ್ದರೆಂಬುದನ್ನು ಸಂಶೋಧನೆಯಿಂದ ನಿರ್ಧರಿಸಬೇಕಾಗಿದೆ.

ಚಿತ್ರದುರ್ಗದ ವಿರಕ್ತ ಮಠವನ್ನು ಬೃಹನ್ಮಠವೆಂದು ಹೇಳಿಕೊಳ್ಳುತ್ತಾರೆ. ವೀರಶೈವರ ಮಠಗಳಲ್ಲಿ ಗುರುವರ್ಗದ ಮಠಗಳನ್ನು ಮಾತ್ರವೇ ಬೃಹನ್ಮಠವೆಂದೂ, ಮಹಂತಿನ ಮಠವೆಂದೂ ಕರೆಯುತ್ತಾರೆ. ವಿರಕ್ತ ಮಠವನ್ನು ಬೃಹನ್ಮಠವೆಂದಾಗಲಿ, ಮಹಂತಿನ ಮಠವೆಂದಾಗಲಿ ಕರೆಯುವುದಿಲ್ಲ. ಆದ್ದರಿಂದ ಚಿತ್ರದುರ್ಗದ ವಿರಕ್ತ ಮಠ ಪೂರ್ವದಲ್ಲಿ ಗುರುಪೀಠವಾಗಿತ್ತೆಂದು ನಿಸ್ಸಂಶಯವಾಗಿ ಹೇಳಬಹುದು. ಇದು ಕೇದಾರ ಮಹಾ ಪೀಠದ ಶಾಖಾ ಬೃಹನ್ಮಠವಾಗಿದ್ದುದರಿಂದಲೇ ಈ ಮುರಿಗೀ ಮಠದವರು ತಮ್ಮ ಒಕ್ಕಣಿಕೆಯಲ್ಲಿ "ದ್ರಾಕ್ಷಾರಾಮಕ್ಷೇತ್ರ ರಾಮನಾಥ ಲಿಂಗೋದ್ಭವ ಶ್ರೀಮಚ್ಛಿನ್ಮೂಲಾದ್ರಿ ಬೃಹನ್ಮಠ"ವೆಂದು ಹೇಳಿಕೊಳ್ಳುತ್ತಾ ಬಂದರೆಂಥೂ ಈ ಮಠದ ಪರಿಚಯ ಸಮಾಜದಲ್ಲಿ ಬೆಳೆಯುತ್ತಾ ಬಂದಂತೆಲ್ಲಾ ಆ ಪದಪುಂಜವನ್ನು ಬಿಟ್ಟುಬಿಟ್ಟರೆಂದೂ ತೋರುತ್ತದೆ. ಪ್ರಾಚೀನ ವೈರಾಗ್ಯ ಗುರು ಪೀಠದ ಆಶ್ರಯದಲ್ಲಿ ನೂತನ ವಿರಕ್ತಪಂಥ ಹೆಚ್ಚು ಪ್ರಯಾಸವಿಲ್ಲದೆಯೇ ರೂಪುಗೊಳ್ಳಲು ಅನುಕೂಲವೂ ಇತ್ತು. ವೈರಾಗ್ಯ ಮತ್ತು ವಿರಕ್ತ ಪದಗಳಲ್ಲಿ ಅಗಾಧ ಅರ್ಥ ವ್ಯತ್ಯಾಸ ವಿದ್ದರೂ ಜನಸಾಮಾನ್ಯರು ಅಂಥ ಅರ್ಥ ವಿವೇಚನೆಗೆ ಪ್ರಯತ್ನಿಸುವುದಿಲ್ಲ. ಆದರಿಂದಲೇ ವಿರಕ್ತಪಂಥ ವೈರಾಗ್ಯ ಪೀಠವನ್ನು ವಿರಕ್ತ ಪೀಠವೆಂಬಂತೆಯೇ ಮಾರ್ಪಡಿಸಿಕೊಳ್ಳುತ್ತಾ ಬಂತು. ಈ ಮಠದ ವಿರಕ್ತರು ಮೂಲ ಕೇದಾರ ಪೀಠದ 'ಜಗದ್ಗುರು' ಉಪಾಧಿಯನ್ನು ಬಳಸಿಕೊಳ್ಳಲು ನಿರಾತಂಕವಾಗಿಯೇ ಪ್ರಯತ್ನಿಸಿದರೆಂದೂ ತರ್ಕಿಸಬಹುದು. ಶ್ರೀ ಗುರು ಪೀಠದ ಹೊಂಬೆಳಕಿನಲ್ಲಿ ವಿರಕ್ತ ಮಠರಥಾ ಸಮಯ ತುಂಬ ಎಚ್ಚರಿಕೆಯಿಂದಲೇ ಪಲ್ಲವಿಸಿತು; ಪೂತು ಫಲ

ಬಿಟ್ಟಿತು! ಈ ನೂತನ ವಿರಕ್ತ ಮಠ ತನ್ನ ಒಕ್ಕಣಿಕೆಯಲ್ಲಿ ದ್ವಾರಾವ
ಎಂಬ ಹೆಸರನ್ನು ಹೇಳಿಕೊಂಡು ತನ್ನ ಹಿಂದಿನ ಬೆಳವಣಿಗೆಯನ್ನು ನೆನೆಯ
ತ್ತದೆ! ದ್ವಾರಾವತಿ ಎಂಬುದು ಈಗಿನ ಹಳೆಯಬೀಡು. ಹಳೆಯಬೀಡಿನ
ಮುರಘ ಸಂಪ್ರದಾಯದ ಪ್ರಾಚೀನ ಮಠವೊಂದು ಚಿತ್ರದುರ್ಗದ ವಿರಕ್ತ ಮ
ಕ್ಕಿಂತಲೂ ಹಿಂದೆಯೇ ಪ್ರಸಿದ್ಧವಾಗಿತ್ತೆಂದು ವಾಙ್ಮಯದಿಂದ ತಿಳಿದು ಬರುತ್ತ
ಅಪರಂತೆಯೇ ಈ ವಿರಕ್ತರ ಒಕ್ಕಣಿಕೆಯಲ್ಲಿ ಜಟಪುರ ಎಂಬ ಹೆಸರೂ ಕಂ
ಬರುತ್ತದೆ. ಚಿತ್ರದುರ್ಗದ ವಿರಕ್ತ ಮಠವನ್ನು ಸ್ಥಾಪಿಸಿದ ಎರಡನೆಯ ಮು
ಸ್ವಾಮಿಗಳ ದೀಕ್ಷಾ ಗುರುವೆಂದರೆ ನೋಡಾ ಸಿದ್ಧಲಿಂಗರೆಂಬ ವಿರಕ್ತರು. ಇ
ಗಡ್ಡುಗೆ ಸೊರಬ ಪ್ರಾಂತದಲ್ಲಿ ಜಡೆ ಎಂಬ ಗ್ರಾಮವಿದ್ದಲ್ಲಿದೆ. ಇದನ್ನು ಜಟಾಪು
ಎಂದು ಕರೆದಿರುತ್ತಾರೆಂದು ನಂಬಬಹುದು. ನೋಡಾ ಸಿದ್ಧಲಿಂಗರ ಆಸ್ತ
ದಿಂದ ಮುರುಘಾ ಸಮಯ ಪ್ರಾರಂಭವಾಯಿತು! ಆದ್ದರಿಂದ ಆ ದೀಕ್ಷ
ಗುರುವಿನ ನೆನಪಿರುವಂತೆಯೂ ಆಸೂತ್ರಾನುವರ್ತಿಗಳೆಂಬಂತೆಯೂ ಚಿತ್ರದು
ದವರು ಜಟಾಪುರ ಸಂಪ್ರದಾಯವನ್ನು ನೆನೆಯುತ್ತಾರೆ. ಹಳೆಯಬೀ
ವಿರಕ್ತ ಪರಂಪರೆಯ ಕೇಂದ್ರ ಚಿತ್ರದುರ್ಗದಲ್ಲಿಯೇ ಲೀನವಾಯಿತು. ತ
ಹಿಂದಣ ಪರಂಪರೆಯ ಸ್ಮಾರಕವೆಂಬಂತೆ ದ್ವಾರಾವತಿ ಮತ್ತು ಜಟಾಪುರ
ವಿರಕ್ತಾನ್ವಯಗಳನ್ನು ತನ್ನಲ್ಲಿ ಅಳವಡಿಸಿಕೊಂಡು ಈ ಮುರಘಾ ಸಮ
ಚಿತ್ರದುರ್ಗದ ಕೇದಾರ ಪೀಠದ ಜಂಗಮ ಮಠವನ್ನು ಆಕ್ರಮಿಸಿಕೊಂ
ಅದನ್ನು ಮುರುಘಾ ಸಂಪ್ರದಾಯದ ಮಠವಾಗಿ ಪರಿವರ್ತನೆಗೊಳಿಸಿತೆಂ
ವಿದ್ವಾಂಸರು ನಂಬುತ್ತಾರೆ.

ಚಿನ್ಮೂಲಾದ್ರಿಯಲ್ಲಿ ಪಂಚ ಪೀಠಗಳ ಶಾಖಾ ಮಠಗಳೂ ಇದ್ದವ
ಮಹಾತ್ಮರಾದ ರೇವಣಸಿದ್ಧರೂ ಅವರ ಶಿಷ್ಯ ತರಳಬಾಳು ಮರುಳಸಿದ್ಧ
ಇಲ್ಲಿ ಬಹಳಕಾಲ ತಪಸ್ಸು ಮಾಡಿದರು. ಇದು ರಸಸಿದ್ಧರ ಕ್ಷೇತ್ರವಾಗಿತ್ತು
ಈಗಲೂ ಇಲ್ಲಿ ಸಂಪಿಗೆ ಸಿದ್ಧೇಶ್ವರ ದೇವಾಲಯವಿದೆ. ಮುರಿಗೀ ಮ
ಚಿತ್ರದುರ್ಗದಲ್ಲಿ ನೆಲಸುವುದಕ್ಕಿಂತ ಸುಮಾರು ೭೦೦ ವರ್ಷಗಳ ಹಿಂದೆಯೆ
ಇಲ್ಲಿ ಶ್ರೀ ಗುರು ಮರುಳಸಿದ್ಧ ಸಂಪ್ರದಾಯ ಬೆಳೆದಿತ್ತು. ಈ ಸಂಪ್ರದಾಯ
ಸಿರಿಗೆರೆ ಬೃಹನ್ಮಠ ಅಂದೂ ಪ್ರಸಿದ್ಧವಾಗಿತ್ತೆಂದು ಹೇಳಬಹುದು.

ಚಿತ್ರದುರ್ಗದ ತಪ್ಪಲಿನಲ್ಲಿ ಹೊಳಲ್ಕೆರೆ ದಾರಿಯ ಬಲಭಾಗದಲ್ಲಿ ಶ್ರೀ ನೀಲಕಂಠೇಶ್ವರಸ್ವಾಮಿಯ ದೇವಾಲಯವೊಂದಿದೆ. ಇಂದು ಚಿತ್ರದುರ್ಗ ನಗರ ಈ ದೇವಾಲಯದ ಸುತ್ತಲೂ ಬೆಳೆದು ನಿಂತಿದೆ. ಹದಿನಾಲ್ಕನೆಯ ಶತಮಾನದಲ್ಲಿ ನೀಲಕಂಠ ಶಿವಾಚಾರ್ಯರು ಬ್ರಹ್ಮಸೂತ್ರ ವ್ಯಾಖ್ಯಾನ ರೂಪವಾದ ಕ್ರಿಯಾ ಸಾರ ವೆಂಬ ಗ್ರಂಥವನ್ನು ಬರೆದಿರುತ್ತಾರೆ. ಆ ಶಿವಾಚಾರ್ಯರು ನಾನಾ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿ, ಗೋಕರ್ಣ ಪ್ರಾಂತದಿಂದ ಬಂದು ಈ ಚಿನ್ಮೂಲಾದ್ರಿಯ ಸಾನು ಪ್ರದೇಶದಲ್ಲಿ ಬಹಳಕಾಲ ಅನುಷ್ಠಾನ ಪರರಾಗಿದ್ದ ರೆಂದು ತಿಳಿದುಬರುತ್ತದೆ. ಇವರು ಅಂದು ಅನುಷ್ಠಾನ ಮಾಡಿದ ಕ್ಷೇತ್ರದಲ್ಲಿ ಶಿವಭಕ್ತರು ಅವರ ನೆನಪಿರುವಂತೆ ಭವ್ಯ ದೇವಾಲಯವನ್ನು ಕಟ್ಟಿಸಿ, ಅದರಲ್ಲಿ ಶ್ರೀ ನೀಲಕಂಠೇಶ್ವರ ಲಿಂಗವನ್ನು ಪ್ರತಿಷ್ಠೆಮಾಡಿದರು. ಇದು ಈಗಲೂ ಚಿತ್ರ ದುರ್ಗದಲ್ಲಿ ಪ್ರಮುಖ ಶಿವಾಲಯವಾಗಿ ಕಂಗೊಳಿಸುತ್ತಿದೆ. ಇಲ್ಲಿರುವ ವಿರಕ್ತ ಮಠದ ಶ್ರೀ ಜಯದೇವಸ್ವಾಮಿಗಳ ಕಾಲದಲ್ಲಿ ಅವರು ವಿಜಯದಶಮಿಯ ದಿನ ಶ್ರೀ ಮಠದಿಂದ ಉತ್ಸವದಲ್ಲಿ ಹೊರಟು ಬೆಟ್ಟದ ಮೇಲುದುರ್ಗದಲ್ಲಿರುವ ಸಿದ್ಧೇ ಶ್ವರ ಚಾವಡಿ ಎಂಬ ಶಿಲಾ ಮಂಟಪವನ್ನು ಸೇರಿ ಅಲ್ಲಿ ಶಮೀ ಪೂಜೆಯನ್ನು ಮಾಡಿಕೊಂಡು ಪುನಃ ಹಿಂದಿರುಗಿ ಬರುವಾಗ ಶ್ರೀ ನೀಲಕಂಠೇಶ್ವರಸ್ವಾಮಿಯ ದೇವಾಲಯದಲ್ಲಿ ಪೂಜೆಮಾಡಿಸಿ, ವಿಜಯದಶಮಿಯ ಸಂದೇಶವನ್ನಿತ್ತು ಅಲ್ಲಿಂದ ಶ್ರೀ ಮಠಕ್ಕೆ ಬಿಜಯಮಾಡುವ ಪದ್ಧತಿಯನ್ನು ಪ್ರಾರಂಭಿಸಿದರು. ಶೂನ್ಯ ಪೀಠದ ವಿರಕ್ತರಿಗೆ ಇವೆಲ್ಲಾ ಅಪ್ರಕೃತ. ಈ ಪದ್ಧತಿ ಈಗಲೂ ಆಚರಣೆ ಯಲ್ಲಿದೆ. ಮೇಲುದುರ್ಗದಲ್ಲಿ ಪ್ರಾಚೀನ ಶ್ರೀ ಶೈಲ ಶಾಖಾ ಮಠವಿದ್ದ ಸ್ಥಳ ದಲ್ಲಿಯೇ ಈಗಲೂ ಶಮೀ ಪೂಜೆಯನ್ನು ಈ ವಿರಕ್ತರು ನೆರವೇರಿಸುತ್ತಾರೆ. ಇದನ್ನು ನೋಡಿದರೆ, ಈ ವಿರಕ್ತರು ವಿಜಯದಶಮಿಯ ದಿನ ಶ್ರೀ ಆಚಾರ್ಯ ಪೀಠಗಳ ವಾತಾವರಣದಲ್ಲಿ ನೀಲಕಂಠೇಶ್ವರನ ದರ್ಶನಮಾಡಿ, ಧರ್ಮೋದ್ಧಾರ ಮಾಡುತ್ತಿದ್ದಾರೆಂಬುದನ್ನು ಮರೆಯುವಂತಿಲ್ಲ. ಇದರಿಂದ ಮೇಲುದುರ್ಗದ ಮಠ ಮತ್ತು ಶ್ರೀ ನೀಲಕಂಠೇಶ್ವರ ದೇವಾಲಯ–ಇವುಗಳ ಹಿನ್ನೆಲೆಯಲ್ಲಿ ವಿರಕ್ತ ಮಠದ ಪ್ರಾಶಸ್ತ್ಯವನ್ನು ಸಾಧಿಸಲು ಶ್ರೀ ಜಯದೇವ ಸ್ವಾಮಿಗಳು ಬಹಳ ದೂರಾಲೋಚನೆಯಿಂದ ಕಾರ್ಯತತ್ಪರರಾದರು! ಕಲ್ಯಾಣದಲ್ಲಿ ಬಸ ವಣ್ಣನವರು ಪಂಚಪೀಠಗಳ ಪ್ರತೀಕವೆಂಬಂತೆ ಪಂಚಲಿಂಗಗಳನ್ನು ಸ್ಥಾಪಿಸಿ

ದ್ದಾರೆ. ಈ ಸ್ಥಳವನ್ನು 'ಪಂಚಸೂತ್ರ ಪೀಠ'ವೆಂದು ಕರೆಯುತ್ತಾರೆ. ಬ
ವಣ್ಣನವರು ಸನಾತನ ವೀರಶೈವವನ್ನು ಪರಿಪೋಷಿಸಿದರೆಂಬುವುದರಲ್ಲಿ ಸಂಶಯ
ವಿಲ್ಲ. ಅವರು ವಿರಕ್ತ ಪಂಥವನ್ನು ಕಂಡರಿಯರು. ಚನ್ನಬಸವಣ್ಣನವ
ಉಳವಿಯಲ್ಲಿ ಅನೇಕ ಶರಣದೊಂದಿಗೆ ಲಿಂಗೈಕ್ಯರಾದರು. ಅದು ಪುಣ್ಯಕ್ಷೇತ್ರ
ಆ ಕ್ಷೇತ್ರಾಧಿಪತಿ ಶ್ರೀ ವೀರಭದ್ರಸ್ವಾಮಿಯ ದೇವಾಲಯ ಭವ್ಯವಾಗಿದೆ. ಪ್ರ
ವರ್ಷವೂ ಅಲ್ಲಿ ರಥೋತ್ಸವ ನಡೆಯುತ್ತದೆ. ಶರಣರು ಕಲ್ಯಾಣದಿಂದ ಉಳ
ಕ್ಷೇತ್ರಕ್ಕೆ ಬರಬೇಕಾದರೆ, ಆ ಕ್ಷೇತ್ರದ ಮಹಿಮೆಯನ್ನು ಅವರು ತಿಳಿದಿದ್ದಿರಬೇಕು
ವೀರಭದ್ರಸ್ವಾಮಿ ಸನಾತನ ವೀರಶೈವದ ಗೋತ್ರ ಪುರುಷ. ರೇಣುಕ
ಮಲಯಾಚಲದಲ್ಲಿ ಅಗಸ್ತ್ಯರಿಗೆ ಶಿವತತ್ತ್ವೋಪದೇಶ ಮಾಡಿದ ಪುಣ್ಯಕ್ಷೇತ್ರ
ಇದೇ ಆಗಿರಬೇಕು. ವಿರಕ್ತರು ಈ ಕ್ಷೇತ್ರದಲ್ಲಿ-ರೇಣುಕ ಭೂಮಿಯಲ್ಲಿ-ತು
ನಿಷ್ಠೆಯಿಂದ ಅನುಷ್ಠಾನ ಮಾಡುತ್ತಾರೆಂದರೆ, ವಿರಕ್ತಪಂಥ ಸನಾತನ ವೀರಶೈ
ವಲ್ಲಿ ಒಂದು ಅಂಗವಾಗಿದೆಯೆಂದು ಗೊತ್ತಾಗುತ್ತದೆ. ಈ ತತ್ತ್ವವನ್ನೇ ಶ್ರೀ
ಜಯದೇವ ಸ್ವಾಮಿಗಳೂ ಚಿತ್ರದುರ್ಗದಲ್ಲಿ ಆಚರಿಸುತ್ತ ಬಂದರು.

ಚಿತ್ರದುರ್ಗದ ವಿರಕ್ತ ಮಠ ಕೇವಲ ಮುರಘಾ ಸಮುದಾಯದ ಒಂದು
ಸಾಮಾನ್ಯ ಮಠವಾಗಿ ಶ್ರೀ ಕೇದಾರ ಮಠದ ಆಶ್ರಯದಲ್ಲಿ ಸುಮಾರು ಇನ್ನೂ
ಐವತ್ತು ವರ್ಷಗಳ ಹಿಂದೆ ಪ್ರಾರಂಭವಾಯಿತಾದರೂ, ಅದು ತನ್ನ ಅಂ
ಸ್ತನ್ನು ಬೆಳಸಿಕೊಳ್ಳಲು ತುಂಬಾ ಹೋರಾಟ ನಡೆಸಿತೆಂಬುವುದು ನಿರ್ವಿವಾದ
ಈ ಮಠದಲ್ಲಿ ಆಗಿ ಹೋದ ೧೭ ಜನ ವಿರಕ್ತರಲ್ಲಿ ಶ್ರೀ ಜಯದೇವಸ್ವಾಮಿ
ಗಳು ಅತ್ಯಂತ ಬುದ್ಧಿವಂತರು; ಸಾಹಸವಂತರು ಮತ್ತು ಧರ್ಮಾಭಿಮಾನಿ
ಗಳೂ ಆಗಿದ್ದರು. ಅವರಿಗಿಂತಲೂ ಹಿಂದೆ ಆಗಾಗ ಈ ಮಠದ ವಿರಕ್ತ ಸ್ವಾಮಿ
ಗಳು ಈ ಮಠದ ಸ್ಥಾನಮಾನಗಳನ್ನು ಹೆಚ್ಚಿಸಲು ಪ್ರಯತ್ನಪಟ್ಟಂತೆಯೂ
ಗೊತ್ತಾಗುತ್ತದೆ. ಇದು ವಿರಕ್ತ ಪೀಠ; ಜಗದ್ಗುರು ಪೀಠವೆನಿಸಿಕೊಳ್ಳಲು
ಸಾಮಾನ್ಯವೇ! ಅಂದಿನಕಾಲದಲ್ಲಿ ಅದು ಸಾಮಾನ್ಯವಾಗಿರಲಿಲ್ಲ! ಇದು ಕೇವ
ಪಾಳೆಯಗಾರನ ಅರಮನೆಯ ಖಾಸಾ ಮಠವಾಗಿತ್ತೇ ಹೊರತು ವೀರಶೈ
ಸಮಾಜದ ಮಠವಾಗಿರಲಿಲ್ಲ. ಆ ಪಾಳೆಯಪಟ್ಟು ಹಾಳಾದಮೇಲೆ ಚಿತ್ರದು
ರ್ಗದ ವಿರಕ್ತ ಮಠ ಮುರಘಾ ಸಮುದಾಯದ ಕೇಂದ್ರಸ್ಥಾನವಾಗಲು ಪ್ರಯತ್ನ

ಸಿತು. ಈ ಕೇಂದ್ರದ ಸ್ಥಾನಮಾನಗಳು ಹೆಚ್ಚಿವರೆ ಆ ಸಂಪ್ರದಾಯದ ಬೆಳವಣಿಗೆಯಾಗಲು ಸಾಧ್ಯ. ಈ ಪಂಥ ಸಮಾಜದಲ್ಲಿ ಸಾಕಾದಷ್ಟು ತೀವ್ರಗತಿಯಿಂದಲೇ ಪ್ರಚಾರವಾಗುತ್ತಿತ್ತು. ಇದು ಜನರ ಗೌರವಾದರಗಳಿಗೂ ಪಾತ್ರವಾಗಿತ್ತೆಂದು ವ್ಯಕ್ತವಾಗುತ್ತದೆ. ಅನೇಕ ಶಾಸನಗಳಿಂದಲೂ ಈ ಮಾತು ಊರ್ಜಿತವಾಗುತ್ತದೆ.

* ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕಾ ವರ್ಷಂಗಳು ಸಾ ೧೭೨೪ ನೆಯ ದುಂದುಭಿನಾಮ ಸಂವತ್ಸರದ ಆಷಾಢ ಶು. ೧೦ ಯ ಚಿತ್ರದುರ್ಗದಲ್ಲಿ ಅವಿರಳ ಪರಂಜ್ಯೋತಿಸ್ವರೂಪ ನಿರ್ಲೇಪರಾದಂಥಾ ಶ್ರೀ ಮುರಿಗೆಸ್ವಾಮಿಗಳೈಯ್ಯನವರ ಸಾಂಪ್ರದಾಯಕರಾದ ಜ್ವಲತ್ಕಂಠದ ಮಹಂತಪ್ಪನವರ ಮಠ ಯೀ ಹುಳಿಯಾರಲ್ಲಿ ನಿರ್ಮಿತವಾಗಿಯಿರುವಂತ್ಥ ವಿರಕ್ತ ಮಠಕ್ಕೆ ಧರ್ಮಶಾಸನವಂನು ನಿರ್ಣಯಾಬರಶಿ..........॥ ಎಂದು ಹುಳಿಯಾರ ವಿರಕ್ತ ಮಠದ ತಾಮ್ರ ಶಾಸ್ನದಲ್ಲಿ ಉಕ್ತವಾಗಿದೆ, ಇದು ಕ್ರಿ. ಶ. ೧೮೦೨ ನೆಯ ಇಸವಿಯಲ್ಲಿ ಹುಟ್ಟಿದ ಶಾಸನ. ಅಲ್ಲಿಗೆ ಚಿತ್ರದುರ್ಗದ ಮುರಿಗೆಮಠ ಹುಟ್ಟಿ ಸುಮಾರು ೭೫ ವರ್ಷವಾಗಿತ್ತು. ಎಂದರೆ ಆ ಮಠ ಹುಟ್ಟಿದ ಮೇಲೆ ಒಂದು ನೂರು ವರ್ಷಗಳ ಅವಧಿಯನ್ನು ಸಮೀಪಿಸುತ್ತಿದ್ದರೂ ಜನರು ಚಿತ್ರದುರ್ಗದ ವಿರಕ್ತರನ್ನು ಮುರಿಗೀಸ್ವಾಮಿಗಳಯ್ಯನವರು ಎಂದೇ ಗೌರವಿಸುತ್ತಿದ್ದರೆಂದು ತಿಳಿಯಬಹುದು. ಆಗ ಅವರು ಜಗದ್ಗುರುವಾಗಿರಲಿಲ್ಲ! ಅವರು ಜಗದ್ಗುರುಗಳೆಂದು ಕರೆಯಿಸಿಕೊಳ್ಳಲು ಪ್ರಯತ್ನಗಳನ್ನೇನೋ ನಡೆಸುತ್ತಿರಬಹುದು!

ಮೈಸೂರು ಪ್ರಭು ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರು ಕ್ರಿ. ಶ. ೧೮೧೫ ನೆಯ ಜನವರಿ ೧೩ ನೆಯ ದಿನ ಅರಮನೆ ಸೀಮೆ ಗಡಿಗಳ ಆಮೀಲ್ ಕಿಲ್ಲೇದಾರರಿಗೆ ಕಳಿಸಿದ ನಿರೂಪದಲ್ಲಿ-"ಚಿನ್ಮೂಲಾದ್ರಿ ಪ್ರಭು ಶೂನ್ಯ ಸಿಂಹಾಸನ ಮಠದ ಮುರಿಗಾ ರಾಜೇಂದ್ರ ಸ್ವಾಮಿಗಳವರು ತಮ್ಮ ಸಕಲ ವಿನಿಯೋಗ ಸಹಿತವಾಗಿ ಮಾಮೂಲ್ ಪ್ರಕಾರ ತಮ್ಮ ಶಿಷ್ಯರಲ್ಲಿ ಹೋಗುವಲ್ಲಿ ಶೃಂಗೇರಿ ಮಠಕ್ಕೆ ಸಲ್ಲತಕ್ಕ ಮಾಮೂಲ್ ಸಕಲ ವಿನಿಯೋಗ ಯಾವುದು ಇದೆಯೋ ಅದೇ

* ಎಫಿಗ್ರಾಫಿಯಾ ಕರ್ಣಾಟಕ-Vol. XVI ಪುಟ ೭೭ ತಮುಕೂರು ಜಿಲ್ಲಾ ಹುಳಿಯಾರ ವಿರಕ್ತ ಮಠದಲ್ಲಿದ್ದ ತಾಮ್ರ ಶಾಸನ.

ಮೇರೆಗೆ ಇವರಿಗೂ ಇದೆಯಷ್ಟೆ." ಎಂದು ಹೇಳಿರುತ್ತದೆ. ಇವರಲ್ಲಿ 'ಜಗದ್ಗುರು' ಪದವಿಲ್ಲ. ಆದರೆ, ಪ್ರಭು ಶೂನ್ಯ ಸಿಂಹಾಸನ ಮಠದ ಮುರಿಗಾ ರಾಜೇಂದ್ರ ಸ್ವಾಮಿಗಳವರು" ಎಂಬ ಪದ ಸಮುದಾಯ ಕಂಡು ಬರುತ್ತದೆ. ಅದುವರೆಗೆ ಈ ಮಠ ಕೇದಾರ ಗುರು ಪೀಠದಿಂದ ಪ್ರತ್ಯೇಕವಾಗಿ ನಿಂತು ತಾನು ಶೂನ್ಯ ಸಿಂಹಾಸನ ಮಠವೆಂದು ಹೇಳಿಕೊಳ್ಳಲು ಪ್ರಯತ್ನಿಸುತ್ತಿತ್ತೆಂಬುದನ್ನು ಅರಿಯ ಬಹುದು. ಮುಂದೆ, ಕೇವಲ ಆರು ತಿಂಗಳ ಕಾಲದಲ್ಲಿಯೇ ಎಂದರೆ ೧೮... ನೆಯ ಜುಲೈ ೨೬ ನೆಯ ದಿನ ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರು ಚಿತ್ರ ದುರ್ಗದ ಶ್ರೀ ವಿರಕ್ತ ಮಠಾಧೀಶ್ವರರಿಗೆ ಬರೆದ ಬಿನ್ನಹ ಪತ್ರದಲ್ಲಿ-"ಶ್ರೀ ವೀರ ಶೈವ ಮತಸ್ಥಾಪನಾಚಾರ್ಯವರ್ಯ ಶ್ರೀ ಮತ್ಪರಮಪಾವನ ಚಾರು... ಸನ್ಮೋಹನಾಂಗ ಮದನಮರ್ಧನ ಮಾಯಾ ಕೋಲಾಹಲ ಶ್ರೀ ಮದಲ್ಲಮ ಪ್ರಭು ಸ್ವಾಮ್ಯಾನ್ವಯ ಸಂಜನಿತಾನಾಂ ಶ್ರೀ ಮಚ್ಚಿನ್ಮಲಾದ್ರಿ ಪ್ರ... 'ಶೂನ್ಯ ಪೀಠಾರೂಢರಾದಂಥಾ॥" ಮತ್ತು "ಶ್ರೀ ಮನ್ಮಹಾರಾಜ ನಿರಂಜನ ಜ ದ್ಗುರು ಮುರಗಾ ರಾಜೇಂದ್ರ ಸ್ವಾಮಿಗಳವರ ಸನ್ನಿಧಾನಕ್ಕೆ" ಎಂದು ಬರೆ ಸಿರುತ್ತಾರೆ. ಇದಕ್ಕಿಂತಲೂ ಹಿಂದಿನ ಯಾವುದೊಂದು ಪತ್ರ ವ್ಯವಹಾ ದಲ್ಲಿಯೂ ಮೈಸೂರು ಅರಮನೆಯವರು 'ಜಗದ್ಗುರು' ಪದವನ್ನು ಮುರಿ ಮಠಾಧೀಶ್ವರರಿಗೆ ಅನ್ವಯಿಸಿದಂತೆ ಕಂಡುಬರುವುದಿಲ್ಲ. ಇಲ್ಲಿಗೆ ಮುರಿಗೀ ಮ ಚಿತ್ರದುರ್ಗದಲ್ಲಿ ನೆಲಸಿ ಒಂದು ನೂರು ವರ್ಷಗಳಾಗಿತ್ತು. ಈ ಬಿನ್ನಹ ಪ ದಲ್ಲಿ "ಶ್ರೀ ವೀರಶೈವ ಮತಸ್ಥಾಪನಾಚಾರ್ಯವರ್ಯ" ಎಂಬ ಪದವೃಂದವ ಇದೆ. ಶ್ರೀ ಮಠದವರು ಅಂದು ಅರಮನೆಗೆ ಒದಗಿಸಿದ ಸಾಹಿತ್ಯಾಂಶಗ ಆಧಾರದ ಮೇಲೆ ಈ ಬಿನ್ನಹ ಪತ್ರ ಸಿದ್ಧವಾಗಿರಬೇಕೆಂಬುದನ್ನು ಊಹ ಬಹುದು. ಜಗದ್ಗುರು ಕೇದಾರ ಪೀಠದ ಶಾಖಾ ಬೃಹನ್ಮಠದಲ್ಲಿ ನೆಲ ಮುರಘಾ ವಿರಕ್ತ ಮಠ ನೂರು ವರ್ಷಗಳ ಕಾಲ ನಡೆಸಿದ ಹೋರಾಟದ ಫ ವಾಗಿ 'ಜಗದ್ಗುರು' ಮತ್ತು 'ವೀರಶೈವ ಮತಸ್ಥಾಪನಾಚಾರ್ಯವರ್ಯ' ಎಂ ಪದಗಳನ್ನು ತನ್ನ ಪಂಥದ ಸಾಹಿತ್ಯದಲ್ಲಿ ಉಪಯೋಗಿಸಿರಬೇಕೆಂಬುದ ಆಶ್ಚರ್ಯವಿಲ್ಲ! ಮುರಿಗಿ ಮಠದವರು ಕ್ರಿ. ಶ. ೧೮೪೧ ರಲ್ಲಿ ಬರೆಯಿಸಿರು ನಿರೂಪದಲ್ಲಿ 'ಶ್ರೀ ಮನ್ಮಹಾರಾಜ' 'ನಿರಂಜನ' ಎಂಬ ಪದಗಳನ್ನು ಬಳಸಿ ತ್ತಾರೆ. ಇದು ಆ ಮಠದ ಪ್ರಗತಿಯನ್ನು ಸೂಚಿಸುತ್ತದೆ. ಆದರೆ ಕ್ರಿ.

೧೮೧೬ ನೆಯ ಅರಮನೆಯ ಬಿನ್ನಹ ಪತ್ರದಲ್ಲಿ ಕಂಡ 'ಜಗದ್ಗುರು' ಪದ ಅಲ್ಲಿಂದ ಮುಂದೆಯೂ ಸಾರ್ವಜನಿಕವಾಗಿ ಸಾರ್ವತ್ರಿಕವಾಗಿ. ಸಾರ್ವಕಾಲಿಕವಾಗಿ ಅರಮನೆಯ ನಿರೂಪಗಳಲ್ಲಿಯೂ ಬಂದಿರುವುದಿಲ್ಲ. ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರು ಕ್ರಿ. ಶ. ೧೮೩೧ರಲ್ಲಿ ರಾಜ್ಯಾಡಳಿತವನ್ನು ಬ್ರಿಟಿಷ್ ಕಮೀಷರ್ ವ್ಯವಸ್ಥೆಗೆ ವಹಿಸಿಕೊಟ್ಟರು. ಕ್ರಿ. ಶ. ೧೮೩೧ ನೆಯ ಅಕ್ಟೋಬರ್ ೧೨ ರಂದು "ಶ್ರೀ ಮನ್ನಿರಂಜನ ಮುರುಗಾ ರಾಜೇಂದ್ರ ಸ್ವಾಮಿಗಳವರು ಈಗ್ಗೆ ಕೆಲವು ದಿವಸಕ್ಕೆ ಮುಂಚೆ ಶಿವಾಧೀನವನ್ನು ಹೊಂದಿದರು". "ಪೂರ್ವಾರಭ್ಯ ನಡೆದು ಬಂದ ಮೇರೆ ಎಲ್ಲಾ ಜನಗಳು ಮಠದಲ್ಲಿ ಸೇರಿ ಯೋಗ್ಯವಾಗಿ ಇರುವವರನ್ನು ಗೊತ್ತುಮಾಡಿ ಆ ಬಗ್ಯೆ ಹುಜಾರಿಗೆ ಅರಿಕೆಮಾಡಿ"–ಎಂದು ಮುಂತಾಗಿ ತಿಳಿಸಿರುತ್ತಾರೆ. ಇದರಲ್ಲಿ 'ಜಗದ್ಗುರು' ಪದವಿಲ್ಲ. ವೀರಶೈವ ಪಂಚ ಆಚಾರ್ಯರನ್ನು 'ಜಗದ್ಗುರು' ಗಳೆಂದು ಶಿವಾಗಮಗಳಲ್ಲಿ ಹೇಳಿದೆ. ಅದೇನೂ ಸರ್ಕಾರದ ಬಿರುದು ಬಾವಲಿಗಳ ಸಾಲಿನಲ್ಲಿ ಸೇರಿಲ್ಲ. ಕ್ರಿ. ಶ. ೧೮೩೫ ನೆಯ ಸೆಪ್ಟಂಬರ್ ೧ ನೆಯ ತಾರೀಖಿನಲ್ಲಿ ಮೈ ಸೂ ರು ರಾಜ್ಯಭಾರದ ಬ್ರಿಟಿಷ್ ಕಮೀಷರ್ ಕಚೇರಿಯಿಂದ ಸಾದರಾದ ಇಸ್ತಿಹಾರು ನಾಮೆಯಲ್ಲಿ * "ಮುರಿಗಿ ಮಠದಲ್ಲಿ ಖಾಲಿಯಾಗಿರುವ ಲಿಂಗಾಯಿತರ ಗುರುಪಟ್ಟಕ್ಕೆ ಮತ್ತೊಬ್ಬರು ಯೋಗ್ಯರಾದವರನ್ನು ನೇಮಿಸತಕ್ಕದ್ದು" ಎಂದು ತಿಳಿಸಿರುತ್ತಾರೆ. ಮುರುಗಿ ಮಠಕ್ಕೆ ಯೋಗ್ಯ ವಿರಕ್ತರನ್ನು ಸರ್ಕಾರದ ಪೂರ್ವಭಾವಿ ಅನುಮತಿಯಿಂದ ಸಾರ್ವಜನಿಕರು ಬಹಿರಂಗವಾಗಿ ನೇಮಿಸುವುದೇ ಪದ್ಧತಿಯಾಗಿದೆಯೆಂದು ಇದರಿಂದ ವೃಥವಡುತ್ತದೆ. ಈ ಇಸ್ತಿಹಾರ್ನಾಮೆಯಲ್ಲಿಯೂ 'ಜಗದ್ಗುರು' ಪದವಿಲ್ಲ. ಇದರಂತೆಯೇ 'ಶ್ರೀ ವೀರಶೈವ ಮಠಸ್ಥಾಪನಾಚಾರ್ಯವರ್ಯ' ಎಂಬ ಪದ ಸಮೂಹವೂ ಎಲ್ಲ ನಿರೂಪಗಳಲ್ಲಿಯೂ ಬಿನ್ನಹ ಪತ್ರಗಳಲ್ಲಿಯೂ ಕಂಡು ಬರುವುದಿಲ್ಲ. ಅಷ್ಟೇ ಏಕೆ! ಶ್ರೀ ಮುರಿಗಿ ಮಠದವರ ಒಕ್ಕಣಿಕೆಯಲ್ಲಿಯೂ ಈ ಪದಗಳು ಸಾರ್ವತ್ರಿಕವಾಗಿ ಬಂದಿಲ್ಲ.

ಅಲ್ಲಮರು ಅನಿಮಿಷಾರ್ಯರಿಂದ ಲಿಂಗವನ್ನು ಪಡೆದರೆಂದು ಕೆಲವರು ತಿಳಿದಿರುತ್ತಾರೆ. ಅದು ಸರಿಯಲ್ಲ. ಅನಿಮಿಷರು ಅಲ್ಲಮರನ್ನು ಅನುಗ್ರಹಿಸಿದರೆಂದು ಮಾತ್ರ ಅದರಿಂದ ಅರ್ಥವಾಗುತ್ತದೆ. "ಹೀಗೆ ಅಲ್ಲಮನು ಗುರುವಿನ ಅನುಗ್ರಹನ್ನು ಪಡೆದು ಲೋಕದಲ್ಲಿ ಸಂಚರಿಸುತ್ತ ಅನೇಕ ಮಹಿಮೆಗಳನ್ನು

ತೋರಿಸುತ್ತ ಕಲ್ಯಾಣಕ್ಕೆ ಹೋದನು. ಇಷ್ಟಲಿಂಗವಿಲ್ಲದ್ದರಿಂದ ದ್ವಾರಪಾಲಕ
ಅವನನ್ನು ಬಾಗಿಲಲ್ಲಿ ತಡೆದರು. ಅಲ್ಲಮನಿಗೆ ಕೋಪ ಬಂದಿತು. ಅ
ಪರಿಣಾಮವಾಗಿ ಅಲ್ಲಿ ಊಟಕ್ಕೆ ಕುಳಿತಿದ್ದ ಶರಣರೆಲ್ಲರ ಸಜ್ಜಿಕೆಗಳಲ್ಲೂ ಇ
ಇಷ್ಟಲಿಂಗಗಳೇ ಕಣ್ಮರೆಯಾದವು. ಇದೆಲ್ಲವೂ ಹೊರಗೆ ನಿಂತಿರುವ ಅಲ್ಲಮ
ಪ್ರಭಾವವೆಂದುಭಾವಿಸಿ ಬಸವಣ್ಣನು ಭಕ್ತಿಯಿಂದ ಅವನಲ್ಲಿ ಬೇಡಿಕೊಳ್ಳುವ
ಅವನ ಅನುಗ್ರಹದಿಂದ ಮತ್ತೆ ಎಲ್ಲರ ಲಿಂಗಗಳೂ ಕಾಣಿಸಿಕೊಂಡವು. ಆ
ಬಸವಣ್ಣನು ಮಹಾಮಹಿಮನಾದ ಅಲ್ಲಮನಿಗೆ ಇಷ್ಟಲಿಂಗವನ್ನು ಕರುಣಿ
ವಂತೆ ಗುರು ರೇವಣಸಿದ್ಧರಲ್ಲಿ ಬೇಡಿಕೊಳ್ಳುವನು. ಇವರು ರಂಭಾಪುರೀ ಪೀ
ಸಿಂಹಾಸನವನ್ನು ೧೨ ನೇ ಶತಮಾನದಲ್ಲಿ ಅಲಂಕರಿಸಿದ್ದ ಗುರುಮೂರ್ತಿ-ಕಲ್ಯಾ
ಣದಲ್ಲಿ ಬಸವಣ್ಣನವರು ನಡೆಸುತ್ತಿದ್ದ ವೀರಶೈವ ಧರ್ಮದ ಪ್ರಚಾರಕ್ಕೆ ಪ್ರೇರ
ರಾಗಲು ಕಲ್ಯಾಣಕ್ಕೆ ಬಂದು ನೆಲಸಿದ್ದರು. ಬಸವಣ್ಣನು ಒಪ್ಪಿದವರೆಲ್ಲ
ಇವರು ಪಂಚಕಲಶ ಸ್ಥಾಪನಾಪೂರ್ವಕವಾಗಿ ಪ್ರಮಥಗಣರೆದುರಿಗೆ ಲಿಂಗ
ರಣ ಮಾಡುತ್ತ ವೀರಶೈವ ಧರ್ಮದ ಪ್ರಚಾರದಲ್ಲಿ ಅಗ್ರಸ್ಥಾನವನ್ನು ಪ
ದ್ದರು." ಎಂಬುದಾಗಿ ಡಾ|| ಸಿದ್ಧಪ್ಪಾರಾಧ್ಯರು ಅನುವಾದ ಮಾಡಿ
"ಕನ್ನಡ ಕ್ರಿಯಾಸಾರ" ಗ್ರಂಥದಲ್ಲಿ ೫೩ ನೆಯ ಪುಟದಲ್ಲಿ ಬರೆದಿರುತ್ತಾ
ಅಲ್ಲಮರಿಗೆ ಗುರು ರೇವಣಸಿದ್ಧರಿಂದ ಇಷ್ಟಲಿಂಗ ಪ್ರದಾನವಾಯಿತಾದ್ದರಿ
ಅಲ್ಲಮರು ವೀರಶೈವ ಮತಸ್ಥಾಪನಾಚಾರ್ಯರಾಗಲು ಸಾಧ್ಯವಿಲ್ಲ. ಅರಮ
ಯವರಿಗೆ ಈ ಧರ್ಮ ತತ್ತ್ವಗಳನ್ನು ಒದಗಿಸಿರಲಿಲ್ಲವಾದ್ದರಿಂದ ಅವರು ಬಿನ್ನ
ವಲ್ಲಿ ಹಾಗೆ ಬರೆದಿದ್ದಾರೆಂದು ಹೇಳಬಹುದು.

ವಿರಕ್ತ ಪಂಥದ ಮೂಲ ಪುರುಷ ಅಲ್ಲಮ ಪ್ರಭುವೆಂದು ಈ ಪ
ದವರು ನಂಬಿರುತ್ತಾರೆ. ಇದು ತತ್ತ್ವ ಸಹಜವಾಗಿದೆಯೆಂದು ಒಪ್ಪಬಹು
ಆದರೆ ಅಲ್ಲಮರನ್ನು "ಶ್ರೀ ವೀರಶೈವ ಮತಸ್ಥಾಪನಾಚಾರ್ಯವರ್ಯ"ರೆ
ಅರಮನೆಯ ಬಿನ್ನಹ ಪತ್ರದಲ್ಲಿ ಸೂಚಿಸಿರುವುದು ವಿಚಾರಾರ್ಹವಾದ ಅ
ವಾಗಿದೆ. ಅಂಥ ಪ್ರಾಶಸ್ತ್ಯವನ್ನು ಸಮಾಜದಲ್ಲಿ ನೆಲೆಗೊಳಿಸಲು ಮುರು
ಮಠದವರು ನಿರಂತರವೂ ಸಾಹಸ ಪಟ್ಟಿರುತ್ತಾರೆ. ಅಲ್ಲದೆ, ಸನಾತನ ಪ
ಆಚಾರ್ಯ ಪೀಠಗಳಿಗಿಂತಲೂ ಶೂನ್ಯ ಸಿಂಹಾಸನವೇ ಸರ್ವೋಚ್ಚ ಗುರು

ನೆಂಬ ಅಭಿಪ್ರಾಯವನ್ನೂ ಜನ ಸಾಮಾನ್ಯದಲ್ಲಿ ಮೂಡಿಸಲು ನಿತಾಂತ ಪ್ರಯತ್ನ ಮಾಡಿರುತ್ತಾರೆ. ಪಂಚ ವಿರಕ್ತ ಸಮಯ ಮಠಗಳಲ್ಲಿಯೇ ಹುಬ್ಬಳ್ಳಿ ಮೂರು ಸಾವಿರ ಮಠ ಅತ್ಯಂತ ಪ್ರಾಚೀನವಾದುದು. ಅವರೂ ಶೂನ್ಯ ಸಿಂಹಾಸನಾಧೀಶ್ವರರೇ. ಅದೂ ಪ್ರಾಚೀನ ಜಂಗಮ ಮಠವೇ. ಅವರು ಮುರಿಗಿಮಠದವರಂತೆ ಅಲ್ಲಮರನ್ನು ವೀರಶೈವ ಮತಸ್ಥಾಪನಾಚಾರ್ಯ ವರ್ಯರೆಂದು ಅನುಮೋದಿಸುವುದಿಲ್ಲ. ಹುಬ್ಬಳ್ಳಿ ಮೂರು ಸಾವಿರ ಮಠದ ನೆರವಿನಲ್ಲಿ ಸಂಸ್ಕೃತ ವಿದ್ಯಾ ಪ್ರಚಾರ ಬಂಧುರವಾಗಿ ನಡೆಯುತ್ತಿದೆ. ಆ ಶ್ರೀ ಮಠದ ಆಶ್ರಯದಲ್ಲಿ ಪಗಡದಿನ್ನಿ ಬೃಹನ್ಮಠದ ಪಂಡಿತ ಶ್ರೀ ಬಸವರಾಜ ಶಾಸ್ತ್ರಿಗಳು "ಸಂಸ್ಕೃತಪ್ರವೇಶ" ಎಂಬ ಪಠ್ಯ ಪುಸ್ತಕವನ್ನು ಸಂಸ್ಕೃತದಲ್ಲಿ ಬರೆದಿರುತ್ತಾರೆ. ಅದರಲ್ಲಿ ಮೂರನೆಯ ಪಾಠದಲ್ಲಿ ಏಕೋರಾಮಾಚಾರ್ಯ ರನ್ನು "ವೀರಶೈವ ಮತಸ್ಥಾಪಕೇಷು ಮಹಾಚಾರ್ಯೇಷು ಪಂಚಸು ಅಯಮಪಿ ಏಕಃ ಮಹಾಚಾರ್ಯಃ ವರ್ತತೇ" ಎಂದರೆ, ಈ ಏಕೋರಾಮರು ವೀರಶೈವ ಮತ ಸ್ಥಾಪಕರಾದ ಪಂಚಾಚಾರ್ಯರಲ್ಲಿ ಒಬ್ಬರಾಗಿದ್ದಾರೆ ಎಂದು ಬರೆದಿರುತ್ತಾರೆ. ಅದರಂತೆಯೇ, ಅದೇ ಪುಸ್ತಕದ ಹನ್ನೆರಡನೆಯ ಪಾಠದಲ್ಲಿ ಶ್ರೀ ರೇಣುಕಾಚಾರ್ಯರನ್ನು ಕುರಿತು "ವೀರಶೈವ ಮತಸ್ಥಾಪಕೇಷು ಪಂಚಸು ಮಹಾಚಾರ್ಯೇಷು ರೇಣುಕಾಚಾರ್ಯಃ ಪ್ರಧಾನತಮಃ ವರ್ತತೇ" ಎಂದರೆ ವೀರಶೈವ ಮತ ಸ್ಥಾಪಕರಾದ ಪಂಚಾಚಾರ್ಯರಲ್ಲಿ ಶ್ರೀ ರೇಣುಕಾ ಚಾರ್ಯರು ಅಗ್ರಗಣ್ಯರಾಗಿರುತ್ತಾರೆಂದು ಹೇಳಿರುತ್ತಾರೆ. ಇದರಿಂದ ಹುಬ್ಬಳ್ಳಿ ಮೂರು ಸಾವಿರ ಮಠದ ವಿರಕ್ತ ಮಹಾಸ್ವಾಮಿಗಳವರು ವಿಶಾಲ ಮನೋಭಾವ ದಿಂದ ಪಂಚಾಚಾರ್ಯರನ್ನು ವೀರಶೈವ ಮತಸ್ಥಾಪನಾಚಾರ್ಯರೆಂದು ಗೌರವಿ ಸಿರುತ್ತಾರೆಂಬುದನ್ನು ಅರಿಯಬಹುದು. ಹಿಂದೆ, ಚಿತ್ರದುರ್ಗದ ವಿರಕ್ತ ಪಟ್ಟ ಭದ್ರರಾಗಿದ್ದು ಅನಂತರ ಅನಂತಪುರ ಮೂಲ ಮುರಘಾ ಮಠದ ಶೂನ್ಯ ಸಿಂಹಾಸನಾರೋಹಣ ಮಾಡಿದ ಗುರುಸಿದ್ಧಸ್ವಾಮಿಗಳೆಂಬುವರು ತಾವು ಬರೆದಿ ರುವ 'ಹಾಲಾಸ್ಯ ಪುರಾಣ'ದಲ್ಲಿ "ನಂದಿ ಭೃಂಗಿ ವೃಷಂ ಮಹಾ ಗುರು ರೇಣುಕಂ ವರದಾರುಕಂ" ಎಂದು ಶ್ರೀ ರೇಣುಕಾಚಾರ್ಯರನ್ನು ಮಹಾ ಗುರು ವೆಂದೂ ಶ್ರೀ ದಾರುಕಾಚಾರ್ಯರನ್ನು ಶ್ರೇಷ್ಠ ಗುರುವೆಂದೂ ಕೊಂಡಾಡಿರು

ತ್ತಾರೆ. ಈ ಪಂಚ ಪೀಠಗಳಲ್ಲಿ ಹಿಮವತ್ಕೇದಾರ ಪೀಠವನ್ನೇ ವೈರಾಗ್ಯ ಸಿಂಹಾಸನವೆಂದು ಶಿವಾಗಮುಗಳಲ್ಲಿ ಹೇಳಿರುತ್ತದೆ. ಆ ಮಠದ ಶಾಖಾ ಮಠಗಳು ಭರತ ಖಂಡದ ನಾನಾ ಭಾಗಗಳಲ್ಲಿವೆ. ಅಂಥ ಶಾಖಾ ಮಠವೊಂದು ಚಿನ್ಮೂಲಾದ್ರಿಯಲ್ಲಿಯೂ ಇತ್ತು. ಆ ಶಾಖಾ ಮಠವೇ ಇಂದು ಚಿತ್ರದುರ್ಗದ ಮುರಘಾ ವಿರಕ್ತ ಮಠವಾಗಿದೆ. ಇದು ಕಾಲಾಂತರದಲ್ಲಿ ತಾನೇ ಸ್ವತಂತ್ರ ಮಠವೆಂದು ಸಾಧಿಸುತ್ತ ಮುರಘ ಸಂಪ್ರದಾಯದ ಶೂನ್ಯ ಸಿಂಹಾಸನ ಮಠ ವಾಯಿತು! ಇದು ಅನಂತಪುರದ ಮೂಲ ಮುರಘಾ ಮಠದಿಂದ ಸಿಡಿದುಬಂದು ಚಿತ್ರದುರ್ಗದಲ್ಲಿ ನೆಲಸಿ ಕೇದಾರ ಪೀಠದ ಬೃಹನ್ಮಠದಲ್ಲಿ ಗರಿಕಟ್ಟಿಕೊಂಡಿತು. ಇದು ಅತ್ತ ಗುರುಪೀಠದ ಶಾಖಾ ಮಠ! ಇತ್ತ ಮೂಲ ವಿರಕ್ತ ಮುರಘಾ ಮಠದ ಶಾಖಾ ಮಠ! ಪೂರ್ವದಲ್ಲಿ ವಿರಕ್ತರು ನಿಜ ನಿರಾಭಾರಿಗಳಾಗಿದ್ದರು. ವಿರಕ್ತರೆಂದರೆ ಸಂನ್ಯಾಸಾಶ್ರಮ! ಇದು ಪ್ರಾಚೀನಕಾಲದಿಂದಲೂ ಇದ್ದುದೇ. ಇವರಿಗೆ ಪ್ರತ್ಯೇಕ ಮಠ ಮಂದಿರಗಳಿರಲಿಲ್ಲ. ಇವರು ಹುಲ್ಲು ಗುಡಿಸಲುಗಳಲ್ಲಿ, ಎಲೆಮನೆಗಳಲ್ಲಿ, ಗಿರಿ ಗಹ್ವರಗಳಲ್ಲಿ ವಾಸಿಸುತ್ತಿದ್ದರು. ಇವರು ಸ್ತ್ರೀಯರನ್ನು ನೋಡುತ್ತಿರಲಿಲ್ಲ. ಸಂಸಾರಿಗಳ ಮನೆಗಳಿಗೆ ಬರುತ್ತಿರಲಿಲ್ಲ. ಈ ಸಂನ್ಯಾಸ ನಿಯಮುಗಳು ಈಗ ಚಿತ್ರದುರ್ಗದ ವಿರಕ್ತರಿಗಿಲ್ಲ! ಇದು ಗುರು ಮಠವೂ ಅಲ್ಲ, ವಿರಕ್ತ ಪೀಠವೂ ಅಲ್ಲ! ಇದೊಂದು ವಿಚಿತ್ರ ಪರಂಪರೆ! ಆದರೆ ಇತಿಹಾಸ ಇದರ ಹುಟ್ಟು ಮತ್ತು ಬೆಳವಣಿಗೆಯನ್ನು ಬಲ್ಲದು! ಇದರ ಶಿಖಾ, ಶೈಲಿ, ಶೂನ್ಯ ಸಿಂಹಾಸನ, ಜಗದ್ಗುರು, ನಿರಂಜನ, ಮಹಾರಾಜ, ಬಿರುದು ಬಾವಲಿ ಈ ಎಲ್ಲಾ ನೂತನ ಕಲ್ಪನೆಗಳೇ! ಏಕೆಂದರೆ, ಇದು ಸ್ವಯಂ ಸಿದ್ಧ ವಿರಕ್ತ ಮಠ. ಇದು ಸುಮಾರು ೩೫೦ ವರ್ಷಗಳ ಹಿಂದೆ ಹುಟ್ಟಿತಾದರೂ ಪ್ರಾಚೀನ ಆಚಾರ್ಯ ಗುರು ಪೀಠಗಳಿಗಿಂತಲೂ ತಾನು ಹಿರಿಯದೆಂದು ಹೇಳಿಕೊಳ್ಳುತ್ತಿದೆ. ಇದು ಅಸಂಗತ. ಅಷ್ಟೇಕೆ; ವಯಸ್ಸಿನಲ್ಲಿ ಎಳನಡು-ಅರಸೀಕೆರೆ, ಸಿರಿಗೆರೆ ಮತ್ತು ನಿಡುಮಾಮಿಡಿ ಗುರುಮಠಗಳಿಗಿಂತಲೂ, ಸಿದ್ಧಗಂಗಾ, ಹರದನಹಳ್ಳಿ, ಎಡೆಯೂರು, ಹುಬ್ಬಳ್ಳಿ ಮೂರು ಸಾವಿರ ಮಠ ಮತ್ತು ಅನಂತಪುರ ವಿರಕ್ತ ಮಠಗಳಿಗಿಂತಲೂ ಚಿತ್ರದುರ್ಗದ ವಿರಕ್ತ ಮಠ ಹಿರಿಯದಲ್ಲ. ಇತಿಹಾಸ ಎಂದಿದ್ದರೂ ಇದ್ದುದನ್ನು ಇದ್ದಂತೆಯೇ ನುಡಿಯುತ್ತದೆ! ಆಗ್ರಾದಲ್ಲಿರುವ ತಾಜ ಮಹಲ್ ಮೊದಲು ಶಿವದೇವಾಲಯವಾಗಿದ್ದಿತೆಂದೂ ಅನಂತರ ಅದು ರಾಜ

ಮಾನಸಿಂಗನ ಅರಮನೆಯಾಗಿದ್ದಿತೆಂದೂ ತರುವಾಯ ಅದು ಷಹಜಾಹಾನ್ ಕಾಲದಲ್ಲಿ ಮುಮ್ತಾಜ್ ಬೇಗಂ ರಾಣಿಯ ಗೋರಿಯಾಯಿತೆಂದೂ ಅಪರೆ ಅದು ಮುಮ್ತಾಜಳ ಗೋರಿಯಲ್ಲವೆಂದೂ ಪ್ರೊಫೆಸರ್ ಪಿ. ಎನ್. ಓಕ್ ಅವರು ಇತಿಹಾಸದ ಆಧಾರದ ಮೇಲೆ ಸ್ಪಷ್ಟಪಡಿಸಿರುತ್ತಾರೆಂದು ತಾ|| ೪-೨-೬೮ ನೆಯ ತಾಯಿನಾಡು ಮತ್ತು ತಾ|| ೫-೨-೬೮ ನೆಯ ಪ್ರಜಾವಾಣಿ ಪತ್ರಿಕೆಗಳಲ್ಲಿ ವರದಿಯಾಗಿದೆ. ಇದರಂತೆಯೇ, ಚಿತ್ರದುರ್ಗದ ವಿರಕ್ತ ಮಠದ ಚರಿತ್ರೆಯನ್ನು ಇತಿಹಾಸದ ಆಧಾರದ ಮೇಲೆ ಈ ಗ್ರಂಥದಲ್ಲಿ ನಿರೂಪಿಸಿರುತ್ತೇವೆ.

ತಾ|| ೨೭—೧೨—೧೯೧೭ ರಂದು ದಾವಣಗೆರೆಯಲ್ಲಿ ಶ್ರೀ ಜಯದೇವ ಮುರಘರಾಜೇಂದ್ರ ಸ್ವಾಮಿಗಳವರ ಸಮ್ಮುಖದಲ್ಲಿ ದಿವಾನ್ ಬಹದ್ದೂರ್ ರಾಜಸಭಾ ಭೂಷಣ ಶ್ರೀ ಕೆ. ಪಿ. ಪುಟ್ಟಣ್ಣಶೆಟ್ಟಿಯವರ ಅಧ್ಯಕ್ಷತೆಯಲ್ಲಿ ಎಂಟನೆಯ ವೀರಶೈವ ಮಹಾಸಭೆ ನಡೆಯಿತು. ಆಗ ಅಧ್ಯಕ್ಷರು ತಮ್ಮ ಭಾಷಣದಲ್ಲಿ "ಲಿಂಗಾಯಿತ ಮತವೆಂಬುದು ಅನಾದಿಯಾದುದಲ್ಲವೆಂಬುದಾಗಿಯೂ, ಈಚೆಗೆ ಉದ್ಭವವಾದುದೆಂಬುದಾಗಿಯೂ ಕ್ರಿ. ಶ. ೧೧೫೬-೧೧೫೭ ನೆಯ ವರ್ಷದ ಸುಮಾರಿನಲ್ಲಿ ಕಲ್ಯಾಣ ನಗರದಲ್ಲಿ ಕಾಳಚೂರ್ಯ ಬಿಜ್ಜಳ ಮಹಾರಾಜನ ಕಾಲದಲ್ಲಿದ್ದ ನಮ್ಮ ಆಚಾರ್ಯವರ್ಯರವರಾದ ಶ್ರೀ ಬಸವೇಶ್ವರಸ್ವಾಮಿಗಳು ಈ ಮತವನ್ನು ನೂತನವಾಗಿ ಕಲ್ಪಿಸಿದರೆಂಬುದಾಗಿಯೂ ಒಂದು ಆರೋಪಣೆಯುಂಟು." ಇದು ಸರಿಯಲ್ಲ. "ಶ್ರೀ ಬಸವೇಶರಸ್ವಾಮಿಗಳವರು ನಮ್ಮ ಪಂಚಾಚಾರ್ಯರ ಮತವ್ಯಾಪಕತೆಗಾಗಿ ಅತ್ಯುತ್ಸಾಹಕರರಾದ ಬೋಧಕರಾಗಿದ್ದರು" ಎಂದು ಹೇಳಿದ್ದಾರೆ. ಅದ್ದರಿಂದ ಅಲ್ಲಮ ಪ್ರಭು ವೀರಶೈವ ಮತ ಸ್ಥಾಪನಾಚಾರ್ಯವರ್ಯರಲ್ಲವೆಂದೂ ಪೂಜ್ಯ ಪಂಚ ಆಚಾರ್ಯರೇ ಈ ಮತದ ಸ್ಥಾಪನಾಚಾರ್ಯರೆಂದೂ ದೃಢವಾಗಿ ಹೇಳಿದ್ದಾರೆ. ಇದನ್ನು ಶ್ರೀ ಜಯದೇವ ಸ್ವಾಮಿಗಳೂ ಒಪ್ಪಿದಂತಾಯಿತು. ಇವರು ಚಿತ್ರದುರ್ಗದ ವಿರಕ್ತ ಮಠದ ಸ್ಥಾನಮಾನಗಳನ್ನು ಉನ್ನತ ಮಟ್ಟಕ್ಕೆ ಒಯ್ಯಲು ತುಂಬ ಶ್ರಮಿಸಿದಂತೆ ತಿಳಿದು ಬರುತ್ತದೆ. ಇದೇ ವೀರಶೈವ ಮಹಾ ಸಭೆಯಲ್ಲಿ ಅಂಗೀಕೃತವಾದ ೧೨ ನಿರ್ಣಯಗಳಲ್ಲಿ ೪ ನೆಯ ನಿರ್ಣಯ ಹೀಗಿದೆ. "ನಮ್ಮ ಸಮಾಜದ ಪ್ರಖ್ಯಾತ ಗುರುಗಳಾದ ಚಿತ್ರದುರ್ಗದ ಶ್ರೀ ಮನ್ಮಹಾರಾಜ ನಿರಂಜನ ಜಗ

ದ್ಗುರು ಮುರಘ ರಾಜೇಂದ್ರ ಮಹಾಸ್ವಾಮಿಗಳವರು ಬ್ರಿಟಿಷ್ ಇಂಡಿಯಾ ದಲ್ಲಿಯೂ ಇತರ ದೇಶೀಯ ಸಂಸ್ಥಾನಗಳಲ್ಲಿಯೂ ಅಡ್ಡಪಲ್ಲಕ್ಕಿ ಮತ್ತು ಪಂಜ ಕಲಶಗಳನ್ನು ಉಪಯೋಗಿಸುತ್ತಿರುವಂತೆ ಮೈಸೂರು ಸಂಸ್ಥಾನದಲ್ಲಿಯೂ ಉಪಯೋಗಿಸಲು ದಯವಿಟ್ಟು ಅಪ್ಪಣೆಯನ್ನು ಕೊಡಬೇಕೆಂದು ಈ ಮಹಾ ಸಭೆಯು ಶ್ರೀಮನ್ಮಹಾರಾಜರವರನ್ನು ವಿನಯಪೂರ್ವಕವಾಗಿ ಪ್ರಾರ್ಥಿಸಿ ಕೊಳ್ಳುತ್ತದೆ." ಈ ಮತವಿರುವ ದೇಶದಲ್ಲಿಯೇ ಅಡ್ಡಪಲ್ಲಕ್ಕಿ ಮರ್ಯಾದೆ ಈ ಸ್ವಾಮಿಗಳಿಗಿರಲಿಲ್ಲವೆಂದಂತಾಯಿತು.

* ಶ್ರೀ ಜಯದೇವಸ್ವಾಮಿಗಳು ಚಿತ್ರದುರ್ಗದ ಬೆಟ್ಟದಮೇಲೆ ಇರುವ ಸಂಪಿಗೆ ಸಿದ್ಧೇಶ್ವರ ಸ್ವಾಮಿಯ ದೇವಸ್ಥಾನದ ಹತ್ತಿರವಿರುವ ಕಲ್ಲಿನ ಕಟ್ಟಡದಲ್ಲಿ ಸಂತರ್ಪಣೆಯನ್ನು ನಡೆಸಲು ಅನುಮತಿ ಕೊಡಬೇಕೆಂದು ಡೆಪ್ಯುಟಿ ಕಮೀಷನ ರಿಗೆ ಅರ್ಜಿ ಬರೆಸಿ ಅವು ಶ್ರೀ ಮಠಕ್ಕೆ ಸೇರಿದವುಗಳೆಂದು ಹೇಳುತ್ತ ಆ ಶಿಲಾ ಮಂದಿರವನ್ನೂ ಅದರ ಹತ್ತಿರವೇ ಇರುವ ಉಪ್ಪರಿಗೆಯನ್ನೂ ಸರಿಪಡಿಸಲು ಆರಂಭಿಸಿದರು. ಶ್ರೀ ಸ್ವಾಮಿಗಳು ಸರ್ಕಾರದ ಅನುಮತಿಯನ್ನು ಪಡೆಯದೆ ಆ ಕಟ್ಟಡಗಳನ್ನು ಸರಿಪಡಿಸುತ್ತಾರೆಂದು ಗ್ರಾಮದ ಪಟೇಲರು ಸರ್ಕಾರಕ್ಕೆ ವರದಿ ಮಾಡಿದರು. ಅನೇಕ ಬ್ರಾಹ್ಮಣ ಮತೀಯರೂ, ಗೊಡಬನಹಾಳ ಗ್ರಾಮದ ಶ್ರೀ ಮರುಳಸಿದ್ಧ ಸಂಪ್ರದಾಯದ ಲಿಂಗಾಯಿತರೂ ಶ್ರೀ ಸ್ವಾಮಿಗಳ ಮೇಲೆ ದೂರು ಕೊಟ್ಟು ಸಾರ್ವಜನಿಕ ಸಂಪಿಗೆ ಸಿದ್ಧೇಶ್ವರ ದೇವಾಲಯದ ಮುಂಭಾಗದಲ್ಲಿರುವ ಶಿಲಾ ಮಂದಿರವನ್ನು ಮಠವಾಗಿ ಪರಿವರ್ತನೆಗೊಳಿಸಲು ಪ್ರಯತ್ನಿಸುತ್ತಾರೆಂದು ಆಕ್ಷೇಪಣೆಮಾಡಿದರು. ಅಲ್ಲಿ ಗಣಾರಾಧನೆಯನ್ನು ಮಾಡುವ ಉದ್ದೇಶದಿಂದ ಆ ಕಟ್ಟಡಗಳನ್ನು ಸಜ್ಜುಗೊಳಿಸಬೇಕಾಯಿತೆಂದೂ, ಆ ಕಟ್ಟಡಗಳ ಹಕ್ಕುದಾರಿಯನ್ನು ಸರ್ಕಾರದವರು ಇತ್ಯರ್ಥಮಾಡಬಹು ದೆಂದೂ, ಆದರೆ ಕೂಡಲೇ ಶ್ರೀಗಳು ಅಲ್ಲಿ ಗಣಾರಾಧನೆ ನಡೆಸಲು ಅವಕಾಶ ಕೊಡಬೇಕೆಂದೂ ಮಠದ ಏಜೆಂಟ್ ಪುನಃ ಮನವಿ ಮಾಡಿಕೊಂಡನು. ಶ್ರೀ ಸ್ವಾಮಿಗಳು ಆ ಶಿಲಾ ಮಂದಿರದಲ್ಲಿ ಮೂರು ದಿನಗಳು ವಾಸಮಾಡಿಕೊಂಡಿದ್ದು

* Govt. order No. 1322-Muz 584-08-11 dated Bangalore 19th November 1910.

ಆ ಮಂದಿರದಲ್ಲಿ ಒಂದು ಕೃತಕ ಗದ್ದುಗೆಯನ್ನೂ ಮಾಡಿಸಿ, ಅನಂತರ ಆ ಕಟ್ಟಡದ ಬಾಗಿಲು ಮುಚ್ಚಿಸಿ, ಬೀಗಹಾಕಿಕೊಂಡು ಹೋದರು. ಈ ಹಕ್ಕುದಾರಿ ವಿಚಾರವನ್ನು ಸ್ಥಳೀಯ ಅಧಿಕಾರಿಗಳು ವಿಚಾರಣೆಮಾಡಿದರು. ಆ ಶಿಲಾ ಮಂದಿರ ಲಿಂಗಾಯುತರ ಮಠವಲ್ಲವೆಂದೂ, ಅದು ಸಿದ್ಧೇಶ್ವರ ಚಾವಡಿಯೆಂದೂ ಅಲ್ಲಿ ಲಿಂಗಾಯಿತರ ಮಠ ಪ್ರತ್ಯೇಕವಾಗಿತ್ತೆಂದೂ, ಈ ಸಿದ್ಧೇಶ್ವರ ಮಂದಿರದಲ್ಲಿ ಗದ್ದುಗೆಯನ್ನು ಹೊಸದಾಗಿ ನಿರ್ಮಿಸಲಾಗಿದೆಯೆಂದೂ, ಆ ಕಟ್ಟಡದಲ್ಲಿ ಲಿಂಗ ಮುದ್ರೆ ಕಲ್ಲುಗಳೇ ಇಲ್ಲವೆಂದೂ ಅಧಿಕಾರಿಗಳು ವರದಿ ಮಾಡಿದರು. ಆದರೆ ಸರ್ಕಾರದವರು ಆ ಶಿಲಾ ಮಂದಿರವನ್ನು ಮುರಿಗೀ ಮಠಕ್ಕೆ ವಹಿಸಲು ತೀರ್ಮಾನಿಸಿದರು. ಇದರ ಮೇಲೆ ವ್ಯಾಖ್ಯಾನ ಬೇಕಾಗಿಲ್ಲ. ಆ ಕಲ್ಲುಕಟ್ಟಡ ಮೇಲು ದುರ್ಗದ ಮಠವಲ್ಲ. ಅದನ್ನು ಈಗ ಜನರು ಮುರಿಗೀಮಠವೆಂದು ಕರೆಯುತ್ತಾರೆ. ಅದನ್ನೇ ಮೇಲುದುರ್ಗದ ಮಠವೆಂದೂ ಹೇಳುತ್ತಾರೆ. ಇದು ಸರಿಯಲ್ಲ. ಪಾಳೆಯಗಾರರು ಬೆಟ್ಟದ ಮೇಲೆ ಮುರಿಗೀ ಮಠವನ್ನು ಕಟ್ಟಿಸಿರಲಿಲ್ಲವೆಂದು ಧಾರಾಳವಾಗಿ ಹೇಳಬಹುದು. ಶ್ರೀ ಶೈಲ ಪೀಠದ ಶಾಖಾ ಮಠ ಬೇರೆ ಕಡೆಯಿದ್ದು, ಹಾಳಾಗಿರಬೇಕು! ಈಗ ಮುರಿಗೀ ಮಠದ ವಶದಲ್ಲಿರುವ ವಿಶಾಲವಾದ ಶಿಲಾ ಮಂದಿರವೇ ಸಿದ್ಧೇಶ್ವರ ಚಾವಡಿ. ಇದು ಹಿಂದೆ ಪಾಳೆಯಗಾರರ ಅತಿಥಿಗೃಹವಾಗಿತ್ತು. ಶ್ರೀ ಜಯದೇವ ಸ್ವಾಮಿಗಳ ಸಾಹಸವನ್ನು ಕೊಂಡಾಡಬೇಕು!

* ಚಿತ್ರದುರ್ಗ ನಗರದ ರಾಜಬೀದಿಗಳಲ್ಲಿ ಮುರಿಗಿ ಮಠದ ಸ್ವಾಮಿಗಳು ಬಿರುದಾವಳಿ ಸಹಿತವಾಗಿ ಬರಕೂಡದೆಂದೂ, ಬಿರುದಾವಳಿಗಳಿಲ್ಲದೆ ಪಾದಚಾರಿಗಳಾಗಿ ಮೆರವಣಿಗೆ ಬರಬಹುದೆಂದೂ ಚಿತ್ರದುರ್ಗ ಬ್ರಾಹ್ಮಣ ಸಂಗಡದವರು ಅಡ್ಡಿಪಡಿಸಿದ ಸಂದರ್ಭದಲ್ಲಿ ಸರ್ಕಾರದವರು ಅವರ ಆಕ್ಷೇಪಣೆಗಳನ್ನು ಪರಿಗಣಿಸಲಿಲ್ಲ ಮತ್ತು ಮುರಿಗಿ ಮಠದ ಗುರುಗಳು ಚಿತ್ರದುರ್ಗ ನಗರವನ್ನು ಪ್ರವೇಶಿಸಬಹುದೆಂದೂ ಅಪ್ಪಣೆಮಾಡಿದರು.

ಇದರಿಂದ ಶ್ರೀ ಜಯದೇವ ಸ್ವಾಮಿಗಳಿಗಿಂತ ಹಿಂದೆ ಶ್ರೀ ಮುರಿಗಿ

* ತಾ॥ ೯—೮—೧೯೦೭ ನೆಯ ನುರ್ಕು೦ ಸರ್ಕಾರಿ ಆರ್ಡರನ್ನು ದಯೆಯಿಟ್ಟು ನೋಡಿರಿ.

ಮಠದ ಯಾವ ಸ್ವಾಮಿಗಳೂ ಊರಿನಲ್ಲಿ ಮೆರವಣಿಗೆಯಲ್ಲಿ ಹೋಗಿರ
ವೆಂದು ಸ್ಪಷ್ಟವಾಗಿ ಹೇಳಬಹುದು. ಶ್ರೀ ಜಯದೇವ ಸ್ವಾಮಿಗಳು ಅಪ್ರತಿ
ಸಾಹಸ ಚತುರರು !

ಈ ಎಲ್ಲ ಅಂಶಗಳನ್ನೂ ವಿವೇಚಿಸಿದರೆ, ಚಿತ್ರದುರ್ಗದ ವಿರಕ್ತ ಮ
ಶ್ರೀ ಹಿಮವತ್ಕೇದಾರದ ಜಂಗಮ ಪೀಠದ ಶಾಖಾ ಮಠವನ್ನು ಮುರಘ ಸ
ದಾಯದ ಮಠವನ್ನಾಗಿ ಪರಿವರ್ತನೆಗೊಳಿಸಿಕೊಂಡು, ಆ ಮೂಲಪೀಠದ ಹೆ
ನಿಂದ ತನ್ನ ಅಂತಸ್ತನ್ನು ಬೆಳಸಿಕೊಂಡಿತೆಂಬುದರಲ್ಲಿ ಸಂಶಯವಿಲ್ಲ. ಯಾ
ದೃಷ್ಟಿಯಿಂದ ಪರಿಶೀಲಿಸಿದರೂ ಇದು ಶಾಖಾ ಮಠವೇ ಆಗಿರುತ್ತದೆ. ಇಂದಿ
ಚಿತ್ರದುರ್ಗದ ವಿರಕ್ತ ಮಠಕ್ಕೆ ನೂತನ ಪಟ್ಟಾಧಿಕಾರವಾಗಬೇಕಾದ ಸಂದ
ಗಳಲ್ಲಿ ಆ ನೂತನ ನಿರಾಭಾರಿಗೆ ಇನ್ನೊಂದು ವಿರಕ್ತ ಜಗದ್ಗುರು ಪೀಠದವ
ಅನುಗ್ರಹವಾಗುತ್ತಿಲ್ಲ. ಆ ಪಂಥದ ಸಾಮಾನ್ಯ ಶಾಖಾ ಮಠದ ವಿರಕ್ತ
ಚಿತ್ರದುರ್ಗ ವಿರಕ್ತ ಮಠದ ಜಗದ್ಗುರುವಿಗೆ ಅನುಗ್ರಹವಾಗುತ್ತಿದೆ! ಪೂ
ಚಾರ್ಯರಲ್ಲಿ ಈ ಪರಿಪಾಠವಿಲ್ಲ. ದಕ್ಷಿಣ ಮೈಸೂರು ರಾಜ್ಯದ ವಿರಕ್ತ ಮ
ಗಳಲ್ಲಿ ಸಿದ್ಧಗಂಗಾ ವಿರಕ್ತ ಮಠ ಅತ್ಯಂತ ಪ್ರಾಚೀನವಾದುದೆಂಬುದು ನಿ
ವಾದವಾಗಿದೆ. ಅದು ಒಂದು ಮೂಲ ಶೂನ್ಯ ಸಿಂಹಾಸನ ಕ್ಷೇತ್ರವೆಂಬುದ
ಸಂಶಯವಿಲ್ಲ. ಅದು ಮುರಿಗೀ ಮಠದ ಶಾಖಾ ಮಠಗಳಲ್ಲಿ ಬರುವುದಿಲ್ಲವೆ
ದನ್ನೂ ಗಮನಿಸಬಹುದು. ಶೂನ್ಯಸಿಂಹಾಸನ ಗ್ರಂಥ ಸಂಪೂರ್ಣವಾಗಿ ಮುದ್ರ
ವಾದಮೇಲೆ, "ಈ"ಅರ್ಘ್ಯ–ಪಾದ್ಯ"–ವನ್ನು ನಾವು ಅರ್ಪಿಸುವ ವೇಳೆಯ
ಚಿತ್ರದುರ್ಗದ ವಿರಕ್ತ ಮಠದ ವಿಚಾರವಾಗಿ ಇನ್ನೂ ಅನೇಕ ಹಳೆಯ ದಾ
ಗಳು ನಮಗೆ ಸಿಕ್ಕಿರುತ್ತವೆ. ಈಗಲೇ ಗ್ರಂಥ ದೊಡ್ಡದಾಯಿತು. ಒ
ನಾಡ ಹೋಗಿ ಒಂಭತ್ತನ್ನಾಡಿದ್ದಾಗಿದೆ! ಅವೆಲ್ಲವುಗಳನ್ನೂ ನಾವು ನಮ
ಮುಂದಿನ 'ನಿರಂಜನ' ಗ್ರಂಥದಲ್ಲಿ ವಿವರಿಸುತ್ತೇವೆ.

ನಾವು 'ಶೂನ್ಯ ಸಿಂಹಾಸನ' ಗ್ರಂಥವನ್ನು ವಿಮರ್ಶಾತ್ಮಕ ದೃಷ್ಟಿಯಿ
ಬರೆದಿರುತ್ತೇವೆ. ಚಿತ್ರದುರ್ಗದ ಶ್ರೀಮನ್ಮಹಾರಾಜ ನಿರಂಜನ ಜಗದ್ಗು
ಬೃಹನ್ಮಠದ ವಿಚಾರದಲ್ಲಿ ನಮಗೆ ಅತ್ಯಂತ ಗೌರವವಿದೆ; ಭಕ್ತಿ ಇದೆ. ನಮ
ಭಕ್ತಿ ಗೌರವಗಳನ್ನು ಯಾರೂ ಶಂಕಿಸುವಂತಿಲ್ಲ. ಸುಮಾರು ೩೦ ವರ್ಷಗ

ಹಿಂದೆ ಬೆಂಗಳೂರಲ್ಲಿ ಶ್ರೀ ಜಯದೇವ ಸ್ವಾಮಿಗಳ ಸಮ್ಮುಖದಲ್ಲಿ ತುಂಬಿದ ಸಭೆಯಲ್ಲಿ ನಾನು 'ಜಂಗಮ ವಿಜಯ' ಎಂಬ ನಾನು ಬರೆದ ನಾಟಕವನ್ನು ಓದಿದೆನು. ಅಂದು ಅವರು ವಾತ್ಸಲ್ಯದಿಂದ ಆಶೀರ್ವದಿಸಿದರು. ಆಗ ನಾನು ತರುಣ. ಶ್ರೀ ಜಯವಿಭವ ಸ್ವಾಮಿಗಳ ಸನ್ನಿಧಿಯಲ್ಲಿ ಚಿತ್ರದುರ್ಗದಲ್ಲಿ ಅನೇಕ ಸಂದರ್ಭಗಳಲ್ಲಿ ನಾನು ಭಾಷಣ ಮಾಡಿದೆನು. ಅವರು ಸದಾ ನನ್ನಲ್ಲಿ ವಾತ್ಸಲ್ಯಪೂರ್ಣರಾಗಿದ್ದರು. ಈ ಉಭಯ ಸ್ವಾಮಿಗಳೂ ವಿದ್ವದಯಸ್ಕಾಂತ ವಂತಿದ್ದರು. ಅಯಸ್ಕಾಂತ ಎಲ್ಲ ಕಡೆಯಿಂದಲೂ ಆಕರ್ಷಿಸುತ್ತದೆ. ಅದು ಅದರ ಗುಣಶಕ್ತಿ. ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳ ಅಧ್ಯಕ್ಷತೆಯಲ್ಲಿ ಚಿತ್ರ ದುರ್ಗದಲ್ಲಿಯೂ ದಾವಣಗೆರೆಯಲ್ಲಿಯೂ ನಡೆದ ಹಲವು ಸಮಾರಂಭಗಳ ಲ್ಲಿಯೂ ನಾನು ಉಪನ್ಯಾಸಮಾಡಿರುತ್ತೇನೆ. ಶ್ರೀ ಸ್ವಾಮಿಗಳಿಗೆ ನನ್ನಲ್ಲಿ ಅಭಿಮಾನವಿದೆ; ನನಗೆ ಅವರಲ್ಲಿ ಗೌರವವಿದೆ. ಆದರೆ ಇವರು ವಿದ್ವದು ತ್ತರ ಮುಖಿಯಂತಿದ್ದಾರೆ! ಅದು ಯಾವಾಗಲೂ ಉತ್ತರ ದಿಕ್ಕನ್ನೇ ತೋರಿ ಸುತ್ತದೆ! ಇನ್ನುಳಿದ ದಿಕ್ಕುಗಳೆಲ್ಲಿವೆಯೋ! ಎತ್ತ ಕಡೆ ಇವೆಯೋ! ಇದು ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳ ವೈಶಿಷ್ಟ್ಯ! ನಾವು ಶ್ರೀ ಮಠದಿಂದ ಎಂದೂ ಯಾವ ಸಂದರ್ಭದಲ್ಲಿಯೂ ಯಾವುದೇ ಉದ್ದೇಶಕ್ಕಾಗಿಯೂ ಧನ ಸಹಾಯ ವನ್ನು ಅಪೇಕ್ಷಿಸಿದವರಲ್ಲ. ನಮಗೆ ಎಲ್ಲ ವಿರಕ್ತರಲ್ಲಿಯೂ ಗೌರವವಿದೆ; ಭಕ್ತಿ ಯಿದೆ. ಎಲ್ಲ ವಿರಕ್ತರೂ ಸಮಾನರು. ಈ ಗ್ರಂಥವನ್ನು ಬರೆಯಲು ನಾವು ಯಾರ ಹಂಗಿಗೂ ಒಳಗಾಗಿಲ್ಲ. ಅಂಥ ಹಂಗಿಗೆ ಒಳಗಾಗುವ ಜಾಯಮಾನವೂ ನಮ್ಮದಲ್ಲ! "ಹಂಗಿನರ ಮನೆಗಿಂತ। ವಿಂಗಡದ ಗುಡಿಲೇಸು। ಭಂಗಪಟ್ಟುಂಬ ಬಿಸಿಯೂಟಕಿಂತ ತಂಗುಳನ್ನವೇ ಲೇಸು ಸರ್ವಜ್ಞ ॥" ಎಂಬ ಆದರ್ಶಪ್ರಿಯರು ನಾವು. ಇದುವರೆಗೆ ನಾವು ಮೂವತ್ತು ಗ್ರಂಥಗಳನ್ನು ಬರೆದು ಪ್ರಕಟಿಸಿರು ತ್ತೇವೆ. ಯಾರಿಂದಲೂ ನಾವು ಧನ ಸಹಾಯವನ್ನು ಪಡೆದಿರುವುದಿಲ್ಲ. ನಾವು ಸಿರಿವಂತರಲ್ಲ; ಆದರೆ ನಿತ್ಯತೃಪ್ತರು! ಸಮಾಜದ ಪ್ರೋತ್ಸಾಹವೇ ನಮಗೆ ಆಶ್ರಯ; ಅದೇ ನಮಗೆ ತವನಿಧಿ. ಈ ಗ್ರಂಥ ಕೇವಲ ಶೂನ್ಯ ಸಿಂಹಾಸನದ ಚರಿತ್ರೆಯಲ್ಲ; ಇದು ಸಮಗ್ರ ವೀರಶೈವ ಸಮಾಜ ಜೀವನದರ್ಪಣ!

ನಾವು ಯಾರ ಪ್ರೇರಣೆಯಿಂದಲೂ ಈ ಗ್ರಂಥವನ್ನು ಬರೆಯಲಿಲ್ಲ.

ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಪಟ್ಟಾಧಿಕಾರ ಸಮಯದಲ್ಲಿ ಮಾ
ಭಾಷಣವೇ ನಮಗೆ ಈ ಗ್ರಂಥವನ್ನು ಬರೆಯಲು ಪ್ರೇರಣೆಮಾಡಿತು.
ಬೆಂಗಳೂರು ಭಾಷಣ ನಮ್ಮ ಕುತೂಹಲವನ್ನು ಪೋಷಿಸಿತು. ಅದರಂತೆ
ಅವರ ಕೃಪಾಶೀರ್ವಾದ ಪಡೆದು ಅವಸರ ಅವಸರದಲ್ಲಿ ಹೊರಬಿದ್ದ 'ಶೂ
ಪೀಠದ ಪ್ರಭಾವ' ನಮ್ಮ ಸಂಶೋಧನೆಯನ್ನು ತೀವ್ರಗೊಳಿಸಿತು.
ಭಾಷಣಗಳಿಂದ ಚಿತ್ರದುರ್ಗದ ವಿರಕ್ತ ಮಠದ ಸ್ಥಾನ ಮಾನಗಳೇನೆಂಬುದ
ಸಮಾಜ ಅರಿಯಲು ಸಾಧ್ಯವಿಲ್ಲ. ಆ ಭಾಷಣಗಳಲ್ಲಿ ಇತಿಹಾಸದ ಆಧ
ಗಳಿಲ್ಲ; ತತ್ತ್ವದ ಹಿನ್ನೆಲೆಯಿಲ್ಲ. 'ಶೂನ್ಯ ಪೀಠದ ಪ್ರಭಾವ' ಪುಸ್ತಕವಂ
ಯಾರಿಗೂ ಗೌರವತರುವಂತಿಲ್ಲ! ಶ್ರೀ ಮಠದಿಂದ ಉಪಕೃತರಾದ ಭಕ್ತ
ಸಿದ್ಧಪ್ಪಾರಾಧ್ಯರೇ ಚಿತ್ರದುರ್ಗದ ವಿರಕ್ತ ಮಠ ಶೂನ್ಯ ಸಿಂಹಾಸನವಲ್ಲ;
ಶ್ರೀ ಕೇದಾರ ಗುರುಪೀಠದ ಪರಂಪರೆಗೆ ಸೇರಿದುದು-ಎಂಬ ಅಭಿಪ್ರಾಯ
ಸ್ಪಷ್ಟವಾಗಿ ಹಿಂದೆ ಹೇಳಿರುತ್ತಾರೆ. ತಾ|| ೧೩-೩-೧೯೬೭ ರಂದು ಚಿತ್ರದು
ವಲ್ಲಿ ಚಿನ್ಮೂಲಾದ್ರಿ ಪೌಢ ಪಾಠಶಾಲೆಯ ವಿದ್ಯಾರ್ಥಿ ಸಂಘದ ವಾರ್ಷಿಕ ಸ
ರಂಭದಲ್ಲಿ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಅಧ್ಯಕ್ಷರಾಗಿದ್ದರು. ನಾನು ಅ
ಮುಖ್ಯ ಅತಿಥಿಯಾಗಿದ್ದೆನು. ಶ್ರೀ ಸ್ವಾಮಿಗಳು ಅಂದು ಅವರ ಭಾಷಣ
ಸಂಶೋಧನೆಯೆಂಬುದು ಬುದ್ಧಿ ಜೀವಿಗಳ ಕುಚೇಷ್ಟೆ-ಎಂಬ ಅವಸೌಲ್ಯ
ಪ್ರಾಯವನ್ನು ವ್ಯಕ್ತಪಡಿಸಿದರು! ನಮ್ಮ ಶೂನ್ಯ ಸಿಂಹಾಸನ ಗ್ರಂಥ ಆಗ
ವಾಗುತ್ತಿತ್ತು. ಅದನ್ನು ಅವರೂ ಬಲ್ಲರು. ಆದರೆ (ತಾ|| ೨೯-೬-೧೯
ಅವರು ತಮ್ಮ ಶ್ರೀ ಮಠದ ಚರಿತ್ರೆಯನ್ನು ಇತಿಹಾಸದ ಆಧಾರದಮೇಲೆ
ಯಿಸುವುದಾಗಿ ಬೆಂಗಳೂರು ಭಾಷಣದಲ್ಲಿ ಅಪ್ಪಣೆ ಕೊಡಿಸಿದ್ದಾರೆ! ಅಂಥ
ಹಾಸದ ಆಧಾರಗ್ರಂಥವೇ ಬಹುಶಃ 'ಶೂನ್ಯ ಪೀಠದ ಪ್ರಭಾವ' ಎಂಬ
ಬೇಕು! ಇದೇ ಆದಾಗಿದ್ದರೆ "ನೆಚ್ಚಿದ ಎಮ್ಮೆ ಕೋಣನನ್ನು ಈದಂತಾಯಿತು
ಅದರಿಂದಲೇ ನಾವು ಚಿತ್ರದುರ್ಗದ ವಿರಕ್ತ ಮಠದ ಚರಿತ್ರೆಯನ್ನು ಸಂಶೋ
ನಾತ್ಮಕವಾಗಿ ಬರೆಯಲು ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳ ಭಾಷಣ
ನಮಗೆ ಪ್ರೇರಣೆ ಮಾಡಿದುವೆಂದು ಭಾವಿಸುತ್ತೇವೆ. 'ಶೂನ್ಯ ಪೀಠದ ಪ್ರಭಾ
ಬಂತು! ಅದೊಂದು ನಿಕೃಷ್ಟ ಪುಸ್ತಕ. "ಪ್ರೇತನವನದೊಳಗೆ ಬೆಳೆದಿರ್ದ ಹ
ಆರವುುಡಿಹಕ್ಕೆಯೋಗ್ಯಂ!" ಎಂದು ಹಿಂದೆ ಮಹಾ ಕವಿ ರಾಘವಾಂಕ

ಷ್ಟಂಪ್ರ ಕಾವ್ಯದಲ್ಲಿ' ಹೇಳಿದ ಮಾತು ಇಲ್ಲಿ ನೆನಪಿಗೆ ಬರುತ್ತದೆ. ಸ್ಮಶಾನದಲ್ಲಿ ಬೆಳೆದ ಹೂ ಮುತ್ತೈದೆಯ ಮುಡಿಯಲ್ಲಿ ಶೋಭಿಸಲಾರದು! ದೇವರ ಶ್ರೀ ಪಾದದಲ್ಲಿ ಅರ್ಪಣೆಯಾಗಲಾರದು! ಆದ್ದರಿಂದ 'ಶೂನ್ಯ ಪೀಠದ ಪ್ರಭಾವ' ಅಂಥ ಪ್ರೇತವನ ಸುಮದಂತೆ ಪೂಜಾರ್ಹವಾಗಲಾರದು! "ಬಚ್ಚಲುದಕಂ ತಿಳಿದಡೆ ಆರಮೀಹಕ್ಕೆ ಯೋಗ್ಯಂ" ಎಂಬಂತೆ ಬಚ್ಚಲ ನೀರು ತಿಳಿಯಾಗಿ ಕಂಡ ಮಾತ್ರಕ್ಕೆ ಆ ನೀರಿನಲ್ಲಿ ಯಾರಾದರೂ ಸ್ನಾನ ಮಾಡುತ್ತಾರೆಯೇ? ಪುಸ್ತಕದ ಹೆಸರು 'ಶೂನ್ಯ ಪೀಠದ ಪ್ರಭಾವ' ಎಂದು ಇದ್ದ ಮಾತ್ರಕ್ಕೇ ಅದು ಪುಣ್ಯ ಗ್ರಂಥವೆನಿಸಲಾರದು. ಅದರಲ್ಲಿ ಶ್ರೀ ಆರಾಧ್ಯರು ಸಿದ್ಧಗಂಗಾ, ಸುತ್ತೂರು, ಸಿರಿಗೆರೆ, ದೇಗುಲ, ಎಳನಡು-ಅರಸೀಕೆರೆ ಮೊದಲಾದ ಅನೇಕ ಮಠಗಳನ್ನೂ ಮಠಾಧೀಶ್ವರರನ್ನೂ ಅವಾಚ್ಯ ಪದಗಳಿಂದ ತೆಗಳಿರುತ್ತಾರೆ. ಚಿತ್ರದುರ್ಗದ ವಿರಕ್ತ ಮಠವನ್ನು ಪಂಚ ಆಚಾರ್ಯ ಪೀಠಗಳ ಅಂತಸ್ತಿನಲ್ಲಿ ನಿಲ್ಲಿಸಿರುತ್ತಾರೆ! ಇದು ಅವರ ಅಸಂಬದ್ಧ ಪ್ರಲಾಪ! 'ಶೂನ್ಯ ಪೀಠದ ಪ್ರಭಾವ' ತಿಳಿನೀರಿನ ಸರೋವರವಲ್ಲ! ಅದು ಮಲಿನ ನೀರಿನ ಹೊಂಡ! "ಪ್ರಕೃತ ಸಿದ್ಧಗಂಗೆಯಲ್ಲಿ ಅಡವೀ ಸ್ವಾಮಿಗಳು ಮಾಹೇಶ್ವರ ಮತನದವರೇ ಆಗಿದ್ದು ವಿರಕ್ತ ಸಂಪ್ರದಾಯಕ್ಕೆ ಸೇರಿದವರಾಗಿ ಜನರೆಲ್ಲರನ್ನೂ ಅವರವರ ಸ್ವಭಾವಕ್ಕೆ ತಕ್ಕಂತೆ ಅನುಗ್ರಹಿಸಿ ಆಶೀರ್ವದಿಸುತ್ತಿದ್ದರು. ಅವರು ಸಿದ್ಧಗಂಗಾ ಮಠಕ್ಕೆ ಯಾರನ್ನೂ ಉತ್ತರಾಧಿಕಾರಿಯನ್ನಾಗಿ ನೇಮಿಸಿಕೊಂಡಿರಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಅವರು ಲಿಂಗೈಕ್ಯರಾಗಲು ಅವರ ಆಶ್ರಯದಲ್ಲಿ ಗಾಡಿಯನ್ನು ಹೊಡೆಯುತ್ತಿದ್ದ ಉದ್ದನ್ನಪ್ಪ ಎಂಬ ಗೌಡ ಮನೆತನದ ವ್ಯಕ್ತಿಗೆ ಆ ಪ್ರಭೇದದ ಜನರು ಅಭಿಮಾನದಿಂದ ಕಾವಿ ಬಟ್ಟೆಯನ್ನು ಹಾಕಿ ಅವರಿಂದ ಹಿಂದಿನ ಗುರುಗಳೇ ಅಧಿಕಾರಿಗಳನ್ನಾಗಿ ನೇಮಿಸಿದ್ದರೆಂದು ಸುಳ್ಳು ಸುದ್ದಿಯನ್ನು ನಿಜವೆಂದು ಕೋರ್ಟಿನಲ್ಲಿ ಹಾಜರುಪಡಿಸಿದರು. ಉದ್ದನ್ನಪ್ಪನವರು ಹೀಗೆ ಸುಳ್ಳನ್ನು ಕೋರ್ಟಿನಲ್ಲಿ ನುಡಿದದ್ದರಿಂದ ಗುರುದ್ರೋಹದ ಫಲವಾಗಿ ಕೊನೆಯಲ್ಲಿ ಬಹಳಕಾಲ ಶರೀರದಲ್ಲಿ ಉಗ್ರರೋಗವನ್ನು ಅನುಭವಿಸಬೇಕಾಯಿತು. ಅವರ ಕಾಲದಿಂದ ಇಬ್ಬರು ಸ್ವಾಮಿಗಳೂ ಭಕ್ತವರ್ಗದಿಂದ ಬಂದವರೇ ಆಗಿರುವರು. ಹಾಗೆಯೇ ಎಳನಡು-ಅರಸೀಕೆರೆ, ಸುತ್ತೂರು, ಸಿರಿಗೆರೆ, ದೇಗುಲ ಮೊದಲಾದ ಅನೇಕ ಮಠಗಳಲ್ಲಿ ಭಕ್ತವರ್ಗದವರೇ ಸ್ವಾಮಿಗಳಾಗಿರುವರು. ಇವರೆಲ್ಲರಿಗೂ ಗುರುಜಂಗಮರ

ಮಹಾ ಪೀಠಗಳ ಮೇಲೆ ಕತ್ತಿಯನ್ನು ಕಟ್ಟುವ ಮನೋಭಾವವು ಈಚೀಚೆ
ಬೆಳೆಯುತ್ತಿದೆ"-ಎಂದು ಶ್ರೀ ಸಿದ್ಧಪ್ಪಾರಾಧ್ಯರು 'ಶೂನ್ಯ ಪೀಠದ ಪ್ರಭಾ
ಎಂಬ ಅವರ ಪುಸ್ತಕದ ೮೭ ನೆಯ ಪುಟದಲ್ಲಿ ಬರೆದಿದ್ದಾರೆ. ಈ ಮಾತು
ಶ್ರೀ ಆರಾಧ್ಯರ ಅಜ್ಞಾನದ ಮಟ್ಟವನ್ನು ಸೂಚಿಸುತ್ತವೆ. ಶರಣರು ಸಾ
ಕಾಯಕಗಳನ್ನು ಅವಲಂಬಿಸಿರುತ್ತಾರೆ. ಮಡಿವಾಳ ಮಾಚಯ್ಯ, ಸು
ಚಂದಯ್ಯ, ತುರುಗಾಹಿ ರಾಮಣ್ಣ-ಇಂಥ ಮಹಾಮಹಿಮರು 'ಕಾಯಕ
ಕೈಲಾಸ'ವೆಂಬ ತತ್ತ್ವವನ್ನು ಅನುಸರಿಸುತ್ತಿದ್ದರು-ಹಾಗೆಯೇ ಮಹಾಯೋ
ಸಿದ್ಧರೆನಿಸಿದ್ದ ವಿರಕ್ತ ಉದ್ದಾನಸ್ವಾಮಿಗಳು ಪೂರ್ವಾಶ್ರಮದಲ್ಲಿ ಮಠದ ಗಾ
ಯನ್ನು ಹೊಡೆಯುತ್ತಿದ್ದಿರಬಹುದು! ಅದು ಸತ್ಯ ಶುದ್ಧ ಕಾಯಕವಲ್ಲ
ಅವರ ಕಾಯಕವನ್ನು ಅವಹೇಳನ ಮಾಡಬಹುದೇ? ಅಂಥ ಮಹಾ ವಿರಕ್ತ
ಕೋಟಿ ವಿರಕ್ತರಲ್ಲಿ ಒಬ್ಬರಿದ್ದಾರು! ಅವರು ಪರಮಶಿವಯೋಗಿಗಳಾಗಿದ್ದ
ಅನೇಕ ವಿರಕ್ತರು ಪೂರ್ವಾಶ್ರಮದಲ್ಲಿ ತಮ್ಮ ಮಠದ ವಿರಕ್ತರ ಕೌಪೀನಗಳ
ತೊಳೆಯುತ್ತಿದ್ದರೆಂಬುದರಲ್ಲಿ ಸಂಶಯವಿಲ್ಲ! ಇನ್ನೂ ಕೆಲವರು 'ತಿರಿದು
ಭಿಕ್ಷಾಟನ ಲೀಲಾಮೂರ್ತಿಯ ಗೋತ್ರಜರಾಗಿಯೂ ಇದ್ದಾರೆ! ಅಂಥ
ಇಂದು ವಿರಕ್ತ ಮಠಾಧೀಶ್ವರರಾಗಿಲ್ಲವೆ! ಶ್ರೀ ಉದ್ದಾನಸ್ವಾಮಿಗಳು ಎ
ಯಾವ ಸಂದರ್ಭದಲ್ಲಿಯೂ ಕೋರ್ಟಿಗೆ ಹೋದವರಲ್ಲ; ಸುಳ್ಳು ಹೇಳಿದವ
-ಇದನ್ನು ನಾವು ಬಲ್ಲೆವು. ಅವರ ಮೇಲೆ ದೋಷಾರೋಪಣೆ ಮಾಡುವು
ಉದಾರ ಮನೋಭಾವವಲ್ಲ! ಹಿಂದಿನ ಸ್ವಾಮಿಗಳು ತನ್ನನ್ನು ಉತ್ತರಾಧಿಕಾ
ಯಾಗಿ ನೇಮಿಸಿದ್ದರೆಂದು ಸುಳ್ಳು ಹೇಳಿ ಜನತೆಯನ್ನು ವಂಚಿಸಿ ಪೀಠಾಧಿಕಾ
ಗಳಾಗಿರುವ ಸ್ವಾಮಿಗಳೂ ನಮ್ಮಲ್ಲಿ ಅನೇಕರಿದ್ದಾರೆ. ಲೋಕ ಅಂಥ
ಚರಿತ್ರೆಯನ್ನೂ ಬಲ್ಲದು! ಶ್ರೀ ಉದ್ದಾನಸ್ವಾಮಿಗಳು ರೋಗಗ್ರಸ್ತರಾಗಿದ್ದರೆ
ಅದು ಅವರ ಸುಳ್ಳಿನ ಫಲವೆಂದೂ ಶ್ರೀ ಆರಾಧ್ಯರು ಬರೆದಿರುತ್ತಾರೆ. ಇ
ತುಂಬಾ ವಿಷಾದಕರ! ಅನೇಕ ವಿರಕ್ತ ಸ್ವಾಮಿಗಳು ದುರ್ಮರಣಕ್ಕೆ ಈಡಾ
ಪ್ರಸಂಗಗಳಿಲ್ಲವೇ! ಅವರು ಇನ್ನೆಂಥ ಘೋರ ಪಾಪಗಳನ್ನೆಸಗಿದ್ದರೋ! ಪ್ರ
ಯೊಬ್ಬರೂ ಕರ್ಮಾನುಸಾರ ದೇಹತ್ಯಾಗ ಮಾಡಲೇಬೇಕು! ಎಂಬುದ
ಎಲ್ಲರೂ ಬಲ್ಲರು. ಸಿದ್ಧಗಂಗೆಯಲ್ಲಿ ಮೂಲ ಶೂನ್ಯ ಸಿಂಹಾಸನ ಮಠ ಸ್ಥಾಪ
ಯಾಯಿತೆಂಬುದರಲ್ಲಿ ಸಂಶಯವೇ ಇಲ್ಲ. ರೇಚಣ್ಣನವರು ಮೈಸೂರು ಜಿಲ್ಲೆಯ

ಎಡತೊರೆಯ ಬಳಿ ಕಪ್ಪಡಿ ಕ್ಷೇತ್ರದಲ್ಲಿ ಯೋಗ ಸಮಾಧಿಯಲ್ಲಿದ್ದ ಅನಂತರ ಅವರು ಶಾಂತ ಮಲ್ಲಿಕಾರ್ಜುನರೆಂದು ಪ್ರಖ್ಯಾತರಾಗಿದ್ದ ರೇವಣಸಿದ್ಧರಿಂದ ಅನುಗ್ರಹವನ್ನು ಪಡೆದು, ಸಿದ್ಧಗಂಗೆಯಲ್ಲಿ ನೆಲಸಿದರೆಂದು ವಾಙ್ಮಯದಿಂದ ಗೊತ್ತಾಗುತ್ತದೆ. ಇದನ್ನು ಶ್ರೀ ಆರಾಧ್ಯರು ಅರಿತಿಲ್ಲ. "ಶೂನ್ಯ ಪೀಠದ ಪರಂಪರೆಯಲ್ಲಿ ಚನ್ನಬಸವಣ್ಣನಿಂದ ಕ್ರಮವಾಗಿ ಶಿವಾನುಭವ ಪಟ್ಟವನ್ನು ಪಡೆದವರು ಮಾತ್ರವೇ ಜಗದ್ಗುರವೆನಿಸಬಹುದೇ ಹೊರತು ಶಾಖಾ ಮಠದವರೆಲ್ಲರೂ ಅಂತಹ ಪದವಿಗೆ ಏರಲಾರರು"–ಎಂದು ಶ್ರೀ ಆರಾಧ್ಯರು 'ಶೂನ್ಯ ಪೀಠದ ಪ್ರಭಾವ' (ಪುಟ ೪೫) ಪುಸ್ತಕದಲ್ಲಿ ಹೇಳಿದ್ದಾರೆ. ಶ್ರೀ ಆರಾಧ್ಯರು ಅಪ್ಪಿತಪ್ಪಿ ಇದೊಂದು ಸತ್ಯಾಂಶವನ್ನು ಅವರ ಪುಸ್ತಕದಲ್ಲಿ ಹೇಳಿದ್ದಾರೆ. ಚಿತ್ರದುರ್ಗದ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳಿಗೆ ಶಿವಾನುಭವ ಪಟ್ಟವಾಗಿಲ್ಲ; ಅವರಿಗೆ ಶಿಖಾ ಪಟ್ಟವಾಗಿದೆ. ಆದ್ದರಿಂದ ಶಿವಾನುಭವ ಪಟ್ಟವಿಲ್ಲದ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಜಗದ್ಗುರುವೆನಿಸಿಕೊಳ್ಳಲಾರರು! ಸಿದ್ಧಗಂಗಾ ಮತ್ತು ಹುಬ್ಬಳ್ಳಿ ಮಠಗಳ ಮೂಲ ಪುರುಷರು ಶಿವಾನುಭವ ಪಟ್ಟದವರು. ಆದ್ದರಿಂದ ಶಿವಾನುಭವ ಮಠವೇ ಜಗದ್ಗುರು ಪೀಠವೆಂಬುದನ್ನು ಶ್ರೀ ಆರಾಧ್ಯರು ಒಪ್ಪಿದಂತಾಯಿತು. ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳೂ ಶ್ರೀ ಆರಾಧ್ಯರನ್ನು ಪ್ರತಿಭಟಿಸಲು ಅವಕಾಶವಿಲ್ಲದಂತಾಯಿತು. ಶಿಖಾಪಟ್ಟವೆಂಬುದು ಶಿವಾನುಭವ ಪಟ್ಟದ ಶಾಖಾಪಟ್ಟವೆಂಬುದನ್ನು 'ನಿರಂಜನ ವಂಶ ರತ್ನಾಕರ'ವೇ ಸ್ಪಷ್ಟಪಡಿಸುತ್ತದೆ. ಹದಿನೈದನೆಯ ಶತಮಾನಕ್ಕಿಂತಲೂ ಹಿಂದೆ ಶೂನ್ಯ ಪೀಠ ಪರಂಪರೆಯ ಮಠಗಳಿರಲಿಲ್ಲ; ಆ ನಿರಾಭಾರಿಯಿದ್ದ ಸ್ಥಳವೇ ಮಠ; ಅದನ್ನೇ ಶೂನ್ಯ ಸಿಂಹಾಸನ ಮಠವೆಂಬ ಪರಿಪಾಠವಿತ್ತು. ಆದ್ದರಿಂದ ೧೫ನೆಯ ಶತಮಾನದಲ್ಲಿಯೇ ಸಿದ್ಧಗಂಗೆ ಶೂನ್ಯಪೀಠದ ನೆಲೆಯಾಗಿತ್ತು. ಚಿತ್ರದುರ್ಗದಲ್ಲಿ ೧೮ ನೆಯ ಶತಮಾನದಲ್ಲಿ ವಿರಕ್ತ ಮಠ ಸ್ಥಾಪನೆಯಾಯಿತು. ಯಾವುದು ಮೂಲ ಮಠವೋ; ಯಾವುದು ಶಾಖಾ ಮಠವೋ; ಯಾವುದು ಜಗದ್ಗುರು ಪೀಠವೋ ಆರಾಧ್ಯರೇ ತಿಳಿಸಲಿ! ಆರಾಧ್ಯರ ತೀಕ್ಷ್ಣ ಮತಿಗೆ ಇದು ಹೇಗೆ ಹೊಳೆದೀತು!

ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ೧೯೬೭ ನೆಯ ನವೆಂಬರ್‌ನಲ್ಲಿ ಮೈಸೂರಿಗೆ ದಯಮಾಡಿಸಿದ್ದರು. ಆ ಸಂದರ್ಭದಲ್ಲಿ ಎಂದರೆ ೧೯೬೭ ನೆಯ

ಡಿಸೆಂಬರ್ ೯ ನೆಯ ದಿನ ಅಲ್ಲಿ ಶ್ರೀ ಕೃಷ್ಣ ರಾಜೇಂದ್ರ ಆಸ್ಪತ್ರೆಯ ಆವರ
ಶ್ರೀ ಮುರಘರಾಜೇಂದ್ರ ರೋಗ ನಿದಾನ ಮಂದಿರದಲ್ಲಿ ಜಯದೇವ ಸ್ವಾಮಿ
ಭಾವಚಿತ್ರ ಅನಾವರಣ ಸಮಾರಂಭ ನಡೆಯಿತು. ಅಂದು ಮುಖ್ಯ ಮಂ
ಶ್ರೀ ನಿಜಲಿಂಗಪ್ಪನವರು ಮುಖ್ಯ ಅತಿಥಿಯಾಗಿದ್ದರು; ಶ್ರೀ ಮಲ್ಲಿಕಾರ್ಜು
ಸ್ವಾಮಿಗಳು ಅಧ್ಯಕ್ಷರಾಗಿದ್ದರು. ಶ್ರೀ ಜಯದೇವಸ್ವಾಮಿಗಳು ೧೯೩೮ ನೆ
ಇಸವಿಯಲ್ಲಿ ಈ ಕಟ್ಟಡವನ್ನು ನಿರ್ಮಿಸಲು ೪೦ ಸಾವಿರ ರೂಪಾಯಿಗಳ
ನೀಡಿದ್ದರು. ಆ ಕಟ್ಟಡದ ಮೇಲೆ "ಶ್ರೀ ಮುರಘ ರಾಜೇಂದ್ರ ರೋಗ ನಿದಾ
ಮಂದಿರ" ಎಂಬ ಅಂಕಿತ ಅಂದಿನಿಂದಲೂ ಇದೆ. ಆ ಕಟ್ಟಡದ ಮುಂಭಾಗ
ಹಾಕಿರುವ ಶಿಲಾ ಶಾಸನದಲ್ಲಿ :

"Sri Jayadeva Muragharajendra Pathological
Laboratory
Foundation Stone laid by His Highness
Sri Krishnarajendra Wadiyar Bahadur,
G C.S I., G.BI
Maharaja of Mysore
on Thursday the 24th February 1938"

–ಎಂದು ಬರೆದಿರುತ್ತದೆ. ಇದರಲ್ಲಿ 'ಜಗದ್ಗುರು' ಪದವಿಲ್ಲ. ಆದಿನಸಭೆಯ
ರಾ ಷ್ಟ್ರ ಗೀ ತೆ ಯ ನ್ನು ಹಾಡಿದಾಗ ಶ್ರೀ ಸ್ವಾಮಿಗಳು ಗೌರವವ
ಸೂಚಿಸಲಿಲ್ಲವೆಂದೂ "ಶ್ರೀಗಳವರು ನಮಗೆಲ್ಲ ಹಿರಿಯರು; ಪೂಜ್ಯರು. ಆ
ರಾಷ್ಟ್ರಕ್ಕಿಂತ, ಭಾರತಮಾತೆಗಿಂತ ದೊಡ್ಡವರಲ್ಲ ಎಂಬುದು ನನ್ನ ನ
ಭಾವನೆ" ಎಂದೂ–'ಒಬ್ಬ ಆಹ್ವಾನಿತ'ರು ತಾ|| ೧೨—೧೨—೧೯೬೭ ನೆ
ಪ್ರಜಾವಾಣಿಯಲ್ಲಿ ಬರೆದಿರುತ್ತಾರೆ. ಆದರೆ ವಿರಕ್ತರು ಪರಮ ನಿರಂಜನರೆ
ದನ್ನೂ ಶೂನ್ಯ ಸಿಂಹಾಸನಾಧೀಶ್ವರರೆಂಬುದನ್ನೂ ಮಾನ್ಯ 'ಒಬ್ಬ ಆಹ್ವಾನಿತ'
ಮರೆಯಬಾರದೆಂದು ಶ್ರೀ ಮಠದ ವಂದಿ ಮಾಗಧರು ಘೋಷಿಸುತ್ತಾರೇನೋ
ಯಾರು ಬಲ್ಲರು ?

ಸಿರಿಗೆರೆ, ಸುತ್ತೂರು, ದೇಗುಲ-ಮಠಾಧೀಶ್ವರರನ್ನು ಭಕ್ತವರ್ಗದವರೆಂದು ಶ್ರೀ ಆರಾಧ್ಯರು ಬರೆದಿರುತ್ತಾರೆ. ಜನ್ಮತಃ ಯಾವನೂ ಐಕ್ಯಸ್ಥಲವನ್ನು ಸಾಧಿಸಲಾರನು. ಪ್ರಥಮತಃ ಎಲ್ಲರೂ ಭಕ್ತರೇ. ಶರಣಧರ್ಮದ ಮರ್ಮವನ್ನೇ ಅರಿಯರು ಶ್ರೀ ಆರಾಧ್ಯರು. ಶಿವಯೋಗಿ ಉದ್ದಾನಸ್ವಾಮಿಗಳು ಜಿತೇಂದ್ರಿಯರು. ಅವರು ಪರಮ ವಿರಕ್ತರು. ಅವರು ಅಡ್ಡಪಾಲಕಿಯ ಮೆರವಣಿಗೆಯನ್ನು ಒಪ್ಪಲಿಲ್ಲ. ಅವರು ಅಥಣಿ ಶಿವಯೋಗಿಗಳಂತೆ ಅನಾಸಕ್ತ ಯೋಗಿವರ್ಯರು. ಈಗಿರುವ ಶ್ರೀ ಶ್ರೀ ಪೂಜ್ಯ ಶಿವಕುಮಾರ ಸ್ವಾಮಿಗಳಂತೂ ಶರಣಧರ್ಮ ಮಹರ್ಷಿ; ನಿಶಾಂತ ಶಿವಯೋಗಿ. ಅವರು ಅಪೇಕ್ಷಿಸಿದ್ದರೆ, ಸರ್ಕಾರದವರು ಎಲ್ಲ ಬಿರುದು ಬಾವಲಿಗಳನ್ನೂ ಅವರ ಶ್ರೀ ಮಠಕ್ಕೆ ತಂದು ಒಪ್ಪಿಸುತ್ತಿದ್ದರು. ಭಕ್ತಕೋಟಿ ಅವರನ್ನು ಅಂಗಲಾಚಿ ಬೇಡಿಕೊಂಡರೂ ಅವರು ಯಾವ ಉಪಾಧಿಗಳನ್ನೂ ಒಪ್ಪುವುದಿಲ್ಲ; ಅವರನ್ನು 'ಜಗದ್ಗುರು'ವೆಂದು ಭಾವಿಸಲೂ, ಪೂಜಿಸಲೂ ಸಮ್ಮತಿಸುವುದಿಲ್ಲ. ಅವರು ಜಗದ್ಗುರು. ಅವರು ನಿಷ್ಕಾಮ ಕರ್ಮಸಿದ್ಧರು! ಪರಂಜ್ಯೋತಿ ಸ್ವರೂಪರು! ಉಳವಿಯಲ್ಲಿ ಚನ್ನಬಸವಣ್ಣನವರು ಮುಕ್ತರಾದ ಮೇಲೆ ಶರಣಧರ್ಮ ನೆಲೆಸಿದುದು ಸಿದ್ಧಗಂಗಾ ಕ್ಷೇತ್ರದಲ್ಲಿಯೇ! ಈ ಶ್ರೀಗಳ ಪಟ್ಟಾಧಿಕಾರ ರಜತ ಮಹೋತ್ಸವವನ್ನು ವೈಭವದಿಂದ ಆಚರಿಸಲು ಮತ್ತು ಅದರ ನೆನಪಿರಲು ಸಿದ್ಧಗಂಗಾ ವಿಶ್ವ ವಿದ್ಯಾ ನಿಲಯವನ್ನು ಸ್ಥಾಪಿಸಲು ಶ್ರೀಗಳ ಸನ್ನಿಧಿಯಲ್ಲಿ ಐವತ್ತು ಲಕ್ಷ ರೂಪಾಯಿಗಳ ನಿಧಿಯನ್ನು ಸಮರ್ಪಿಸಲು ತಾ॥ ೧೭-೩-೧೯೬೬ರ ರಲ್ಲಿ ಸಿದ್ಧಗಂಗೆಯಲ್ಲಿ ನಡೆದ ಭಕ್ತ ಶ್ರೇಣಿಯ ಮಹಾಸಭೆ ನಿರ್ಧರಿಸಿರುತ್ತದೆ. ಆರಾಧ್ಯರು ಚಿತ್ರದುರ್ಗದ ವಿರಕ್ತ ಸಂಘವನ್ನು ಮೂಲ ಶೂನ್ಯ ಸಿಂಹಾಸನ ಮಠವೆಂದು ಸಿದ್ಧಪಡಿಸಲು ಸಾಹಸ ಪಟ್ಟಿರುತ್ತಾರೆ. ಅದು ಸಾಧ್ಯವೇ? ಎಂಬುದನ್ನು ಎಚ್ಚೆತ್ತ ಸಮಾಜ ನಿರೀಕ್ಷಿಸುತ್ತಿದೆ.

* "೧೨ನೆಯ ಶತಮಾನದ ಮಹಾ ಕ್ರಾಂತಿಯಲ್ಲಿ ಇತಿಹಾಸ ಮತ್ತು

---

* ತಾ॥ ೧೧-೨-೧೯೬೬ರಂದು ತರಳಬಾಳು ಜಗದ್ಗುರು ಶ್ರೀ ಶಿವಕುಮಾರ ಶಿವಾಚಾರ್ಯ ಮಹಾಸ್ವಾಮಿಗಳು ಸಿರಿಗೆರೆಯಲ್ಲಿ ನಡೆದ ತರಳಬಾಳು ಹುಣ್ಣಿಮೆ ಮಹೋತ್ಸವದಲ್ಲಿ ಅನುಗ್ರಹಿಸಿದ ಸಂದೇಶ.

ಸಾಹಿತ್ಯವು ಹೇಳುವಂತೆ ಯಾವ ಮಠ-ಪೀಠಗಳ ಪಾತ್ರವೂ ಕಂಡುಬರುವುದಿಲ್ಲ. ಇವರು ತಾವು ಅಲ್ಲಮನ ಪರಂಪರೆಯವರೆಂದೂ ಅಲ್ಲಮನೇರಿದ ಶೂನ್ಯ ಸಿಂಹಾಸನವು ಚೆನ್ನಬಸವಣ್ಣನ ತರುವಾಯ ತಮಗೆ ದೊರೆಯಿತೆಂದೂ ಹೇಳುತ್ತಾರೆ. ಈ ಬಗ್ಗೆ ನಮಗೆ ಯಾವ ವ್ಯಕ್ತಿಯ ಬಗ್ಗೆ ಯಾಗಲೀ, ಅಗೌರವವಾಗಲೀ, ತಿರಸ್ಕಾರವಾಗಲೀ ಇಲ್ಲ. ಇಲ್ಲಿ ನಮಗೆ ಬೇಕಾಗಿರುವುದು ಸತ್ಯ ಧರ್ಮದ ರಕ್ಷಣೆ" ಇತ್ತೀಚೆಗೆ "ಶೂನ್ಯಪೀಠದ ಪ್ರಭಾವ ಎಂಬ ಪುಸ್ತಕವು ಮೈಸೂರಿನಿಂದ ಹೊರಬಿದ್ದಿದೆ. ಇದರಲ್ಲಿ ಬಳಸಿರುವ ಭಾಷೆಯು ಮೊಟ್ಟ ಮೊದಲು ಸರಸ್ವತಿಗೂ, ನಂತರ ಇದಕ್ಕೆ ಸಂಬಂಧಿಸಿದ ಮಠ-ಪೀಠಗಳಿಗೂ, ಮುಖ್ಯವಾಗಿ ಲೇಖಕರಾದ ಸಿದ್ಧಸ್ವಾರಾಧ್ಯರು ಪಡೆದಿರುವ M A.,Ph-D, ಪದವಿಗೂ, ಅಂತೆಯೇ ಈ ಪದವಿಯನ್ನು ಕೊಟ್ಟ ವಿಶ್ವ ವಿದ್ಯಾ ನಿಲಯಕ್ಕೂ ಕಲಂಕತರತಕ್ಕದ್ದಾಗಿದೆ. ಶ್ರೀಯುತರು ಈ ಪುಸ್ತಕದಲ್ಲಿ ಆಡಿದುದನ್ನೇ ಆಡಿರುತ್ತಾರೆ. ಬರೆದುದನ್ನೇ ಬರೆದಿರುತ್ತಾರೆ."

"೧೨ ನೆಯ ಶತಮಾನದಲ್ಲಿ ಮುಸಲ್ಮಾನರು ಭಾರತದ ಮೇಲೆ ಆಕ್ರಮಣ ಮಾಡುತ್ತಿದ್ದರೇ ವಿನಾ ನೆಲೆಯೂರಿ ನಿಂತು ರಾಜ್ಯ ಕಟ್ಟಿರಲಿಲ್ಲ" "ಮುಸ್ಲಿಂ ದೊರೆತನವೇ ಆಕಾಲದಲ್ಲಿಲ್ಲದಿರುವಾಗ ಹಿಂದುವಾದ ಪೃಥ್ವೀರಾಜನಿಗೆ 'ಬಾದ ಶಾಹೀ' ಪದವಿಯನ್ನು ಕೊಡುವ ಶ್ರೀಯುತರ ದುಃಸಾಹಸಕ್ಕೆ ಏನು ಹೇಳಬೇಕೋ ? ಇದೊಂದು ಪ್ರಶ್ನೆಯಾಗಿಯೇ ಉಳಿದಿದೆ." "ಈ ಮೂರಿಗೀ ಸ್ವಾಮಿಗಳು ದೆಹಲಿಗೆ ಹೋಗಿ ಅಕ್ಬರ್ ಬಾದಶಹನಿಂದ ಸಿಂಹಾಸನ, ಶಿಖಾಶೃಂಖಲೆಗಳನ್ನು ತಂದರೆಂದೂ ಅಂತೆಯೇ ಮಾರ್ಗಮಧ್ಯದಲ್ಲಿ ಹೈದರಾಬಾದಿನಲ್ಲಿ ನಿಜಾಮ್ ಸಾಹೇಬರ ಆನೆಯನ್ನು ಬದುಕಿಸಿ ಬಿರುದುಗಳನ್ನು ಪಡೆದರೆಂದೂ ಹೇಳುತ್ತಿದ್ದಾರೆ. ಇಲ್ಲಿ ಒಂದು ಐತಿಹಾಸದ ಸಂದೇಹ ಮೂಡುತ್ತಿದೆ. ದಿಲ್ಲಿಯಲ್ಲಿ ಅಕ್ಬರನು ಆಳುತ್ತಿದ್ದಾಗ ಹೈದರಾಬಾದಿನಲ್ಲಿ ನಿಜಾಮ್ ಸಾಹೇಬರ ರಾಜ್ಯವಿತ್ತೇ ಎಂಬುದೇ ಅದು." "ಅಕ್ಬರನ ಕಾಲವಾವುದು ? ನಿಜಾಮನ ಕಾಲವಾವುದು ?" "ಅನುಭವ ಮಂಟಪದ ಸಿದ್ಧಾಂತ ವ್ಯವಸಾಯಗಾರನನ್ನು ಆಚಾರ್ಯರನ್ನಾಗಿ ಅಂದರೆ ಗುರುವನ್ನಾಗಿ ಜಂಗಮವನ್ನಾಗಿ ಮಾಡಿದೆಯೆಂಬುದನ್ನಿಲ್ಲಿ ಗಮನಕ್ಕೆ ತಂದುಕೊಳ್ಳಬೇಕು" "ವ್ಯವಸಾಯಗಾರರು ಶುದ್ಧ ವೀರಶೈವರಲ್ಲವೆಂದು ಪರೋಕ್ಷವಾಗಿ ಸೂಚಿಸಿರುವ ಶ್ರೀಯುತ ಆರಾಧ್ಯರು ಅಯ್ಯ

ಗಳ ವೀರ್ಯವು ಎಂತು ಶುದ್ಧವೆಂಬುವನ್ನು ತೋರಿಸಬೇಕಾಗಿತ್ತು" "ಆರಾಧ್ಯರ 'ಶೂನ್ಯ ಪೀಠದ ಪ್ರಭಾವ'ವೆಂಬ ಗ್ರಂಥದಲ್ಲಿರುವ ಪ್ರತಿ ಅಕ್ಷರವೂ ಪ್ರತಿ ವಾಕ್ಯಗಳೂ ಇತಿಹಾಸಕ್ಕೂ ತತ್ತ್ವಕ್ಕೂ ಶಿಷ್ಟಾಚಾರಕ್ಕೂ ಅಸಂಗತಗಳಾಗಿವೆ." "ಒಟ್ಟಿನಲ್ಲಿ ಶ್ರೀಯುತ ಆರಾಧ್ಯರಾಗಲೀ, ಅವರ ಬೆಂಬಲಿಗರಾಗಲೀ 'ಶೂನ್ಯ ಪೀಠದ ಪ್ರಭಾವ'ದ ಮೂಲಕ ತಮ್ಮ ವಾದವನ್ನು ಸಮರ್ಥಿಸಿಕೊಳ್ಳುವಲ್ಲಿ ವಿಫಲರಾಗಿದ್ದಾರೆಂದು ನಾವಿಲ್ಲಿ ಕಾಣಬಹುದಾಗಿದೆ." ಎಂದು ಸಿರಿಗೆರೆ ಜಗದ್ಗುರು ಶ್ರೀ ಶಿವಕುಮಾರಸ್ವಾಮಿಗಳು ನಿರ್ದಿಷ್ಟವಾಗಿ ಹೇಳಿದ್ದಾರೆ.

ಚಿಕ್ಕದೇವರಾಜ ಒಡೆಯರು ಮೈಸೂರು ದೇಶದಲ್ಲಿ ರಾಜ್ಯವಾಳುತ್ತಿದ್ದಾಗ ಅವರು ಮಹಾಮುತ್ಸದ್ದಿ ಕರಣಿಕ ಲಿಂಗಣ್ಣಯ್ಯನನ್ನು ದೆಹಲಿಗೆ ರಾಯಭಾರಿಯಾಗಿ ಕಳಿಸಿದರು. ಆಗ ಔರಂಗಜೇಬನು ದೆಹಲಿಯಲ್ಲಿ ಬಾದಷಹನಾಗಿದ್ದನು. ಅವನು ಚಿಕ್ಕದೇವರಾಜ ಒಡೆಯರ ಕೀರ್ತಿ ಪ್ರತಿಷ್ಠೆಗಳನ್ನು ಕೇಳಿ ಒಡೆಯರಿಗೆ 'ರಾಜಾ ಜಗದೇವ' ಎಂಬ ಪ್ರಶಸ್ತಿಯನ್ನೂ ದಂತದ ಸಿಂಹಾಸನವನ್ನೂ ಕೊಟ್ಟು ಕಳುಹಿಸಿದನು. ಇದು ಚರಿತ್ರೆಯಿಂದ ತಿಳಿದು ಬರುತ್ತದೆ. ಬಹುಶಃ ಈ ಪ್ರಸಂಗವೇ ದೆಹಲಿ ಬಾದಷಹನಿಂದ ಮುರಿಗಿ ಸ್ವಾಮಿಗಳು ಶೂನ್ಯ ಸಿಂಹಾಸನವನ್ನೂ, ಜಂಗಮ ಜಿತಾ ಫಕೀರ್ "ಎಂಬ ಪ್ರಶಸ್ತಿ"ಯನ್ನೂ ಪಡೆದರೆಂಬ ಕಲ್ಪನೆಯನ್ನು 'ನಿರಂಜನ ವಂಶ ರತ್ನಾಕರ'ದಲ್ಲಿ ಸೃಷ್ಟಿಸಿಕೊಳ್ಳಲು ಪ್ರೇರಣೆಯುಂಟು ಮಾಡಿರಬಹುದೆ? ಎಂಬ ಅನುಮಾನ ಬರುತ್ತದೆ. ಏಕೆಂದರೆ ಮುರಿಗಿ ಸ್ವಾಮಿಗಳು ದೆಹಲಿಗೆ ಹೋದಾಗ? ಅಲ್ಲಿ ಔರಂಗಜೇಬನೂ, ಮೈಸೂರಿನಲ್ಲಿ ಚಿಕ್ಕದೇವರಾಜ ಒಡೆಯರೂ ಆಳುತ್ತಿದ್ದರೆಂಬುದು ನಿಜ.

ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಬೆಂಗಳೂರು ಭಾಷಣದಲ್ಲಿ ಹೇಳಿದಂತೆ ಎಂಥ ಅಮೋಘ ಐತಿಹಾಸಿಕ ಗ್ರಂಥವನ್ನು ಬರೆಯಿಸಿ ತಮ್ಮ ಮಠದ ಅಂತಸ್ತು ಕುಸಿದು ಬೀಳುವಂತೆ ಊರುಗಂಬವಾಗಿ ನಿಲ್ಲಿಸಿಕೊಂಡರಲ್ಲಾ! ಎಂದು ವಿಸ್ಮಯ ಪಡುತ್ತೇವೆ. ಈ ಊರುಗಂಬ ಸುಭದ್ರವಾದ ತಳಹದಿಯ ಮೇಲೆ ನಿಂತಿಲ್ಲ! ಇದು ಮರಳಿನಲ್ಲಿ ಹೂಳಿದ ಕುಟ್ಟು ಹಿಡಿದ ಕಂಬದಂತಿದೆ! ಇದು ತಾನೇ ನೆಟ್ಟಗೆ ನಿಲ್ಲಲಾರದು! ಆದರೆ ಶ್ರೀ ಆರಾಧ್ಯರು ತಮಗೆ ಆಶ್ರಯದಾತರಾದ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳ ಬಯಲಾಸೆಯನ್ನೂ ಭಗ್ನಗೊಳಿಸಿ ಸತ್ಯ

ಪೂರ್ಣ ತತ್ತ್ವವನ್ನು ಎತ್ತಿ ಹಿಡಿದಿದ್ದಾರೆಂಬುದನ್ನು ಬುದ್ಧಿವಂತರು ಗ್ರಹಿಸುತ್ತಾ; ಶ್ರೀ ಸಿದ್ಧಪ್ಪಾರಾಧ್ಯರನ್ನು ನಾವು ಅಭಿನಂದಿಸುತ್ತೇವೆ; ಏಕೆಂದರೆ "ಆಚಾರ್ಯ; ವೇಧಾಕ್ರಿಯಾಮನುದೀಕ್ಷೆಗಳಿಂದ ಮಾನವರೆಲ್ಲರನ್ನು ಉದ್ಧರಿಸುತ್ತಲಿರುವ; ರಿಂದಲೂ ಮತ್ತು ನಮ್ಮೆಲ್ಲರ ವೈರಾಗ್ಯವನ್ನು ತಮ್ಮ ದಿವ್ಯಾಚರಣೆಯಿಂದ ವೃ; ಕರಿಸುತ್ತಿರುವುದರಿಂದಲೂ ಅವರು ಜಗದ್ಗುರುಗಳೆನಿಸಿರುವುದು ಸಾರ್ಥಕವಾಗಿ; ಆದ್ದರಿಂದಲೇ ಅವರು ಜ್ಞಾನಕ್ರಿಯಾಸಮನ್ವಯಾಚರಣೆಯ ದಿವ್ಯ ಆದ; ವನ್ನು ಉಪದೇಶ ಮತ್ತು ಕ್ರಿಯೆಗಳ ಮೂಲಕ ತೋರಿಸುತ್ತ ವಿಶ್ವದ ಆದ; ಕ್ರಿಯಾಮೂರ್ತಿಗಳೆನಿಸಿದ್ದಾರೆ. ಆದ್ದರಿಂದ ಪರಮವೈರಾಗ್ಯ ಶಾಲಿಗಳ; ಆಚಾರ್ಯರನ್ನು ಮಾನ್ಯ ಮಾಡದ ವಿರಕ್ತ ಮಠಗಳು ತಮ್ಮದೇ ಆದ ವೈ; ಕ್ತಿಕ ಪ್ರತಿಭೆಯಿಂದ ಶೋಭಿಸಲಾರವು. ವಿರಕ್ತರಿಗಾದರೂ ಸನ್ಯಾಸಾಶ್ರ; ವನ್ನು ವಹಿಸುವಾಗ್ಗೆ ಪಂಚಾಚಾರ್ಯರೇ ಗುರು ಸ್ಥಾನವನ್ನು ಅಲಂಕ; ಬೇಕಾಗಿದೆ. ಇಂತಹ ಪರಿಸ್ಥಿತಿಯಲ್ಲಿ ವಿರಕ್ತರ ಆಶ್ರಯದಲ್ಲಿ ಪಂ; ಚಾರ್ಯರು ದೀಕ್ಷಾದಿವ್ಯವಹಾರಗಳನ್ನು ನಡೆಸಿಕೊಂಡಿದ್ದರೆಂದೂ ಇವರಿ; ವಿರಕ್ತರು ಪೂಜ್ಯರೆಂದೂ ಅವಿವೇಕದಿಂದ ಕೆಲವರು ಹೇಳುತ್ತಿರುವುದು ಕೇ; ಸ್ವಪ್ರತಿಷ್ಠೆಗಾಗಿ ಹೇಳಿಕೊಳ್ಳುವ ಮಾತೇ ವಿನಹ ಸಿದ್ಧಾಂತ ಸಮ್ಮತವಲ್ಲ."

"ಈ ವಿರಕ್ತರೆಲ್ಲರಿಗೂ ಗುರುವಿನ ಅರ್ಚನೆಯಿಂದಲೂ ಮತ್ತು ಶೀ; ಪ್ರಸಾದಗಳ ಸೇವನೆಯಿಂದಲೂ ತಮ್ಮ ವೈರಾಗ್ಯ ದೃಢವಾಗುತ್ತದೆಯಾ; ರಿಂದಲೇ "ನಗುರೋರಧಿಕಂ" ಎಂದು ಶ್ರುತಿ ಹೇಳುತ್ತಿರುವುದು ಸರ್ವ ಸಮ್ಮ; ವಾಗಿದೆ. ಹೀಗೆ, ವಿಶ್ವದ ಶಾಂತಿ ಸಮತೆಗಳಿಗೆ ಆಧಾರಸ್ತಂಭವೆನಿಸಿದ ಜ; ದ್ಗುರು ಪಂಚಾಚಾರ್ಯರು ಸಾಧಕರೆಲ್ಲರಿಗೂ ಸನ್ಮಾನ್ಯರಾಗಿ ಶೋಭಿಸು; ದ್ದಾರೆ."' ಇವರಂತೆಯೇ ಸಿರಿಗೆರೆ, ಸುತ್ತೂರು ಮತ್ತು ಎಳನಡು-ಅರಸೀ; ಗುರು ಪೀಠಾಧೀಶ್ವರರೂ ಸನ್ಮಾನ್ಯರಾಗಿರುತ್ತಾರೆ. ವಿರಕ್ತರೆಂದರೆ ಸಂ; ಸಾಶ್ರಮಾವಲಂಬಿಗಳು.

"ಈ ಸನ್ಯಾಸಾಶ್ರಮವು ಪಂಚಪೀಠಗಳಲ್ಲೊಂದಾದ ವೈರಾಗ್ಯ ಪೀ; ವನ್ನೇ ಅವಲಂಬಿಸಿದೆಯಾದ್ದರಿಂದ ಸನ್ಯಾಸಪ್ರಧಾನವಾದ ವಿರಕ್ತ ಮಠ; ಲ್ಲಕ್ಕೂ ಪಂಚಪೀಠಗಳೇ ಮೂಲಾಧಾರವಾಗಿದೆ. ಹೀಗೆ ವಿರಕ್ತರೆಲ್ಲರಿ

ಪಂಚಾಚಾರ್ಯ ಪೀಠದ ಸ್ವಾಮಿಗಳೇ ಗುರುವೂ-ಜಂಗಮರೂ ಆಗಿರುವುದರಿಂದ ಶ್ರೀ ತೋಂಟದಾರ್ಯರೇ ಮೊದಲಾದ ವಿರಕ್ತ ಮೂರ್ತಿಗಳು ಅವರನ್ನು ಭಕ್ತಿ ಗೌರವಗಳಿಂದ ಸ್ತುತಿಸಿರುವುದು ಗಮನಾರ್ಹವಾಗಿದೆ." "ವಿರಕ್ತರೆಲ್ಲರಿಗೂ ಶ್ರೀ ಜಗದ್ಗುರು ಪಂಚಾಚಾರ್ಯರೇ ಗುರುಗಳೆಂಬುದು ಸ್ಪಷ್ಟವಾಗುತ್ತಿರುವಾಗ ಗುರು ಜಂಗಮ ಸ್ವರೂಪಿಗಳಾದ ಆಚಾರ್ಯರಿಂದಲೇ ಜಂಗಮ ದೀಕ್ಷೆಯನ್ನು ಪಡೆದಿರುವ ವಿರಕ್ತರು ಆಚಾರ್ಯರಿಗಿಂತ ಹೆಚ್ಚಿನವರೆಂದು ಭಾವಿಸಿರುವ ಕೆಲವು ಅಂಧಾಭಿಮಾನಿಗಳ ಹೇಳಿಕೆ ಗಗನ ಕುಸುಮದಂತೆ ನಿರರ್ಥಕವೇ ಆಗಿರುವುದು."-ಎಂದು ಅವರು ಎಂದರೆ ಶ್ರೀ ಸಿದ್ಧಪ್ಪಾರಾಧ್ಯರು ೧೯೬೩ ನೆಯ ಮಾರ್ಚಿ ೨೪ ನೆಯ "ಪಂಚಾಚಾರ್ಯ ಪ್ರಭಾ" ಪತ್ರಿಕೆಯಲ್ಲಿ ಬರೆದಿದ್ದಾರೆ. ಶ್ರೀ ಆರಾಧ್ಯರು ಅವರ ಆಶ್ರಯದಾತರಾದ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳನ್ನು ನಡುನೀರಿನಲ್ಲಿ ಕೈ ಬಿಟ್ಟಂತಾಯಿತು! ಚಿತ್ರದುರ್ಗದ ವಿರಕ್ತ ಮಠ ಒಂದು ಶ್ರೀಮಂತ ಶಾಖಾ ಮಠವೇ ಹೊರತು ಮೂಲ ಶೂನ್ಯ ಸಿಂಹಾಸನ ಮಠವಲ್ಲವೆಂಬುದು ನಿಜ. ಇದೊಂದು ಮುರಘಾ ಸಮುಯದ ಮಠ! ಕವಲಿನಲ್ಲಿ ಕವಲು ಮಠ! ಅಷ್ಟೆ. ಇದು ತನ್ನ ಮಠದ ಅದ್ಭುತ ಕಥೆಯನ್ನು ತಾನೇ ಹೇಳಿಕೊಂಡು ಸಮಾಜವನ್ನು ತಪ್ಪುದಾರಿಯಲ್ಲಿ ನಡೆಯಿಸಿತು! ಇವರು ಬೇಕಾದ ಬಿರುವದುಬಾಲಿಗಳನ್ನು ಮೆರೆಯಲಿ; ಜಗದ್ಗುರುವೆಂದು ಹೊಗಳಿಸಿಕೊಳ್ಳಲಿ! ಅದನ್ನು ಯಾರೂ ಆಕ್ಷೇಪಿಸುವಂತಿಲ್ಲ. ಆದರೆ ತತ್ತ್ವತಃ ಇದು ಎಲ್ಲ ಗುರು ಪೀಠಗಳಿಗಿಂತಲೂ ಹೆಚ್ಚಿನದೆಂಬುದನ್ನು ಯಾರೂ ಒಪ್ಪಲಾರರು. ಇದು ಮುರಘಾ ಸಮುಯದ ಪ್ರಮುಖ ಮಠಗಳಲ್ಲಿ ಒಂದಾಗಿದೆಯೆಂಬುದನ್ನು ಇತಿಹಾಸದ ಆಧಾರಗಳಿಂದ ನಾವು ಈ 'ಶೂನ್ಯ ಸಿಂಹಾಸನ' ಗ್ರಂಥದಲ್ಲಿ ವಿವರಿಸಿರುತ್ತೇವೆ. ಈ ಮಠದ ಚರಿತ್ರೆಯೆಂದರೆ ವಿರಕ್ತ ಪಂಥದ ಪ್ರಗತಿಯ ಚರಿತ್ರೆಯೆಂದು ಹೇಳಬಹುದು. ಈ ಗ್ರಂಥವನ್ನು ಬರೆಯಲು ತಮ್ಮ ಅಮೋಘವಾದ ಭಾಷಣಗಳಿಂದ ನಮಗೆ ಪ್ರೇರಣೆಯುಂಟುಮಾಡಿದ ಚಿತ್ರದುರ್ಗದ ವಿರಕ್ತ ಬೃಹನ್ಮಠಾಧೀಶ್ವರ ಜಗದ್ಗುರು ಶ್ರೀ ಮಲ್ಲಿಕಾರ್ಜುನ ಮುರಘರಾಜ ಸ್ವಾಮಿಗಳಿಗೆ ನಾವು ಕೃತಜ್ಞರಾಗಿದ್ದೇವೆ. ನಮ್ಮ 'ಶೂನ್ಯ ಸಿಂಹಾಸನ' ಗ್ರಂಥ ಅಚ್ಚಾಗುತ್ತಿದ್ದಾಗಲೇ ಚಿತ್ರದುರ್ಗದ ವಿರಕ್ತ ಮಠಾಧೀಶ್ವರರ ಆಶ್ರಯದಲ್ಲಿ ಶ್ರೀ ಸಿದ್ಧಪ್ಪಾರಾಧ್ಯರು 'ಶೂನ್ಯ ಪೀಠದ ಪ್ರಭಾವ' ಎಂಬ

ಪುಸ್ತಕವನ್ನು ೧೯೬೭ ನೆಯ ನವೆಂಬರ್ ತಿಂಗಳಿನಲ್ಲಿಯೇ ಪ್ರಕಟಿಸಿದ್ದ ನಮ್ಮ 'ಶೂನ್ಯ ಸಿಂಹಾಸನ' ಗ್ರಂಥ ಕೀಲಕ ಸಂವತ್ಸರ ವೈಶಾಖ ಶುದ್ಧ ತ್ರಿ ತದಿಗೆಯ ದಿನ ಎಂದರೆ ೧೯೬೮ ನೆಯ ಏಪ್ರಿಲ್ ೩೦ ನೆಯ ಬಸವ ಜಯಂತಿ ದಿನ ಪ್ರಕಟವಾಯಿತು. ಶ್ರೀ ಆರಾಧ್ಯರು ೧೯೬೭ ನೆಯ ಅಕ್ಟೋಬರ್ ತಿಂ ಳಲ್ಲಿ ಶ್ರೀ ಜಯವಿಭವ ಸ್ವಾಮಿಗಳ ವಾರ್ಷಿಕಾರಾಧನೆಯ ಉತ್ಸವಕ್ಕೆ ಚಿತ್ರ ದುರ್ಗಕ್ಕೆ ಬಂದಿದ್ದಾಗ ಅವರಿಗೆ 'ಶೂನ್ಯ ಸಿಂಹಾಸನ' ಗ್ರಂಥವೂ, ನಾ ತಾ|| ೧೬-೨-೧೯೬೩ ರಂದು ಬೆಂಗಳೂರು ಶ್ರೀ ಗುರುವಣ್ಣ ದೇವರ ಮಠ ಮಾಡಿದ ಭಾಷಣದ ಪ್ರತಿಯೂ ತಮಗೆ ಸಿಕ್ಕಿದುವೆಂದು ಅವರು ನ ತಾ|| ೨೨-೨-೧೯೬೮ ರಲ್ಲಿ ಬರೆದಿರುವ ಪತ್ರದಲ್ಲಿ ತಿಳಿಸಿರುತ್ತಾರೆ. ಶ್ರೀ ಆರಾ ಧ್ಯರು ಹೇಳಿರುವುದು ಪೂರ್ಣ ಸತ್ಯವಲ್ಲ. ಅವರಿಗೆ ನನ್ನ ಭಾಷಣದ ಪ್ರ ಸಿಕ್ಕಿರಬಹುದು. "ಶೂನ್ಯ ಸಿಂಹಾಸನ" ಗ್ರಂಥ ಅವರಿಗೆ ಸಿಕ್ಕಿರಲು ಸಾಧ್ಯವೇ ಇಲ್ಲ. ಆಗಿನ್ನೂ ಅದು ಮುದ್ರಣವಾಗುತ್ತಿತ್ತು. ಆದ್ದರಿಂದ ನಮ್ಮ 'ಶೂನ್ಯ ಸಿಂಹಾಸನ' ಗ್ರಂಥದ ಮುದ್ರಿತ ಪುಟಗಳನ್ನು ಯಾವನೋ ದುಷ್ಕರ್ಮಿ ಕದ್ದು ಶ್ರೀ ಆರಾಧ್ಯರಿಗೆ ಕೊಟ್ಟಿರಬೇಕು. ಆಗ ನಮ್ಮ ಗ್ರಂಥ ಸುಮಾರು ೧೫ ಪುಟಗಳಷ್ಟು ಅಚ್ಚಾಗಿತ್ತು. ಅಷ್ಟನ್ನೇ ಶ್ರೀ ಆರಾಧ್ಯರು ಮಹಾ ಪ್ರಸಾ ವೆಂದು ಭಾವಿಸಿ ನಮ್ಮ ಅಭಿಪ್ರಾಯಗಳನ್ನು ಅವರ 'ಶೂನ್ಯ ಪೀಠದ ಪ್ರಭಾವ' ಎಂಬ ಪುಸ್ತಕದಲ್ಲಿ ಟೀಕೆ ಮಾಡಿರುತ್ತಾರೆ. ನಮ್ಮ ಸಂಪೂರ್ಣ ಗ್ರಂಥವನ್ನು ಓದಿ, ಅವರ ಟೀಕೆಗಳು ಸರಿಯೆ? ಎಂಬುದನ್ನು ವಿದ್ವಾಂಸರು ಪರಿಶೀಲಿಸ ಬಹುದು. ಶ್ರೀ ವಿರಕ್ತ ಮಠದವರು ಇಂಥ ದುರ್ಲಾಭದಿಂದ ಸಂತೃಪ್ತರಾ ರೇನೋ! ಯಾವನೋ ನೀಚಾತ್ಮ ಕದ್ದು ತಂದ ಪುಟಗಳ ಆಧಾರದ ಮೇಲೆ ಶ್ರೀ ಮಠದವರು ಶ್ರೀ ಸಿದ್ಧಪ್ಪಾರಾಧ್ಯರಿಂದ ವಿರಕ್ತ ಮಠದ ಐತಿಹಾಸಿಕ ಚರಿತ್ರೆ ಯನ್ನು ಬರೆಯಿಸಿರಬೇಕು! ಅದೇ 'ಶೂನ್ಯ ಪೀಠದ ಪ್ರಭಾವ' ಎಂಬುದನ್ನು ಊಹಿಸಬಲ್ಲೆವು. ಚಿತ್ರದುರ್ಗದ ವಿರಕ್ತ ಮಠಾಧೀಶ್ವರರಾದ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳೂ ಶ್ರೀ ಸಿದ್ಧಪ್ಪಾರಾಧ್ಯರೂ ಅನ್ಯೋನ್ಯಾಶ್ರಯಿಗಳೆಂದು 'ಶೂನ್ಯ ಪೀಠದ ಪ್ರಭಾವ'ದಿಂದ ತಿಳಿಯಬಹುದು. ಶ್ರೀ ಆರಾಧ್ಯರು ನಮ್ಮ ಮಿತ್ರರು; ವಿದ್ವಾಂಸರು. ಆದರೆ ಅವರು ನಮ್ಮ ಗ್ರಂಥ ಪ್ರಕಟನೆಯಾಗುವು ಕ್ಕಿಂತ ಮುಂಚೆಯೇ ನಮ್ಮ ಗ್ರಂಥದ ಕೆಲವು ಮುದ್ರಿತ ಪುಟಗಳನ್ನು ಬಳ

ಕೊಂಡು ನಿರಾಧಾರ ಟೀಕೆಗಳನ್ನು ಮಾಡಿದರಲ್ಲಾ ! ಎಂದು ವಿಷಾದಿಸುತ್ತೇವೆ. ಇದು ಅವರ ಯೋಗ್ಯತಾ ಸಿದ್ಧಿಗೆ ಕಲಂಕ ಪ್ರಾಯವಾಯಿತೆಂದು ವ್ಯಸನ ಪಡುತ್ತೇವೆ. ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳಾದರೂ ಬೆಂಗಳೂರು ಭಾಷಣದಲ್ಲಿ ಹೇಳಿದಂತೆ ತಮ್ಮ ಶ್ರೀ ಮಠದ ಚರಿತ್ರೆಯನ್ನು ಇತಿಹಾಸದ ಆಧಾರದಮೇಲೆ ಬರೆಯಿಸಿ ಸಮಾಜಕ್ಕೆ ಉಪಕಾರಮಾಡಿ ಕೃತಾರ್ಥರಾಗಲಿಲ್ಲವಲ್ಲಾ ! ಎಂದು ನಾವು ಮರುಗುತ್ತೇವೆ. ಅವರು ಆಡಿದ ಮಾತಿನಂತೆ ನಡೆಯಲಿಲ್ಲ! ಚಿತ್ರದುರ್ಗದ ವಿರಕ್ತ ಮಠದ ಇತಿಹಾಸವನ್ನು ಬೆಳಕಿಗೆ ತರಲಿಲ್ಲ ! ಅಥವಾ 'ಶೂನ್ಯ ಪೀಠದ ಪ್ರಭಾವ'ವೇ ಅವರು ಹೇಳಿದ ಐತಿಹಾಸಿಕ ಗ್ರಂಥವೋ ! ಇದೇ ಆದಾಗಿದ್ದರೆ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳ ಬೆಂಗಳೂರು ಭಾಷಣದ ವಿನ್ಯಾಸದಂತೆ ಈ ಪುಸ್ತಕವಿಲ್ಲವೆಂಬುದನ್ನು ಇತಿಹಾಸಜ್ಞರು ನಿರ್ಣಯಿಸಬಲ್ಲರು. ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳೂ ಶ್ರೀ ಸಿದ್ಧಪ್ಪಾರಾಧ್ಯರೂ ಸಂಸ್ಕೃತದಲ್ಲಿ ಪರಿಪೂರ್ಣ ವಿದ್ವಾಂಸರು. ಅವರ ವಿದ್ವತ್ತೆಯನ್ನು ನಾವು ಗೌರವಿಸುತ್ತೇವೆ. ಆದರೆ ಉಭಯರಿಗೂ ಇತಿಹಾಸ ಪ್ರಜ್ಞೆ ತೃಪ್ತಿಕರವಾಗಿಲ್ಲವೆಂದು ತಿಳಿಸುತ್ತೇವೆ. 'ಶೂನ್ಯ ಪೀಠದ ಪ್ರಭಾವ' ಎಂಥ ಐತಿಹಾಸಿಕ ಅಭಾವದ ಮತ್ತು ನಿಕೃಷ್ಟ ತಾತ್ತ್ವಿಕ ಪುಸ್ತಕವೆಂಬುದನ್ನು ನಾವು ನಮ್ಮ 'ನಿರಂಜನ' ಗ್ರಂಥದಲ್ಲಿ ಸಾಕಾದಷ್ಟು ಸಾಕ್ಷ್ಯಾಧಾರಗಳಿಂದ ಖಂಡಿಸಿರುತ್ತೇವೆ.

ನಾವು ಈ 'ಶೂನ್ಯ ಸಿಂಹಾಸನ' ಗ್ರಂಥವನ್ನು ಬರೆಯುವುದರಲ್ಲಿ ಅನೇಕ ಗ್ರಂಥಗಳನ್ನೂ ಶಾಸನಗಳನ್ನೂ ಅವಲೋಕಿಸಿರುತ್ತೇವೆ; ನಾನಾ ಆಕರಗಳಿಂದ ವಿಷಯಗಳನ್ನು ಸಂಗ್ರಹಿಸಿರುತ್ತೇವೆ. ಈ ಎಲ್ಲಾ ಸಹಾಯವನ್ನೂ ನಾವು ಕೃತಜ್ಞತೆಯಿಂದ ನೆನೆಯುತ್ತೇವೆ. ಈ ಗ್ರಂಥವನ್ನು ಓದಿ ಚಿಕ್ಕದಾದರೂ ಚೊಕ್ಕವಾದ ಮುನ್ನುಡಿಯನ್ನು ಬರೆದುಕೊಟ್ಟಿರುವ ನಮ್ಮ ತರುಣ ಮಿತ್ರರೂ ವಾಗ್ಮಿಗಳೂ, ವಕೀಲರೂ ಆಗಿರುವ ಶ್ರೀ ಎಚ್. ಗಂಗಾಧರನ್, ಎಂ ಎ., ಬಿ. ಎಲ್., ಅವರ ಅಭಿಮಾನವನ್ನು ಸದಾ ಸ್ಮರಿಸುತ್ತೇವೆ.

ಈ ಗ್ರಂಥವನ್ನು ಪ್ರಕಾಶಪಡಿಸಲು ಸಹಾಯಮಾಡಿದ ಕೃಷ್ಣರಾಜಪುರಂ ಬೆಂಗಳೂರು 'ನಾಗಾನಂದ ಪ್ರಕಾಶನ ಸಂಸ್ಥೆ'ಯನ್ನು ಅಭಿನಂದಿಸುತ್ತೇವೆ. ಈ ಗ್ರಂಥವನ್ನು ತಡವಾದರೂ ತಾಳ್ಮೆಯಿಂದ ಉತ್ತಮವಾಗಿ ಮುದ್ರಣಮಾಡಿ

ಕೊಟ್ಟ 'ಚಿತ್ರದುರ್ಗದ ಸಹಕಾರ ಮುದ್ರಣಾಲಯ'ದವರ ಉಪಕಾರವ
ಮರೆಯಲಾರೆವು. ಈ ಗ್ರಂಥವ ಪ್ರತಿಗಳನ್ನು ಅಪೇಕ್ಷಿಸಿ ಮುಂಗಡವಾಗಿ
ನೂರು ನೂರು ರೂಪಾಯಿಗಳನ್ನು ಕಳಿಸಿಕೊಟ್ಟ ನಮಗೆ ಉದಾರಾಶ್ರ
ನೀಡಿದ ಎಲ್ಲಾ ಮಹಾನೀಯರಿಗೂ ಶ್ರೀ ಮಠಗಳವರಿಗೂ ನಾವು ಚಿರ
ಗಳಾಗಿದ್ದೇವೆ. ಈ ನಮ್ಮ ಗ್ರಂಥದಲ್ಲಿ ಅನೇಕ ಲೋಪದೋಷಗಳಿರಬಹು
ವಿದ್ವಾಂಸರು ಅಂಥ ನ್ಯೂನತೆಗಳನ್ನು ದಯೆಯಿಟ್ಟು ತಿಳಿಸಿದರೆ ಅವುಗಳ
ಕೃತಜ್ಞತೆಯಿಂದ ಸ್ವೀಕರಿಸಿ ಮುಂದಿನ ಮುದ್ರಣದಲ್ಲಿ ಅಂಥ ತಪ್ಪುಗಳ
ಸರಿಪಡಿಸಿಕೊಳ್ಳುತ್ತೇವೆ. ಈ ಗ್ರಂಥದ ಕೊನೆಯಲ್ಲಿ ಕೊಟ್ಟಿರುವ ಕ್ರಿ.
"೧೪೭೦ ರಿಂದ ೧೭೫೦ ರ ಅವಧಿಯಲ್ಲಿ ಆದ ವಿರಕ್ತ ಪರಂಪರೆ" ಎಂಬು
ಇಮ್ಮಡಿ ಮುರಿಗೆಯ ಸ್ವಾಮಿ.(೧೭೫೦) ಎಂದು ಅಚ್ಚಾಗಿರುವುದನ್ನು (೧೭
ಎಂದೂ "ಪುಷ್ಪಾಂಜಲಿ"ಯಲ್ಲಿ ಎರಡನೆಯ ಪಂಕ್ತಿಯಲ್ಲಿ 'ಸದ್ಭಾವನೆಯ
ಮಾಡಿಸಿ" ಎಂಬುದನ್ನು "ಸದ್ಭಾವನೆಯನ್ನು ಮೂಡಿಸಿ" ಎಂದೂ ದಯೆಯಿ
ಓದಿಕೊಳ್ಳಬೇಕೆಂದು ವಿನಂತಿ.

ಶುಭಂ ಭೂಯಾತ್

ತಾ|| ೩೦-೪-೧೯೭೮
ಬಸವ ಜಯಂತಿ,
ಚಿತ್ರದುರ್ಗ.

ಓ. ಎಲ್. ಲಿಂಗಣ್ಣಯ

# ತರಂಗ ಮಾಲೆ

ಓಂ

ಶ್ರೀ ಗೌರೀಲಿಂಗಾಯನಮಃ

# ಶೂನ್ಯ ಸಿಂಹಾಸನ

## ತರಂಗ ೧.

### ಸರ್ವ ಧರ್ಮ ಪರಿಚಯ; ಸರ್ವತತ್ತ್ವ ದರ್ಶನ

ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣ ಮುದಚ್ಯತೇ ।
ಪೂರ್ಣಸ್ಯಪೂರ್ಣಮಾದಾಯ ಪೂರ್ಣಮೇವಾಶಿಷ್ಯತೇ ॥

—ಈಶಾವಾಸ್ಯೋಪನಿಷತ್.

ವೀರಶೈವ ಧರ್ಮ ಅನಾದಿಸಂಸಿದ್ಧವಾದುದು. ಇದು ದ್ರಾವಿಡ ಧರ್ಮ. ಭರತಖಂಡದಲ್ಲಿ ಆರ್ಯಧರ್ಮ ರೂಪುಗೊಳ್ಳುವುದಕ್ಕಿಂತ ಮುಂಚೆಯೇ ದ್ರಾವಿಡ ಧರ್ಮ ಇಲ್ಲಿ ಪ್ರಬಲವಾಗಿತ್ತು. ಕ್ರಮೇಣ ದ್ರಾವಿಡ ಧರ್ಮವೂ ಆರ್ಯ ಧರ್ಮವೂ ಸೇರಿ ಹಿಂದೂ ಧರ್ಮವೆನ್ನಿಸಿಕೊಂಡಿದೆ. ಆರ್ಯ ಧರ್ಮವನ್ನು ವೈದಿಕ ಧರ್ಮವೆಂದು ಕರೆಯುತ್ತಾರೆ. ದ್ರಾವಿಡ ಧರ್ಮದ ಇತಿಹಾಸವನ್ನು ಹರಪ್ಪ ಮತ್ತು ಮೊಹೆಂಜದಾರೋ ಎಂಬ ಸ್ಥಳಗಳಲ್ಲಿ ಲಬ್ಧವಾದ ಪ್ರಾಚೀನ ಅವಶೇಷಗಳಿಂದ ನಿರ್ಧರಿಸಲು ಸ್ವಲ್ಪ ಮಟ್ಟಿಗೆ ಸಾಧ್ಯವಾಗುತ್ತದೆ. ದ್ರಾವಿಡ ಸಂಸ್ಕೃತಿ ಸುಮಾರು ಐದು ಸಾವಿರ ವರ್ಷಗಳ ಹಿಂದೆ ಭರತಖಂಡದ ವಾಯುವ್ಯ ಭಾಗದಲ್ಲಿ ಸಿಂಧೂ ನದಿಯ ತೀರದಲ್ಲಿ ವ್ಯಾಪಿಸಿತ್ತು. ಇದೇ ಸೈಂಧವ ಸಂಸ್ಕೃತಿ. ಇದು ಸುಮಾರು ಒಂದು ಸಾವಿರ ವರ್ಷಕಾಲ ಉಚ್ಛ್ರಾಯ ಸ್ಥಿತಿಯಲ್ಲಿತ್ತೆಂದು ಇತಿಹಾಸಜ್ಞರು ತಿಳಿಸುತ್ತಾರೆ. ದ್ರಾವಿಡರು ಭರತಖಂಡದ ಎಲ್ಲಾ ಭಾಗಗಳಲ್ಲಿಯೂ ಹರಡಿದ್ದರು. ಅಲ್ಲದೆ, ಅವರು ಸಿಂಹಳ, ಜಾವಾ, ಪಾರಿಯಾತ್ರಾ, ಈಜಿಪ್ಟ್ (ಐಗುಪ್ತ) ಮೊದಲಾದ ಹೊರದೇಶಗಳಲ್ಲಿಯೂ ವಾಸಿಸುತ್ತಿದ್ದರೆಂದು

ಇತಿಹಾಸದಿಂದ ತಿಳಿದುಬರುತ್ತದೆ. ಪಶುಪತಿ ಶಿವನೇ ಆ ದ್ರಾವಿಡ ಜನಾಂಗ ಆರಾಧ್ಯದೈವ. ಅವರು ಶಿವನನ್ನು 'ಲಿಂಗ'ರೂಪದಿಂದ ಪೂಜಿಸುತ್ತಿದ್ದ. ಅವರಲ್ಲಿ ಶಕ್ತಿ ದೇವತಾಪೂಜೆಯೂ ಆಚರಣೆಯಲ್ಲಿತ್ತು. ಅವರು ಯಜ್ಞಯ ಗಳನ್ನು ಮಾಡುತ್ತಿರಲಿಲ್ಲ. ಆದ್ದರಿಂದ ಆ ದ್ರಾವಿಡ ಸಂಸ್ಕೃತಿ ಯಜ್ಞಕ ಗಳನ್ನು ಬೋಧಿಸಿ, ಅನುಷ್ಠಾನ ಮಾಡಿದ ವೇದಗಳ ಕಾಲಕ್ಕಿಂತಲೂ ಅತ್ಯ ಪ್ರಾಚೀನವಾದುದೆಂದು ವಿದ್ವಾಂಸರು ನಿರ್ಣಯಿಸಿರುತ್ತಾರೆ. ಅತಿ ಪುರಾ ಕಾಲದಲ್ಲಿಯೇ ವಿಗ್ರಹ ನಿರ್ಮಾಣ, ವಿಗ್ರಹ ಪ್ರತಿಷ್ಠೆ ಮತ್ತು ವಿಗ್ರಹಾರಾ ಇವು ದ್ರಾವಿಡಧರ್ಮದಲ್ಲಿ ರೂಢಿಯಲ್ಲಿದ್ದುವು. ಈ ದ್ರಾವಿಡ ಧರ್ಮದ ವಿಧಾನಗಳನ್ನು ಬೋಧಿಸುವ ಶಾಸ್ತ್ರಗಳನ್ನು ತಂತ್ರಶಾಸ್ತ್ರ ಅಥವಾ ಆಗಮಗಳ ಕರೆಯುತ್ತಾರೆ. ಈ ದೃಷ್ಟಿಯಿಂದ ಆಗಮಗಳು ವೇದಗಳಿಗಿಂತಲೂ ಪ್ರಾಚೀ ವಾದವುಗಳೆಂದು ಹೇಳಬಹುದು. ಕಾಲಕ್ರಮದಲ್ಲಿ ಆಗಮಗಳೂ ಸಂಸ್ಕೃತ ಭಾ ಯಲ್ಲಿ ರೂಪುಗೊಂಡವು. ವೇದಗಳು ಸುಮಾರು ಆರು ಸಾವಿರ ವರ್ಷಗಳ ಹಿ ರಚನೆಯಾಗಿರಬಹುದೆಂದು ಪಂಡಿತಪ್ರಕಾಂಡರು ಅಭಿಪ್ರಾಯ ಪಡುತ್ತಾರೆ. ವಾಙ್ಮಯದಲ್ಲಿ ಋಗ್ವೇದ ಅತ್ಯಂತ ಪ್ರಾಚೀನವಾದುದು. ಇದರಲ್ಲಿ ದ್ರಾ ಧರ್ಮದ ವಿಚಾರಗಳಿವೆಯೆಂದು ವಿದ್ವಾಂಸರು ಹೇಳುತ್ತಾರೆ. ಭಾರತೀ ಸಂಸ್ಕೃತಿಯ ಮೂಲ ರೂಪರೇಷೆಗಳನ್ನು ಕಂಡುಹಿಡಿಯಲು ವೇದಗಳ ಪೂ ಯುಗದ ವಾಙ್ಮಯವನ್ನು ಅವಲೋಕಿಸಬೇಕೆಂದು ಬಾಲಗಂಗಾಧರತಿಲ ಅಭಿಪ್ರಾಯಪಟ್ಟಿರುತ್ತಾರೆ. ದ್ರಾವಿಡರಲ್ಲಿ ಭರತರು ಅಥವಾ ಫಣಿಗಣ ಎ ಒಂದು ಪಂಗಡದವರೊಂದಿಗೆ ಆರ್ಯರು ಯುದ್ಧ ಮಾಡಿದರೆಂದು ಋಗ್ವೇದ ಹೇಳಿದೆ. ಋಗ್ವೇದದಲ್ಲಿ ಮರುದ್ಗಣ ಮತ್ತು ವೃಷಭಗಣಗಳನ್ನು ರುದ್ರಪ ರೆಂದು ಕರೆದಿರುತ್ತಾರೆ. ಆರ್ಯರು ಇವರನ್ನು "ವಿಷಾಣಿನಃ ಶಿವಾಸಃ" ಎಂ ಸಂಬೋಧಿಸಿರುತ್ತಾರೆ. ವಿಷಾಣಿನಃ ಎಂದರೆ ಮೃಗಗಳ ಕೊಂಬುಗಳೇ ಆಯು ವಾಗಿ ಉಳ್ಳವರು ಎಂದೂ, ಶಿವಾಸಃ ಎಂದರೆ ಶಿವನನ್ನು ದೇಹದ ಮೇಲೆ ಧರಿ ವರು ಎಂದೂ ಅರ್ಥ. ಫಣಿಗಣದವರು ಹಿಡಿದಿದ್ದ ಗೋವುಗಳನ್ನು ಸರಮ ಎಂಬ ಶುನಿಯ ಸಹಾಯದಿಂದ ಇಂದ್ರನು ಬಿಡಿಸಿದನೆಂದು ಋಗ್ವೇದ ತಿಳಿಸುತ್ತ ಇದನ್ನೆಲ್ಲಾ ಪರಿಗಣಿಸಿದರೆ, ವೇದಯುಗಕ್ಕಿಂತ ಹಿಂದೆ, ಅಪಾರ ದ್ರಾ ವಾಙ್ಮಯವಿತ್ತೆಂದು ಸ್ಪಷ್ಟವಾಗುತ್ತದೆ. ವೇದಗಳ ರಚನೆಗೆ ಆ ಪ್ರಾಚೀನವಾಙ್ಮ

ಅಮೂಲ್ಯ ಸಾಹಿತ್ಯಸಾಧನವನ್ನು ಒಪಗಿಸಿತೆಂಬುವುದರಲ್ಲಿ ಅನುಮಾನವಿಲ್ಲ. ವೇದಸಂಸ್ಕೃತಿಯಲ್ಲಿ ಅಗ್ನಿಪೂಜೆ, ಯಜ್ಞ, ಸೋಮಪಾನ, ಗೋಪೂಜೆ, ಇವು ಕಂಡುಬರುತ್ತವೆ. ಶಿವಪೂಜೆ, ಶಕ್ತಿಪೂಜೆ ವೃಷಭ ಪೂಜೆ, ವ್ಯಾಘ್ರಲಾಂಛನ ಇವು ದ್ರಾವಿಡ ಸಂಸ್ಕೃತಿಯಲ್ಲಿವೆ. ಆರ್ಯರು ಲಿಂಗಪೂಜಕರನ್ನು 'ಶಿಶ್ನದೇವಾಃ' ಎಂದು ಪರಿಹಾಸ್ಯ ಮಾಡುತ್ತಿದ್ದರು. ಸ್ಥಾವರ ಲಿಂಗಪೂಜೆಯಂತೆಯೇ ಲಿಂಗ ಧಾರಣವೂ ದ್ರಾವಿಡರಲ್ಲಿ ಆಚರಣೆಯಲ್ಲಿತ್ತು. ಸಿಂಧೂ ತೀರದ ಈ ಪ್ರಾಚೀನ ಜನಾಂಗವನ್ನು ನಾಗಜಾತಿಯವರೆಂದು ಡಾ॥ ಫ್ಲೀಟ್ ಅವರು ತಿಳಿಸುತ್ತಾರೆ. ಋಗ್ವೇದದಲ್ಲಿ ಹೇಳಿರುವ ಫಣಿಗಣ ಎಂದರೆ ನಾಗಜನರು ಎಂದು ಹೇಳಬಹುದು. ಇವರಿಗೆ ಭರತರು ಮತ್ತು ಪ್ರಮಥರು ಎಂಬ ಹೆಸರುಗಳೂ ಇದ್ದಂತೆ ಇತಿಹಾಸ ದಿಂದ ತಿಳಿದುಬರುತ್ತದೆ. ಭೂಮಧ್ಯ ಸಮುದ್ರ ತೀರದ ಕೆಲವು ಪಂಗಡಗಳ ಜನರು ಲಿಂಗವನ್ನು ಕಂಠದಲ್ಲಿ ಧರಿಸುತ್ತಿದ್ದರೆಂದು ಕೀತ್ ಎಂಬ ಪಂಡಿತರು ತಿಳಿಸುತ್ತಾರೆ.

ಪ್ರಾಚೀನ ದ್ರಾವಿಡ ಜನಾಂಗ ತನ್ನದೇ ಆದ ಆಧ್ಯಾತ್ಮಿಕ ತತ್ತ್ವವಿಚಾರ ಗಳನ್ನು ಅನುಸರಿಸಿಕೊಂಡು ಬರುತ್ತಿತ್ತು. ಈ ಪ್ರಾಚೀನ ಜನಾಂಗದಲ್ಲಿ ಚಾರ್ವಾಕ, ಬುದ್ಧ, ಜೈನ, ಸಾಂಖ್ಯ ಮತ್ತು ಪಾಶುಪತ ಧರ್ಮಗಳು ಅತಿ ಮುಖ್ಯವಾದವುಗಳು. ಅವು ಬಹಳ ಮಟ್ಟಿಗೆ ಸಮಕಾಲೀನ ಧರ್ಮಗಳು. ಅವು ಒಂದೊಂದೂ ಭರತಖಂಡದ ಒಂದೊಂದು ಪ್ರಾಂತದಲ್ಲಿ ವಿಶೇಷ ಪ್ರಚಾರದಲ್ಲಿದ್ದು ವೆಂದು ಗೊತ್ತಾಗುತ್ತದೆ. ಮನುಷ್ಯನ ವಿಚಾರಶಕ್ತಿ ಮತ್ತು ಆಧ್ಯಾತ್ಮಿಕ ಮನೋ ಭಾವ ಅತ್ಯಂತ ಪ್ರಾಚೀನಕಾಲದಿಂದಲೂ ಹೇಗೆ ವಿಕಾಸವಾಗುತ್ತಿದ್ದುವೆಂಬು ದನ್ನು ಈ ಮತದರ್ಶನಗಳಿಂದ ತಿಳಿಯಬಹುದು. ಆರ್ಯಧರ್ಮ ಬೆಳೆಯುತ್ತ ಬಂದಂತೆ ವೇದವಾಙ್ಮಯ ಸರ್ವವ್ಯಾಪಕವಾಗುತ್ತ ಬಂತು. ವೇದ, ಉಪನಿಷತ್ತು, ಗೀತೆ–ಇವು ಆರ್ಯ ಧರ್ಮದ ಪ್ರಸ್ಥಾನತ್ರಯವೆನಿಸಿದುವು. ಇವುಗಳನ್ನು ಅಧಿಕರಿಸಿ ಬ್ರಹ್ಮಸೂತ್ರಗಳಿಗೆ ಬೇರೆಬೇರೆ ಆಚಾರ್ಯರು ಭಾಷ್ಯಗಳನ್ನು ಬರೆದು ತಮ್ಮ ತಮ್ಮ ಮತಸಿದ್ಧಾಂತಗಳನ್ನು ಸ್ಥಾಪಿಸಿದರು. ಇವು ವೈದಿಕ ಧರ್ಮಗಳು. ಅನೇಕ ದ್ರಾವಿಡ ಧರ್ಮಗಳೂ ವೈದಿಕ ವಾಙ್ಮಯದ ಆವರಣದಲ್ಲಿ ಪುಷ್ಟಿ ಗೊಂಡವು. ದ್ರಾವಿಡ ಧರ್ಮದ ಅನೇಕ ಮತಪ್ರಕ್ರಿಯೆಗಳು ವೈದಿಕ ಧರ್ಮದಲ್ಲಿ ಸೇರಿದ್ದರಿಂದ ಕಾಲಕ್ರಮದಲ್ಲಿ ಈ ದ್ರಾವಿಡಾರ್ಯ ಪಂಥಗಳು ಪರಸ್ಪರ ಸಮಾ

ವೇಶಗೊಳ್ಳಲು ಕಾರಣವಾಯಿತು. ಜೈನಧರ್ಮ ಮಾತ್ರ ವೈದಿಕಧರ್ಮದಿ ಪ್ರತ್ಯೇಕವಾಗಿಯೇ ಉಳಿಯಿತು. ಆದರೂ ಅದು ವೈದಿಕಧರ್ಮದ ಛಾಯೆ ವಿಶ್ರಮಿಸಿಕೊಂಡಿರುವುದನ್ನು ಗುರುತಿಸಬಹುದು. ಶೈವಧರ್ಮವಾದ ಪ್ರಾ ಪಾಶುಪತವಂತೂ ವೈದಿಕಧರ್ಮವೆಂದೇ ಹೇಳಿಕೊಳ್ಳುವಷ್ಟು ಸಾಹಸಮಾಡಿ ಇದರಿಂದ ದ್ರಾವಿಡರ ಪ್ರಮುಖ ದೈವ ಶಿವ ವೈದಿಕ ವಾಙ್ಮಯದಲ್ಲಿ ಮಹಾ ನಾದನು. ಅಚ್ಚ ದ್ರಾವಿಡರಾದ ಶಂಕರಾಚಾರ್ಯರು ವೈದಿಕ ಧರ್ಮಕ್ಷೇತ್ರ ಆರ್ಯಧರ್ಮ ಗಂಗಾಜಲದಿಂದ ಶಿವನಿಗೆ ರುದ್ರಾಭಿಷೇಕ ಮಾಡಿದರು; ಪ ಚಾರ್ಯರೂ ದ್ರಾವಿಡ ಶಿವನನ್ನು ಭಕ್ತಿಯಿಂದ ಸ್ತೋತ್ರ ಮಾಡಿದರು. ದ್ರಾ ಡರ ವೈಷ್ಣವವೂ ವೈದಿಕಧರ್ಮಪಥದಲ್ಲಿ ತೀರ್ಥಯಾತ್ರೆ ಮಾಡಿತು. ರಂತೆಯೇ, ಪಾಶುಪತವೂ ಆರ್ಯಧರ್ಮದ ಸಾರವನ್ನು ಅನುಸರಿಸಿ ಡಿಸಿಕೊಂಡು, ಆರ್ಯಧರ್ಮಕ್ಷೇತ್ರದಲ್ಲಿ ತನ್ನ ಪ್ರತ್ಯೇಕ ಬೃಹನ್ಮಠವನ್ನು ಸಿತು ! ವೈದಿಕ ಧರ್ಮವೂ ದ್ರಾವಿಡಧರ್ಮ ಜ್ಯೋತಿಯನ್ನು ತನ್ನ ತತ್ತ್ವ ಯದಲ್ಲಿ ಬೆಳಗಿಸಿತು. ಈಗ ಹಿಂದೂ ಧರ್ಮದಲ್ಲಿ ಅದ್ವೈತ, ಶಕ್ತಿ ವಿಶಿಷ್ಟಾದ್ವೈ ವಿಶಿಷ್ಟಾದ್ವೈತ ಮತ್ತು ದ್ವೈತ ಎಂಬ ನಾಲ್ಕು ಪ್ರಮುಖ ಮತಗಳಿರು ಈ ನಾಲ್ಕು ಮತಗಳಲ್ಲಿಯೂ ಜೀವ, ಜಗತ್ತು ಮತ್ತು ಈಶ್ವರ ಎಂಬ ಮೂ ತತ್ತ್ವಗಳನ್ನು ಕುರಿತು ವಿಚಾರಮಥನ ನಡೆದಿದೆ. ದೇವರು ಇದ್ದಾನೆ ಜೀವರು ಎಂದರೇನು ? ಸೃಷ್ಟಿ ಎಂದರೇನು? ದೇವರಿಗೂ ಜೀವರಿಗೂ ಸಂಬ ವೇನು ? ದೇವರು ಈ ಜಗತ್ತನ್ನು ಸೃಷ್ಟಿಸಿದನೇ ? ಮುಕ್ತಿ ಎಂದರೇನು ? ದೇ ರಿಗೂ ಪ್ರಪಂಚಕ್ಕೂ ಇರುವ ಸಂಬಂಧವೇನು ? ಆತ್ಮವೆಂದರೇನು ? ಜೀವಾ ಮತ್ತು ಪರಮಾತ್ಮರ ಸಂಬಂಧವೇನು ? ಇವೇ ಮೊದಲಾದ ನಾನಾವಿಷ ಗಳನ್ನು ವಿವರಿಸಿ ತತ್ತ್ವಜ್ಞಾನಿಗಳು ಲೋಕೋಪಕಾರ ಮಾಡಿರುತ್ತಾರೆ. ಈ ಮಹೋದ್ದೇಶ ಸಾಧನೆಗಾಗಿಯೇ ಮಹರ್ಷಿಗಳು ಅಖಂಡ ತಪಸ್ಸನ್ನಾಚರಿಸಿ ಆ ದ್ರಷ್ಟಾರರು ಕಂಡ ಪರಬ್ರಹ್ಮಸ್ವರೂಪವನ್ನು ಶಾಸ್ತ್ರಮುಖದಿಂದ ಜಗತ್ತಿ ತಿಳಿಸಿದರು. ಅವರು ಕಂಡ ದಿವ್ಯದರ್ಶನವೇ ಇಂದು ಪ್ರಮುಖ ಮತದ ಗಳಾಗಿವೆ.

ಕಣಾದಸ್ಯಾಕ್ಷಪಾದಸ್ಯ ವ್ಯಾಸಸ್ಯ ಕಪಿಲಸ್ಯ ಚ ।
ಪತಞ್ಜಲೇಃ ಜೈಮಿನೇಶ್ಚ ದರ್ಶನಾನಿಷಡೇವಹಿ ॥

ಎಂದರೆ, ಕಣಾದ ವೈಶೇಷಿಕಸೂತ್ರವನ್ನೂ, ಗೌತಮ ನ್ಯಾಯಸೂತ್ರವನ್ನೂ ವ್ಯಾಸ ಉತ್ತರಮೀಮಾಂಸೆಯನ್ನೂ, ಕಪಿಲ ಸಾಂಖ್ಯಸೂತ್ರವನ್ನೂ ಪತಂಜಲಿ ಯೋಗ ಸೂತ್ರವನ್ನೂ ಜೈಮಿನಿ ಪೂರ್ವಮೀಮಾಂಸೆಯನ್ನೂ ರಚಿಸಿದರು. ಇವು ಆರೂ ದರ್ಶನಗಳು. ಇದರಂತೆಯೇ—

ಶೈವಂಚ ವೈಷ್ಣವಂ ಶಾಕ್ತಂ ಸೌರಂ ವೈನಾಯಕಂ ತಥಾ ।
ಸ್ಕಾಂದಂಚ ಭಕ್ತಿಮಾರ್ಗಸ್ಯ ದರ್ಶನಾನಿಷಡೇವ ಹಿ ॥

ಎಂದರೆ, ಶೈವ, ವೈಷ್ಣವ, ಶಾಕ್ತ, ಸೌರ, ಗಾಣಾಪತ, ಸ್ಕಾಂದ ಎಂಬ ಆರು ಮತಗಳು ಭರತಖಂಡದಲ್ಲಿ ರೂಪುಗೊಂಡವು. ಇವು ಆಸ್ತಿಕ ಮತಗಳು. ಆಸ್ತಿಕ ಮತವೆಂದರೆ, ಸೃಷ್ಟಿಕರ್ತನಾದ ದೇವರು ಇದ್ದಾನೆ ಎಂಬ ತತ್ತ್ವವನ್ನು ಅಂಗೀಕರಿಸಿರುವ ಪಂಗಡಗಳೆಂದು ಹೇಳುತ್ತಾರೆ. ಷಡ್ದರ್ಶನಗಳಲ್ಲಿ ಉತ್ತರಮೀಮಾಂಸೆಯೆಂಬ ಬ್ರಹ್ಮಸೂತ್ರದಮೇಲೆ ಶಿವಾದ್ವೈತಪರವಾಗಿ ರೇಣುಕಾಚಾರ್ಯರೂ ಶಕ್ತಿವಿಶಿಷ್ಟಾದ್ವೈತ ಪರವಾಗಿ ನೀಲಕಂಠ ಶಿವಾಚಾರ್ಯರೂ ಪಾಶುಪತಮತ ಪರವಾಗಿ ನೀಲಕಂಠ ನಾಗನಾಥಾಚಾರ್ಯರೂ ಭಾಷ್ಯಗಳನ್ನು ಬರೆದಿರುತ್ತಾರೆಂಬ ಪ್ರತೀತಿ ಇದೆ. ಇದರಂತೆಯೇ, ಈ ಬ್ರಹ್ಮಸೂತ್ರದಮೇಲೆ ಶಂಕರಾಚಾರ್ಯರು ವಿಶಿಷ್ಟಾದ್ವೈತ ಭಾಷ್ಯವನ್ನೂ ಮಧ್ವಾಚಾರ್ಯರು ದ್ವೈತಭಾಷ್ಯವನ್ನೂ ರಚಿಸಿರುತ್ತಾರೆ. ಶ್ರೀಪತಿ ಪಂಡಿತರು ಈ ಬ್ರಹ್ಮಸೂತ್ರಗಳ ಮೇಲೆ ವೀರಶೈವ ಭಾಷ್ಯವನ್ನು ಬರೆದಿರುತ್ತಾರೆ. ಶಕ್ತಿವಿಶಿಷ್ಟಾದ್ವೈತಿಗಳಾದ ವೀರಶೈವರಿಗೆ ಲಿಂಗಾಂಗಸಾಮರಸ್ಯ ರೂಪ ಶಿವಸಾಯುಜ್ಯವೇ ಮೋಕ್ಷ. ಪಾಶುಪತ ಶೈವರಿಗೆ ಷಡಧ್ವಾತೀತ ಶಿವ ಸಮಾನತೆಯೇ ಮೋಕ್ಷ. ಅದ್ವೈತಿಗಳಾದ ಶೈವರಿಗೆ ಭ್ರಮರಕೀಟನ್ಯಾಯದಿಂದ ಜೀವಬ್ರಹ್ಮೈಕ್ಯವೇ ಮೋಕ್ಷ. ವಿಶಿಷ್ಟಾದ್ವೈತಿಗಳಾದ ಶ್ರೀ ವೈಷ್ಣವರಿಗೆ ಚತುರ್ವ್ಯೂಹಯುಕ್ತವಾದ ವಾಸುದೇವ ಪರಾಪ್ರಕೃತಿಪ್ರಾಪ್ತಿಯೇ ಮೋಕ್ಷ. ದ್ವೈತಿಗಳಾದ ಮಾಧ್ವರಿಗೆ ಸ್ವಾಮಿಭೃತ್ಯನ್ಯಾಯದಿಂದ ಜೀವರಿಗೆ ಉಪಾಸ್ಯ ವಸ್ತು ಸಾನ್ನಿಧ್ಯಸಿದ್ಧಿಯೇ ಮೋಕ್ಷ. ಷಟ್ಸ್ಥಲ ಸಾಧನಾಮಾರ್ಗದಿಂದ ಮೋಕ್ಷಪ್ರಾಪ್ತಿಯೆಂಬುದಾಗಿ ವೀರಶೈವರು ನಂಬುತ್ತಾರೆ.

ಮಹಾಭಾರತ ಕಾಲದಲ್ಲಿ ಸಾಂಖ್ಯ, ಯೋಗ, ಪಾಂಚರಾತ್ರ, ವೇದ, ಪಾಶುಪತ ಎಂಬ ದರ್ಶನಗಳು ಪ್ರಸಿದ್ಧವಾಗಿದ್ದುವು ಆದ್ದರಿಂದಲೇ—

ಸಾಂಖ್ಯಂಯೋಗಃ ಪಾಂಚರಾತ್ರಂ ವೇದಾಃ ಪಾಶುಪತಂತಥಾ।
ಏತಾನ್ಯೈವ ಪ್ರಮಾಣಾನಿನೋಪಹನ್ಯಾನಿ ಯುಕ್ತಿಭಿಃ ॥

ಎಂದು ಮಹಾಭಾರತದಲ್ಲಿ ಹೇಳಿದೆ. ಈ ಐದು ದರ್ಶನಗಳನ್ನೂ ಯುಕ್ತಿಗ ನಿರಾಕರಿಸಲು ಸಾಧ್ಯವಿಲ್ಲ; ಇವು ಪ್ರಮಾಣದರ್ಶನಗಳು ಎಂದು ಅರ್ಥ.

ದರ್ಶನವೆಂದರೆ ತತ್ತ್ವವಿಚಾರ. ತತ್ತ್ವವೆಂದರೆ ಸ್ವಾಭಾವಿಕ ವಸ್ತುವೆಂದರೆ ಯಥಾರ್ಥವಾದ ಪದಾರ್ಥ. ಆದ್ದರಿಂದ ಪದಾರ್ಥ, ತತ್ತ್ವ ಎಂದರೂ ಒಂದೇ ಅರ್ಥ. ಪ್ರತಿಯೊಂದು ವಸ್ತುವೂ ವಿಚಿತ್ರ ತ್ತದೆ. ಅವರ ಸ್ವಭಾವ ಅನಂತವಾಗಿರುತ್ತದೆ. ಈ ವಸ್ತು ಸ್ವಭಾವ ಗಳನ್ನು ತಿಳಿಸುವುದೇ ತತ್ತ್ವದರ್ಶನ. ಆ ಸ್ವಭಾವಗಳ ವ್ಯವಸ್ಥೆಗೆ ಸಿ ವೆಂದು ಹೆಸರು. ಆತ್ಮ, ಪರಮಾತ್ಮ, ಪರಲೋಕ, ಕರ್ಮ, ಪುಣ್ಯ, ಜನ್ಮಾಂತರ ಮೊದಲಾದ ವಿಚಾರಗಳನ್ನು ಸಾಧನಾಬಲದಿಂದ ಅರಿ ಮಾತ್ರ ಸಾಧ್ಯ. ಇವೆಲ್ಲಾ ಪರೋಕ್ಷ ವಿಚಾರಗಳು. ವಿಚಾರಪರರು ಅನುಭವನನ್ನು ಲೋಕಕಲ್ಯಾಣಕ್ಕಾಗಿ ನಿರೂಪಿಸಿರುತ್ತಾರೆ. ಈ ವಿಚಾ ಎಂದರೆ, ಪರಮ ಸಾತ್ವಿಕರು; ಪ್ರಶಾಂತಚಿತ್ತರು; ಅಪರೋಕ್ಷ ಜ್ಞಾನ ಪಡೆದ ಮಹಾತ್ಮರು. ಇಂಥ ಪ್ರಾಜ್ಞರ ಮತವೇ ದರ್ಶನ. ಇಂಥ ಪುರುಷರೇ ಆ ಮತದ ಆಚಾರ್ಯರು; ಅಥವಾ ಆ ಸಿದ್ಧಾಂತ ಸ್ಥಾಪ ಈ ಎಲ್ಲ ಮಹಾ ಪುರುಷರೂ ಸಿದ್ಧಪುರುಷರೇ. ಅವರು ಬೋಧಿಸಿರು ಸಿದ್ಧಾಂತ ಮಾರ್ಗ! ಇದು ಸಾಮಾನ್ಯ ಜನರ ನಿಲುವಿಗೆ ಎಟಕ ಪ್ರಯಾಸ.ಆದ್ದರಿಂದ, ಅನುಭಾವಿಗಳು ಭಕ್ತಿಮಾರ್ಗವನ್ನೂ ತೋರಿಸಿರು ಈ ಭಕ್ತಿಮಾರ್ಗದಲ್ಲಿ ಅನೇಕ ಸಂಪ್ರದಾಯಗಳೂ, ಆಚಾರಗಳೂ, ಪ್ರ ಗಳೂ ಕಂಡುಬರುತ್ತವೆ. ಈ ಎಲ್ಲ ಮತಗಳ ಗುರಿಯೂ ಮೋಕ್ಷ; ಆಚಾರ್ಯರ ಸಂದೇಶವೂ ಶಾಂತಿ. ಇಂಥ ಹೃದಯ ವೈಶಾಲ್ಯ ಎಲ್ಲ ಸಾ ಮತಗಳಲ್ಲಿಯೂ ಕಂಡುಬರುತ್ತದೆ. ಆಯಾ ಕಾಲ, ದೇಶ, ಸನ್ನಿವೇಶ ಅನುಸರಿಸಿ, ಆ ಜಿಜ್ಞಾಸುಗಳ ಸಾಧನೆ, ಸಂಸ್ಕಾರ ಮತ್ತು ಬುದ್ಧಿಶಕ್ತಿಗನು ವಾಗಿ ತತ್ತ್ವದರ್ಶನ ರೂಪುಗೊಳ್ಳುತ್ತದೆಯೆಂಬುದು ನಿಜ. ಆಚಾರವಿಚಾ ಕಾಲಧರ್ಮವನ್ನು ಅನುಸರಿಸಿ ಮಾರ್ಪಾಟಾಗುತ್ತವೆಯೆಂಬುದನ್ನು ಮ ವಂತಿಲ್ಲ. ಆಚಾರದಲ್ಲಿ ಜಾತ್ಯಾಚಾರ, ಮತಾಚಾರ, ದೇಶಾಚಾರ

ಕುಲಾಚಾರ ಎಂಬು ನಾಲ್ಕು ವಿಧ. ಅನೇಕ ಜಾತಿಗಳಿಗೆ ಮತಾಚಾರ ಒಂದೇ ಆಗಿರಬಹುದು; ಜಾತ್ಯಾಚಾರಗಳು ಬೇರೆಬೇರೆಯಾಗಿರುತ್ತವೆ. ಅನೇಕ ಕುಲಗಳಿಗೆ ಜಾತ್ಯಾಚಾರ ಒಂದೇ ಆಗಿರಬಹುದು; ಕುಲಾಚಾರಗಳು ಬೇರೆಬೇರೆಯಾಗಿರುತ್ತವೆ. ಜಾತ್ಯಾಚಾರಗಳಿಗಾಗಲಿ, ಮತಾಚಾರಗಳಿಗಾಗಲಿ ಮಿತಿಯುಂಟು; ಶಾಸ್ತ್ರವುಂಟು. ದೇಶಾಚಾರ ಮತ್ತು ಕುಲಾಚಾರಗಳಿಗೆ ಮಿತಿಯೇ ಇಲ್ಲ; ಪ್ರಾಯಶಃ ಪ್ರಮಾಣವೂ ಸಿಕ್ಕುವುದಿಲ್ಲ. ಜಾತ್ಯಾಚಾರ ಮತ್ತು ಮತಾಚಾರಗಳು ಎಲ್ಲಾ ದೇಶದ ಜನರಿಗೂ ಎಲ್ಲ ಕುಲದವರಿಗೂ ಒಂದೇ ವಿಧವಾಗಿರುತ್ತದೆ. ದೇಶಾಚಾರ ಮತ್ತು ಕುಲಾಚಾರಗಳು ಮಾತ್ರ ಒಂದೊಂದು ದೇಶದವರಲ್ಲಿ ಒಂದೊಂದು ರೀತಿಯಲ್ಲಿರುತ್ತವೆ. ಇದು ಎಲ್ಲ ಮತದವರಿಗೂ ಸಾಮಾನ್ಯ ನಿಯಮ. ವೀರಶೈವರಲ್ಲಿ ಇಂಥ ದೇಶಾಚಾರಗಳೂ ಕುಲಾಚಾರಗಳೂ ಅನೇಕವಾಗಿವೆ. ಇವು ಯಾವುದೊಂದು ಕಟ್ಟಳೆಗೂ ಸಿಲುಕುವಂತಿಲ್ಲ.

ಪ್ರತಿಯೊಂದು ಧರ್ಮದಲ್ಲಿಯೂ ತತ್ತ್ವ ಮುಖ್ಯವಾದುದು. ಆ ತತ್ತ್ವವೇ ಆ ಧರ್ಮದ ಸಾರಾಂಶ. ಆದರೆ, ಆ ಮೂಲ ತತ್ತ್ವವನ್ನು ತಿಳಿಯಬಲ್ಲವರು ತೀರ ವಿರಳ. ತತ್ತ್ವ ಸ್ವರೂಪ ಯಾವಾಗಲೂ ಗಹನವಾಗಿರುತ್ತದೆ; ಸೂಕ್ಷ್ಮತರವಾಗಿರುತ್ತದೆ. ಇದನ್ನು ಸಾಮಾನ್ಯ ಜನರೂ ತಿಳಿಯಲೆಂಬ ಉದ್ದೇಶದಿಂದ ಪ್ರಾಜ್ಞರು ಆ ತತ್ತ್ವವನ್ನು ಕುರಿತು ಸುಂದರವಾದ ಸನ್ನಿವೇಶಗಳನ್ನು ನಿರ್ಮಿಸಿ ಕಥೆಗಳನ್ನು ಕಟ್ಟಿ ತತ್ತ್ವಬೋಧೆಯನ್ನು ಮಾಡುತ್ತಾರೆ. ಇದರಿಂದಲೇ ನಾನಾ ಶಾಸ್ತ್ರಗಳೂ, ಪುರಾಣಗಳೂ, ವ್ಯಾಖ್ಯಾನಗಳೂ, ಭಾಷ್ಯಗಳೂ, ಸಿದ್ಧಾಂತಗಳೂ, ಆಚಾರಗಳೂ, ಸಂಪ್ರದಾಯಗಳೂ ಹುಟ್ಟಿದುವು. ಯಾವುದೋ ನಿಗೂಢ ತತ್ತ್ವವನ್ನು ಮನಸ್ಸಿಗೆ ಹಿಡಿಯುವಂತೆ ಬೋಧಿಸಲು ರಾಮಾಯಣ, ಮಹಾಭಾರತ, ಗೀತೆ ಮತ್ತು ಅನೇಕ ಪುರಾಣಗಳ ರಚನೆಯಾದುವು. ಹಿಂದೂ ಧರ್ಮದ ವಿವಿಧ ಮತಗಳಲ್ಲಿಯೂ ಆಯಾ ಮತಧರ್ಮವನ್ನು ಬೋಧಿಸಲು ಇಂಥ ಅನೇಕ ಕಥೆಗಳೂ, ಪುರಾಣಗಳೂ ಹುಟ್ಟಿದುವು. ಜೈನ, ಬೌದ್ಧ ಮತ್ತು ಚಾರ್ವಾಕ ಧರ್ಮಗಳಲ್ಲಿಯೂ ಈ ಬಗೆಯ ವಾಙ್ಮಯ ಸೃಷ್ಟಿಯಾಯಿತು. ಎಲ್ಲ ಧರ್ಮಗಳೂ ಎಲ್ಲ ವಾಙ್ಮಯವನ್ನೂ ಅನುಸರಿಸಬೇಕೆಂಬ ನಿಯಮವಿಲ್ಲ. ಆದರೂ, ಎಲ್ಲ ಮತಗಳ ಗುರಿಯೂ ಒಂದೇ. ಇದು ಪ್ರಪಂಚದ ಎಲ್ಲ ಮತಗಳಿಗೂ ಅನ್ವಯಿಸುತ್ತದೆ. ಎಲ್ಲ ಧರ್ಮಗಳ ಸಂಸ್ಥಾಪಕರೂ ಪೂಜ್ಯರೇ. ಆ ಎಲ್ಲರ

ಸಂದೇಶವೂ ಶಾಂತಿ ಸಂದೇಶವೇ. ಎಲ್ಲ ಧರ್ಮಗಳೂ ಸತ್ಯದ ಕಡೆಗೇ ನಡೆ ತ್ತವೆ. ಯಾರಲ್ಲಿಯೂ ಧರ್ಮದ ದುರಾಭಿಮಾನವಿರಬಾರದು. ತನ್ನ ಧರ್ಮ ಶ್ರದ್ಧೆಯಿರಬೇಕು; ನಂಬುಗೆಯಿರಬೇಕು. ವಿವಿಧತೆಯಲ್ಲಿ ಏಕತೆಯಿರು ಹಿಂದೂ ಧರ್ಮದ ವೈಶಿಷ್ಟ್ಯ. ಹಿಂದೂ ಧರ್ಮ ಎಲ್ಲ ಧರ್ಮಗಳನ್ನೂ ಗೊಂಡಿದೆ; ಅದು ಎಲ್ಲ ಧರ್ಮಗಳಿಗೂ ಆಶ್ರಯಸ್ಥಾನವಾಗಿದೆ. ಅದೇ ಹಿರಿಮೆ. ಪ್ರತಿಯೊಬ್ಬ ಮತಾಚಾರ್ಯರೂ ತಮ್ಮ ಧರ್ಮವನ್ನು ಪ್ರತಿಪಾ ಅನ್ಯಧರ್ಮಗಳನ್ನು ಖಂಡನೆ ಮಾಡಿರುತ್ತಾರೆ. ಆದರೆ, ಇದು ಅನ್ಯ ದ್ವೇಷವಲ್ಲ; ಕೇವಲ ಸ್ವಮತಾಭಿಮಾನ. ತಮ್ಮ ಮತದಲ್ಲಿ ತಮ್ಮ ಶಿಷ್ಯರ ಸ್ಥಿರವಾಗಿರಬೇಕೆಂಬುದೇ ಅವರ ಉದ್ದೇಶ. ನಾನಾಮತಧರ್ಮಗಳಲ್ಲಿ ಇಂಥ ಗೌರವಭಾವನೆ ರೂಢಮೂಲವಾಗಿ ಬೆಳೆಯಬೇಕು. ಇದು ಸಂಸ್ಕೃ ಲಕ್ಷಣ.

ಮಾನವಜೀವಿ ಭೂಲೋಕದಲ್ಲಿ ಹುಟ್ಟಿ ಅನಂತಕೋಟಿ ವರ್ಷ ದುವು. ಅವನ ಬುದ್ಧಿ ವಿಕಾಸವಾಗುತ್ತ ಬಂದಂತೆ ಅವನು ಈ ಸೃಷ್ಟಿ ವೈ ವನ್ನು ಕುರಿತು ಚಿಂತನೆ ಮಾಡುತ್ತ ಬಂದನು. ವಿವಿಧ ಜೀವರಾಶಿ ಅವನ ಕೌ ವನ್ನು ಕೆರಳಿಸಿತು. ಗುಡುಗು, ಸಿಡಿಲು, ಮಳೆ, ಬಿರುಗಾಳಿ, ಹಗಲು, ಸೂರ್ಯೋದಯ, ಸೂರ್ಯಾಸ್ತಮಾನ, ಚಂದ್ರೋದಯ, ಚಂದ್ರಾಸ್ತ ಅನಂತ ನಕ್ಷತ್ರ ತೇಜೋಮಂಡಲ, ಜೀವಕೋಟಿಯ ಜನನ, ಮರಣ-ಇ ಅವನ ಕಲ್ಪನಾವಿಲಾಸದಲ್ಲಿ ಆಶ್ಚರ್ಯಕರವಾಗಿ ಸುಳಿದುವು. ಯಾವ ಒಂದು ಅದ್ಭುತ ಅದೃಷ್ಟ ಶಕ್ತಿ ಈ ಲೀಲಾ ವ್ಯಾಪಾರವನ್ನು ನಡೆಸುತ್ತಿದೆ ಅವನು ಮನಗಂಡನು. ಈ ಭಾವನಾಪ್ರಜ್ಞೆ ಕಾಲ ಕಾಲಕ್ಕೆ ಬೆಳೆಯುತ್ತ ಬುದ್ಧಿವಂತರು ಈ ಸೃಷ್ಟಿರಹಸ್ಯವನ್ನು ವಿವರಿಸುತ್ತ ಬಂದರು. ಇಂಥ ವಿಚಾರಮಥನ ಅತ್ಯಂತ ಪ್ರಾಚೀನ ಕಾಲದಲ್ಲಿಯೇ ನಡೆಯಿತು. ಅದೇ ಮತ. ಇಂಥ ಮತಗಳಲ್ಲಿ ಚಾರ್ವಾಕಮತವೂ ಒಂದು. ಚಾರ್ವಾಕ ಬಹಳ ಪ್ರಾಚೀನವಾದುದೆಂದು ತಿಳಿದುಬರುತ್ತದೆ. ಅವರು ಆತ್ಮ, ಜನ್ಮ ಅದೃಷ್ಟ, ಪರಲೋಕ ಮತ್ತು ಈಶ್ವರ ಇವುಗಳನ್ನು ಒಪ್ಪುವುದಿಲ್ಲ. ಪ್ರತ್ಯಕ್ಷ ಪ್ರಮಾಣವನ್ನು ಮಾತ್ರ ನಂಬುತ್ತಾರೆ. ನೆಲ, ನೀರು, ಗಾಳಿ, ಎಂಬ ನಾಲ್ಕು ತತ್ತ್ವಗಳನ್ನು ನಿಜವೆಂದು ಅಂಗೀಕರಿಸುತ್ತಾರೆ. ದೇಹ

ಎಲ್ಲವೂ ಅನಾದಿ; ಆದಿಯೆಂಬುದಿಲ್ಲ; ಈ ಪ್ರಪಂಚವನ್ನು ಯಾರೂ ಸೃಷ್ಟಿಸಲಿಲ್ಲ; ದೇವಲೋಕವಿಲ್ಲ; ನರಕಲೋಕವಿಲ್ಲ: ಮೋಕ್ಷ ಎಂಬುದಿಲ್ಲ; ಗೃಹಸ್ಥಾಶ್ರಮವೇ ಆಶ್ರಮ; ಸಂನ್ಯಾಸಾಶ್ರಮ ಸರಿಯಲ್ಲ ಎಂದು ಚಾರ್ವಾಕರು ನಂಬಿರುತ್ತಾರೆ. ಇದು ಅಂದಿನ ಜನಾಂಗದ ವಿಕಾಸ ಲಕ್ಷಣವನ್ನೂ ಬುದ್ಧಿಶಕ್ತಿಯ ಪರಿಮಿತಿಯನ್ನೂ ಸೂಚಿಸುತ್ತದೆ. ಇದನ್ನು ಲೋಕಾಯತ ಮತವೆಂದೂ ಕರೆಯುತ್ತಾರೆ.

ಬೌದ್ಧ ದರ್ಶನದಲ್ಲಿ ಜೀವಾತ್ಮ, ಪರಮಾತ್ಮ, ಜಗತ್ತು ಮತ್ತು ಪರಲೋಕ ಇವುಗಳನ್ನು ಪರಿಗಣಿಸಿಲ್ಲ.ಎಲ್ಲವೂ ನಶ್ವರ; ಎಲ್ಲ ವಸ್ತುಗಳೂ ಪ್ರತಿಕ್ಷಣದಲ್ಲಿಯೂ ನಾಶಹೊಂದುತ್ತವೆ; ಆದರೆ, ವಸ್ತು ಇದ್ದುದು ಇದ್ದಂತೆಯೇ ಕಾಣುತ್ತದೆ. ಇದು ಸೂಕ್ಷ್ಮವಿನಾಶ; ಸರ್ವಂ ಶೂನ್ಯಂ-ಎಂದು ಬೌದ್ಧರು ಹೇಳುತ್ತಾರೆ. ಲೋಕದಲ್ಲಿ ಮನೆ, ಮಠ, ಧನ, ಧಾನ್ಯ, ಪಶು, ಪಕ್ಷಿ, ಮೃಗ, ಮನುಷ್ಯ-ಎಲ್ಲ ವಸ್ತುಗಳೂ ನಾಶವಾಗುತ್ತವೆ. ಹೀಗೆ ವಸ್ತುಗಳ ಪರ್ಯವಸಾನ ಸ್ವಭಾವವನ್ನು ಅನುಲಕ್ಷಿಸಿ, ಬೌದ್ಧರು ಸರ್ವಂ ಶೂನ್ಯಂ ಎಂದರು. ಇದರಿಂದ ಶೂನ್ಯವಾದವೆಂಬ ಒಂದು ಸಿದ್ಧಾಂತ ಮೂಡಿತು. ಶೂನ್ಯಂ ತತ್ತ್ವಂ ಎಂದರೆ ತತ್ತ್ವವಿಲ್ಲವೇ ಇಲ್ಲ ಎಂದು ಅರ್ಥ. ಇದನ್ನು ಅಸದ್ವಾದವೆಂದು ಕರೆಯುತ್ತಾರೆ. ಇತರ ಎಲ್ಲ ದರ್ಶನಗಳನ್ನೂ ಸದ್ವಾದಗಳೆಂದು ಹೇಳುತ್ತಾರೆ. ಈ ಸತ್, ಅಸತ್, ಎಂಬ ಪದಗಳಿಗೆ ಉಂಟು, ಇಲ್ಲ; ವಸ್ತು, ಅವಸ್ತು; ಸತ್ಯಂ, ಶೂನ್ಯಂ-ಎಂದು ಅರ್ಥ.

ಶೂನ್ಯತಾವಾಸನಾಧಾನಾತ್ ಹೀಯತೆಭಾವವಾಸನಾ ।
ಕಿಂಚಿನ್ನಾಸ್ತೀತಿ ಚಾಭ್ಯಾಸಾತ್ ಸಾಪಿಪಶ್ಚಾತ್ ಪ್ರಹೀಯತೆ ॥

ಎಂದರೆ, ಶೂನ್ಯ ಭಾವನೆಯಿಂದ ಭಾವವಾಸನೆಗಳೆಲ್ಲವೂ ಶಾಂತವಾಗುತ್ತವೆ. ಯಾವುದೂ ಇಲ್ಲವೆಂದು ಅಭ್ಯಾಸವಾದರೆ ಶೂನ್ಯಭಾವನೆಯೆಂಬ ಭಾವನೆಯೂ ವಿನಾಶವಾಗುತ್ತದೆ. ಆದ್ದರಿಂದ ಶೂನ್ಯವೆಂಬುದು ವಸ್ತುರೂಪವೆಂದು ಹೇಳುವುವನ್ನು ವಿಚಾರಪರರು ಒಪ್ಪಲಾರರು. ಶರೀರದಲ್ಲಿ ಆತ್ಮನಿಲ್ಲ; ಪ್ರಾಣಿಗಳು ಕರ್ಮಾನುಸಾರ ಪುನರ್ಜನ್ಮವನ್ನು ಪಡೆಯುತ್ತವೆ; ಮನುಷ್ಯರು ದಯಾರ್ದ್ರ ಹೃದಯದಿಂದ ಬಾಳಬೇಕು ಎಂಬುದು ಬೌದ್ಧ ಧರ್ಮದ ಸಾರಾಂಶ. ಅವರು ಸಂನ್ಯಾಸವನ್ನು ಗೌರವಿಸುತ್ತಾರೆ. ವೀರಶೈವರು ಶೂನ್ಯತತ್ತ್ವವನ್ನು ವಿವೇಚಿಸುವ ರೀತಿಯೇ ಬೇರೆ. ಬೌದ್ಧರ ಶೂನ್ಯವಾದವೇ ಶಂಕರಾಚಾರ್ಯರ ಮಾಯಾ

ವಾದದ ಹಿನ್ನೆಲೆ; ಬಸವಣ್ಣನವರ ನೂತನ ವೀರಶೈವದ ಶೂನ್ಯತತ್ತ್ವದ ವ...
ವೆಂದು ಹೇಳಬಹುದು.

ಚಾರ್ವಾಕ ಮತ್ತು ಬೌದ್ಧದರ್ಶನಗಳಿಗಿಂತಲೂ ಜೈನದರ್ಶನದಲ್ಲಿ ವಿ...
ಶಕ್ತಿ ಮುಂದೆ ಹೋಗಿದೆ. ಜೈನರು ಆತ್ಮ, ಪುನರ್ಜನ್ಮ, ಪುಣ್ಯ, ಪಾಪ, ...
ಸ್ವರ್ಗ, ನರಕ, ಮೋಕ್ಷ, ಇವುಗಳನ್ನು ಒಪ್ಪುತ್ತಾರೆ. ಅವರು ಸೃಷ್ಟಿಕರ್ತ...
ಈಶ್ವರನೊಬ್ಬನಿದ್ದಾನೆಂಬುದನ್ನು ಅಂಗೀಕರಿಸುವುದಿಲ್ಲ. ಅವರ ಸಿದ್ಧಾಂತ...
ಸ್ಯಾದ್ವಾದವೆಂದು ಕರೆಯುತ್ತಾರೆ. ಜೈನಸಂನ್ಯಾಸಿ ಎಂದರೆ ತುಂಬ ವಿ...
ವೀರಶೈವದ ವಿರಕ್ತಿಗಿಂತಲೂ ಅತ್ಯಂತ ಕಠಿಣ. ಇತರ ಯಾವ ವೈದಿಕ ...
ದಲ್ಲಿಯೂ ಅಂಥ ವೀರ ವಿರಕ್ತಿಯನ್ನು ಕಾಣುವಂತಿಲ್ಲ. ಸಂನ್ಯಾಸ ವೇದ...
ಸಮ್ಮತವಲ್ಲ. : ಗೃಹಸ್ಥರಾಗಲು ಅನರ್ಹರಾದ ಕುಂಟ, ಕುರುಡ, ಮೂಗ ...
ಲಾದವರು ಜೀವನೋಪಾಯಕ್ಕೆ ಮಾತ್ರ ಸಂನ್ಯಾಸಿಗಳಾಗಬಹುದೆಂದು ಸ್ಮೃ...
ಗಳಲ್ಲಿ ಉಕ್ತವಾಗಿದೆ. ಬ್ರಾಹ್ಮಣರಲ್ಲದವರು ಸಂನ್ಯಾಸವನ್ನು ಪಡೆಯಬಾ...
ಬುದು ಶಂಕರಾಚಾರ್ಯರ ಮತ. ಸಂನ್ಯಾಸಾಶ್ರಮವನ್ನು ಹೊಂದಬಲ್ಲ...
ಕಾರಿ, ಕಾಲ, ದೇಶ, ವೇಷ, ಕಾರಣ-ಮೊದಲಾದ ವಿಚಾರಗಳಲ್ಲಿ ಬಹಳ ಭಿ...
ಭಿಪ್ರಾಯಗಳಿವೆ. ಜೈನಸಿದ್ಧಾಂತದಲ್ಲಿ ತತ್ತ್ವವು ನಿತ್ಯವೇ, ಅನಿತ್ಯವೇ, ಭಿನ್ನ...
ಅಭಿನ್ನವೇ, ಕ್ಷಣವೇ, ಸ್ಥಿರವೇ, ಸತ್ಯವೇ, ಮಿಥ್ಯೆಯೇ ಎಂಬ ಜಿಜ್ಞಾಸೆಯ...
ಇದನ್ನು ಅನೇಕಾಂತ ವಾದವೆಂದೂ ಹೇಳುತ್ತಾರೆ. ಶೂನ್ಯವಾದದಲ್ಲಿ ಶೂನ್ಯ...
ಭಾವನೆ ಸರ್ವ ಭಾವನೆಯನ್ನೂ ಹೋಗಲಾಡಿಸಿ ತಾನೂ ಲಯವಾಗುವ...
ಅನೇಕಾಂತ ಸಿದ್ಧಾಂತ ಎಲ್ಲದರಲ್ಲಿಯೂ ಅನೇಕಾಂತವನ್ನು ತೋರಿಸಿ ತಾ...
ಅನೇಕಾಂತವಾಗುತ್ತದೆ. ವೀರಶೈವರ ಶೂನ್ಯತತ್ತ್ವದಲ್ಲಿ ಈ ಅನೇಕಾಂತ ತತ್ತ್...
ವನ್ನು ಅಳವಡಿಸಬಹುದೆ? ಎಂಬುದನ್ನು ತತ್ತ್ವವೇತ್ತರು ಚಿಂತನೆ...
ಬಹುದು ಜೈನರು ಆ ಮತ ತತ್ತ್ವಗಳಿಗೆ ಒಳಪಡದ ಎಲ್ಲ ತತ್ತ್ವಗಳ...
ಮಿಥ್ಯಾತತ್ತ್ವಗಳೆಂದು ಹೇಳುತ್ತಾರೆ. ಆದ್ದರಿಂದ ಜೈನರ ಮಿಥ್ಯಾದೃಷ್ಟಿ ...
ಶೈವರ ಶೂನ್ಯದೃಷ್ಟಿಯಿಂದ ತೀರಾ ಭಿನ್ನವಾಗಿದೆ.

ಸಾಂಖ್ಯರೂ ನಿರೀಶ್ವರವಾದಿಗಳು. ಈ ಸಾಂಖ್ಯದಲ್ಲಿ ಒಂದು ಪಂ...
ದವರು ಈಶ್ವರನಿದ್ದಾನೆಂಬುದನ್ನು ಒಪ್ಪುತ್ತಾರೆ. ಇದು ಸೇಶ್ವರಸಾಂಖ್ಯ...
ಪಾತಂಜಲರೆಂಬ ಯೋಗಸಿದ್ಧಾಂತದವರನ್ನು ಸೇಶ್ವರಸಾಂಖ್ಯರೆಂದು ಕರೆ...

ತ್ತಾರೆ. ಪಂಚಭೂತಗಳೂ, ಪಂಚತನ್ಮಾತ್ರೆಗಳೂ, ಪಂಚಜ್ಞಾನೇಂದ್ರಿಯ ಗಳೂ, ಪಂಚಕರ್ಮೇಂದ್ರಿಯಗಳೂ, ಪಂಚಕರಣೇಂದ್ರಿಯಗಳೂ ಸೇರಿ ಪಂಚ ವಿಂಶತಿತತ್ತ್ವಗಳೆಂದು ಈ ಮತದವರು ಹೇಳುತ್ತಾರೆ. ಪಂಚಕ್ಲೇಶಗಳನ್ನು ಪಂಚಚಿತ್ತಪರಿಕರ್ಮಗಳಿಂದ ನಿವಾರಿಸಿ, ಸಾಲಂಬನಧ್ಯಾನದಿಂದ ಪ್ರಕೃತಿಪುರುಷ ರನ್ನು ವಿಂಗಡಿಸಿ, ಪ್ರಕೃತಿ ಶಾಂತವಾಗುತ್ತಿರಲು ಪುರುಷ ಸ್ವಪ್ರಕಾಶತಾಸ್ಥಿತಿ ಯಲ್ಲಿರುವುದೇ ಮುಕ್ತಿ ಎಂದು ಹೇಳುತ್ತಾರೆ. ಸಾಂಖ್ಯರು ಸತ್ಯವಾದಿಗಳು; ಬೌದ್ಧರು ಶೂನ್ಯವಾದಿಗಳು. ವೀರಶೈವ ಶರಣರು ಹೇಳುವ ಶೂನ್ಯತತ್ತ್ವ ಯಾವುದು ? ಅದು ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತದಿಂದ ಪ್ರತ್ಯೇಕವಾಗಿದೆಯೆ? ಇದಕ್ಕೆ ಸ್ವಯಂಸ್ಥಾನವಿದೆಯೆ ? ಎಂಬುದನ್ನು ಪರಿಶೀಲಿಸಬೇಕು.

ಪಾತಂಜಲಯೋಗದರ್ಶನದಲ್ಲಿ ಶೂನ್ಯತತ್ತ್ವವನ್ನು ವಿವೇಚನೆ ಮಾಡಿ ದಂತಿಲ್ಲ. ಯೋಗದಲ್ಲಿ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾ ಹಾರ, ಧ್ಯಾನ, ಧಾರಣ, ಸಮಾಧಿ ಎಂಬ ಅಷ್ಟಾಂಗಗಳಿವೆ. ಇಂಥ ಯೋಗಾ ಭ್ಯಾಸದಿಂದ ಜೀವಾತ್ಮ ಪರಮಾತ್ಮರಿಗೆ ಆಗುವ ಐಕ್ಯವೇ ಮುಕ್ತಿ. ಇದು ಉಪ ದೇಶ ಶಾಸ್ತ್ರವೇ ಹೊರತು ವಿಚಾರಶಾಸ್ತ್ರವಲ್ಲ. ಯೋಗದರ್ಶನ ವೇದಾಂತ ಸಿದ್ಧಾಂತವಲ್ಲ; ಇದು ಆಗಮಸಿದ್ಧಾಂತವೆಂದು ಕೆಲವರು ಹೇಳುತ್ತಾರೆ. ಆಗಮ ಸಂಪ್ರದಾಯವನ್ನು ಪೂರ್ವಮೀಮಾಂಸಕರು ಒಪ್ಪುವುದಿಲ್ಲ. ಈ ಯೋಗಸಿದ್ಧಿ ಯಿಂದ ಸಾಧಕ ಸರ್ವಜ್ಞನಾಗಬಲ್ಲ. ಸಿದ್ಧಪುರುಷ ಚಂದ್ರಮಂಡಲದಲ್ಲಿ ಸಂಚ ರಿಸಬಲ್ಲ; ಕಲ್ಲುಬಂಡೆಯಲ್ಲಿ ಸೇರಿಹೋಗಬಲ್ಲ ! ಶಿವಯೋಗಿಗಳ ಮತ್ತು ಶಿವಶರ ಣರ ಪವಾಡಗಳು ಈ ದೃಷ್ಟಿಗೆ ಮಾತ್ರ ಗೋಚರ ! ಭಗವದ್ಗೀತೆಯಲ್ಲಿ ಪತಂಜ ಲಿಯ ಯೋಗಸಿದ್ಧಾಂತವನ್ನು ಹೇಳಿದೆ.

ಅದ್ವೈತದಲ್ಲಿ ಶೂನ್ಯತತ್ತ್ವವನ್ನು ವೀರಶೈವ ಶರಣರು ಹೇಳುವ ರೀತಿಯಲ್ಲಿ ಕಾಣುವಂತಿಲ್ಲ. ಅದ್ವೈತವೆಂದರೆ ಎರಡಿಲ್ಲದಿರುವುದು ಎಂದರೆ ಒಂದು ಎಂದು ಅರ್ಥ. ದ್ವಯೋರ್ಭಾವಃದ್ವಿತಾ, ದ್ವಿತೈವದ್ವೈತಂ, ನದ್ವೈತಂ ಅದ್ವೈತಂ ಎಂದು ಪರಬ್ರಹ್ಮತತ್ತ್ವ ಒಂದೇ ಸತ್ಯ; ಉಳಿದುದೆಲ್ಲವೂ ಸ್ವಪ್ನಪ್ರಪಂಚದಂತೆ ಮಿಥ್ಯೆ ಎಂದು ಶಂಕರಾಚಾರ್ಯರು ಬೋಧಿಸಿರುತ್ತಾರೆ. ಜಗತ್ಕರ್ತೃವೆನಿಸಿದ ಬ್ರಹ್ಮ ಅವಾಙ್ಮನಸಗೋಚರ. ಅದು ದೇಶಪರಿಚ್ಛೇದ, ಕಾಲಪರಿಚ್ಛೇದ ಮತ್ತು ವಸ್ತು ಪರಿಚ್ಛೇದ ಎಂಬ ಪರಿಚ್ಛೇದತ್ರಯ ಶೂನ್ಯವಾದುದು. "ಏಕಮೇವಾ

ದ್ವಿತೀಯಂ ಬ್ರಹ್ಮಾ" ಎಂಬ ತತ್ತ್ವ ಉಪಾಧಿವಶದಿಂದ ನಾನಾರೀತಿ
ತೋರುತ್ತದೆ ಎಂದು ನಿಜಗುಣರು ಪರಮಾನುಭವ ಬೋಧೆಯಲ್ಲಿ ಹೇಳಿದ್ದಾ
ಋಗ್ವೇದದಲ್ಲಿ "ಪ್ರಜ್ಞಾನಂಬ್ರಹ್ಮಾ" ಎಂದೂ, ಯಜುರ್ವೇದದಲ್ಲಿ "
ಬ್ರಹ್ಮಾಸ್ಮಿ" ಎಂದೂ, ಸಾಮವೇದದಲ್ಲಿ "ತತ್ತ್ವಮಸಿ" ಎಂದೂ, ಅಥ
ವೇದದಲ್ಲಿ "ಅಯಮಾತ್ಮಾಬ್ರಹ್ಮಾ" ಎಂದೂ ಉಕ್ತವಾಗಿದೆ. ಈ ನಾಲ್ಕು
ಗಳನ್ನೂ ಮಹಾವಾಕ್ಯ ಚತುಷ್ಟಯವೆಂದು ಕರೆಯುತ್ತಾರೆ. ನೀರಿಲ್ಲದ
ಭೂಮಿಯಲ್ಲಿ ನೀರು ಇರುವಂತೆ ಕಾಣುವುದೂ, ನೀಲವರ್ಣವಿಲ್ಲದ
ಆಕಾಶ ನೀಲವರ್ಣವಾಗಿ ತೋರುವುದೂ, ಹಗ್ಗವನ್ನು ಕಂಡು ಹಾವೆಂದು
ಗೊಳ್ಳುವುದೂ, ಶುಕ್ತಿಯನ್ನು ನೋಡಿ ಬೆಳ್ಳಿಯೆಂದು ತಿಳಿದುಕೊಳ್ಳು
ಹೇಗೋ ಹಾಗೆಯೇ ನಿರ್ಗುಣನೂ ನಿರಾಕಾರನೂ ಆದ ಪರಮಾತ್ಮನಲ್ಲಿ
ಇರುವ ಜಗತ್ತೂ, ಅದರಿಂದುಂಟಾಗುವ ಸುಖದುಃಖಗಳೂ ಇರುವಂತೆ ಗೋ
ಸುತ್ತವೆ. ಇವೆಲ್ಲಾ ಮಿಥ್ಯೆ; ಸತ್ಯವಲ್ಲ. ಪ್ರಪಂಚ ಅನಿರ್ವಚನೀಯ
ಈ ಸಿದ್ಧಾಂತದಲ್ಲಿ ಹೇಳಿದೆ. ಇದು ಬ್ರಹ್ಮದ ಪರಿಣಾಮ; ಅಷ್ಟೆ. ಬ್ರಹ್ಮದ
ಮಾತ್ರದಿಂದ ಪ್ರಳಯ ಕಾಲದಲ್ಲಿ ಉಳಿದ ಪರಮಾಣು ಸಮುದಾಯ
ಈ ಜಗತ್ತು, ಬೀಜದಿಂದ ಮೊಳಕೆ ತೋರುವಂತೆ, ಹೊಸದಾಗಿ ಹುಟ್ಟು
ಪ್ರಪಂಚ ಮತ್ತು ಬ್ರಹ್ಮ ಒಂದೇ ಅಲ್ಲ; ಅವು ಬೇರೆಬೇರೆ ಎಂದು ಹೇಳು
ಈ ಪ್ರಪಂಚ ಬ್ರಹ್ಮದಲ್ಲಿ ಕೇವಲ ಕಲ್ಪಿತ ಮಿಥ್ಯೆ. ಶರಣರು ಅದ್ವೈತದ
ಯನ್ನು ಒಪ್ಪುವುದಿಲ್ಲ. ಶೂನ್ಯದಿಂದ ಜಗತ್ತು ಹುಟ್ಟುತ್ತದೆ ಮತ್ತು
ಶೂನ್ಯದಲ್ಲಿಯೇ ಅಡಗಿಹೋಗುತ್ತದೆ ಎಂದು ಹೇಳುತ್ತಾರೆ. ಬ್ರಹ್ಮಸತ್ಯ; ಜಗ
ಸತ್ಯ–ಎಂದು ವೀರಶೈವರು ನಂಬುತ್ತಾರೆ. ಜಗತ್ತನ್ನು ದೇವರು ಸೃಷ್ಟಿಸು
ಅದು ತಾನಾಗಿಯೇ ಹುಟ್ಟುತ್ತದೆ. ಇದು ಪ್ರಕೃತಿ ನಿಯಮ; ಈ ಜ
ಶಾಶ್ವತ ಎಂದು ಜೈನದರ್ಶನ ತಿಳಿಸುತ್ತದೆ. ಬೌದ್ಧರು ಸರ್ವಶೂನ್ಯವನ್ನು
ಕರಿಸುತ್ತಾರೆ. ಶಂಕರಾಚಾರ್ಯರ ಮಾಯಾ ವಾದ ಬಹುಶಃ ಬೌದ್ಧರ
ವಾದ ನಿರಸನವಾಗಿದೆಯೆಂದು ಹೇಳಬಹುದು. ರಾಮಾನುಜಾಚಾ
ಸಂಸ್ಥಾಪಿಸಿದ ವಿಶಿಷ್ಟಾದ್ವೈತಮತದಲ್ಲಿ ಶಂಕರಾಚಾರ್ಯರ ಮಾಯಾ
ವಾಗಲಿ, ಶಿವಶರಣರ ಶೂನ್ಯತತ್ತ್ವವಿವೇಚನೆಯಾಗಲಿ ಕಂಡುಬರುವುದಿಲ್ಲ.
ಜೀವಾತ್ಮರಿಗೂ ಶರೀರಭೇದವೇ ಹೊರತು ಸ್ವರೂಪದಲ್ಲಿ ಯಾವ ಭೇದವೂ

ಪ್ರತಿ ಜೀವಾತ್ಮನೂ ಪರಮಾತ್ಮ ಸಾಮ್ಯವೆಂಬ ಪರಮ ಪುರುಷಾರ್ಥವನ್ನು ಹೊಂದಬಹುದು. ಜಾತಿ, ಕುಲ, ಗೋತ್ರ, ಪಶು, ಪಕ್ಷಿ, ಮೃಗ ಮೊದಲಾದ ಯಾವ ರೂಪದಲ್ಲಿದ್ದರೂ ಜೀವಾತ್ಮರು ಮೋಕ್ಷವನ್ನು ಪಡೆಯಬಹುದು. ಪ್ರಪಂಚಕ್ಕೂ ಪರಮಾತ್ಮನಿಗೂ ಶರೀರಾತ್ಮಭಾವಸಂಬಂಧವಿರುತ್ತದೆ. ಪರಮಾತ್ಮ ಎಂಬ ತತ್ತ್ವದಲ್ಲಿ ಲಕ್ಷ್ಮೀನಾರಾಯಣ ಎಂಬ ಎರಡು ವಸ್ತುಗಳೂ ಇವೆ. ವಿಶಿಷ್ಟಾದ್ವೈತ ಸಿದ್ಧಾಂತವನ್ನು ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತ ಬಹಳ ಮಟ್ಟಿಗೆ ಹೋಲುತ್ತದೆ.

ಮಧ್ವಾಚಾರ್ಯರ ದ್ವೈತಸಿದ್ಧಾಂತದಲ್ಲಿ ಶೂನ್ಯತತ್ತ್ವದ ಸುಳಿವಿಲ್ಲ. ಅವರಲ್ಲಿ ಪರಮಾತ್ಮ ಎಂದರೆ ಸರ್ವಜ್ಞ; ಸರ್ವಶಕ್ತ; ಸರ್ವಾಂತರ್ಯಾಮಿ, ನಿರತಿಶಯ ಜ್ಞಾನಸಂಪನ್ನ; ಪರಮಾನಂದಸ್ವರೂಪ; ಕಲ್ಯಾಣಗುಣಪರಿಪೂರ್ಣ; ಅನಂತ; ಅಚಿಂತ್ಯ. ರೂಪಗುಣಕ್ರಿಯಾ ಮೊದಲಾದುವು ಅವನ ಸ್ವರೂಪ ವಲ್ಲಿಯೇ ಸೇರಿರುತ್ತವೆ. ಪರಮಾತ್ಮನ ಸೃಷ್ಟಿಯೇ ಈ ಪ್ರಪಂಚ. ಲಕ್ಷ್ಮೀ ಪರಮಾತ್ಮನ ಅಧೀನಳಾದ ಚೇತನವಸ್ತು. ಅವಳು ಪರಮಾತ್ಮನಿಗಿಂತ ಕಡಿಮೆ; ಆದರೆ ಉಳಿದ ಸಕಲಜೀವರುಗಳಿಗಿಂತಲೂ ಹೆಚ್ಚು. ಜೀವಾತ್ಮರು ಅಸಂಖ್ಯಾತರು. ಚೈತನ್ಯಸ್ವರೂಪದಿಂದ ಎಲ್ಲರೂ ಸಮ. ಆದರೆ, ಅವರಲ್ಲಿ ತರತಮಭೇದವುಂಟು. ಮೋಕ್ಷದಲ್ಲಿ ಸಾಲೋಕ್ಯ, ಸಾಮೀಪ್ಯ ಸಾರೂಪ್ಯ, ಸಾಯುಜ್ಯ ಎಂದು ನಾಲ್ಕು ವಿಧ. ಸಾಯುಜ್ಯವೆಂಬುದು ದೇವತೆಗಳಿಗೆ ಮಾತ್ರ ಉಂಟು. ವೈಕುಂಠ ಮಹಾ ಪ್ರಳಯದಲ್ಲಿಯೂ ನಾಶವಾಗುವುದಿಲ್ಲ. ಲಕ್ಷ್ಮೀನಾರಾಯಣ ಸದಾ ರಾರಾಜಿಸು ತ್ತಿರುವನು.

ವೇದ ಧರ್ಮಗಳಲ್ಲಿ ಜೀವ, ಜಗತ್ತು, ಈಶ್ವರ ಇವುಗಳ ವಿಚಾರವನ್ನು ಹೇಳಿದೆ. ಈಶ್ವರನೊಬ್ಬನೇ ಸರ್ವಶಕ್ತ; ಸರ್ವಚೈತನ್ಯಸ್ವರೂಪ. ಅವನು ಪ್ರಪಂಚ ವನ್ನು ಸೃಷ್ಟಿಸುತ್ತಾನೆ. ಜೀವರಿಗೆ ಮುಕ್ತಿಯುಂಟು. ಚಾರ್ವಾಕ, ಜೈನ, ಬೌದ್ಧ ಮೊದಲಾದ ಅವೈದಿಕ ಧರ್ಮಗಳಲ್ಲಿ ಜೀವ, ಜಗತ್ತು, ಈಶ್ವರ–ಈ ತತ್ತ್ವಗಳ ವಿಚಾರದಲ್ಲಿ ಒಮ್ಮತವಿಲ್ಲ. ಜೀವ, ಜಗತ್ತು ಈಶ್ವರ ಈ ತತ್ತ್ವತ್ರಯವನ್ನು ಕುರಿತು ವಿವೇಚನೆ ಮಾಡಿರುತ್ತವೆ. ಈ ಪ್ರಪಂಚ ಹೊಸದಾಗಿ ಸೃಷ್ಟಿಯಾಗ ಲಿಲ್ಲ. ವಸ್ತುಗಳೆಲ್ಲಾ ಸೂಕ್ಷ್ಮಸ್ಥಿತಿಯಿಂದ ಹುಟ್ಟಿಬಂದು ಕೆಲವುಕಾಲ ಸ್ಥೂಲ ಸ್ಥಿತಿಯಲ್ಲಿದ್ದು, ಅನಂತರ ಸೂಕ್ಷ್ಮಸ್ಥಿತಿಗೇ ಹೋಗುತ್ತವೆ. ಇದು ಪ್ರಕೃತಿ ಧರ್ಮ. ನಿತ್ಯ ಸೃಷ್ಟಿ: ನಿತ್ಯ ಸ್ಥಿತಿ; ನಿತ್ಯ ಪ್ರಳಯ. ಈ ಪ್ರಕೃತಿ ಭಗವಂತನ

ಶಕ್ತಿ. ಈ ಶಕ್ತಿಯೇ ಜಗತ್ತಿನ ಮೂಲ. ಶರಣರು ಬಹುಶಃ ಈ ಶಕ್ತಿ
ಶೂನ್ಯವೆಂದು ಹೇಳಿರುತ್ತಾರೆ. ಪ್ರಕೃತಿಯ ಮೂಲಕ ಈಶ್ವರ ಜಗತ್ತನ್ನು
ಸುತ್ತಾನೆ. ಮೊದಲು ಅವನಿಂದ ಅವ್ಯಕ್ತ ಬರುತ್ತದೆ. ಆ ಅವ್ಯಕ್ತದಿಂದ
ತನ್ಮಾತ್ರಗಳು, ಆ ಪಂಚತನ್ಮಾತ್ರಗಳಿಂದ ಪಂಚಭೂತಗಳು, ಆ ಪಂಚ
ಗಳಿಂದ ಚರಾಚರ ಪ್ರಪಂಚವೆಲ್ಲ ಸೃಷ್ಟಿಯಾಗುತ್ತದೆ. ಇಂಥ ಅನೇಕ ಬ್ರಹ್ಮಾ
ಗಳನ್ನು ಆ ದಿವ್ಯಶಕ್ತಿ ಸೃಷ್ಟಿಸಬಲ್ಲುದು. ಆದರಿಂದಲೇ ಭಗವಂತನನ್ನು
ಲಾಂಡಕೋಟಿ ಬ್ರಹ್ಮಾಂಡನಾಯಕ ಎಂದು ಕರೆಯುತ್ತಾರೆ. ಅವನ ಸೃಷ್ಟಿ
ಅವನಿಗೇ ಅಧೀನ. ಈ ಸೃಷ್ಟಿಯೆಲ್ಲಾ ಅವನಿಂದ ಬಂದಿದೆ. ಇದಕ್ಕೆ ಉಪಾ
ಕಾರಣನೂ ಅವನೇ; ನಿಮಿತ್ತಕಾರಣನೂ ಅವನೇ. ಈ ಸೃಷ್ಟಿ ಅ
ಹೊರಗೆ ಇಲ್ಲ. ಇದೆಲ್ಲಾ ಅವನಲ್ಲಿಯೇ ಇದೆ. ಅವನು ಎಲ್ಲದರಲ್ಲಿಯೂ ಇ
ಕೊನೆಗೆ ಅದು ಅವನಲ್ಲಿಯೇ ಸೇರಿಹೋಗುತ್ತದೆ. ಈಶ್ವರನ ಲೀಲೆ ಅಗಾ
ದುದು. ಅವನನ್ನು ಯಾವ ಹೆಸರಿನಿಂದಬೇಕಾದರೂ ಕರೆಯಬಹುದು;
ರೂಪದಿಂದಬೇಕಾದರೂ ಆರಾಧಿಸಬಹುದು. ಅವನೇ ಪರಬ್ರಹ್ಮ; ಅವನೇ
ಮಾತ್ಮ. ವೀರಶೈವರು ಅವನನ್ನು ಮಹಾಲಿಂಗವೆನ್ನುತ್ತಾರೆ. ಅವನು ನಿರಾ
ನಿರ್ಗುಣ, ನಿರಂಜನ, ನಿರುಪಮ. ಅವನನ್ನು ಸಗುಣರೂಪದಿಂದ-ದಿವ್ಯ
ವಿಗ್ರಹರೂಪದಿಂದ-ಆರಾಧಿಸಬಹುದು. ಭಗವಂತನನ್ನು ಸಾಕ್ಷಾತ್ಕಾ
ಕೊಳ್ಳಲು ನಾಲ್ಕು ಮಾರ್ಗಗಳಿವೆ. ಅವೇ ರಾಜಯೋಗ, ಜ್ಞಾನಯೋಗ,
ಯೋಗ ಮತ್ತು ಭಕ್ತಿಯೋಗ. ಇವೆಲ್ಲ ಯೋಗಗಳ ಸಮನ್ವಯವೇ ಶಿವ
ವೆಂದು ವೀರಶೈವರು ಹೇಳುತ್ತಾರೆ. ಹಿಂದೂಧರ್ಮ ಸನಾತನವಾದುದು;
ಪೂರ್ಣವಾದುದು. ಈ ಧರ್ಮದಲ್ಲಿ ಅನೇಕ ಮತಗಳು ಹುಟ್ಟಿದುವು;
ಶಾಖೋಪಶಾಖೆಗಳಾದುವು. ಯಾವುದೊಂದು ಮತವೇ ಆಗಲಿ ಅದು
ಯಾದಾಗ ಯಾವ ರೀತಿಯಲ್ಲಿತ್ತೋ ಅದೇ ರೀತಿಯಾಗಿ ಇರಲು ಸಾಧ್ಯ
ಕಾಲಕಾಲಕ್ಕೆ ಅನೇಕ ಹೊಸ ಸಂಪ್ರದಾಯಗಳು ತಲೆದೋರುತ್ತವೆ;
ಸಂಪ್ರದಾಯಗಳು ಮರೆಯಾಗುತ್ತವೆ. ಆಚಾರವಿಚಾರ ಪ್ರಕ್ರಿಯೆಗಳಲ್ಲಿ
ಗಳಾಗುವುದೂ ಸಹಜ. ಭಕ್ತಕೋಟಿಯನ್ನು ಉದ್ಧಾರ ಮಾಡಲು
ಮಹಾಪುರುಷರು ಅವತಾರ ಮಾಡುತ್ತಾರೆ. ಅಂಥವರನ್ನು ಲೋಕ
ತ್ತದೆ. ಆ ಮಹಾಪುರುಷನ ಸೂತ್ರವಿಡಿದು ಅನೇಕರು ಆ ಸಂಪ್ರದಾಯ

ಅನುಸರಿಸುತ್ತ ಬರುತ್ತಾರೆ; ಆ ಸಂಪ್ರದಾಯದ ಧರ್ಮಕ್ಷೇತ್ರವನ್ನು ಎಂದರೆ ಗುರುಪೀಠವನ್ನು ಸ್ಥಾಪಿಸುತ್ತಾರೆ. ಇಂಥ ಯಾವ ಪೀಠವಾಗಲಿ ಅದು ತನ್ನ ಪ್ರಾಚೀನ ಸಂಪ್ರದಾಯವನ್ನು ಅನುಸರಿಸಿಕೊಂಡೇಬರುತ್ತದೆ.

ಪ್ರತಿಯೊಂದು ಮತಸ್ಥಾಪನೆಯ ಕಾಲದಲ್ಲಿಯೂ ಆಯಾ ಮತಸ್ಥಾಪಕರು ತಮ್ಮ ತಮ್ಮ ಗುರುಪೀಠಗಳನ್ನು ಸ್ಥಾಪಿಸಿದುದು ಕಂಡುಬರುತ್ತದೆ. ಆ ಪ್ರಾಚೀನ ಪೀಠಗಳ ಸಂಪ್ರದಾಯವನ್ನು ಅನುಸರಿಸಿಕೊಂಡು ಅನೇಕ ಗುರುಪೀಠಗಳು ಕಾಲಕ್ರಮದಲ್ಲಿ ಸ್ಥಾಪನೆಯಾದಂತೆಯೂ ಗೊತ್ತಾಗುತ್ತದೆ.ಆದ್ದರಿಂದ, ಅದ್ವೈತಗುರುಪೀಠಗಳೂ, ವಿಶಿಷ್ಟಾದ್ವೈತ ಗುರುಪೀಠಗಳೂ, ದ್ವೈತ ಗುರುಪೀಠಗಳೂ ಪ್ರಾಚೀನಕಾಲದಲ್ಲಿಯೇ ಸ್ಥಾಪನೆಯಾದುವು. ಈ ಗುರುಪೀಠಗಳನ್ನು ಸಿಂಹಾಸನಗಳೆಂದು ಕರೆಯುತ್ತಾರೆ. ಈ ಸಂಪ್ರದಾಯಗಳಲ್ಲಿ ಕಾಲಾನಂತರ ಸ್ಥಾಪನೆಯಾದ ಗುರುಪೀಠಗಳನ್ನೂ ಸಿಂಹಾಸನಗಳೆಂದು ಗೌರವಿಸುತ್ತಾರೆ. ಬಹಳಮಟ್ಟಿಗೆ ಶೈವಸಂಪ್ರದಾಯದ ಗುರುಪೀಠಗಳ ಗುರುಗಳು ತಮ್ಮನ್ನು ಜಗದ್ಗುರು ಎಂದು ಕರೆದುಕೊಳ್ಳುತ್ತಾರೆ. ವೈಷ್ಣವ ಸಂಪ್ರದಾಯದ ಗುರುಪೀಠಗಳಲ್ಲಿ ಈ ಪರಿಪಾಠವಿದ್ದಂತೆ ಕಂಡುಬರುವುದಿಲ್ಲ. ಜೈನರಲ್ಲಿಯೂ ಇಂತಹ ಹವ್ಯಾಸವಿಲ್ಲ. ವೀರಶೈವರಲ್ಲಿ ಗುರುಪೀಠಗಳೇ ಅಲ್ಲದೆ, ವಿರಕ್ತ ಮಠಗಳೂ ಉಂಟು. ಇಂಥ ಪಂಥ ಯಾವ ವೈದಿಕ ಮತದಲ್ಲಿಯೂ ಇಲ್ಲ. ಇವರು ವಿರಕ್ತರಾದರೂ ತಮ್ಮ ಪೀಠವನ್ನು ವಿರಕ್ತ ಪೀಠವೆಂದಾಗಲಿ, ತಮ್ಮನ್ನು 'ಜಗದ್ವಿರಕ್ತರು' ಎಂದಾಗಲಿ ಕರೆದುಕೊಳ್ಳುವುದಿಲ್ಲ. ಈ ವಿರಕ್ತರು ತಮ್ಮ ಪೀಠವನ್ನು ಸಿಂಹಾಸನವೆಂದೂ, ತಮ್ಮನ್ನು 'ಜಗದ್ಗುರು' ಎಂದೂ ಕರೆದುಕೊಳ್ಳುತ್ತಾರೆ. ಇದೊಂದು ವೈಶಿಷ್ಟ್ಯ! ವಿರಕ್ತಪದವಿಗಿಂತಲೂ ಗುರುಪದವಿ ಮಿಗಿಲೆಂಬ ನಂಬುಗೆ ವಿರಕ್ತರಲ್ಲಿರಬಹುದು ! ಈ ವಿರಕ್ತ ಪೀಠವನ್ನು ವಿರಕ್ತ ಸಿಂಹಾಸನ ಎಂದು ಕರೆಯುವುದಿಲ್ಲ; ಅದನ್ನು ಶೂನ್ಯಸಿಂಹಾಸನವೆಂದು ಕರೆಯುತ್ತಾರೆ. ಬಸವಣ್ಣನವರು ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣಪಟ್ಟಣದಲ್ಲಿ ತಮ್ಮ ಮಹಮನೆಯ ಶಿವಾನುಭವ ಮಂಟಪದಲ್ಲಿ ಶರಣಗೋಷ್ಠಿಯ ಅಧ್ಯಕ್ಷಪೀಠವೆಂದು ಶೂನ್ಯಸಿಂಹಾಸನವನ್ನು ಸ್ಥಾಪಿಸಿದರೆಂದು ಶರಣವಾಙ್ಮಯದಿಂದ ತಿಳಿದುಬರುತ್ತದೆ. ಶರಣತತ್ತ್ವ ಹೃದಯಶಿವಾನುಭವ ಮಂಟಪದಲ್ಲಿ ಶೂನ್ಯಸಿಂಹಾಸನ ಎಂದೆಂದೂ ಮೆರೆಯುತ್ತಿರಲಿ ! ಎಂದೆಂದೂ ಅನುಭವ ಸಿಂಹಾಸನವಾಗಿ ಬೆಳಗುತ್ತಿರಲಿ.

# ತರಂಗ ೨.

## ಸನಾತನ ವೀರಶೈವ; ಶಿವಾಗಮಹೃದಯ

ತ್ರಯೀಸಾಂಖ್ಯಂಯೋಗಃ ಪಶುಪತಿಮತಂ ವೈಷ್ಣವಮಿತಿ ।
ಪ್ರಭಿನ್ನೆಪ್ರಸ್ಥಾನೆಪರಮಿದಮದಃ ಪಥ್ಯಮಿತಿಚ ॥
ರುಚೀನಾಂವೈಚಿತ್ರ್ಯಾದ್ರುಜುಕುಟಲ ನಾನಾಪಥಜುಷಾಂ ।
ನೃಣಾಮೇಕೋಗಮ್ಯಸ್ತ್ವಮಸಿ ಪಯಸಾಮರ್ಣವ ಇವ ॥

—ಮಹಿಮ್ನಸ್ತೋ

ವೇದ, ಸ್ಯಾಂಖ್ಯ, ಯೋಗ, ಪಾಶುಪತ ಮತ್ತು ವೈಷ್ಣವ ಎಂಬ ಮತ ಪಾಶುಪತಮತ ಪ್ರಾಚೀನ ವೀರಶೈವ ಧರ್ಮದ ಸ್ವರೂಪವನ್ನು ತಿಳಿಸು ಯೆಂದು ಹೇಳಬಹುದು. ಶಿವಾಗಮಗಳೂ ಉತ್ತರಮೀಮಾಂಸೆಯೂ ವೀ ಮತದ ಆಧಾರಗ್ರಂಥಗಳು.

ವೇದೇಷು ಶಾಸ್ತ್ರಸಂಘೇಷು ಪುರಾಣೇಷ್ವಾಗಮೇಷುಚ ।
ಲಿಂಗಧಾರಣಮಾಖ್ಯಾತಂ ವೀರಶೈವಸ್ಯನಿಶ್ಚಯಾತ್ ॥

ಎಂಬ ಶಿವಾಗಮೋಕ್ತಿಯಂತೆ, ವೀರಶೈವ ಮತದ ಪ್ರತಿಯೊಬ್ಬ ಲಿಂಗಧಾರಣ ಅತ್ಯಾವಶ್ಯಕ.

ಲಿಂಗಧಾರೀ ಸದಾಶುದ್ಧೋ ನಿಜಲಿಂಗಂ ಮನೋಹರಂ ।
ಅರ್ಚಯೇದ್ಗಂಧಪುಷ್ಪಾದ್ಯೈಃ ಕರಪೀಠೇ ಸಮಾಹಿತಃ ॥

ಎಂದು ಸಿದ್ಧಾಂತಶಿಖಾಮಣಿಯಲ್ಲಿ ಉಕ್ತವಾಗಿದೆ. ಲಿಂಗಧಾರಿ ಸದಾ ಶು ನಾಗಿರುತ್ತಾನೆ. ಅವನು ತನ್ನ ಇಷ್ಟಲಿಂಗವನ್ನು ಕರಪೀಠದಲ್ಲಿರಿಸಿ ಶಾಸ್ತ್ರ ಯಂತೆ ಅರ್ಚಿಸಬೇಕು. *

* ಭರತಖಂಡದಲ್ಲಿ ಅತ್ಯಂತ ಪ್ರಾಚೀನ ಕಾಲದಲ್ಲಿಯೇ ಜ್ಯೋತಿರ್ಲಿಂಗ ಸ್ಥಾಪನೆಯಾದವು.

ಅಷ್ಟಾವರಣ ಸಂಪನ್ನಃ ಪಂಚಾಚಾರ ಪರಾಯಣಃ ।
ವೈದಿಕಂ ಕರ್ಮಕುರ್ವೀತ ಜ್ಞಾನೈಕ ಫಲಸಾಧನಂ ॥

ಎಂದರೆ, ವೀರಶೈವನು ಅಷ್ಟಾವರಣ ಸಂಪನ್ನನೂ ಪಂಚಾಚಾರನಿಷ್ಠನೂ ಆಗಿರಬೇಕು. ಸ್ನಾನ, ಇಷ್ಟಲಿಂಗ ಪೂಜೆ, ಗುರುಜಂಗಮ ಸೇವೆ, ಪಾದೋದಕ ಪ್ರಸಾದ ಸ್ವೀಕಾರ, ಜಪ, ತಪ, ನಿತ್ಯನೈಮಿತ್ತಿಕ ಕರ್ಮ, ಗರ್ಭಾಧಾನಾದಿ ಷೋಡಶ ಸಂಸ್ಕಾರ ವಿಧಾನ,-ಇವೇ ಮೊದಲಾದ ವೀರಶೈವ ಧರ್ಮ ಪ್ರಕ್ರಿಯೆಗಳನ್ನು ಶ್ರುತಿ, ಸ್ಮೃತಿ, ಪುರಾಣ, ಶಿವಾಗಮ, ಉಪನಿಷತ್ತು ಮೊದಲಾದ ಪ್ರಾಚೀನ ಗ್ರಂಥಗಳಲ್ಲಿ ವಿಶದವಾಗಿ ಮಹರ್ಷಿಗಳು ವಿವರಿಸಿರುತ್ತಾರೆ. ಪ್ರತಿಯೊಬ್ಬ ವೀರಶೈವನೂ ಗುರುಮುಖದಿಂದ ದೀಕ್ಷಾಪೂರ್ವಕವಾಗಿ ಇಷ್ಟಲಿಂಗವನ್ನು ವಿಧ್ಯುಕ್ತವಾಗಿ ಪಡೆದು, ನಿರಂತರ ತಪಸ್ಸು, ಕರ್ಮ, ಜಪ, ಧ್ಯಾನ, ಜ್ಞಾನ ಎಂಬ ಪಂಚಯಜ್ಞಗಳನ್ನು ಆಚರಿಸಬೇಕು. ವೀರಶೈವ ಧರ್ಮದವರು ಹುಟ್ಟಿದ ಎಂಟನೆಯ ವರ್ಷದಿಂದ ಹದಿನಾರನೆಯ ವರ್ಷದೊಳಗಾಗಿ ಶಿವದೀಕ್ಷಾಸಂಸ್ಕಾರವನ್ನು ಹೊಂದಬೇಕು. ದೀಕ್ಷೆಯಲ್ಲಿ ವೇಧಾ ದೀಕ್ಷೆ, ಕ್ರಿಯಾ ದೀಕ್ಷೆ, ಮನು ದೀಕ್ಷೆ ಎಂದು ಮೂರು ವಿಧ. ಶ್ರೀಗುರು ದೀಕ್ಷಾವಿಧಿಯಿಂದ ಶಿಷ್ಯನ ಸ್ಥೂಲ, ಸೂಕ್ಷ್ಮ, ಕಾರಣ ಎಂಬ ಶರೀರತ್ರಯದಲ್ಲಿರುವ ಆಣವ, ಮಾಯಿಕ, ಕಾರ್ಮಿಕ ಮಲತ್ರಯಗಳನ್ನು ಪರಿಹರಿಸಿ, ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ ಎಂಬ ಲಿಂಗತ್ರಯವನ್ನು ನೆಲೆಗೊಳಿಸುತ್ತಾನೆ.

ಪವಿತ್ರಂತೆ ವಿತತಂ ಬ್ರಹ್ಮಣಸ್ಪತೆ ಪ್ರಭುರ್ಗಾತ್ರಾಣಿ ಪರ್ಯೆಷಿ ವಿಶ್ವತಃ ।
ಅತಪ್ತತನುರ್ನತದಾಮೋಽಶ್ನುತೆಶ್ರಿತಾಸ ಇದ್ವಹಂತಸ್ತತ್ಸಮಾಶತ ॥

ಎಂದರೆ ಲಿಂಗಧಾರಣದಿಂದ ಮಾತ್ರವೇ ಮೋಕ್ಷಪ್ರಾಪ್ತಿ ಎಂಬುದಾಗಿ ಋಗ್ವೇದದಲ್ಲಿ ಹೇಳಿದೆ. ಶ್ರುತಿಯೂ ಇದನ್ನು ಸಮರ್ಥಿಸುತ್ತದೆ. ಈ ಮತಧರ್ಮವನ್ನು ನಿಷ್ಠೆಯಿಂದ ಆಚರಿಸಿದರೆ ಒಂದೇ ಜನ್ಮದಲ್ಲಿ ಮುಕ್ತಿಯಾಗುತ್ತದೆಯೆಂದು ಪೂರ್ವಾಚಾರ್ಯರು ತಿಳಿಸುತ್ತಾರೆ. ಈ ಮತಧರ್ಮದ ಷಟ್‌ಸ್ಥಲ ಮಾರ್ಗವನ್ನು ಮೋಕ್ಷಪಥವೆಂದು ಸಾಧಕರು ನಂಬಿರುತ್ತಾರೆ. ಅದರಿಂದಲೇ "ನವೀರಶೈವಸದೃಶಂ ಮತಮಸ್ತಿ ಜಗತ್ರಯೆ" ಎಂದರೆ, ವೀರಶೈವ ಮತವನ್ನು ಹೋಲುವ ಮತವಿಲ್ಲವೆಂದೂ ವೀರಶೈವರು ತಿಳಿದಿರುತ್ತಾರೆ. ಲಿಂಗಾಂಗ ಸಾಮರಸ್ಯವೇ ಜೀವನ್ಮುಕ್ತಿಯೆಂದು ಈ ಮತಧರ್ಮ ತಿಳಿಸುತ್ತದೆ. ಸನಾತನ ವೀರಶೈವದಲ್ಲಿ

ಚತುರ್ವರ್ಣದವರೂ ಸೇರಿದ್ದರೆಂದು ಸ್ಪಷ್ಟವಾಗಿದೆ. ಶಿವಾಗಮಗಳಲ್ಲಿ ಅನು ಶೈವ, ಆದಿಶೈವ, ಅನುಶೈವ, ಮಹಾಶೈವ, ಯೋಗಶೈವ, ಜ್ಞಾನಶೈವ, ವೀ ಶೈವ ಎಂದು ಏಳು ಪ್ರಭೇದಗಳನ್ನು ಹೇಳಿದೆ. ಈ ವೀರಶೈವವನ್ನು ಶಿವಾದ್ವೈ ವೆಂದೂ ಶಕ್ತಿವಿಶಿಷ್ಟಾದ್ವೈತವೆಂದೂ ಕರೆಯುತ್ತಾರೆ. ನೀಲಕಂಠ ಶಿವಾಚಾ ರ್ಯರು ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ರಚಿಸಿ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂ ವನ್ನು ಸ್ಥಾಪಿಸಿದರು. ಅದರ ಮೇಲೆ ನೀಲಕಂಠಾಚಾರ್ಯರು ಕಾರಿಕೆಯ ಬರೆದು ಕ್ರಿಯಾಜ್ಞಾನ ಸ್ವರೂಪವನ್ನು ವಿವರಿಸಿ ಕ್ರಿಯಾಸಾರವೆಂಬ ಗ್ರಂಥವ ಬರೆದರು. ಇವನ್ನು ಅನುಸರಿಸಿ ಮರಿತೋಂಟದಾರ್ಯರು ವೀರಶೈವಾ ಚಂದ್ರಿಕೆ ಎಂಬ ಉದ್ದಾಮ ಗ್ರಂಥವನ್ನು ರಚನೆ ಮಾಡಿದರು. ಇವಲ್ಲದೆ, ದ್ವೈತಮಂಜರಿ, ಲಿಂಗಧಾರಣಚಂದ್ರಿಕೆ, ವೀರಶೈವಧರ್ಮಶಿರೋಮಣಿ, ಶೈವ ಚಿಂತಾಮಣಿ, ಶ್ರುತಿಸಾರಭಾಷ್ಯ–ಮೊದಲಾದ ಅನೇಕ ಮತಗ್ರಂಥಗ ವಿದ್ವಾಂಸರು ಸಂಸ್ಕೃತದಲ್ಲಿ ರಚಿಸಿರುತ್ತಾರೆ. ಇವು ಸನಾತನ ವೀರಶೈವ ನಿರೂಪಿಸುತ್ತವೆ. ವೇದ, ಆಗಮ, ಉಪನಿಷತ್ತುಗಳಲ್ಲಿಯೂ ಈ ಮತದ ತತ್ತ್ವಗಳು ಕಂಡುಬರುತ್ತವೆ. ಈ ಮತ ಶಿವಾಗಮಗಳಲ್ಲಿ ಉಕ್ತವಾಗಿ ರಿಂದ, ಇದು ಆಗಮಗಳ ಕಾಲಕ್ಕಿಂತಲೂ ಹಿಂದೆಯೇ ಆಚರಣೆಯಲ್ಲಿತ್ತು. ಗಳಲ್ಲಿಯೂ ಈ ಮತದ ಮೂಲವನ್ನು ಸೂಚಿಸಿರುವುದರಿಂದ, ಅದು ವೇದ ದಲ್ಲಿಯೂ ಇದ್ದಿತೆಂದು ನಂಬಲು ಅವಕಾಶವುಂಟು. ಈ ಮತವನ್ನು ಯಾ ಯಾವಾಗ ಸ್ಥಾಪಿಸಿದರೆಂಬುದನ್ನು ನಿರ್ಧರವಾಗಿ ಹೇಳಲು ಸಾಧ್ಯವಿಲ್ಲ. ಪ್ರಾ ಹಾಸಿಕಕಾಲದಲ್ಲಿ ಶಿವನೇ ಈ ಮತವನ್ನು ಸುವ್ಯವಸ್ಥಿತ ರೂಪದಲ್ಲಿ ನಿರೂ ನೆಂದು ತಿಳಿದುಬರುತ್ತದೆ. ಶಿವನಿಗಿಂತಲೂ ಹಿಂದೆ ರುದ್ರನೇ ಈ ಮತದ ಪ್ರವರ್ತಕನಾಗಿದ್ದನೆಂದು ತರ್ಕಿಸುತ್ತಾರೆ. ಈ ಮತವನ್ನು ಪ್ರತಿಯುಗದಲ್ಲಿ ಪಂಚ ಆಚಾರ್ಯರು ಪ್ರಚಾರ ಮಾಡಿದರೆಂದು ಆ ಮತದ ಧರ್ಮಗ್ರಂಥಗ ತಿಳಿದುಬರುತ್ತದೆ. ಇದೇ ಅನಾದಿ ವೀರಶೈವ. ಅದನ್ನು ಪೂರ್ವಪಾಶುಪತ ವೆಂದೂ ಕರೆಯುತ್ತಾರೆ. ಪರಬ್ರಹ್ಮವಸ್ತು ಈ ಜಗತ್ತು ಆವಿರ್ಭವಿಸುವು ಮುಂಚೆ ಸ್ವಶಕ್ತಿಯಿಂದ ಸ್ಫುರಿಸುತ್ತಿದ್ದಿತು. ಸೃಷ್ಟಿಗಿಂತಲೂ ಮೊದಲು ಇರಲಿಲ್ಲ, ಸತ್ ಇರಲಿಲ್ಲ, ಭೂಮಿ ಆಕಾಶಗಳಿರಲಿಲ್ಲ, ಆಕಾಶ ಅಂತರಿಕ್ಷ ಲಿಲ್ಲ. ಅದು ಏನನ್ನು ಆಶ್ರಯಿಸಿಕೊಂಡಿತ್ತು ? ಅದನ್ನು ಯಾವುದು

ಕೊಂಡಿತ್ತು? ಎಂಬುದನ್ನೂ ಆಗ ಮೃತ್ಯುವಿರಲಿಲ್ಲ, ಅಮೃತವಿರಲಿಲ್ಲ, ಹಗಲು-ರಾತ್ರಿಗಳಿರಲಿಲ್ಲ, ಸೂರ್ಯಚಂದ್ರರಿರಲಿಲ್ಲ, ವಾಯುವೂ ಇರಲಿಲ್ಲ, ಅದು ತನ್ನಲ್ಲಿ ಅವಿನಾಭಾವದಿಂದ ಕೂಡಿರುವ ಶಕ್ತಿಯಿಂದ ಅದೊಂದೇ ಸ್ಫುರಿಸುತ್ತಿತ್ತು ಅದರ ಹೊರತು ಮತ್ತೇನೂ ಇರಲಿಲ್ಲ ಎಂಬುದನ್ನೂ ಋಗ್ವೇದದ ನಾಸದೀಯ ಸೂಕ್ತವಲ್ಲಿ ಹೇಳಿದೆ.

ಅದರಲ್ಲಿ "ನಾಸದಾಸೀನ್ನೋ ಸದಾಸೀತ್ತದಾನೀಂ ನಾಸೀದ್ರಜೋ ನೋವ್ಯೋಮಾಪರೋಯತ್ ! ಕ್ರಿಮಾವರೀವಃ ? ಕುಹಕಸ್ಯಶರ್ಮನ್ ಅಂಭಃ ಕಿಮಾಸೀತ್ ಗಹರಂ ಗಂಭೀರಂ ‖ ನಮೃತ್ಯುರಾಸೀದಮೃತಂ ನತರ್ಹಿನರಾತ್ರ್ಯಾ ಅಹ್ನಃ ಆಸೀತ್ ಪ್ರಕೇತಃ | ಆನೀದವಾತಂ ಸ್ವಧಯಾತದೇಕಂ ತಸ್ಮಾದ್ಧಾನ್ಯನ್ನಪರಃ ಕಿಂಚನಾಸ" ಎಂದು ಈ ಮೂಲ ವಸ್ತುವನ್ನು ಸ್ಪಷ್ಟವಾಗಿ ನಿರೂಪಿಸಿದೆ. ಈ ನಾಮರೂಪಗಳಿಲ್ಲದ ಅವಾಙ್ಮನೋಗೋಚರವಸ್ತುವನ್ನು "ತುಚ್ಛ್ಯೇನಾಭ್ವಪಿಹಿತಂ ಯದಾಸೀತಪಸಸ್ತನ್ಮಹಿನಾಜಾಯತೈಕಂ" ಎಂದರೆ ಅಭು ಎಂದು ಕರೆದಿರುತ್ತದೆ. ಅಭು ಎಂದರೆ ಇಲ್ಲದ್ದು ಅರ್ಥಾತ್ ಶೂನ್ಯ ಎಂದು ಅರ್ಥ. ಪ್ರಾಚೀನ ಮಹರ್ಷಿಗಳು ಆ ಮೂಲ ವಸ್ತುವನ್ನು ಸತ್, ಋತ, ಬ್ರಹ್ಮ ಎಂದೂ ಕರೆದಿರುತ್ತಾರೆ. ವೀರಶೈವದರ್ಶನಕಾರರು ಅದನ್ನು ಲಿಂಗ, ಸ್ಥಲ, ಪರಶಿವ, ಶೂನ್ಯ ಮೊದಲಾದ ಹೆಸರುಗಳಿಂದ ವ್ಯವಹರಿಸಿರುತ್ತಾರೆ.

"ತದೇಜತಿ ತನ್ನೈಜತಿ, ತದ್ದೂರೇ ತದ್ವಂತಿಕೆ
ತದಂತರಸ್ಯ ಸರ್ವಸ್ಯ ತದು ಸರ್ವಸ್ಯಾಸ್ಯ ಬಾಹ್ಯತಃ"

ಎಂದು ಈಶೋಪನಿಷತ್ತಿನಲ್ಲಿ ಹೇಳಿದೆ. "ಅದು ಚಲಿಸುತ್ತದೆ; ಚಲಿಸುವುದಿಲ್ಲ, ಅದು ಬಹು ದೂರದಲ್ಲಿದೆ; ಹತ್ತಿರದಲ್ಲಿಯೂ ಇದೆ. ಅದು ಸರ್ವಾಂತರ್ಯಾಮಿ; ಸರ್ವರ ಬಾಹ್ಯದಲ್ಲಿಯೂ ಇದೆ" ಎಂದು ಅರ್ಥ. ಇದೇ ಬ್ರಹ್ಮ, ಇದೇ ಪರವಸ್ತು, ಇದೇ ಮಹಾಲಿಂಗ, ಇದೇ ಸರ್ವ ಶೂನ್ಯ! ಈ ಮೂಲ ವಸ್ತುವನ್ನು ಸರ್ವ ಶೂನ್ಯ ನಿರಾಲಂಬ ಎಂದೂ ಕರೆದಿರುತ್ತಾರೆ. ಈ ವಸ್ತುವೇ ಪ್ರವೃತ್ತಿಮಾರ್ಗದಲ್ಲಿ ಸತ್, ಚಿತ್, ಆನಂದ, ನಿತ್ಯ, ಪರಿಪೂರ್ಣ ಎಂಬ ಐದು ಅವಯವಗಳನ್ನು ಅಂಗೀಕರಿಸಿ ನಿಷ್ಕಲ ಲಿಂಗವೆನಿಸಿಕೊಳ್ಳುತ್ತದೆ. ಕಠೋಪನಿಷತ್ತು ಲಿಂಗವನ್ನು ಪುರುಷ ಎಂದು ಹೇಳುತ್ತದೆ.

ಇಂದ್ರಿಯೇಭ್ಯಃ ಪರಂಮನೋಮನಸಃ ಸತ್ವಮುತ್ತಮಂ |
ಸತ್ವಾದಧಿ ಮಹಾನಾತ್ಮಾ ಮಹತೋಽವ್ಯಕ್ತಮುತ್ತಮಂ ||
ಅವ್ಯಕ್ತಾತ್ತುಪರಃ ಪುರುಷೋಽವ್ಯಾಪಕೋಽ ಲಿಂಗಏವಚ |
ಯದ್‌ಜ್ಞಾತ್ವಾಮುಚ್ಯತೇ ಜಂತುರಮೃತತ್ವಂಚಗಚ್ಛತಿ ||

ಎಂದರೆ, ಇಂದ್ರಿಯಗಳಿಗಿಂತಲೂ ಮನಸ್ಸು ಉತ್ತಮ. ಮನಸ್ಸಿಗಿಂ... ಮಹದಾತ್ಮ ಉತ್ತಮ. ಈ ಮಹದಾತ್ಮನಿಗಿಂತಲೂ ಅವ್ಯಕ್ತ ಉತ್ತ... ಈ ಅವ್ಯಕ್ತಕ್ಕಿಂತಲೂ ಪುರುಷ ಉತ್ತಮ. ಪುರುಷನಿಗಿಂತಲೂ ಉತ್ತ... ಮದು ಯಾವುದೂ ಇಲ್ಲ. ಈ ಪುರುಷತತ್ತ್ವವೇ ವ್ಯಾಪಕವಾಗಿ ಲಿಂಗ... ವೀರಶೈವರು ಈ ನಿರಾಕಾರ ಲಿಂಗತತ್ತ್ವವನ್ನು 'ಮಹಾ ಘನವಸ್ತು' ... ಕರೆಯುತ್ತಾರೆ.

"ಅಂಗುಷ್ಟಮಾತ್ರಃ ಪುರುಷೋಽಂಗುಷ್ಠಂಚ ಸಮಾಶ್ರಿತಃ" ಎಂಬ ... ವನ್ನು ಅನೇಕ ಗ್ರಂಥಗಳು ಲಿಂಗಧಾರಣೆಯ ಪರವಾಗಿ ಅರ್ಥ ಮಾಡಿ... ಇದು ಸರ್ವ ಪ್ರಾಣಿಗಳಲ್ಲಿಯೂ ಗುಪ್ತಾತ್ಮವಾಗಿರುತ್ತದೆ; ಹೊರಗೆ ಪ್ರಕಾಶ... ದಿಲ್ಲ. ಕಟ್ಟಿಗೆಯಲ್ಲಿ ಬೆಂಕಿ ಅಡಗಿರುವಂತೆ ! ಇದೇ ಮಹಾ ಘನವಸ್ತು ! ... ಲಿಂಗ ! ನಿರಾಕಾರ ಮೂಲವಸ್ತುವಿನಿಂದ ಎಂದರೆ ಶೂನ್ಯದಿಂದ ಉದಯ... ಮೊದಲನೆಯ ಸಾಕಾರ ರೂಪವೇ ಲಿಂಗ ಎಂದು ಅನುಭಾವಿಗಳು ಹೇಳು... 'ಲಿಂಗವೇ ಬ್ರಹ್ಮ' 'ಬ್ರಹ್ಮವೇ ಲಿಂಗ' ಲಿಂಗರೂಪಂ ಜಗ್ರದ್ರೂಪಂ' ... ಅನೇಕ ಪ್ರಮಾಣಗಳಿವೆ. ಈ ಬ್ರಹ್ಮದಿಂದ ಅನಾದಿಬಿಂದು ಉದಯ... ತ್ತದೆ. ಈ ಅನಾದಿಬಿಂದುವೇ ಮಹದಂಗವಾಯಿತು. ಇದೇ ಶಕ್ತಿ. ಪರವ... ನಲ್ಲಿ ಈ ಶಕ್ತಿ ಅವಿನಾಭಾವದಿಂದ ಸೇರಿರುತ್ತದೆ. ಇಂಥ ಪರವಸ್ತುವಿನಿ... ವಿಶ್ವಸೃಷ್ಟಿ. ಪರವಸ್ತುವೇ ಲಿಂಗ; ಅನಾದಿಬಿಂದುವೇ ಅಂಗ. ಈ ಲಿಂ... ಸಾಮರಸ್ಯವೇ ಷಟ್‌ಸ್ಥಲ. ಪರವಸ್ತುವೇ ಗುರು, ಲಿಂಗ, ಜಂಗಮ... ಪರ್ಯಾಯ ಪದಗಳಿಂದ ಸೂಚಿತವಾಗಿದೆ.

* ವೇದಪೂರ್ವ ಯುಗದಲ್ಲಿ ಎಂದರೆ ಆರ್ಯರ ಕಾಲಕ್ಕಿಂತಲೂ ... ದ್ರಾವಿಡ ಮಹರ್ಷಿಗಳು ಸೂಕ್ಷ್ಮಲಿಂಗವನ್ನು ಶಿರೋಭಾಗದಲ್ಲಿ ಧರಿಸುತ್ತಿ... ಅವರೇ ನಿರಾಕಾರ ಶೂನ್ಯೋಪಾಸಕ ಲಿಂಗವಂತರು. ಅವರು ಲಿಂಗವನ್ನು ...

* ವಿಭೂತಿ-ಸಂಪುಟ

ಮೇಲೆ ನಿರಂತರ ಧರಿಸುತ್ತಿದ್ದರು. ಆ ಲಿಂಗವಂತ ಜನಾಂಗದಲ್ಲಿ ಕುಲ, ಗೋತ್ರ, ಜಾತಿ, ಮತ, ನೀಚ, ಉಚ್ಚ ಮೊದಲಾದ ಯಾವ ಭೇದಭಾವನೆಯೂ ಇರಲಿಲ್ಲ. ಅವರು ಕೇವಲ ಮಾನವಕುಲವನ್ನು ಗೌರವಿಸುತ್ತಿದ್ದರು. ಅವರು ಅತಿವರ್ಣಾಶ್ರಮಿಗಳಾಗಿದ್ದರು. ಆಗ ಮಾನವಜನಾಂಗದ ವರ್ಗೀಕರಣವಿರಲಿಲ್ಲ. ಯಜ್ಞ, ಯಾಗಗಳಾಗಲಿ, ಪಶುಬಲಿಯಾಗಲಿ ಇರಲಿಲ್ಲ. ಹುಟ್ಟು, ಸಾವು, ಮುಟ್ಟು ಮೊದಲಾದ ಸೂತಕಗಳ ಕಲ್ಪನೆಯೂ ಸಹ ಆ ಪ್ರಾಚೀನ ಯುಗದಲ್ಲಿ ಇರಲಿಲ್ಲ. ಅವರು ತಮ್ಮದೇ ಆದ ವಿಶಿಷ್ಟ ಆಚಾರ ಪದ್ಧತಿಯನ್ನು ಅನುಸರಿಸಿ ನಡೆಯುತ್ತಿದ್ದರು. ವೇದಪೂರ್ವದ ಲಿಂಗೋಪಾಸಕರಲ್ಲಿ ಅನೇಕ ಮುನಿಜನಗಳಿದ್ದರು. ಅವರನ್ನು ಕೇಶಿಗಳೆಂದು ಕರೆಯುತ್ತಿದ್ದರು. ಅವರೇ ಲಿಂಗಯೋಗಿಗಳು. ಆ ಸನಾತನ ಲಿಂಗವಂತರಲ್ಲಿ ಲಿಂಗಾರಾಧಕ ಮತ್ತು ಲಿಂಗಯೋಗಿ ಎಂಬ ಎರಡು ಪಂಗಡಗಳಿದ್ದುವು. ಅವರಲ್ಲಿ ಯಾವ ತಾರತಮ್ಯಭಾವನೆಯೂ ಇರಲಿಲ್ಲ. ಲಿಂಗಾರಾಧಕ ಭಕ್ತ ತನ್ನ ಲಿಂಗಭಕ್ತಿ, ಮಾನವಪ್ರೇಮ, ಜ್ಞಾನ, ವೈರಾಗ್ಯ, ಸದಾಚಾರ ಗುಣಗಳಿಂದ ಲಿಂಗಯೋಗಿಯಾಗುತ್ತಿದ್ದನು. ಅವನು ತನ್ನ ಅನುಭವವನ್ನು ಇತರರಿಗೆ ಬೋಧಿಸುತ್ತಿದ್ದನು. ಹಾಗೆ, ಅವನು ಪುರೋಹಿತ, ಲಿಂಗಯೋಗಿ, ಅಥವಾ ಲಿಂಗಮುನಿಯಾದರೂ ಭಕ್ತನ ಕ್ರಿಯೆಗಳನ್ನು ಬಿಡದೆ ಆಚರಿಸುತ್ತಿದ್ದನು. ಆರ್ಯರು ಈ ಲಿಂಗಯೋಗಿ ಧರ್ಮವನ್ನು ಗೌರವದಿಂದ ಕಾಣುತ್ತಿದ್ದರೂ, ಕೆಲವು ಅಪ್ರಬುದ್ಧ ಆರ್ಯರು ಆ ಲಿಂಗ ಭಕ್ತರನ್ನು 'ಶಿಶ್ನದೇವಾಃ' ಎಂದು ಪರಿಹಾಸ ಮಾಡುತ್ತಿದ್ದರು. ಆರ್ಯರು ಅನೇಕ ದಾರ್ಶನಿಕತತ್ತ್ವಗಳನ್ನು ಪ್ರಚಾರ ಮಾಡಲು ಪ್ರಾರಂಭಿಸಿದಂತೆಯೇ ಆ ಲಿಂಗವಂತ ಜನರೂ ಸಹ ಶಿವ-ಶಕ್ತಿಯರ ಅವಿನಾಭಾವ ಸಂಬಂಧವನ್ನು ತಿಳಿಸುತ್ತ ಕರ್ಮ-ಜ್ಞಾನ ಎರಡೂ ಮೋಕ್ಷಕ್ಕೆ ಸಾಧನವೆಂದು ಹೇಳುತ್ತ, ಈ ಜಗತ್ತು ಸತ್ಯ ಎಂಬ ಸಿದ್ಧಾಂತವನ್ನು ಪ್ರತಿಪಾದಿಸುತ್ತಿದ್ದರು. ಈ ಪ್ರಾಚೀನ ಲಿಂಗವಂತ ಜನಾಂಗದ ಸಿದ್ಧಾಂತದಿಂದಲೇ ಉಪನಿಷತ್ತುಗಳ ದರ್ಶನಗಳು ಉದಯವಾದವೆಂದು ಪಂಡಿತರು ಅಭಿಪ್ರಾಯ ಪಡುತ್ತಾರೆ. ಲಿಂಗವಂತ ಧರ್ಮದಲ್ಲಿರುವ ಶಿವ, ಶಕ್ತಿ, ಶರಣ, ಎಂಬ ಪದಗಳು ದ್ರಾವಿಡ ಭಾಷೆಯಲ್ಲಿ ಆನ್-ಎಂದರೆ ಶಿವ, ಅಮ್ಮಾ ಎಂದರೆ ಶಕ್ತಿ, ಅನಿಲ್ ಎಂದರೆ ಶರಣ ಎಂಬ ತತ್ತ್ವಾರ್ಥಗಳನ್ನು ಸೂಚಿಸುತ್ತವೆಯೆಂದು ತತ್ತ್ವಜ್ಞಾನಿಗಳು ಹೇಳುತ್ತಾರೆ."

ವೇದಶಾಸ್ತ್ರ ಪುರಾಣೇಷು ಕಾಮಿಕಾದ್ಯಾಗಮೇಷುಚ ।
ಲಿಂಗಧಾರಣಮಾಖ್ಯಾತಂ ವೀರಶೈವಸ್ಯ ನಿಶ್ಚಯಾತ್ ॥

ಎಂದು ಸಿದ್ಧಾಂತ ಶಿಖಾಮಣಿಯಲ್ಲಿ ಹೇಳಿರುವಂತೆ, ಲಿಂಗಧಾರಣ ವೇದಶಾ ಪುರಾಣಗಳಲ್ಲಿಯೂ ಕಾಮಿಕಾದಿ ಆಗಮಗಳಲ್ಲಿಯೂ ಪ್ರತಿಪಾದಿತವಾಗಿದೆ.

ವಿಷ್ಣುಬ್ರಹ್ಮಾದಯೋಃದೇವಾ ಮುನಯೋಃಗೌತಮಾದಯಃ।
ಧಾರಯಂತಿ ಸದಾಲಿಂಗಂ ಉತ್ತಮಾಂಗೆ ವಿಶೇಷತಃ ॥

ಎಂಬಂತೆ ವಿಷ್ಣುಬ್ರಹ್ಮಾದಿ ದೇವತೆಗಳೂ ಗೌತಮಾದಿ ಮುನಿಗಳೂ ಲಿಂಗಧಾ ಗಳಾಗಿದ್ದಾರೆಂದು ತಿಳಿಯಬೇಕು. ಅಗಸ್ತ್ಯ, ಗೌತಮ, ದುರ್ವಾಸ, ವಸಿ ಸಾನಂದ, ವ್ಯಾಸ, ಕಶ್ಯಪ, ಉಪಮನ್ಯು, ಹರಕಂಠ, ಜಮದಗ್ನಿ ಮೊದ ಮಹರ್ಷಿಗಳು ಲಿಂಗವನ್ನು ತಮ್ಮ ಶಿರೋಭಾಗದಲ್ಲಿ ಧರಿಸುತ್ತಿದ್ದರೆಂದು ಶ ತರು ದೃಢಪಡಿಸಿರುತ್ತಾರೆ. ಇಂಥ ವೀರಶೈವವನ್ನು ಜಗತ್ತಿನಲ್ಲಿ ಪ್ರ ಮಾಡಲು ಸಾಕ್ಷಾತ್ ಶಿವನೇ ತನ್ನ ಪಂಚಮುಖಗಳಿಂದ ಪಂಚಗೋತ್ರ ಪು ಷರನ್ನು ಪಡೆದನೆಂದು ಪಾಶುಪತ್ಯಾಗಮವೇ ಮೊದಲಾದ ಕೆಲವು ಶಿವಾಗಮ ಉಕ್ತವಾಗಿದೆ. ವೀರ, ನಂದಿ, ಭೃಂಗಿ, ವೃಷಭ, ಸ್ಕಂದ–ಇವರು ಪ ಗೋತ್ರ ಪುರುಷರು. ಕೃತಯುಗದಲ್ಲಿ ಏಕಾಕ್ಷರ, ದ್ವ್ಯಕ್ಷರ, ತ್ರ್ಯಕ್ಷ ಚತುರಕ್ಷರ, ಪಂಚಾಕ್ಷರ ಎಂಬ ಪಂಚ ಆಚಾರ್ಯರು ಅವತರಿಸಿ ವೀರಶೈವ ಸುವ್ಯವಸ್ಥಿತ ರೀತಿಯಲ್ಲಿ ಹೆಚ್ಚಿಸಿದರು. ತ್ರೇತಾಯುಗದಲ್ಲಿ ಏಕವಕ್ತ್ರ, ದ್ವಿವ ತ್ರಿವಕ್ತ್ರ, ಚತುರ್ವಕ್ತ್ರ, ಪಂಚವಕ್ತ್ರರೆಂದೂ ದ್ವಾಪರ ಯುಗದಲ್ಲಿ ರೇಣು ದಾರುಕ, ಘಂಟಾಕರ್ಣ,, ಧೇನುಕರ್ಣ, ವಿಶ್ವಕರ್ಣರೆಂದೂ, ಕಲಿಯುಗ ರೇವಣಾರಾಧ್ಯ, ಮರುಳಾರಾಧ್ಯ, ಏಕೋರಾಮಾರಾಧ್ಯ, ಪಂಡಿತಾರಾ ವಿಶ್ವಾರಾಧ್ಯರೆಂದೂ ಈ ಪಂಚ ಆಚಾರ್ಯರು ಪ್ರಸಿದ್ಧರಾಗಿರುತ್ತಾರೆ. ಪರ ಶ್ವರನ ಪಂಚಮುಖಗಳಲ್ಲಿ ಸದ್ಯೋಜಾತ ಮುಖದಿಂದ ರೇಣುಕ, ವಾಮ ಮುಖದಿಂದ ದಾರುಕ, ಅಘೋರ ಮುಖದಿಂದ ಘಂಟಾಕರ್ಣ, ತತ್ಪು ಮುಖದಿಂದ ಧೇನುಕರ್ಣ, ಈಶಾನ ಮುಖದಿಂದ ವಿಶ್ವಕರ್ಣ–ಇವರು ಉ ವಾದರು. ಈ ಮುಖ್ಯ ಸೂತ್ರಸಂಜಾತರೇ ವೀರಶೈವ ಗುರು ಪೀಠಾಧಿಕಾರಿ ಮಹಾಚಾರ್ಯರೂ, ಸಿಂಹಾಸನಾಧಿಪತಿಗಳೂ ಆಗುತ್ತಾರೆ. ಈ ಮುಖ್ಯ ಸ ಗಳಲ್ಲಿ ಪ್ರತಿಯೊಂದರಲ್ಲಿಯೂ ಉಪಸೂತ್ರಗಳಿರುತ್ತವೆ. ಈ ಉಪಸೂತ್ರ ಸ

ತರು ಪ್ರಮುಖ ಗುರುಗಳೆನಿಸುವುದಿಲ್ಲ. ಅವರು ಗೌಣಗುರುಗಳಾಗಿರುತ್ತಾರೆ. ಈ ಪಂಚ ಆಚಾರ್ಯರನ್ನು ಸನಾತನ ವೀರಶೈವ ಧರ್ಮದ ಗುರುಗಳೆಂದು ಗೌರವಿಸುತ್ತಾರೆ. ಆ ಪಂಚ ಆಚಾರ್ಯ ಪೀಠಗಳೆಂದರೆ:-

**ಬಾಳೆಹಳ್ಳಿ ರೇಣುಕ ಪೀಠ :-** ಬಾಳೆಹಳ್ಳಿಯನ್ನು ರಂಭಾಪುರಿ ಎಂದು ಕರೆಯುತ್ತಾರೆ. ಇದು ಮೈಸೂರು ರಾಜ್ಯದ ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ ತಾಲ್ಲೂಕಿನಲ್ಲಿ ಭದ್ರಾ ನದಿಯ ತೀರದಲ್ಲಿದೆ. ಇದು ಅರಣ್ಯಪ್ರಾಂತ. ಸಹ್ಯಾದ್ರಿ ಅಥವಾ ಮಲಯ ಪರ್ವತದ ಸಾನುಪ್ರದೇಶ ಇಲ್ಲಿ ಮನೋಹರವಾಗಿದೆ; ಪ್ರಕೃತಿ ಸೌಂದರ್ಯವಂತೂ ಆಹ್ಲಾದಕರವಾಗಿದೆ. ಪೂರ್ವಕಾಲದಲ್ಲಿ ಈ ವನಪ್ರದೇಶ ದಲ್ಲಿ ಅನೇಕ ಮಹರ್ಷಿಗಳು ತಪಸ್ಸು ಮಾಡಿದರು. ಪ್ರಶಾಂತ ವಾತಾವರಣದಲ್ಲಿ ಆದಿ ರೇಣುಕ ಶಿವಾಚಾರ್ಯರು ಇಲ್ಲಿ ತಮ್ಮ ಶ್ರೀ ಮಠವನ್ನು ಸ್ಥಾಪಿಸಿದರು. ಇದು ವೀರಸಿಂಹಾಸನ. ಇದನ್ನು ಸೋಮ ಸಿಂಹಾಸನವೆಂದು ಕರೆಯುತ್ತಾರೆ. ಶ್ರೀ ರೇಣುಕ ಗಣವರ್ಯರು ಕೊಲ್ಲಿಪಾಕಿ ಕ್ಷೇತ್ರದಲ್ಲಿ ಸೋಮನಾಥ ಲಿಂಗದಿಂದ ಉದಯವಾದರು. ಇವರು ವೀರಶೈವ ಧರ್ಮವನ್ನು ಸಂಸ್ಥಾಪಿಸಿದರು. ಅಗಸ್ತ್ಯ ಮಹರ್ಷಿಗೆ ಶಿವಾದ್ವೈತ ಸಿದ್ಧಾಂತವನ್ನು ಬೋಧಿಸಿದರೆಂದೂ, ವಿಭೀಷಣನ ಪ್ರಾರ್ಥನೆಯನ್ನು ಮನ್ನಿಸಿ ಲಂಕಾ ನಗರದಲ್ಲಿ ಏಕಕಾಲದಲ್ಲಿ ಮೂರು ಕೋಟಿ ಶಿವಲಿಂಗಗಳನ್ನು ಸ್ಥಾಪಿಸಿದರೆಂದೂ. ಪ್ರಾಚೀನ ವೀರಶೈವ ವಾಙ್ಮಯದಿಂದ ಗೊತ್ತಾಗುತ್ತದೆ. ರೇಣುಕಭಾಷ್ಯವಿದೆಯೆಂದೂ, ಅದು ಇನ್ನೂ ಸಿಕ್ಕಿಲ್ಲವೆಂದೂ ಪಂಡಿತರು ಹೇಳುತ್ತಾರೆ. ಈ ಮಹಾಪೀಠದಲ್ಲಿ ಈಗ ಜಗದ್ಗುರು ಶ್ರೀ ಪ್ರಸನ್ನ ಅಭಿನವ ರೇಣುಕ ವೀರಗಂಗಾಧರ ಶಿವಾಚಾರ್ಯರು ವಿರಾಜಮಾನರಾಗಿದ್ದಾರೆ. ರೇಣುಕ ಪರಂಪರೆಯಲ್ಲಿ ಇವರು ೧೧೮ ನೆಯ ಜಗದ್ಗುರು. ಇವರು ಮಹಾ ತಪಸ್ವಿಗಳೂ, ಯೋಗ ಸಂಪನ್ನರೂ ಆಗಿರುತ್ತಾರೆ. ಇವರ ಹಿಂದೆ ಶ್ರೀ ಶಿವಾನಂದ ಶಿವಾಚಾರ್ಯರು ಈ ಪೀಠದ ಅಧ್ಯಕ್ಷರಾಗಿದ್ದರು.

**ಉಜ್ಜಯಿನಿ ದಾರುಕ ಪೀಠ :-** ಪ್ರಾಚೀನ ಅವಂತಿ-ಉಜ್ಜಯಿನಿ ಮಾಳವ ದೇಶದಲ್ಲಿ ಎಂದರೆ, ಈಗಿನ ಮಧ್ಯ ಪ್ರದೇಶದಲ್ಲಿ ಕ್ಷಿಪ್ರಾ ನದಿಯ ತೀರ ದಲ್ಲಿದೆ. ಆದಿ ದಾರುಕಗಣಾಧೀಶ್ವರರು ವಟವೃಕ್ಷ ಸಿದ್ಧನಾಥ ಲಿಂಗದಿಂದ ಅವ ತರಿಸಿದರು. ಇವರು ವೀರಶೈವ ಧರ್ಮೋದ್ಧಾರ ಕಾರ್ಯವನ್ನು ಕೈಗೊಂಡು ದಧೀಚಿ ಮಹರ್ಷಿಗಳಿಗೆ ಶಿವತತ್ತ್ವೋಪದೇಶ ಮಾಡಿದರು. ಕಾಲಾಂತರದಲ್ಲಿ ಈ ಗುರುಪೀಠ ಈಗಿನ ಬಳ್ಳಾರಿ ಜಿಲ್ಲೆಯ ಕೂಡಲಿಗಿಯ ತಾಲ್ಲೂಕಿನ ಉಜ್ಜಯಿನಿ

ಯಲ್ಲಿ ನೆಲಸಿತೆಂದು ತಿಳಿದುಬರುತ್ತದೆ. ಕಲಿಯುಗದಲ್ಲಿ ಈ ಗುರುಪರಂಪ ಮರುಲಾರಾಧ್ಯ ಶಿವಾಚಾರ್ಯರು ಮೊದಲುಗೊಂಡು ೧೦೫ ಮಂದಿ ಈ ಪೀ ಚಾರ್ಯರಾದರು ಈಗ ಶ್ರೀ ಸಿದ್ಧೇಶ್ವರ ಶಿವಾಚಾರ್ಯರು ಉಜ್ಜಯಿನಿ ಸದ್ಧ ಸಿಂಹಾಸನದ ಜಗದ್ಗುರುವಾಗಿರುತ್ತಾರೆ. ಇವರು ಶಿವಜ್ಞಾನ ಸಂಪನ್ನ ಆಚಾರನಿಷ್ಠರೂ ಆಗಿರುತ್ತಾರೆ. ಇವರ ಹಿಂದೆ ಮಹಾ ತಪಸ್ವಿ ಶ್ರೀ ಸಿದ್ಧ ಶಿವಾಚಾರ್ಯರು ಈ ಪೀಠಾಧೀಶ್ವರರಾಗಿದ್ದರು.

**ಶ್ರೀಶೈಲ ಪೀಠ :—** ಶ್ರೀಶೈಲ ಈಗಿನ ಆಂಧ್ರ ಪ್ರದೇಶದ ಕರ್ನೂ ಜಿಲ್ಲೆಯ ನಂದಿಕೊಟ್ಕೂರು ತಾಲ್ಲೂಕಿನಲ್ಲಿ ಕೃಷ್ಣಾ ನದಿಯ ತೀರದಲ್ಲಿದೆ. ಪರ್ವತಪ್ರಾಂತ. ಇಲ್ಲಿಯ ಪ್ರಕೃತಿ ಸೌಂದರ್ಯ ಆಹ್ಲಾದಕರವಾಗಿದೆ. ಪೂ ಕಾಲದಲ್ಲಿ ಅನೇಕ ಋಷಿಗಳೂ, ಸಿದ್ಧರೂ, ಸಾಧಕರೂ ಇಲ್ಲಿ ಆಶ್ರಮವಾಸಿ ಗಿದ್ದರೆಂದು ಸ್ಥಳಪುರಾಣದಿಂದ ವಿದಿತವಾಗುತ್ತದೆ. ಆದಿಗುರು ಪಂಡಿತಾ ಶಿವಾಚಾರ್ಯರು ಮಲ್ಲಿಕಾರ್ಜುನ ಲಿಂಗದಿಂದ ಆವಿರ್ಭವಿಸಿದರು. ಈ ಚಾರ್ಯರು ಸಾನಂದ ಮಹರ್ಷಿಗೆ ಶಿವತತ್ತ್ವೋಪದೇಶ ಮಾಡಿದರು. ಪಂಡಿತಾರಾಧ್ಯ ಪರಂಪರೆಯ ಜಗದ್ಗುರು ಶ್ರೇಣಿಯಲ್ಲಿ ಅನೇಕರು ತಪಸ್ವಿ ಯೋಗಸಿದ್ಧರೂ ಆಗಿದ್ದರೆಂದು ವಾಙ್ಮಯದಿಂದ ತಿಳಿದುಬರುತ್ತದೆ. ಸೂರ್ಯ ಸಿಂಹಾಸನವೆಂದು ಪ್ರಸಿದ್ಧವಾಗಿದೆ. ಈ ಪೀಠದ ಗುರುಪ ನಿರ್ಧರವಾಗಿ ಎಲ್ಲಿಯೂ ಉಲ್ಲೇಖವಾಗಿಲ್ಲ. ದ್ವಾಪರಯುಗದ ಆಚಾರ್ಯ ಜಗದ್ಗುರು ಸದಾನಂದರೂ ಬೇರೆಬೇರೆ ಕಾಲದಲ್ಲಿ ಜಗದ್ಗುರು ಪಂಡಿತಾರಾಧ್ಯ ಮಲಿಕಾರ್ಜುನ ಪಂಡಿತಾರಾಧ್ಯರೂ, ಶಿವಯೋಗ ನಿಷ್ಠರಾದ ಶಂಕರ ಚಾರ್ಯರೂ, ಕೇದಾರಾರ್ಯರೂ ಮತ್ತು ದೋಣಮಾರ್ಯರೂ ಈ ಗು ಪರಂಪರೆಯಲ್ಲಿದ್ದಂತೆ ಕಂಡುಬರುತ್ತಾರೆ. ಮೂಲ ಮಠ ಶ್ರೀಶೈಲದಲ್ಲಿದೆ. ಮಲ್ಲಿಕಾರ್ಜುನಸ್ವಾಮಿ ದೇವಾಲಯದ ಹಿಂಭಾಗದಲ್ಲಿ ಈ ಪೀಠದ ಪ್ರಾ ಗುರುಪರಂಪರೆಯ ಮಲ್ಲಿಕಾರ್ಜುನ ಶಿವಾಚಾರ್ಯರ ಗದ್ದುಗೆ ಇದೆ. ಈ ಚಾರ್ಯರು ಗುಂತಕಲ್ಲು ಸೂರ್ಯ ಸಿಂಹಾಸನ ಮಠದಲ್ಲಿ ನೆಲೆಸಿರುತ್ತಾ ಜಗದ್ಗುರು ಶ್ರೀ ವಾಗೀಶ ಶಿವಾಚಾರ್ಯರು ಈಗ ಶ್ರೀಶೈಲಪೀಠಾಧೀಶ್ವರ ರುತ್ತಾರೆ. ಇವರು ಶ್ರೀಶೈಲದಲ್ಲಿ ಭವ್ಯ ಪಂಡಿತಾರಾಧ್ಯ ವ್ಯಾಖ್ಯಾನ ಮ ವನ್ನು ನಿರ್ಮಿಸಿರುತ್ತಾರೆ. ಅಲ್ಲದೆ ಶ್ರೀಶೈಲ ಪೀಠದಲ್ಲಿ ಆಗಾಗ ಪೂಜಾನುಷ್ಠಾ ಗಳನ್ನು ನೆರವೇರಿಸುತ್ತಿರುತ್ತಾರೆ. ಆತ್ಮಕೂರಿನಲ್ಲಿಯೂ ಇವರ ಒಂದು ಮಠ

ಶ್ರೀ ವಾಗೀಶ ಶಿವಾಚಾರ್ಯರು ಆತ್ಮಕೂರಿನಲ್ಲಿ ಯಾತ್ರಾರ್ಥಿಗಳ ಉಪಯೋಗಕ್ಕಾಗಿ ಪ್ರವಾಸಿ ಮಂದಿರವನ್ನು ಕಟ್ಟಿಸಿರುತ್ತಾರೆ. ಇತ್ತೀಚೆಗೆ, ಶ್ರೀಶೈಲ ಜಗದ್ಗುರು ಭಾರತೀಯ ವಿದ್ಯಾಪೀಠವೊಂದು ಶ್ರೀಶೈಲದಲ್ಲಿ ಸ್ಥಾಪನೆಯಾಯಿತೆಂದು ತಿಳಿದುಬರುತ್ತದೆ. ಇವರು ಶರಣಧರ್ಮ ಪ್ರೇಮಿಗಳೂ ಶಿವಾನುಭವ ಸಂಪನ್ನರೂ ಆಗಿದ್ದಾರೆ. ಇವರು ಮೂಲ ಶ್ರೀಶೈಲ ಜಗದ್ಗುರು ಪೀಠದ ಕೀರ್ತಿ ಪ್ರತಿಷ್ಠೆಗಳನ್ನು ಬೆಳಸಿದರು. ಇವರು ಕವಿಹೃದಯರೂ, ಲೇಖಕರೂ, ಗ್ರಂಥ ಕರ್ತರೂ, ಶಿವಪೂಜಾನಿಷ್ಠರೂ ಆಗಿದ್ದಾರೆ. ಇವರ ಹಿಂದೆ, ಶ್ರೀ ನಾಗಲೂಟಿ ಭಿಕ್ಷಾವೃತ್ತಿ ಶಿವಾಚಾರ್ಯರು ಈ ಪೀಠಾಧೀಶ್ವರರಾಗಿದ್ದರು.

**ಹಿಮತ್ಕೇದಾರ ಪೀಠ :—** ಕೇದಾರ ಪೀಠ ಹಿಮಾಲಯದಲ್ಲಿ ಅಮರ ಗಂಗಾ ನದಿಯ ತೀರದಲ್ಲಿದೆ. ಏಕೋರಾಮ ಶಿವಾಚಾರ್ಯರು ದ್ರಾಕ್ಷಾರಾಮ ಕ್ಷೇತ್ರದ ಭೀಮನಾಥಲಿಂಗದಿಂದ ವೈದೋರಿದರು. ಇದು ವೈರಾಗ್ಯ ಸಿಂಹಾಸನ ಇದುವರೆಗೆ ೩೯೧ ಮಂದಿ ಶಿವಾಚಾರ್ಯರು ಈ ಗುರುಪೀಠದ ಪಟ್ಟಾಧ್ಯಕ್ಷರಾಗಿದ್ದಂತೆ ಈ ಮಠದ ಚರಿತ್ರೆಯಿಂದ ತಿಳಿದುಬರುತ್ತದೆ. ಈಗ ಜಗದ್ಗುರು ಶ್ರೀ ಶಾಂತಲಿಂಗ ಶಿವಾಚಾರ್ಯರು ನೂತನ ಪಟ್ಟಾಧ್ಯಕ್ಷರಾದರು. ಇವರು ಪರಮಹಂಸರು; ತಪೋಧನರು. ಈ ಪೀಠಾಚಾರ್ಯರಿಗೆ 'ರಾವಲ್' ಎಂಬ ಗೌರವಪ್ರಶಸ್ತಿ ಇದೆ. ಈ ಪೀಠದ ಮೂಲ ಶಿವಾಚಾರ್ಯರು ವ್ಯಾಸಮಹರ್ಷಿಗೆ ಶಿವತತ್ತ್ವ ಸಿದ್ಧಾಂತವನ್ನು ಉಪದೇಶ ಮಾಡಿದರು. ಇವರ ಹಿಂದೆ ನೀಲಕಂಠ ಲಿಂಗಶಿವಾಚಾರ್ಯರು ಈ ಪೀಠದ ಮಹಾ ಗುರುವಾಗಿದ್ದರು.

**ಕಾಶೀಪೀಠ :—** ಕಾಶಿ ಗಂಗಾನದಿಯ ತೀರದಲ್ಲಿದೆ. ಈ ಜಗದ್ಗುರು ಪೀಠದ ಮೂಲ ವಿಶ್ವಕರ್ಣ ಶಿವಾಚಾರ್ಯರು ಕಾಶಿ ವಿಶ್ವನಾಥ ಲಿಂಗದಿಂದ ಅವತರಿಸಿದರು. ಇದು ಜ್ಞಾನಸಿಂಹಾಸನ; ವಿಶ್ವಾರಾಧ್ಯಪೀಠ. ಈ ಪೀಠದ ಮೂಲ ಶಿವಾಚಾರ್ಯರು ದೂರ್ವಾಸಮಹರ್ಷಿಗೆ ಶಿವತತ್ತ್ವವನ್ನು ಬೋಧಿಸಿದರು. ಇದುವರೆಗೆ ೮೫ ಮಂದಿ ಪೀಠಾಧಿಕಾರಿಗಳಾಗಿದ್ದಾರೆ. ಈಗ ಜಗದ್ಗುರು ಶ್ರೀ ವಿಶ್ವೇಶ್ವರ ಶಿವಾಚಾರ್ಯರು ಈ ಪೀಠದ ಗುರುಪದವಿಯಲ್ಲಿದ್ದಾರೆ. ಇವರು ತಪಃಪುಂಜರು, ಶಿವಜ್ಞಾನಧನರು ಇವರ ಹಿಂದೆ, ಜ್ಞಾನಸಿಧಿ ವೀರಭದ್ರ ಶಿವಾಚಾರ್ಯರು ಈ ಪೀಠಾಧೀಶ್ವರರಾಗಿದ್ದರು. ಈ ಪಂಚ ಜಗದ್ಗುರು ಪೀಠಗಳು ಪ್ರಾಚೀನಕಾಲದಿಂದಲೂ ಪ್ರಖ್ಯಾತವಾಗಿವೆ.

"ಪರಶಿವನ ಪಂಚಮುಖಗಳಿಂದ ಆವಿರ್ಭವಿಸಿದ ಪಂಚಾಚಾರ್ಯ
ದೀಕ್ಷಾ ಸಂಸ್ಕಾರವನ್ನು ಹೊಂದಿ, ಆಣವ, ಮಾಯಾ, ಕಾರ್ಮಿಕ
ಮಲತ್ರಯಗಳನ್ನು ಪರಿಹರಿಸಿಕೊಂಡು ಷಟ್‌ಸ್ಥಲ ಜ್ಞಾನಸಂಪನ್ನ
ಲೌಕಿಕ ವ್ಯವಹಾರಗಳನ್ನೂ ಪೂರ್ವಾಶ್ರಮದ ಗೋತ್ರ ಸೂತ್ರಗಳ
ಸಂಪೂರ್ಣವಾಗಿ ವರ್ಜಿಸಿ ಲಿಂಗಾಂಗ ಸಾಮರಸ್ಯರೂಪ ಮುಕ್ತಿಯಲ್ಲಿ ನಿರತ
ವೀರಶೈವನೇ ನಿರಾಭಾರಿ ಜಂಗಮ". ಸನಾತನ ವೀರಶೈವದಲ್ಲಿ ಅಷ್ಟಾವ
ಪಂಚಾಚಾರ ಮತ್ತು ಷಟ್‌ಸ್ಥಲಗಳು ಆಚರಣೆಯಲ್ಲಿದ್ದವು. ಈ ಧರ್ಮ
ಅನುಯಾಯಿಗಳನ್ನು ಪ್ರಮಥರೆಂದು ಕರೆಯುತ್ತಿದ್ದರು. ಆಗಮ
ಯುಗದಲ್ಲಿ ಇವರನ್ನು ರುದ್ರಗಣವೆಂದು ಹೇಳುತ್ತಿದ್ದರು. ಶಿವಾಗಮ
ರಚನೆಯಾಗುವ ಕಾಲಕ್ಕೆ ಸನಾತನ ವೀರಶೈವ ನಾನಾಮುಖವಾಗಿ ಬೆಳೆ
ಅದು ವೈದಿಕ ಬ್ರಾಹ್ಮಣ್ಯದಲ್ಲಿಯೇ ಪ್ರತ್ಯೇಕ ಪಂಥವಾಗಿ ನಡೆದುಬರುತ್ತಿ
ಅದು ಪಾಶುಪತ ಧರ್ಮವೆಂದು ವಿಶಿಷ್ಟ ಸ್ಥಾನವನ್ನು ಪಡೆದಿತ್ತು.
ವೈದಿಕ ಪಾಶುಪತ ಮತ್ತು ಅವೈದಿಕ ಪಾಶುಪತ ಎಂದು ಎರಡು
ಅಷ್ಟಾವರಣ ಸಂಪನ್ನ ಪಾಶುಪತವೇ ವೈದಿಕ ಪಾಶುಪತ; ತಪ್ತಲಿಂಗ
ವುಳ್ಳದ್ದೇ ಅವೈದಿಕ ಪಾಶುಪತ. ಇವರಲ್ಲಿ ಲಿಂಗಾಂಗಿಗಳೇ ವೀರ
ಬ್ರಾಹ್ಮಣರು; ಅಲಿಂಗಿಗಳೇ ವೈದಿಕ ಬ್ರಾಹ್ಮಣರು ಎಂದು ಪರಿಗಣಿತರಾಗಿ
ಕೆಲವು ಶಿವಾಗಮಗಳು ಪಶು, ಪತಿ, ಪಾಶ, ಎಂಬ ಮೂರು ತತ್ತ್ವಗ
ವಿವರಿಸುತ್ತವೆ. ಪಶು ಎಂದರೆ ಜೀವ, ಪಾಶ ಎಂದರೆ ಮಾಯೆ, ಪತಿ
ಶಿವ ಎಂದು ಅರ್ಥ. ಶ್ರುತಿಗಳೂ ಶಿವಾಗಮಗಳೂ ಸಮನಾರ್ಥಕ ಧರ್ಮ
ನಿರೂಪಿಸುತ್ತವೆ. ಆದ್ದರಿಂದ ಆಗಮಧರ್ಮವೂ ವೈದಿಕ ಧರ್ಮವೇ
ಪಾಶುಪತ ಮೂವತ್ತಾರು ತತ್ತ್ವಗಳನ್ನು ಅಂಗೀಕರಿಸುತ್ತದೆ. ಬ್ರ
ಜೀವರೇ ಪಶುಗಳು. ಇವರನ್ನು ಅಜ್ಞಾನ ಅಥವಾ ಮಾಯೆ ಆವರಿಸು
ಮಲ, ಕರ್ಮ, ಮಾಯೆ, ಜಗತ್ತು, ತಿರೋಧಾನಕರ ಶಕ್ತಿ-ಇವು
ಪಾಶಗಳು. ಇವು ಜೀವಪಶುಗಳನ್ನು ಬಂಧಿಸುತ್ತವೆ. ಶಿವನನ್ನು ಭಕ್ತಿ
ಆರಾಧಿಸುವ ಜೀವರುಗಳು ಪಾಶಗಳಿಂದ ಬಿಡುಗಡೆಯನ್ನು ಹೊಂದು
ಪಾಶರಹಿತ ಜೀವರಿಗೆ ಶಿವತ್ವಾಭಿವ್ಯಕ್ತಿಯೇ ಮುಕ್ತಿ ಎಂಬುದು ಪಾ
ಸಿದ್ಧಾಂತ. ಈ ಸಿದ್ಧಾಂತದಲ್ಲಿ ಪಶು, ಪತಿ, ಪಾಶ ಎಂಬ ತತ್ತ್ವಗಳಿರುವಂತೆ
ಕ್ರಿಯೆ, ಚರ್ಯೆ, ಯೋಗ, ಜ್ಞಾನ ಎಂಬ ನಾಲ್ಕು ಪಾದಗಳುಂಟು.
ಪಿಂಡಾದಿಜ್ಞಾನ ಶೂನ್ಯಾಂತ ನೂರರೊಂದು ಸ್ಥಲಗಳಿವೆ. ಭಕ್ತಸ್ಥ
ಕ್ರಿಯಾದೀಕ್ಷೆ, ಪ್ರಾಣಲಿಂಗ ಸ್ಥಲದಲ್ಲಿ ಯೋಗದ

ಶರಣಸ್ಥಲದಲ್ಲಿ ಜ್ಞಾನದೀಕ್ಷೆ, ಐಕ್ಯಸ್ಥಲದಲ್ಲಿ ವಿಜ್ಞಾನದೀಕ್ಷೆಗಳನ್ನು ಪಾಶುಪತ ಧರ್ಮ ವಿಧಿಸಿರುತ್ತದೆ. ಇದರಂತೆಯೇ ಲಾಕುಳ, ಕಾಳಾಮುಖ ಮತ್ತು ಮಾಹೇಶ್ವರ ಎಂಬ ಶೈವಭೇದಗಳಲ್ಲಿಯೂ ಲಿಂಗವಂತ ಧರ್ಮವಿದೆ. ಈ ಎಲ್ಲ ಶಾಖೆಗಳಲ್ಲಿಯೂ ಲಿಂಗಿಬ್ರಾಹ್ಮಣರಿದ್ದಂತೆಯೇ ಅಲಿಂಗಿ ಬ್ರಾಹ್ಮಣರೂ ಇದ್ದರೆಂದು ತಿಳಿದುಬರುತ್ತದೆ. ಮಹಾ ಭಾರತ ಕಾಲದಲ್ಲಿಯೂ ಲಿಂಗಧಾರಿ ಬ್ರಾಹ್ಮಣ ಮತವಿತ್ತೆಂದು ಕೆಲವರು ಪಂಡಿತರು "ಬ್ರಾಹ್ಮಣಂ ಲಿಂಗಿನಂಚೈವ" ಎಂಬ ಪದ ಪ್ರಯೋಗವನ್ನು ಹಿಡಿದು ಸಾಧಿಸುತ್ತಾರೆ. ಈ ಶ್ಲೋಕ ಮಹಾ ಭಾರತದ ಅನುಶಾಸನಿಕ ಪರ್ವದಲ್ಲಿ ಬಂದಿದೆ. ಆ ಕಾಲದಲ್ಲಿ ಲಿಂಗ ಮತ್ತು ಯಜ್ಞೋಪವೀತಧಾರಿಗಳಾದ ವೈದಿಕ ಬ್ರಾಹ್ಮಣ ಪಂಗಡದವರಿದ್ದರು. ಇವರು ಲಿಂಗಿ ಬ್ರಾಹ್ಮಣರು. ಅದರಂತೆಯೇ ಕೇವಲ ಯಜ್ಞೋಪವೀತಧಾರಿಗಳಾದ ವೈದಿಕ ಬ್ರಾಹ್ಮಣ ಪಂಗಡದವರೂ ಇದ್ದರು. ಇವರು ಅಲಿಂಗಿ ಬ್ರಾಹ್ಮಣರು. ಈ ಎರಡು ಪಂಗಡಗಳಲ್ಲಿ ಯಾವ ಪಂಗಡದ ಬ್ರಾಹ್ಮಣನಾಗಲಿ ಶ್ರೇಷ್ಠವೆಂದು ಅರ್ಥವಾಗುತ್ತದೆಯೇ ವಿನಾ ಕೇವಲ ಲಿಂಗಧಾರಿಗಳಾಗಿದ್ದ ವೀರಶೈವ ಬ್ರಾಹ್ಮಣರಿಗೆ ಅದು ಅನ್ವಯಿಸುವುದಿಲ್ಲವೆಂದು ನಿರ್ಧರವಾಗಿ ಹೇಳಬಹುದು. ಇದೇ ದೃಷ್ಟಿಯಿಂದಲೇ ಶಂಕರಾಚಾರ್ಯರು ಪಾಷಾಣ ಲಿಂಗಧಾರಿ ಪಂಗಡದವರನ್ನು ಜಂಗಮರೆಂದು ಕರೆದಿರುತ್ತಾರೆ. ಈ ಶಿಲಾಲಿಂಗಧಾರಿಗಳಾದವರು ವೈದಿಕ ಬ್ರಾಹ್ಮಣ ವರ್ಗದಲ್ಲಿ ಪರಿಗಣಿತರಾಗಿರಲಿಲ್ಲ. ಲಿಂಗ ಮತ್ತು ಯಜ್ಞೋಪವೀತಧಾರಿಗಳಾದ ಬ್ರಾಹ್ಮಣ ಪಂಗಡದವರಾದ ಬಸವಣ್ಣನವರು ಯಜ್ಞೋಪವೀತವನ್ನು ತ್ಯಜಿಸಿ, ಕೇವಲ ಲಿಂಗಧಾರಿ ವೀರಶೈವ ಪಂಗಡವನ್ನು ಅಂಗೀಕರಿಸಿದರೆಂಬುದು ಈ ಸಂಶಯವನ್ನು ಪರಿಹರಿಸುತ್ತದೆ. ಅದರಿಂದಲೇ ಲಿಂಗಧಾರಿ ವೀರಶೈವರನ್ನು ಅತಿವರ್ಣಾಶ್ರಮಿಗಳೆಂದು ಕರೆಯುತ್ತಿದ್ದುದು ಅನ್ವರ್ಥಕವಾಗಿರುತ್ತದೆ. ಇದನ್ನು ಪ್ರಾಜ್ಞರು ಪರಿಶೀಲಿಸಬಹುದು. ಲಿಂಗಧಾರಿಗಳೆಲ್ಲರೂ ಒಂದೇ ಪಂಗಡದವರಾಗಿರಲಿಲ್ಲ; ಅವರ ಆಚರಣೆಯೂ ಒಂದೇ ರೀತಿಯಾಗಿರಲಿಲ್ಲ. ಪಾಶುಪತರಲ್ಲಿಯೂ ಕಾಳಾಮುಖರಲ್ಲಿಯೂ ಯಜ್ಞೋಪವೀತಧಾರಿಗಳ ಪಂಗಡದವರಿದ್ದಂತೆಯೇ ಕೇವಲ ಲಿಂಗಧಾರಿಗಳ ಪಂಗಡದವರೂ ಇದ್ದರು. ಈ ಉಭಯ ಪಂಗಡದವರ ಗೋತ್ರಸೂತ್ರಗಳು ಅನೇಕ ಸಂದರ್ಭಗಳಲ್ಲಿ ಒಂದೇ ಆಗಿರುತ್ತಿದ್ದುವು. ಈ ಲಿಂಗಧಾರಿ ಬ್ರಾಹ್ಮಣ ಪಂಗಡದವರಲ್ಲಿಯೂ ಆಗ ವರ್ಣಾಶ್ರಮಧರ್ಮ ಆಚರಣೆಯಲ್ಲಿತ್ತು.

ಕೇವಲ ಲಿಂಗಧಾರಿ ಪಂಗಡಗಳವರೂ ವೈದಿಕ ಬ್ರಾಹ್ಮಣರಂತೆಯೇ ತಪಸ್ವಿ
ಜ್ಞಾನಸಂಪನ್ನರೂ, ಶಾಸ್ತ್ರಪ್ರವೀಣರೂ, ಆಚಾರನಿಷ್ಠಾಗರಿಷ್ಠರೂ,
ಗಳೂ, ಆಚಾರ್ಯರೂ ಆಗಿದ್ದರು. ಆದರೆ, ಅವರು ಯಜ್ಞೋಪವೀತ
ಧರಿಸುತ್ತಿರಲಿಲ್ಲ. ಕಾಲಕ್ರಮೇಣ, ಈ ವೈದಿಕ ಬ್ರಾಹ್ಮಣ ಸಮಾಜ ಪ್ರಭಾ
ಯಾಗುತ್ತ ಬಂದಂತೆ, ಕೇವಲ ಲಿಂಗಧಾರಿ ಬ್ರಾಹ್ಮಣರು ಪ್ರತ್ಯೇಕ
ಬಂದಿರಬೇಕು. ಅವರನ್ನು ಅವೈದಿಕರೆಂದು ಇತರ ಪಂಗಡದವರು ಕರೆದಿ
ಅದರಿಂದಲೇ ಕೇವಲ ಲಿಂಗಧಾರಿಗಳೂ ಸಹ ತಮ್ಮ ಬ್ರಾಹ್ಮಣ್ಯವನ್ನು
ಕೊಳ್ಳಲು ಸಾಹಸಪಟ್ಟಂತೆ ಕಂಡುಬರುತ್ತದೆ. ವೇದಮಂತ್ರಗಳಿಗೆ ಕೇವ
ಧಾರಣ ಪರವಾಗಿ ವ್ಯಾಖ್ಯಾನ ಮಾಡಲು ಪ್ರಯತ್ನಪಟ್ಟರು. "ಪವಿತ್ರಂತೆ
ಬ್ರಹ್ಮಣಸ್ಪತೆ" ಎಂಬ ಮಂತ್ರಕ್ಕೆ ಪರಿಶುದ್ಧವಾದ ಶಿವಲಿಂಗವನ್ನು ಯಜ್ಞೋ
ವೀತದಂತೆ ಧರಿಸಬೇಕೆಂದು ಕೇವಲ ಲಿಂಗಧಾರಿಗಳು ಸಾಧಿಸಿರುತ್ತಾರೆ.
ರೂಪ ಯಜ್ಞೋಪವೀತಧಾರಿಗಳೂ ತ್ರೈವರ್ಣಿಕರೇ ಎಂದೂ, ಬ್ರಹ್ಮ
ವೆಂಬ ಉಪನಯನಕ್ಕಿಂತಲೂ ಶಿವದೀಕ್ಷಾರೂಪ ಉಪನಯನ ಸಂಸ್ಕಾ
ಉತ್ತಮತರವೆಂದೂ, ಅವರಿಗೂ ವೇದಾಧ್ಯಯನದಲ್ಲಿ ಅಧಿಕಾರವು
ಭಾವಿಸಿದರು. ಇದನ್ನು ಗಮನಿಸಿದರೆ, ವೇದ, ಆಗಮಗಳ ಕಾಲದಿಂದಲೂ
ಲಿಂಗಧಾರಿಗಳ ಪಂಗಡವೇ ಒಂದು ಪ್ರತ್ಯೇಕವಾಗಿದ್ದಿತೆಂದು ಸ್ಪಷ್ಟವಾಗಿ
ಬಹುದು. ಅತಿವರ್ಣಾಶ್ರಮಿಗಳಾಗಿದ್ದ ಈ ಪಂಗಡದವರೂ ತಮ್ಮಲ್ಲಿ
ಚತುರ್ವರ್ಣಗಳುಂಟೆಂದು ಹೇಳುತ್ತಿದ್ದರು.

> ಬ್ರಾಹ್ಮಣಃ ಕ್ಷತ್ರಿಯೋವಾಪಿ ವೈಶ್ಯೋವಾ ಶೂದ್ರಏವವಾ ।
> ಅಂತ್ಯಜೋವಾ ಶಿವೇಭಕ್ತಃ ಶಿವವನ್ಮಾನ್ಯ ಏವಸಃ ॥
> ಶಿವಭಕ್ತಿ ಸಮಾವೇಶೇತ್ವಜಾತಿ ಪರಿಕಲ್ಪನಾ ।
> ಇಂಧನೇಷ್ವಗ್ನಿದಗ್ಧೇಷು ಕೋವಾಭೇದಃ ಪ್ರಕೀರ್ತ್ಯತೇ ॥

ಎಂದು ರೇಣುಕಾಚಾರ್ಯರು ಉದ್ಘೋಷಿಸಿದ್ದಾರೆ. ಬ್ರಾಹ್ಮಣನಾಗಲಿ, ಕ್ಷ
ನಾಗಲಿ, ವೈಶ್ಯನಾಗಲಿ, ಶೂದ್ರನಾಗಲಿ, ಅಂತ್ಯಜನೇ ಆಗಲಿ ಶಿವಭಕ್ತ
ನಾದರೆ ಅವನು ಶಿವನಂತೆಯೇ ಮಾನ್ಯನಾಗುತ್ತಾನೆ. ಬೆಂಕಿಯಲ್ಲಿ
ಹೋದ ಕಾಷ್ಠದ ಬೂದಿಯಲ್ಲಿ ಯಾವ ಭೇದವೂ ಇಲ್ಲ. ಅದರಂತೆ
ರಲ್ಲಿ ಯಾವುದೊಂದು ಜಾತಿಮತ ಭೇದವೂ ಇರುವುದಿಲ್ಲ ಎಂಬ ಅ

ರೇಣುಕರ ಸಂದೇಶ ಆ ಕಾಲದ ಸಮಾಜ ಚಿತ್ರವನ್ನು ಸೂಚಿಸುತ್ತದೆ. ಆಗ ಜಾತಿ, ಉಚ್ಚ, ನೀಚ ಎಂಬ ತಾರತಮ್ಯ ಭಾವನೆ ಬೇರೂರಿತ್ತು. ಅದನ್ನು ಪರಿಹರಿಸಿ ವೇದಪೂರ್ವ ಸಮಾಜದಂಥ ಮಾನವ ಸಮಾಜವನ್ನು ರೂಪಿಸಬೇಕೆಂಬ ಮನೋಭಾವ ವೀರಶೈವ ಆಚಾರ್ಯರಲ್ಲಿ ಪ್ರಾಚೀನ ಕಾಲದಲ್ಲಿಯೇ ಮೂಡಿಬಂದಿತ್ತು. ಎಲ್ಲ ವಿಚಾರಗಳಲ್ಲಿಯೂ ಬಹಳ ಮಟ್ಟಿಗೆ ವೀರಶೈವದ ಮೂಲ ರೂಪವೇ ಆಗಿದ್ದ ಪಾಶುಪತ ಕಾಲಕ್ರಮದಲ್ಲಿ ವಿಕಾಸವಾಗುತ್ತ ಬಂದು ಕೊನೆಗೆ ವೀರಶೈವದಲ್ಲಿ ರೂಪುಗೊಂಡಿತೆಂಬುದನ್ನು ಈ ಧರ್ಮದ ಇತಿಹಾಸ ತಿಳಿಸುತ್ತದೆ. ಅಂದಿನ ವೀರಶೈವದಲ್ಲಿ ಶಿವಾಗಮಗಳ ರಚನೆಯ ಕಾಲದಲ್ಲಿ ಲಿಂಗಧಾರಿಗಳಲ್ಲಿ ಶಿವಾರಾಧ್ಯ ಮತ ಮತ್ತು ಶಿವಾಚಾರ್ಯ ಮತ ಎಂದು ಎರಡು ವಿಧವಾಗಿತ್ತು. ಆಯಾ ಮತದವರಿಗೆ ಅವರ ಆಚಾರ್ಯ ಸಂಪ್ರದಾಯದವರು ಗುರುಗಳಾಗಿದ್ದರು. ಸಿದ್ಧಾಂತ ಒಂದೇ; ಆಚಾರ ಭೇದ ಮಾತ್ರ. ಇದು ಸನಾತನ ವೀರಶೈವದ ಸ್ವರೂಪಚಿತ್ರ. ಶಿವಾಗಮಗಳು ಯಾವಾಗ ರಚನೆಯಾದವೆಂಬುದನ್ನು ನಿರ್ಧಾರವಾಗಿ ಹೇಳುವಂತಿಲ್ಲ. ಎಲ್ಲಾ ಆಗಮಗಳೂ ಒಂದೇ ಕಾಲದಲ್ಲಿ ಹುಟ್ಟಿದವುಗಳೆಂದು ಹೇಳುವುದಕ್ಕೂ ಆಗುವುದಿಲ್ಲ. ಆದರೂ ಸುಮಾರು ಒಂಬತ್ತನೆಯ ಶತಮಾನದಲ್ಲಿ ಪ್ರಮುಖವಾದ ಅನೇಕ ಶಿವಾಗಮಗಳು ರೂಪಗೊಂಡವೆಂದು ಹೇಳಬಹುದು. ಕೆಲವು ಶಿವಾಗಮಗಳಲ್ಲಿ ಹನ್ನೆರಡನೆಯ ಶತಮಾನದಲ್ಲಿ ಅನೇಕ ಪ್ರಕ್ಷಿಪ್ತಗಳು ಆದಂತೆ ಕಂಡುಬರುತ್ತವೆಯೆಂದು ಪಂಡಿತರು ತಿಳಿಸುತ್ತಾರೆ.

ಶಿವಾಗಮಗಳ ಆಧಾರದಿಂದ ಬೆಳೆದ ವೀರಶೈವದಲ್ಲಿ ಪಂಚ ಆಚಾರ್ಯ ಪೀಠಗಳು ಆ ಜನಾಂಗದ ಗುರುಪೀಠಗಳಾಗಿವೆ. ರೇಣುಕ, ದಾರುಕ, ಘಂಟಾಕರ್ಣ, ಧೇನುಕರ್ಣ ಮತ್ತು ವಿಶ್ವಕರ್ಣ ಎಂಬ ಪಂಚಾಚಾರ್ಯ ವಂಶೀಯರಿಗೆ ಕ್ರಮವಾಗಿ ಮುಖಾರಿ ಪಂಚಮರು, ಕಾಲಾರಿ ಪಂಚಮರು, ಪುರಾರಿ ಪಂಚಮರು, ಕಾಮಾರಿ ಪಂಚಮರು, ಭವಾರಿ ಪಂಚಮರು ಎಂದು ಹೆಸರು. ಇವರು ಗೋತ್ರಕರ್ತರ ವಂಶೀಯರಿಗೂ ಸಾಮಾನ್ಯವಾಗಿ ಪಂಚಮರೆಂದು ಹೆಸರು. ಇವರು ಪರಶಿವನ ಪಂಚಮ ಮುಖವಾದ ಈಶಾನ ಮುಖದಿಂದ ಅವತರಿಸಿದ ಪಂಚಮುಖ ಗಣಾಧೀಶನ ಸಂತತಿಯುವರಾದುದರಿಂದ ಪಂಚಮರೆಂದು ಹೆಸರು. ಈ ಪಂಚಮ ವಂಶೀಯರೇ ಸ್ವಾಯಂಭುವಾಗಮ ವಚನದಂತೆ ಎಲ್ಲಾ ವರ್ಣಗಳಲ್ಲಿಯೂ ಶ್ರೇಷ್ಠರು. ಬಡಗಲವರು, ಬಳ್ಳಾರಿಯವರು, ಸ್ಥಳದವರು, ಆರಾ

ಧ್ಯರು, ಶೀಲವಂತರು, ಮೇಲ್ಪಾವಡದವರು, ಘೂಳಪಾವಡದವರು, ಹಣ್ಣ ಚ್ಚಾರದವರು, ಅಥಣಿಯವರು, ಪಂಚಮಶಾಲೆಯವರು, ನಿಡುಗಲ್ಲವರು, ಮು ಗುಂದದವರು, ಸಂಪಿಗೆಯವರು, ತುರುಕಾಣ್ಯದವರು, ವಸ್ತ್ರದವರು, ಇವ ಕೆಲವು ಪಂಗಡದವರು ಪಂಚಾಚಾರ್ಯರೆಂಬ ಮೂಲ ಗುರುಗಳ ಗೋತ್ರಕ್ಕೆ ವಂಶೀಯರಾದ ಪಂಚಮರು. ಈ ವರ್ಗದವರು ಈ ಮತದ ಸಮಸ್ತ ಜಾತಿ ರಿಗೂ ಗುರುಗಳಾಗಿರುತ್ತಾರೆ. "ಯಥಾಮತ್ಪಂಚವಕ್ತ್ರೇಷು ಶ್ರೇಷ್ಠಮೀ ಮಾನನಮ್ । ತಥಾಸರ್ವೇಷು ವರ್ಣೇಷು ಶ್ರೇಷ್ಠಾಃ ಪಂಚಮ ವಂಶಜಾ ಎಂದು ವೀರಶೈವ ಸದಾಚಾರ ಸಂಗ್ರಹದಲ್ಲಿ ಹೇಳಿದೆ. ಆಸ್ಥಾನ ಮಹಾ ವಿ ಪಂಡಿತರತ್ನಂ ಶಿರಸಿ ಗುರುಶಾಂತ ಶಾಸ್ತ್ರಿಗಳು 'ಉಪನ್ಯಾಸ ಸಂಗ್ರಹ' ಗ್ರಂಥವಲ್ಲಿಯೂ ಇದೇ ಅಭಿಪ್ರಾಯವನ್ನು ಸೂಚಿಸಿರುತ್ತಾರೆ. (ಶ್ರೀ ಗುರುಶಾ ಶಾಸ್ತ್ರಿಗಳು ನನಗೆ ಸಂಸ್ಕೃತ ವಿದ್ಯಾಗುರುವಾಗಿದ್ದರೆಂಬುದನ್ನು ಗೌರವಪೂ ವಾಗಿ ನೆನಪು ಮಾಡಿಕೊಳ್ಳುತ್ತೇನೆ.) ವೀರಶೈವ ಪಂಚಮ ಪಂಗಡ ಆಚಾರ್ಯ ವರ್ಗದವರು. ಇವರಿಗೆ ಗುರುಸ್ಥಲದವರು ಎಂಬ ಸಾಮಾ ಹೆಸರುಂಟು. ಇವರಲ್ಲಿ ವಂಶ್ಯರು ಮತ್ತು ಆಗಂತುಕರು ಎಂದು ಎರಡು ಆದಿಯಿಂದಲೂ ಪರಂಪರೆಯಾಗಿ ಬಂದ ಲಿಂಗಾಂಗಿಗಳೇ ವಂಶ್ಯರು; ಮೊ ಅಲಿಂಗಿಗಳಾಗಿದ್ದು ತರುವಾಯ ಲಿಂಗಧಾರಿಗಳಾಗಿ ಈ ಮತವನ್ನು ಸೇರಿದ ಆಗಂತುಕರು. ಚತುರಾಚಾರ್ಯರೇ ಈ ಮತದ ಪ್ರಮುಖ ಆಚಾರ್ಯ ಪ್ರಸಿದ್ಧವಾಗಿದೆ. ಆದರೆ ಕಾಶೀಪೀಠದ ವಿಶ್ವಕರ್ಣರು ಈ ಚತುರಾಚಾರ್ಯ ಗುರುಸ್ಥಾನದಲ್ಲಿದ್ದು ಐದನೆಯ ಆಚಾರ್ಯರೂ ಆಗಿರುತ್ತಾರೆ. ಆದ್ದರಿಂದ ಆಚಾರ್ಯರೆಂದು ರೂಢಿಯಲ್ಲಿದೆ.

ಪರಮೇಶ್ವರನ ಪಂಚಮುಖಗಳಲ್ಲಿ ಈಶಾನ್ಯಮುಖ ಶ್ರೇಷ್ಠತಮವಾದು ಪಂಚವಕ್ತ್ರಗಣೇಶ್ವರರು ಈ ಮುಖದಿಂದ ಉದಯವಾದವರು. ಇವರ ವಂಶ ತರೇ ಪಂಚಮರು. ಶಿವನ ಸದ್ಯೋಜಾತ, ವಾಮದೇವ, ಅಘೋರ ಮ ತತ್ಪುರುಷ ಮುಖದಿಂದ ಇತರ ನಾಲ್ವರು ಆಚಾರ್ಯರು ಅನಂತರ ಆವಿರ್ಭ ವರು. ಇವರು ಆಜನ್ಮ ಬ್ರಹ್ಮಚಾರಿಗಳು. ಇವರು ಕೈಲಾಸದಿಂದ ಬಂ ಕಾಲಾನಂತರದಲ್ಲಿ ಕೈಲಾಸಕ್ಕೆ ತೆರಳಿದರು. ಇವರ ತನುಸಂಚಾತರಿಲ್ಲ. ಮೊ ಭಾಷೆ; ಆಮೇಲೆ ವ್ಯಾಕರಣ. ಮೊದಲು ಶಾಸ್ತ್ರ; ಆಮೇಲೆ ವ್ಯಾಖ್ಯಾನ.

ರಂತೆಯೇ, ಮೊದಲು ಸಮಾಜ. ಅನಂತರ ಉಪದೇಶ. ಆದ್ದರಿಂದ ಪ್ರಪ್ರಥಮ ವೀರಶೈವ ಸಮಾಜವೆಂದರೆ, ಪಂಚವಕ್ತ್ರ ಗಣೇಶ್ವರ ವಂಶಜರೇ ಆಗಬೇಕು. ಮೊದಲನೆಯ ಆಚಾರ್ಯ–ಗುರು ಎಂದರೆ ಪಂಚವಕ್ತ್ರ ಗಣಾಧೀಶ್ವರನಾಗಿರುತ್ತಾನೆ. "ಶ್ರೀ ಕಾಶಿಯಲ್ಲಿ ವಿಶ್ವೇಶ್ವರ ಲಿಂಗದಲ್ಲಿ ವಿಶ್ವಕರ್ಣರು ಬರಮಾಡಿದರು. ಇವರಿಗೆ ಪಂಚಾಕ್ಷರ, ಪಂಚಾನನ, ವಿಶ್ವಕರ್ಣ, ವಿಶ್ವಾರಾಧ್ಯರೆಂದು ಯುಗ ಪ್ರಭೇದ ನಾಮಗಳುಂಟು" ಎಂಬುದಾಗಿ "ಶ್ರೀ ಮರುಳಸಿದ್ಧಾಂಕ" ಗ್ರಂಥದಲ್ಲಿ ಉಕ್ತವಾಗಿದೆ. ಇದರಲ್ಲಿ ಪಂಚಾನನ ಎಂಬುದು ಪಂಚವಕ್ತ್ರ ಎಂಬುದರ ಪರ್ಯಾಯ ನಾಮವಾಗಿದೆಯೆಂಬುದರಲ್ಲಿ ಅನುಮಾನವಿಲ್ಲ. ಈ ಪಂಚಮ ವರ್ಗದವರೇ ಆಚಾರ್ಯ ಪಂಗಡದವರು. ವೃತ್ತಿಭೇದದಿಂದ ಇವರಲ್ಲಿ ಬೇರೆ ಬೇರೆ ಪಂಗಡಗಳಾಗಿವೆ; ಅಷ್ಟೇ. ಪುರೋಹಿತವರ್ಗದವರು ಅಯ್ಯಗಳೆನಿಸಿಕೊಂಡರು. ಇದು ಸನಾತನ ವೀರಶೈವದ ಸ್ಥೂಲ ಪರಿಚಯ. ಇಂದಿನ ವೀರಶೈವದಲ್ಲಿ ಸನಾತನ ತತ್ತ್ವಗಳು ಆಚರಣೆಯಲ್ಲಿವೆ. ಕಾಲಧರ್ಮವನ್ನು ಅನುಸರಿಸಿ, ವೀರಶೈವದಲ್ಲಿ ಅನೇಕ ಮಾರ್ಪಾಟುಗಳಾಗಿವೆ. ಇನ್ನೂ ನಾಗರಿಕ ಮನೋಭಾವವನ್ನು ಅನುಸರಿಸಿ ಈ ಮತದಲ್ಲಿ ಸುಧಾರಣೆಗಳಾಗಬೇಕು. ಬಸವಣ್ಣನವರು ಹನ್ನೆರಡನೆಯ ಶತಮಾನದಲ್ಲಿ ಈ ಸನಾತನ ವೀರಶೈವದಲ್ಲಿ ನವಚೈತನ್ಯವನ್ನು ತುಂಬಿದರು. ತತ್ತ್ವ ಹಳೆಯುದೇ ! ಆದರೆ, ಶರಣರು ಬಸವಣ್ಣನವರ ಪಂಥದಲ್ಲಿ ಹೊಸ ರೂಪ, ಹೊಸ ಭಾವನೆ, ಹೊಸ ಶಕ್ತಿ, ಹೊಸವಿನ್ಯಾಸ, ಹೊಸ ಮಾರ್ಗ ಮತ್ತು ಹೊಸ ಸೊಬಗುಗಳನ್ನು ಬೆಳಗಿದರು. ಈ ಸನಾತನ ವೀರಶೈವ ಆಧುನಿಕ ವೀರಶೈವದ ಗಂಗಾಮೂಲವೆಂಬುದನ್ನು ಮರೆಯುವಂತಿಲ್ಲ. ವೀರಶೈವ ಒಂದು ಮತವಲ್ಲ; ಹಲವು ಮತಗಳ ಒಕ್ಕೂಟ. ಇದೊಂದು ಮತೀಯ ವಿಶ್ವ ಸಂಸ್ಥೆ ಎಂಬುದನ್ನು ನಿರಾಕರಿಸುವಂತಿಲ್ಲ. ಸನಾತನ ವೀರಶೈವದ ಪ್ರಗತಿಸ್ವರೂಪವೇ ಶರಣಧರ್ಮ.



# ತರಂಗ ೩.

## ಶರಣಯುಗ ಜೀವನ; ಜಂಗಮ ಸಂವಿಧಾನ

೧. "ತನ್ನ ವಿನೋದಕ್ಕೆ ತಾನೇ ಸೃಷ್ಟಿಸಿದ ಪ್ರಪಂಚವನು;
ತನ್ನ ವಿನೋದಕ್ಕೆ ತಾನೇ ತಿರುಗಿಸಿದ ಅನಂತ ದುಃಖಗಳ
ಇಂತೆನ್ನ ಚನ್ನಮಲ್ಲಿಕಾರ್ಜುನನೆಂಬ ಪರಶಿವನು
ಜಗದ್ವಿಲಾಸ ಸಾಕಾದೊಡೆ ಮತ್ತೆ ಪರಿವನಾ
ಮಾಯಾಪಾಶವನು

—ವೈರಾಗ್ಯ ಸಂಪನ್ನೆ ಅಕ್ಕ ಮಹಾ

ವೀರಶೈವದಲ್ಲಿ ಗುರುಮಠಗಳಿರುವಂತೆಯೇ ವಿರಕ್ತ ಮಠಗಳೂ ಪಂಚ ಗುರುಪೀಠಗಳೇ ವೀರಶೈವದ ಸಾರ್ವಭೌಮ ಸಿಂಹಾಸನ ಪೀಠಗಳ ಸನಾತನ ವೀರಶೈವರು ಗೌರವಿಸುತ್ತಾರೆ. ಆದರೆ ವಿರಕ್ತ ಮಠಗಳವರು ಶೂನ್ಯ ಸಿಂಹಾಸನ ಸಂಪ್ರದಾಯದವರೆಂದು ಹೇಳಿಕೊಳ್ಳುತ್ತಾರೆ. ಕೆಲವರು ತಾವೂ ಜಗದ್ಗುರುಗಳೆಂದು ಭಾವಿಸಿಕೊಂಡಿರುತ್ತಾರೆ. ಇವರ ಸನಾತನ ವೀರಶೈವ ಧರ್ಮವನ್ನೇ ಅನುಸಂಧಾನ ಮಾಡುತ್ತಾರೆ! ಪ್ರಾ ವೀರಶೈವದಲ್ಲಿ ಪಂಚ ಆಚಾರ್ಯ ಪೀಠಗಳನ್ನು ಪರಿಗಣಿಸಿದಂತೆ ಶೂನ್ಯ ಗಳನ್ನು ಪರಿಗಣಿಸಿಲ್ಲ. ಹಾಗಾದರೆ, ಶೂನ್ಯ ತತ್ತ್ವವೆಂದರೇನು? ಇದು ಆ ವೀರಶೈವದಲ್ಲಿ ಸೇರಿಲ್ಲವೆ? ಅಥವಾ ಇದು ವೀರಶೈವದ ಹೊರಗಡೆ ನಿಂತಿದೆ ಶೂನ್ಯ ಸಿಂಹಾಸನ ಯಾವಾಗ ಸ್ಥಾಪನೆಯಾಯಿತು? ಶೂನ್ಯ ಸಿಂಹಾಸನವ ವಿರಕ್ತರು ಮಾತ್ರ ಶೂನ್ಯತತ್ತ್ವ ಪರಿಪಾಲಕರೇ? ಶಕ್ತಿವಿಶಿಷ್ಟಾದ್ವೈತದಲ್ಲಿ ಶೂನ್ಯ ತತ್ತ್ವ ಅಡಕವಾಗಿಲ್ಲವೆ? ಸಿದ್ಧಾಂತ ಸಿಂಹಾಸನಗಳಿದ್ದಮೇಲೆ ಸಿಂಹಾಸನದ ವೈಶಿಷ್ಟ್ಯವೇನು? ಇವೇ ಮುಂತಾದ ಹಲವು ಸಂದೇಹ ಮೂಡುತ್ತವೆ. ಈ ಸಂದೇಹಗಳನ್ನು ನಿರ್ಮಾತ್ಸರ್ಯ ದೃಷ್ಟಿಯಿಂದ ವಿ ತತ್ತ್ವಜ್ಞಾನಿಗಳು ವಿವೇಚಿಸಬಹುದು.

ಶೂನ್ಯ ಎಂಬ ಪದ ಸಾಮಾನ್ಯವಾಗಿ ಏನೂ ಇಲ್ಲದ್ದು ಎಂಬ ಅರ್ಥ ಸೂಚಿಸುತ್ತದೆ. ಆದರೆ, ವೀರಶೈವದಲ್ಲಿ ಈ ಶಬ್ದ ಯಾವುದೋ ಒಂದು ವಿ

ಅರ್ಥವನ್ನು ಕೊಡುತ್ತದೆ. ನಾವು ಈವರೆಗೆ ಅನೇಕ ಪ್ರಮುಖ ಮತಧರ್ಮಗಳ ಸ್ವರೂಪವನ್ನು ಅವಲೋಕಿಸಿದೆವು. ಕೇವಲ ಜೈನ, ಬೌದ್ಧ ಮತ್ತು ಅದ್ವೈತ ಧರ್ಮಗಳಲ್ಲಿ ಈ ಶೂನ್ಯಪದ ವಿಭಿನ್ನಾರ್ಥಗಳಲ್ಲಿ ಪ್ರಯೋಗವಾಗಿರುವುದನ್ನು ಅರಿತೆವು. ಜೈನರು ತಮ್ಮ ತತ್ತ್ವಗಳನ್ನು ಒಪ್ಪದ ಅನ್ಯಧರ್ಮೀಯರನ್ನು ಮಿಥ್ಯಾ ದೃಷ್ಟಿಗಳೆಂದು ಕರೆಯುತ್ತಾರೆ. ಅವರು ಅದ್ವೈತದ ಮಾಯೆಯನ್ನಾಗಲಿ ಬೌದ್ಧರ ಶೂನ್ಯವಾದವನ್ನಾಗಲಿ ಸಂಪೂರ್ಣವಾಗಿ ನಿರಾಕರಿಸುತ್ತಾರೆ. ಅದ ರಂತೆಯೇ, ಅದ್ವೈತ ಧರ್ಮ ಬೌದ್ಧ ಧರ್ಮದ ಶೂನ್ಯತತ್ತ್ವವನ್ನು ನಿರಾಕರಿಸಿ, ಮಾಯಾ ವಾದವನ್ನು ನಿರೂಪಿಸಿ ಬ್ರಹ್ಮಸತ್ಯ ತತ್ತ್ವವನ್ನು ಅಂಗೀಕರಿಸುತ್ತದೆ. ಬೌದ್ಧರು ಶೂನ್ಯ ವಾದವನ್ನು ಪೃಥತರವಾಗಿ ಪ್ರತಿಪಾದಿಸಿದರೂ "ಶೂನ್ಯವಿಹಾರ ಸಿಂಹಾಸನ"ವನ್ನು ಸ್ಥಾಪಿಸಲಿಲ್ಲ. ಶಂಕರಾಚಾರ್ಯರ ಮಾಯವಾದ ಬೌದ್ಧರ ಶೂನ್ಯ ವಾದವನ್ನು ಬೇರು ಸಹಿತ ಅಲುಗಾಡಿಸಿತು. ಆದರೂ ಈ ಮಾಯಾ ವಾದ ಅದ್ವೈತ ಸಿದ್ಧಾಂತದಲ್ಲಿ ಲೀನವಾಗಿದೆಯೇ ಹೊರತು, ಪ್ರತ್ಯೇಕವಾಗಿಲ್ಲ. ಈ ಮಾಯಾ ವಾದವನ್ನೇ ಪ್ರತ್ಯೇಕವಾಗಿ ಎತ್ತಿ ಹಿಡಿಯಲು ಶಂಕರಾಚಾರ್ಯರು 'ಮಾಯಾ ಸಿಂಹಾಸನ'ವನ್ನು ಪ್ರತಿಷ್ಠಾಪಿಸಲಿಲ್ಲ. ಅದ್ವೈತ ಸಿದ್ಧಾಂತದ ಮಾಯಾ ವಾದವನ್ನು ವಿಶಿಷ್ಟಾದ್ವೈತ ಮತ್ತು ದ್ವೈತ ಸಿದ್ಧಾಂತಗಳು ಅಂಗಿ ಕರಿಸದಿದ್ದರೂ ಅವರು 'ಮಾಯಾ ನಿರಸನ' ಸಿಂಹಾಸನಗಳನ್ನು ರೂಪಿಸಲಿಲ್ಲ ! ವೀರಶೈವದಲ್ಲಿ ಮಾತ್ರ ಆ ತತ್ತ್ವದ ಅಂಗವೇ ಆದ ಶೂನ್ಯತತ್ತ್ವವನ್ನು ಸಮರ್ಥಿ ಸಲು 'ಶೂನ್ಯ ಸಿಂಹಾಸನ' ಸೃಷ್ಟಿಯಾದಂತೆ ವ್ಯಕ್ತವಾಗುತ್ತದೆ. ಇದು ವೀರಶೈವದಲ್ಲಿ ವಿರಕ್ತ ಸಂಪ್ರದಾಯವನ್ನು ಸೂಚಿಸುತ್ತದೆಯೆಂದು ಧಾರಾಳವಾಗಿ ಹೇಳಬಹುದು. ಸಾಧಕನು ಶಿವಪಥದಲ್ಲಿ ನಡೆದು ಜೀವನ್ಮುಕ್ತನಾಗಬಲ್ಲನು. ಈ ಜೀವನ್ಮುಕ್ತ ಸ್ಥಿತಿಯೇ ಲಿಂಗಾಂಗಸಾಮರಸ್ಯ ! ಕೈವಲ್ಯಾನಂದ ಸ್ಥಿತಿ ! ಪ್ರತಿಯೊಬ್ಬ ವೀರಶೈವನೂ ಸಾಧಿಸಬಲ್ಲ ಪರಮೋಚ್ಚ ಸ್ಥಿತಿ ಇದು ! ಈ ಶಿವ ಜೀವೈಕ್ಯಸ್ಥಿತಿಯೇ ನಿರಂಜನ ಸ್ವರೂಪ ! ಈ ಸ್ಥಿತಿಯಲ್ಲಿ ಸಚ್ಚಿದಾನಂದಾನುಭವ ವಿರುವಂತೆಯೇ ಲೋಕಾನುಗ್ರಹ ಶಕ್ತಿಯೂ ಇರುತ್ತದೆ. ಇದೇ ಪೂರ್ಣ ಸಿದ್ಧಾತ್ಮ ! ಜೈನರೂ ಈ ಸ್ಥಿತಿಯನ್ನು ಸಿದ್ಧಾತ್ಮವೆಂದು ಕರೆಯುತ್ತಾರೆ. ಆ ಸಿದ್ಧ ವಿಮುಕ್ತದೇಹಿ ! ಕೇವಲ ಆತ್ಮಜ್ಯೋತಿ ಮಾತ್ರವೇ ಅಲ್ಲಿ ಪ್ರಕಾಶಿಸುತ್ತದೆ. ಅವನೇ ಪರಮ ನಿರಂಜನ ಸಿದ್ಧ ! ಅವನು ಮೃತ್ಯುಂಜಯ ! ನಿತ್ಯಮುಕ್ತ !

ಅವನು ಮತ್ತೆ ಇಹಜೀವನದಲ್ಲಿ ಬರುವಂತಿಲ್ಲ. ಆವನು ಈ ಲೋಕ ವ್ಯಾಪ
ತೀತ ! ಈ ದೃಷ್ಟಿಯಿಂದ ಆವನು ಅತಿವರ್ಣಾಶ್ರಮಿ ! ನಿತ್ಯನಿರಂಜನ ! ಲೋ
ಲೋಕಸಂಪೂಜ್ಯ ! ಆದರೂ, ನಿತ್ಯಜೀವನದಲ್ಲಿ ಅವನು ಸುಳಿಯುವಂತಿ
ಸುಳಿಯಲಾರ ! ಆವನಿಂದ ಲೋಕಶಿಕ್ಷಣವಾಗುವಂತಿಲ್ಲ; ಅದು ವೈಯ
ಪರಮಾರ್ಥಸಿದ್ಧಿ ಸ್ವರೂಪ ! ಸಮಷ್ಟಿ ಜೀವನದಲ್ಲಿ ಈ ನಿರಂಜನನು
ಅಗೋಚರ ! ಇಂಥ ನಿರಂಜನ ಸ್ಥಿತಿಯನ್ನು ಷಟ್‌ಸ್ಥಲ ಮಾರ್ಗದಿಂದ
ಸಲು ಸಾಧಕನಿಗೆ ಪ್ರಪ್ರಥಮದಲ್ಲಿ ಶ್ರೀ ಗುರುವಿನ ಅನುಗ್ರಹವಾಗಬೇ
ಇವನು ನಿರಂಜನನಾದರೂ ಗುರುವನ್ನು ಮೀರಿದಂತಾಗಲಿಲ್ಲ ! ಗುರು
ನಿರಂಜನನಾಗಬಲ್ಲ ! ಆದರೆ, ನಿರಂಜನ ಗುರುವಾಗಲಾರನು ! ಜೈನ ಧ
ವಲ್ಲಿಯೂ ಇದೇ ತತ್ತ್ವ ಅನುಷ್ಠಾನದಲ್ಲಿದೆ. ಈ ನಿರಂಜನ ಸ್ಥಿತಿಯನ್ನು
ಯಲು ಸಾಧಕ ವೀರಶೈವ ಧರ್ಮನಿಷ್ಠನಾಗಿಯೇ ನಡೆಯಬೇಕು. ಈ ಸ್ಥಿತಿ
ನಿರಂಜನನಿಗೆ ಕುಲಗೋತ್ರ ಜಾತಿಮತಗಳ ತೊಡಕಿಲ್ಲ. ಆವನು
ವಿರಕ್ತನೇ ಹೊರತು ಜ್ಞಾನ ವಿರಕ್ತನಲ್ಲ ! ಈ ಸ್ಥಿತಿಯಲ್ಲಿ ಅವನು
ಸಿಂಹಾಸನಾರೋಹಣ ಮಾಡುತ್ತಾನೆ ! ಇದು ಕೇವಲ ಭಾವನಾ ಸಿಂಹಾಸ
ಭೌತಸಿಂಹಾಸನವಲ್ಲ ! ಈ ನಿರಂಜನಾವಸ್ಥೆಯನ್ನು ಶೂನ್ಯಸ್ಥಿತಿಯೆಂದು
ಯುತ್ತಾರೆ. ಪ್ರತಿಯೊಬ್ಬನೂ ಭಕ್ತಸ್ಥಲದಿಂದ ಹಂತಹಂತವಾಗಿ ಸಿದ್ಧಿಯ
ಪಡೆಯುತ್ತ ಐಕ್ಯಸ್ಥಲದಲ್ಲಿ ನಿತ್ಯನಿರಂಜನನಾಗಬಹುದು ! ಕೇವಲ ವಿರ
ಮಾತ್ರವೇ ಈ ಪದವಿಯನ್ನು ಪಡೆಯಬೇಕೆಂಬುದೇನೂ ಇಲ್ಲ. ನಿಷ್ಠಗೃ
ನಿಷ್ಠವಿರಕ್ತನಷ್ಟೇ ಶಕ್ತ; ವಿರಕ್ತನಷ್ಟೇ ಪೂಜ್ಯ ! ಪಾರಮಾರ್ಥಿಕ ಮಾರ್ಗ
ಇಬ್ಬರೂ ಒಂದೇ ! ಲೌಕಿಕ ಜೀವನದಲ್ಲಿ ಗೃಹಸ್ಥ ಲೋಕಜೀವನದಲ್ಲಿರುತ್ತಾ
ವಿರಕ್ತ ಲೋಕಜೀವನದಿಂದ ದೂರವಿರುತ್ತಾನೆ ! ಒಂದು ಆತ್ಮಯೋ
ಇನ್ನೊಂದು ಶಿವಯೋಗ ! ಈ ಯೋಗದ್ವಯದ ಸಿದ್ಧಿ ಆದರ ತಪಸ್ಸನ್ನು
ಲಂಬಿಸುತ್ತದೆ. ವಿರಕ್ತ ಗೃಹಜೀವನದಲ್ಲಿ ಬೆರೆಯುವಂತಿಲ್ಲ; ಗೃಹಸ್ಥ
ಜೀವನದಲ್ಲಿ ಬೆರೆಯಬಲ್ಲ ! ವಿರಕ್ತ ಗೃಹಸ್ಥರ ಜೀವನದಲ್ಲಿ ಸೇರಿದರೆ ಆ
ಜೀವನದಲ್ಲಿ ಆಮಂಗಳ ಮೂಡೀತು ! ವಿರಕ್ತನ ತಪಸ್ಸು ಲಯವಾದೀ
ಸ್ತ್ರೀಯರು ವಿರಕ್ತರ ದರ್ಶನ ಮಾಡಬಾರದು; ಆವರ ಪಾದಗಳನ್ನು ಮು
ನಮಸ್ಕಾರ ಮಾಡಬಾರದು. ಆದರಿಂದ ಸ್ತ್ರೀಯರಿಗೆ ಶ್ರೇಯಸ್ಸಿಲ್ಲ; ವಿರಕ್ತ

ಸದ್ಗತಿಯಿಲ್ಲ. ತಿರುಮಕೊಡಲು ನರಸೀಪುರದ ಸೋಸಲೆ ಗ್ರಾಮದ ಬಳಿ ತೋಪಿನ ಮಠದ ಷಡಕ್ಷರಸ್ವಾಮಿಗಳೆಂಬ ವಿರಕ್ತರೊಬ್ಬರಿದ್ದರು. ಅವರು ಸುಮಾರು ೧೩ ವರ್ಷಗಳ ಹಿಂದೆ ಲಿಂಗೈಕ್ಯರಾದರು. ಅವರು ಆಶ್ರಮಸ್ವೀಕಾರ ಮಾಡಿದಮೇಲೆ ಸುಮಾರು ಏವತ್ತಾರು ವರ್ಷಕಾಲ ಬದುಕಿದ್ದರು. ಅವರು ೨ಳನೆಯ ವರ್ಷದಲ್ಲಿ ವಿರಕ್ತರಾದರು. ಆಮೇಲೆ ಅವರು ಎಂದೂ ಸ್ತ್ರೀಯರನ್ನೇ ಕಂಡವರಲ್ಲ. ಮೈಸೂರು ಮಹಾರಾಣಿಯವರೂ ಅವರ ದರ್ಶನವನ್ನು ಮಾಡಲು ಸಾಧ್ಯವಾಗ ಲಿಲ್ಲ. ಅಂಥ ವೀರ ವಿರಕ್ತರು! ವಿರಕ್ತರು ಗ್ರಾಮಜೀವನದಿಂದ ದೂರವಿರಬೇಕು. ಆದರಿಂದಲೇ ವಿರಕ್ತರ ಮಠಗಳು ಪ್ರತ್ಯೇಕವಾಗಿ ಹೊರಹೊಳಲಿನಲ್ಲಿರುತ್ತವೆ. ಗುರುಪೀಠಗಳಲ್ಲಿರುವವರಾದರೂ ಗೃಹಜೀವನದಿಂದ ದೂರವಿರುತ್ತಾರೆ. ಆದರೆ, ಅವರು ಗೃಹಸ್ಥರ ಜೀವನದಲ್ಲಿ ಸೇರಿ ಎಲ್ಲ ಕಾರ್ಯಗಳಲ್ಲಿಯೂ ಗೃಹಸ್ಥರನ್ನು ಆಶೀರ್ವದಿಸುತ್ತಾರೆ. ಅವರು ಅನಾಸಕ್ತರು ! ವೀರಶೈವದಲ್ಲಿ ಗುರು ಮತ್ತು ಜಂಗಮ ಎಂಬ ಪ್ರತ್ಯೇಕ ಸ್ಥಾನಗಳಿವೆ. ಇತರ ಮತಗಳಲ್ಲಿ ಗುರುಪದವಿ ವಿಭಾಗ ವಾಗಿಲ್ಲ. ಶಿಷ್ಯಕೋಟಿಯನ್ನು ಉದ್ಧಾರ ಮಾಡಲು ಗುರು ಶಿವದೀಕ್ಷಾಪೂರ್ವಕ ಇಷ್ಟಲಿಂಗ ಪ್ರದಾನ ಮಾಡಿ, ಮಂತ್ರೋಪದೇಶದಿಂದ ಅನುಗ್ರಹಿಸುತ್ತಾನೆ. ಆ ಶಿಷ್ಯ ಪರಂಪರೆಯ ಅಭ್ಯುದಯವನ್ನು ಅನುಲಕ್ಷಿಸಿ, ಅಲ್ಲಲ್ಲಿ ಸಂಚರಿಸುತ್ತ ತತ್ತ್ವಬೋಧೆಯಿಂದ ಅವರಿಗೆ ಶಿವಪಥವನ್ನು ತೋರಿಸುವವನೇ ಜಂಗಮ. ವೀರಶೈವದಲ್ಲಿ ಶಿವ (ಲಿಂಗ) ಗುರುವೂ ಆಗಿದ್ದಾನೆ; ಜಂಗಮನೂ ಆಗಿದ್ದಾನೆ. ಅಷ್ಟಾವರಣದಲ್ಲಿ ಗುರು, ಜಂಗಮವೆಂದರೆ ಈ ಗುರುಸಂಪ್ರದಾಯವೇ. ಆದರೆ, ಬಸವಣ್ಣನವರ ಶರಣಸಮಾಜದಲ್ಲಿ ಈ ಅಷ್ಟಾವರಣದ ಗುರು, ಜಂಗಮ ಸ್ಥಾನ ಗಳು ವಿರಕ್ತರಲ್ಲಿಯೂ ಸೇರಿರುತ್ತವೆ. ಇದು ಧಾರ್ಮಿಕ ವಿಕಾಸ. ಶರಣಯುಗ ದಲ್ಲಿ ಸನಾತನ ವೀರಶೈವ ಸರ್ವೋದಯ ಮಾರ್ಗವನ್ನು ಹಿಡಿಯಿತು. ಅದರಲ್ಲಿ ಸರ್ವೋದಾರ ಮನೋಭಾವ ಮೂಡಿತು. ಇದು ಶುಭ ಲಕ್ಷಣ. ಹನ್ನೆರಡನೆಯ ಶತಮಾನದಿಂದ ಒಂದು ಹೊಸ ಪಂಥವೇ ಪ್ರಾರಂಭವಾದಂತೆ ಕಂಡುಬರುತ್ತದೆ. ಸನಾತನ ವೀರಶೈವದ ಹೃದಯ ವಿಶಾಲವಾಯಿತು; ದೃಷ್ಟಿ ವಿಸ್ತಾರವಾಯಿತು. ಈ ಪಂಥ ನೂತನ ಸೃಷ್ಟಿಯಲ್ಲ; ಪ್ರಾಚೀನ ತತ್ತ್ವವನ್ನು ಮೈಗೂಡಿಸಿಕೊಂಡು ಹೊಸ ರೂಪದಿಂದ ಬೆಳೆಯುತ್ತ ಬಂತು.. ಇದೇ ಶರಣ ಸಂಪ್ರದಾಯ; ಸಿದ್ಧ ಮಾರ್ಗ. ಕಲ್ಯಾಣದಲ್ಲಿ ಬಸವಣ್ಣನವರ ಮಹಮನೆಯೇ ಈ ನೂತನ ಧರ್ಮದಾಹಿ

ನಿಯ ಉಗಮಸ್ಥಾನ! ಮಹಾಮಠ! ಅಲ್ಲಿ ಶಿವಾನುಭವ ಮಂಟಪವಲ್ಲಿ ಶರಣ
ಗೋಷ್ಠಿಯಲ್ಲಿ ಶೂನ್ಯಸಿಂಹಾಸನ ಸ್ಥಾಪನೆಯಾಯಿತು. ಅಲ್ಲಿಂದ ಮುಂದೆ ನಾ
ನಲ್ಲಿ ಈ ನೂತನ ಉದಾರ ಪಂಥವನ್ನು ಪರಿಪೋಷಿಸಲು ಅನೇಕ ವಿರಕ್ತ ಮಠಗ
ಹುಟ್ಟಿದುವು. ವಿರಕ್ತರೆಂದರೆ ಜಂಗಮ ಸಂಪ್ರದಾಯವನ್ನು ಪರಿಪಾಲಿ
ಒಂದು ಪ್ರಭೇದ. ಅದ್ವೈತ ವೇದಾಂತವನ್ನು ಒಪ್ಪುವ ರಾಮಕೃಷ್ಣ ಪ
ಹಂಸರ ಸಂಪ್ರದಾಯದ ಮಠಗಳಂತೆ ವೀರಶೈವದಲ್ಲಿ ಈ ವಿರಕ್ತ ಮಠಗ
ಹಿಂದೂ ಧರ್ಮದಲ್ಲಿ ಆರ್ಯ ಸಮಾಜದಂತೆ ವಿರಕ್ತ ಸಂಪ್ರದಾಯ ವೀರಶೈವ
ಮೂಡಿತು. ಹಿಂದೂ ತತ್ತ್ವವನ್ನು ವಿಶ್ಲೇಷಿಸುವ ಬ್ರಹ್ಮಸಮಾಜದಂತೆ ವೀ
ಶೈವದಲ್ಲಿ ವಿರಕ್ತ ಸಮಾಜ ಬೆಳೆಯಿತು! ಬಸವಣ್ಣನವರು ಈ ನೂತನ ಸಮಾ
ನಿರ್ಮಾಪಕರೆಂದು ಪ್ರಸಿದ್ಧರಾಗಿದ್ದಾರೆ. ಆದರೆ, ಅಲ್ಲಮಪ್ರಭು ಈ ಸಂ
ದಾಯವನ್ನು ಪರಿಷ್ಕರಿಸಿ, ಅದರ ಪೂರ್ಣ ರೂಪವನ್ನು ಸಿದ್ಧಪಡಿಸಿದ್ದ
ಅವರನ್ನು ಈ ವಿರಕ್ತ ಪರಂಪರೆಯ ಮೂಲಪುರುಷರೆಂದು ಗೌರವಿಸುತ್ತಾ
ಅವರೊಬ್ಬ ಸಿದ್ಧಪುರುಷ; ಶಿವಸಿದ್ಧ! ಅವರು ನವನಾಥಸಂಘದ ಪರಮ ನಿಷ್ಠ
ಅವರು ಆತ್ಮಜ್ಞಾನಿ; ಮಹಾ ವೈರಾಗ್ಯ ಪುರುಷ; ಯೋಗಿರಾಜ; ನಿರ
ಮೂರ್ತಿ! ಅವರು ಹನ್ನೆರಡನೆಯ ಶತಮಾನದಲ್ಲಿ ಬನವಾಸಿ ನಾಡಿನಲ್ಲಿ ಬ
ಗಾವೆಯಲ್ಲಿ ಹುಟ್ಟಿದರೆಂದು ಹರಿಹರ ತನ್ನ ಪ್ರಭುದೇವರ ರಗಳೆಯಲ್ಲಿ ಹೇ
ದ್ದಾನೆ. ಅವರ ಕುಲ, ಗೋತ್ರಗಳಾಗಲಿ, ಅವರ ತಾಯಿತಂದೆಗಳ ವಿಷಯ
ಗಲಿ ನಿಖರವಾಗಿ ತಿಳಿದುಬಂದಿಲ್ಲ. ಅವರು ಮೃದಂಗವಾದನ ಕಾಯಕದ ನಟ
ಜಾತಿಯವರೆಂದು ಕೆಲವರು ಹೇಳುತ್ತಾರೆ. * ಅವರು ಶೈವಬ್ರಾಹ್ಮಣ ಜಾತಿಯ
ರೆಂದು ಶಿವತತ್ತ್ವ ಚಿಂತಾಮಣಿ ಗ್ರಂಥದಲ್ಲಿ ಹೇಳಿದೆ. ಅವರು ಜನ್ಮತಃ ವೀರ
ರಾಗಿರಲಿಲ್ಲ. ಅವರಲ್ಲಿ ಆಧ್ಯಾತ್ಮಿಕ ತೇಜಸ್ಸು ತುಂಬಿತ್ತು; ಆತ್ಮಜ್ಞಾನ ಪರಿಪೂ
ವಾಗಿತ್ತು. ಅವರು ಪ್ರಾಯದಲ್ಲಿ ಕಾಮಲತೆಯೆಂಬ ಸುಂದರ ಸ್ತ್ರೀಯನ್ನ
ಮೋಹಿಸಿ, ಅವಳೊಡನೆ ಹಲವುಕಾಲ ಸಂಸಾರಸುಖದಲ್ಲಿದ್ದರೆಂದೂ, ಆ
ಅಕಾಲ ಮರಣದಿಂದ ಅವರಲ್ಲಿ ತೀವ್ರ ವೈರಾಗ್ಯ ಹುಟ್ಟಿ, ಬಳ್ಳಿಗಾವೆಯ
ಬಿಟ್ಟು ಹೊರಟುಹೋದರೆಂದೂ, ಅನಂತರ ಬನವಾಸಿಯ ಮಧುಕೇಶ್ವರ ದೇ
ಸ್ಥಾನದಲ್ಲಿ ಅವರಿಗೆ ಆ ನಾಡಿನ ರಾಜಪುತ್ರಿ ಮಾಯಾದೇವಿಯ ಪರಿಚ

* ಅಲ್ಲಮಪ್ರಭು: ಶ್ರೀ ಟಿ. ಜಿ. ಸಿದ್ಧಪ್ಪಾರಾಧ್ಯರು, ಎಂ.ಎ., ಪಿ.ಎಚ್‌ಡಿ.

ವಾಯಿತೆಂದೂ, ಆವಳ ಮೋಹಜಾಲದಲ್ಲಿ ಬೀಳದೆ ಕೆಲವು ಕಾಲಾನಂತರ ರಾಜ ಪುತ್ರಿಯ ಅಂತಃಪುರದಿಂದ ಪಾರಾಗಿ, ಅನಿಮಿಷಾರ್ಯ ಶಿವಯೋಗಿಯ ದರ್ಶನ ಪಡೆದರೆಂದೂ, ಆ ಶಿವಯೋಗಿಯ ಇಷ್ಟಲಿಂಗ ಪ್ರಭೆಯೇ ಜ್ಯೋತಿರ್ಲಿಂಗ ರೂಪದಿಂದ ಅಲ್ಲಮರಲ್ಲಿ ಸೇರಿಹೋಯಿತೆಂದೂ ವೀರಶೈವ ಸಾಹಿತ್ಯದಿಂದ ಗೊತ್ತಾಗುತ್ತದೆ.

ಅಲ್ಲಮರು ತಮಿಳು ಶೈವದ ಗುಹೇಶ್ವರ ಸಂಪ್ರದಾಯದವರು. ಆ ಕಾಲ ದಲ್ಲಿ ಅರುವತ್ತುಮೂರು ಪುರಾತನರ ಶೈವಮಾರ್ಗ ಕನ್ನಡನಾಡಿನಲ್ಲಿ ಹಬ್ಬಿತ್ತು. * ಕುಮಾರಸ್ವಾಮಿಯೇ ಗುಹೇಶ್ವರನೆಂಬ ಅಭಿದಾನದಿಂದ ತಮಿಳು ಶೈವದಲ್ಲಿ ಆರಾಧ್ಯಮೂರ್ತಿಯಾಗಿದ್ದನು. ತಮಿಳು ಶೈವದಲ್ಲಿ ಇಷ್ಟಲಿಂಗಧಾರಣ ಪ್ರಧಾನ ವಾಗಿರಲಿಲ್ಲ. ಅವರು ಸ್ಥಾವರ ಲಿಂಗಾರಾಧಕರು. ಆದರೂ, ನಿರ್ಗುಣ ಶಿವನನ್ನು ತಮ್ಮ ಹೃದಯ ಗುಹೆಯಲ್ಲಿ ಪರಿಭಾವಿಸಿಕೊಂಡು ಏಕಾಂತದಲ್ಲಿ ಆ ಜ್ಯೋತಿ ರ್ಲಿಂಗವನ್ನು ಧ್ಯಾನಿಸುತ್ತಿದ್ದರು. ಅನಿಮಿಷಾರ್ಯನ ಆತ್ಮಶಕ್ತಿಯೇ ಜ್ಯೋತಿ ರ್ಲಿಂಗರೂಪದಲ್ಲಿ ಅಲ್ಲಮರಲ್ಲಿ ಸೇರಿತೆಂಬುದು ಈ ಗುಹೇಶ್ವರ ಸಂಪ್ರದಾಯವನ್ನು ಸೂಚಿಸುತ್ತದೆ. ಕಾಲಕ್ರಮದಲ್ಲಿ ಅಲ್ಲಮರು ಇಷ್ಟಲಿಂಗಧಾರಣವನ್ನು ಪ್ರತಿ ಪಾದಿಸುತ್ತಿದ್ದ ಪಾಶುಪತ ಧರ್ಮವನ್ನು ಅಂಗೀಕರಿಸಿ, ಶರಣಧರ್ಮವನ್ನು ಉಜ್ಜೀವನಗೊಳಿಸಿದರೆಂದು ಗೊತ್ತಾಗುತ್ತದೆ. ಆ ಪಾಶುಪತವೇ ಸನಾತನ ವೀರಶೈವವಾಗಿದ್ದು ಬಸವಣ್ಣನವರಿಂದ ವಿಶಾಲ ಲಿಂಗವಂತ ಧರ್ಮವಾಗಿ ಹಬ್ಬು ತ್ತಿತ್ತು. ಆಗ ಬನವಾಸಿ ಪ್ರಾಂತ ಕಲ್ಯಾಣದ ಬಿಜ್ಜಳ ರಾಜನ ಆಧಿಪತ್ಯದಲ್ಲಿತ್ತು. ಆ ರಾಜಪ್ರತಿನಿಧಿ ಬಳ್ಳಿಗಾವೆಯಲ್ಲಿರುತ್ತಿದ್ದನು. ಇದರಿಂದ ಅಲ್ಲಮರಿಗೆ ಬಸವಣ್ಣ ನವರ ಧರ್ಮಕ್ರಾಂತಿಯ ಪರಿಚಯವಾಗಲು ಅವಕಾಶವಿತ್ತು. ಅಲ್ಲಮರು ಗುಹೇಶ್ವರ ಎಂಬ ಅಂಕಿತದಿಂದ ತಮ್ಮ ಶಿವಧರ್ಮವನ್ನು ಪ್ರಚಾರ ಮಾಡು ತ್ತಿದ್ದರು. ಅದು ತಮಿಳು ಶೈವದ ಕುಮಾರಪಂಥ! ಸ್ಕಾಂದ ಮತ! ಸ್ಕಾಂದ ಮತದಲ್ಲಿ ಗುರುನಾಥ ಪಂಥವೆಂದೂ, ಯೋಗಿನಾಥ ಪಂಥವೆಂದೂ ಎರಡು ಮಾರ್ಗಗಳುಂಟು. ಬೌದ್ಧ ಧರ್ಮದಲ್ಲಿ ಮಹಾಯಾನ ಮತ್ತು ಹೀನಯಾನ ಎಂಬ ಮಾರ್ಗಗಳಿದ್ದಂತೆ! ವೀರಶೈವ ಪಂಚಾಚಾರ್ಯರು ಗುರುನಾಥ ಪಂಥ ದವರು; ವಿರಕ್ತರು ಯೋಗಿನಾಥ ಪಂಥದವರು ಎಂದು ಹೇಳಬಹುದು.

---

* ಪಾರ್ವತೀನಂದನಃ ಸ್ಕಂದಃ ಸೇನಾನೀರಗ್ನಿಭೂರ್ಗುಹಃ–ನಾಮಲಿಂಗಾನುಶಾಸನ.

ಅಲ್ಲಮರು ತಮ್ಮ ಗುರು ಅನಿಮಿಷಾರ್ಯನನ್ನು ಕಂಡಾಗ

೧. "ಕಾಣಬಾರದ ಗುರು ಕಣ್ಗೆ ಗೋಚರವಾದೊಡೆ ಹೇಳಲಿಲ್ಲದ ಬಿನ್ನಪ. ಮುಟ್ಟಲಿಲ್ಲದ ಹಸ್ತಮಸ್ತಕ ಸಂಯೋಗ, ಮಾಸಲಿಲ್ಲದ ವಿಭೂತಿಯ ಪಟ್ಟ, ಕೇಳಲಿಲ್ಲದ ಕರ್ಣಮಂತ್ರ, ತುಂಬಿತುಳಕದ ಕಲಶಾಭಿಷೇಕ, ಅಗಮವಿಲ್ಲದ ದೀಕ್ಷೆ, ಪೂಜೆಗೆ ಬಾರದ ಲಿಂಗ, ಸಂಗವಿಲ್ಲದ ಸಂಬಂಧ ಸ್ವಯಮಪ್ಪನುಗ್ರಹವ ಅನುಗೊಂಬಂತೆ ಮಾಡಾ ಗುಹೇಶ್ವರ"

ಎಂದು ಅನನ್ಯಭಾವದಿಂದ ಮೊರೆಯಿಟ್ಟರು. ಅಲ್ಲಮರಿಗೆ ಅನುಗ್ರಹವಾದ ರೀತಿ ಇದು! ಈ ಪರಂಪರೆಯಲ್ಲಿ ಇವರೇ ಮೊದಲನೆಯವರಲ್ಲ—

೨. "ಬಯಲು ಬಯಲನೆ ಬಿತ್ತಿ, ಬಯಲು ಬಯಲನೆ ಬೆಳೆದು, ಬಯಲು ಬಯಲಾಗಿ ಬಯಲಾಯಿತ್ತಯ್ಯ. ಬಯಲ ಜೀವನ, ಬಯಲ ಭಾವನೆ, ಬಯಲು ಬಯಲಾಗಿ ಬಯಲಾಗಿತ್ತಯ್ಯ. ನಿಮ್ಮ ಪೂಜಿಸಿದವರು ಮುನ್ನವೇ ಬಯಲಾದರು ನಾ ನಿಮ್ಮ ನಂಬಿ ಬಯಲಾದೆ ಗುಹೇಶ್ವರ"

ಎಂದು ಅಲ್ಲಮರು ತಮಗಿಂತ ಮುನ್ನವೇ ಬಯಲಾದವರನ್ನು ಸೂಚಿಸಿರುತ್ತಾರೆ. ಇದು ಅಲ್ಲಮರು ಕಂಡ ಶೂನ್ಯ ಪರಿಸ್ಥಿತಿ. ಇದರಿಂದ ಇಷ್ಟಲಿಂಗಪೂಜೆ ಶೂನ್ಯ ಪಂಥದಲ್ಲಿ ಕಂಡುಬರುವುದಿಲ್ಲ. ಶೂನ್ಯದಿಂದ ಜಗತ್ತು ಆವಿರ್ಭವಿಸಿ ಶೂನ್ಯದಲ್ಲಿಯೇ ಲಯವಾಗುತ್ತದೆಯೆಂಬ ತತ್ತ್ವವನ್ನು ಅನುಷ್ಠಾನ ಮಾಡುವ ನಿರಂಜನರಿಗೆ ಇಷ್ಟ ಲಿಂಗ ಪೂಜೆ ಸಲ್ಲದು. ಅವರು ಆರೂಢರು! ವೀರಶೈವ ಮತದಲ್ಲಿ ಜ್ಞಾನಿಗಳಾದ ಆರೂಢರಿಗೆ ಮಾತ್ರ ಜಾತಿಭೇದವಿಲ್ಲ. ಈ ಪರಿಪಾಠ ಶುದ್ಧಾದ್ವೈತಮತದಲ್ಲಿಯೂ ವಿಶಿಷ್ಟಾದ್ವೈತ ಮತದಲ್ಲಿಯೂ ಇದೆ. ಕರ್ಮಿ, ಮುಮುಕ್ಷು, ಅಭ್ಯಾಸಿ, ಅನುಭವಿ, ಆರೂಢ ಎಂಬ ಐದು ವಿಧದ ಸಾಧಕರಲ್ಲಿ ಆರೂಢನಿಗೆ ಜಾತಿಭೇದವಿಲ್ಲ. ಅವನಿಗೆ ಜಾತಿ, ಆಶ್ರಮ, ಕುಲ, ಗೋತ್ರ ಇವು ಯಾವುವೂ ಇಲ್ಲ. ವೀರಶೈವ ಧರ್ಮ

ಶಿರೋಮಣಿಯಲ್ಲಿ ಷಡಕ್ಷರಮಂತ್ರಿ ಈ ಅಭಿಪ್ರಾಯವನ್ನು ಸೂಚಿಸಿದ್ದಾನೆ. ಇದು ವಿರಕ್ತಾವಸ್ಥೆಯನ್ನು ಹೋಲುತ್ತದೆ. ಆದರೆ ವಿರಕ್ತರಿಗೆ ಇಷ್ಟಲಿಂಗ ಧಾರಣೆಯುಂಟು. ಅವಧೂತ ಅಥವಾ ಆರೂಢಪಂಥದಿಂದ ವಿರಕ್ತಪಂಥ ತೀರ ಭಿನ್ನವಾಗಿಲ್ಲ. ನಾಥಸಂಪ್ರದಾಯದ ಆರೂಢಪಂಥ ಈಗಲೂ ಹುಬ್ಬಳ್ಳಿ ಮತ್ತು ಆದಿಚುಂಚನಗಿರಿಯ ಪೀಠಗಳಲ್ಲಿ ವ್ಯಕ್ತವಾಗುತ್ತದೆ. ನಿರಾಕಾರ, ನಿರ್ಗುಣವಸ್ತುವನ್ನು ಹೃದಯಗುಹಾಂತರದಲ್ಲಿ ಪರಿಭಾವಿಸಿಕೊಂಡು ಧ್ಯಾನಯೋಗದಲ್ಲಿ ಸಾಧಕ ನಿರತನಾಗಬೇಕು. ಅವನ ಹೃದಯವೇ ಶೂನ್ಯಸಿಂಹಾಸನ! ಶೂನ್ಯ ಸ್ವರೂಪವೇ ಆತ್ಮಲಿಂಗ! ಆದರೆ, ಈ ಶೂನ್ಯ ಸಂಪ್ರದಾಯ ಸನಾತನ ವೀರಶೈವದ ಇಷ್ಟಲಿಂಗ ಧಾರಣವನ್ನು ನಿರಾಕರಿಸಲು ಸಾಹಸ ಮಾಡಲಿಲ್ಲ! ಈ ಸಂಪ್ರದಾಯದಂತೆ ವಿಗ್ರಹಾರಾಧನೆಯೇ ನಿಷಿದ್ಧವಾಗಿರುತ್ತದೆ! ಆರ್ಯರಲ್ಲಿ ವಿಗ್ರಹಾರಾಧನೆ ಎಷ್ಟೋ ಕಾಲಾನಂತರ ಬಂದಿತು. ಸನಾತನ ವೀರಶೈವದಲ್ಲಿ ವಿಗ್ರಹಾರಾಧನೆಯುಂಟು. ಶರಣರು ಒಂದು ಕಡೆಯಲ್ಲಿ ಸ್ಥಾವರಲಿಂಗಪೂಜೆಯನ್ನು ವಿಗ್ರಹಾರಾಧನೆಯೆಂಬ ಅಭಿಪ್ರಾಯದಿಂದ ನಿರಾಕರಿಸುತ್ತ ಬಂದರೂ, ಇನ್ನೊಂದು ಕಡೆಯಿಂದ ಇಷ್ಟಲಿಂಗ ಪೂಜೆಯನ್ನು ವಿಗ್ರಹಾರಾಧನೆಯಲ್ಲವೆಂಬ ಸಮಾಧಾನದಿಂದ ಆಚರಣೆಗೆ ತಂದರು. ಅಷ್ಟೇ ಏಕೆ, ಗದ್ದುಗೆಗಳಲ್ಲಿ ಜಂಗಮಲಿಂಗ ವಿಗ್ರಹಾರಾಧನೆಗೆ ಅವಕಾಶ ಕಲ್ಪಿಸಿದರು! ಮಹಾಂತರ ಶಿಲಾವಿಗ್ರಹಗಳನ್ನೂ ಆರಾಧಿಸಲು ಅಡ್ಡಿಯಿಲ್ಲವಂತೆ! ಬಸವಣ್ಣನವರ ನೂತನ ಸಮಾಜದಲ್ಲಿ ಸನಾತನ ವೀರಶೈವದ ವೇದಾಗಮಧರ್ಮ ಅಚಲವಾಗಿ ನಿಂತಿದೆ. ಸನಾತನ ವೀರಶೈವದ ಜಂಗಮದ ನೆರಳಿನಲ್ಲಿಯೇ ವಿರಕ್ತಪಂಥ ಬೆಳೆಯಿತು. ಇದು ನಾಥಸಂಥದ ಆತ್ಮ! ವೈದಿಕ ಪಂಥದ ಛಾಯೆ! ತಾಂತ್ರಿಕ ಪಂಥದ ಹೃದಯ!

ಅಲ್ಲಮರು ಮುಕ್ತಾಯಕ್ಕ, ಗೊಗ್ಗಯ್ಯ, ಸಿದ್ಧರಾಮಯ್ಯ ಮೊದಲಾದ ಸಾಧಕರನ್ನು ಶಿವಸಿದ್ಧಪಥದಲ್ಲಿ ಎಂದರೆ ಶೂನ್ಯತತ್ತ್ವ ಮಾರ್ಗದಲ್ಲಿ ಅನುಗ್ರಹಿಸಿದರು. ಸೊನ್ನಲಾಪುರದಿಂದ ಸಿದ್ಧರಾಮಯ್ಯನವರೊಂದಿಗೆ ಕಲ್ಯಾಣದತ್ತ ನಡೆದರು. * ಅಲ್ಲಮರ ಗುರು ಅನಿಮಿಷಾರ್ಯನೇ ನಾಥಸಂಪ್ರದಾಯ ಸಂಸ್ಥಾಪಕನಾದ ಮತ್ಸ್ಯೇಂದ್ರನಿರಬಹುದೆಂದು ವಿದ್ವಾಂಸರು ತರ್ಕಿಸುತ್ತಾರೆ. ಈ ಪರಂಪರೆಯಲ್ಲಿ ಬಂದ ಜ್ಞಾನೇಶ್ವರನ ಅಭಂಗಗಳಲ್ಲಿ ಗುರು, ಲಿಂಗ, ಜಂಗಮ-ಎಂಬ

* ಸಾಹಿತ್ಯಶೋಧನಾ : ಶ್ರೀ ದ. ರಾ. ಬೇಂದ್ರೆಯವರು.

ಪದಗಳಿವೆಯೆಂದೂ 'ಜ್ಞಾನೇಶ್ವರಿ'ಯಲ್ಲಿ ಶೂನ್ಯ ವಿಚಾರ ಬಂದಿದೆಯೆಂದ್ರೂ ನಾಥಪಂಥದ ಬೈರಾಗಿಗಳು 'ಅಲ್ಲಖ್' ಎಂದು ಘೋಷಿಸುತ್ತಾರೆಂದೂ ತಿಳಿ ಬರುತ್ತದೆ.

ನಾಥಪಂಥ ಹನ್ನೆರಡನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಹಬ್ಬಿತು ಶಿವನೇ ಆದಿನಾಥನಾಗಿ ಅವತರಿಸಿದನು. ನಾಥ ಎಂದರೆ, ಯಾಚಕ, ಉ ತಾಪಕ, ಈಶ್ವರ, ಆಶೀರ್ವಾದದಾತ-ಎಂಬ ನಾಲ್ಕು ಅರ್ಥಗಳಿವೆಯೆಂದು 'ಸಿ ಸಿದ್ಧಾಂತ ಪದ್ಧತಿ' ಎಂಬ ಗ್ರಂಥದಲ್ಲಿ ಹೇಳಿದೆ. ಮಹೇಶ್ವರ ನಾಥರೂಪದಿ ಲೋಕ ಕಲ್ಯಾಣಾರ್ಥವಾಗಿ ಭಕ್ತರ ಮನೆಗಳಲ್ಲಿ 'ಜಯ ಅಲಖನಿರಂಜ ಎಂದು ಹೇಳಿ ಭಿಕ್ಷಾಟನ ಮಾಡುತ್ತಾನೆ. ಈ ಗುರುನಾಥ ಭಕ್ತರ ಯಾಚಕ ರೂಪ ಮಾಲಿನ್ಯವನ್ನೆಲ್ಲಾ ತಾನು ಸ್ವೀಕರಿ, ಭಕ್ತರ ಅಭೀಷ್ಟಗಳನ್ನು ನೆರವೇ ಅವರಿಗೆ ಮೋಕ್ಷರೂಪ ಪರಮಪದವನ್ನು ಅನುಗ್ರಹಿಸುತ್ತಾನೆ. 'ಭಿಕ್ಷಾಗು ಧರ್ಮಕಾರುಣ್ಯ ಭಿಕ್ಷಾ' ಎಂದು ಭಿಕ್ಷಾಟನವೃತ್ತಿ ಈಗಲೂ ವೀರಶೈವರಲ್ಲಿದೆ.

ಉಪತಾಪಕನೆಂದರೆ ಅವಿದ್ಯಾದಿ ಪಂಚಕ್ಲೇಶಗಳನ್ನು ನಿವಾರಿಸ ಸಮರ್ಥನೆಂದು ಹೇಳಿರುತ್ತದೆ. ಈಶ್ವರ ಎಂದರೆ, ಅಣಿಮಾದಿ ಅಷ್ಟಸಿದ್ಧಿಗಳ ಪ್ರಭು ಎಂದು ಅರ್ಥ. ಆಶೀರ್ವಾದದಾತನೆಂದರೆ, ಭಕ್ತಕೋಟಿಯ ದು ಗಳನ್ನು ಪರಿಹರಿಸಿ ಅವರಿಗೆ ಶುಭವನ್ನುಂಟುಮಾಡುವವನು ಎಂದು ಆ ಗ್ರಂ ದಲ್ಲಿ ಉಕ್ತವಾಗಿದೆ. ಇದನ್ನು ಯೋಗಸಂಪ್ರದಾಯವೆನ್ನುತ್ತಾರೆ. ಓಂ ಗೋರಕ್ಷ-ಎಂಬುದೇ ಇವರ ಪಂಚಾಕ್ಷರೀಮಂತ್ರ. ಗೋರಕ್ಷನನ್ನು 'ಶಂ ಯತಿ' ಎಂದು ಕರೆಯುತ್ತಾರೆ. ಆದಿನಾಥನೆಂದರೆ ಮಹೇಶ್ವರನೆಂದು ಸಿದ್ಧಾಂತದಲ್ಲಿ ಹೇಳಿದೆ. ಸಿದ್ಧಸಂಪ್ರದಾಯದಲ್ಲಿ ಹಠಯೋಗಾದಿ ವಿದ್ಯೆಗ ಆದಿನಾಥ ಶಿವನೇ ಪರಮಾಚಾರ್ಯನೆಂದು ನಂಬುತ್ತಾರೆ. ಈ ಎಲ್ಲ ವಿದ್ಯೆಗ ಶಿವನ ಕೃಪೆಯಿಂದ ಮತ್ಸ್ಯೇಂದ್ರನಾಥ, ಜ್ವಾಲೇಂದ್ರನಾಥ ಅಥವಾ ಜಲಂ ನಾಥ ಮುಂತಾದ ಸಿದ್ಧರಿಗೆ ಪ್ರಾಪ್ತವಾದುವು. ಆ ಸರ್ವೇಶ್ವರನಾದ ಆದಿನಾಥ ಸರ್ವ ಕಾರಣನು. ಅವನಿಗೆ ಯಾರೂ ಕಾರಣರಿಲ್ಲ. ಅವನ ಮೇಲೆ ಯಾ ಪ್ರಭುತ್ವವೂ ಇಲ್ಲ. ಅವನು ಅಸಂಗ; ಆದರೆ ಶಕ್ತಿಯುಕ್ತ ! ಅವನು ಚರಾ ಸಮಸ್ತ ಪ್ರಪಂಚವನ್ನೂ ಲೀಲಾಮಾತ್ರದಿಂದ ರಚಿಸಬಲ್ಲನು. "ಶಿವೋಽಪಿ ರಹಿತಃ ಕರ್ತುಂ ಶಕ್ತೋಽನಕಿಂಚನ" ಎಂದು ಆದಿನಾಥನೇ ಹೇಳಿದ್ದಾನೆ. ಪರ

ಸ್ವರನಾದರೂ ಶಕ್ತಿರಹಿತನಾಗಿದ್ದರೆ ಏನನ್ನೂ ಮಾಡಲಾರನು. ಅವನ ಆ ನಿಜ ಶಕ್ತಿ ಚಿದ್ರೂಪವಾಗಿಯೇ ಇದೆ. ಆದ್ದರಿಂದ, ಅವನಿಂದ ಅಭಿನ್ನವಾದ ಶಕ್ತಿಯನ್ನು ಜಡವೆಂದು ಹೇಳುವಂತಿಲ್ಲ.ಮಹಾಪ್ರಲಯದಲ್ಲಿ ಆದಿನಾಥನಾದ ಶಿವನು ಕುಲಾಕುಲಭಾವದಿಂದ ರಹಿತನಾಗಿರುತ್ತಾನೆ. ಕುಲ ಎಂದರೆ ವ್ಯಕ್ತ; ಅಕುಲ ಎಂದರೆ ಅವ್ಯಕ್ತ! ಎಂದರೆ ಅವನು ಶೂನ್ಯಸ್ವರೂಪದಲ್ಲಿರುತ್ತಾನೆ. ಇದು ಬೌದ್ಧರ ಶೂನ್ಯವಾದವಲ್ಲ. ಆ ಸಮಯದಲ್ಲಿ ಅವನು ನಾಮರೂಪರಹಿತನಾಗಿ ಮತ್ತು ಸಜಾತೀಯ ವಿಜಾತೀಯ ಸ್ವಗತಭೇದತ್ರಯ ಶೂನ್ಯನಾಗಿ ಕೇವಲ ಏಕಪರ ಬ್ರಹ್ಮವೇ ಆಗಿರುತ್ತಾನೆಂದು ಅರ್ಥ. ಇದು ಸಿದ್ಧಯೋಗಿರಾಜರ ಸಿದ್ಧಾಂತ. ವಿರಕ್ತ ಸಂಪ್ರದಾಯಕ್ಕೂ ಯೋಗಿನಾಥ ಪಂಥಕ್ಕೂ ಹೆಚ್ಚು ಭೇದವಿಲ್ಲ. ಶೈವರಲ್ಲಿ 'ಅಲ್ಲ' ಎಂಬ ಸಂಪ್ರದಾಯವಿದೆಯೆ ? ಎಂಬ ಸಂಶಯ ಬರುತ್ತದೆ. 'ಅಲ್ಲ'– ಇದು ಒಬ್ಬ ಮಹಾ ಪುರುಷನ ಹೆಸರು. ಶೈವಾಚಾರದವರಲ್ಲಿ ಈ ಹೆಸರು ವಿಶೇಷ ರೂಢಿಯಲ್ಲಿದ್ದಿತೆಂದು ಕಂಡುಬರುತ್ತದೆ. ಶಿವನೇ ಅಲ್ಲಮನೆಂಬ ಹೆಸರಿನಿಂದ ಅವತರಿಸಿದನೆಂದು ಪ್ರಭುಲಿಂಗಲೀಲೆಯಲ್ಲಿ ಹೇಳಿದೆ. ಕ್ರಿ. ಶ. ಪ್ರಾರಂಭದ ಸುಮಾರಿಗೆ ಸ್ಕಂದನ ಪೂಜೆ ಪ್ರಚಾರದಲ್ಲಿತ್ತು. ಸ್ಕಂದ ಉಪನಿಷತ್ತಿನಲ್ಲಿ ಸನಕಾದಿ ಋಷಿಗಳೊಂದಿಗೆ ಕಂಡುಬರುತ್ತಾನೆ. ಜ್ಞಾನಭಿಕ್ಷು ಸುಬ್ರಹ್ಮಣ್ಯನ ಸಂಬಂಧದಿಂದ ಸ್ಕಂದನೇ ಕುಮಾರಸ್ವಾಮಿಯಾದನೆಂದು ತಮಿಳುವಾಙ್ಮಯದಿಂದ ತಿಳಿದುಬರುತ್ತದೆ. ಅವನು ಲೋಕಕಂಟಕ ರಾಕ್ಷಸರನ್ನು ಸಂಹರಿಸಿದ ಮಹಾ ಸೇನಾನಿ! ಶಿವಕುಮಾರ! ವೀರಪದ್ಮಾಸುರನೆಂಬ ರಾಕ್ಷಸನು ಮುರುಘ ಎಂದರೆ ಕೋಳಿಯ ರೂಪದಿಂದ ಕುಮಾರಸ್ವಾಮಿಯ ಮೇಲೆ ಯುದ್ಧಕ್ಕೆ ಬಂದನು. ಕುಮಾರ ಅವನ ಮಾಯಾ ರೂಪವನ್ನು ತನ್ನ ಜ್ಞಾನದೃಷ್ಟಿಯಿಂದ ಅರಿತು, ಅವನೊಂದಿಗೆ ಕಾದಿ, ಕೊನೆಗೆ ಅವನನ್ನು ಸಂಹರಿಸಿದನು. ಆ ರಾಕ್ಷಸನ ಅವಸಾನಕಾಲದ ಪ್ರಾರ್ಥನೆಯಂತೆ ಕುಮಾರಸ್ವಾಮಿ ಆ ಮುರುಘನ ನೆನಪಿರುವಂತೆ ತಾನು ಮುರುಘಧ್ವಜನಾದನು. ಕುಮಾರಸ್ವಾಮಿಯ ಧ್ವಜದಲ್ಲಿ ಮುರುಘ ಎಂದರೆ ಕೋಳಿಯ ಲಾಂಛನ ಮೆರೆಯಿತು. ಅಂದಿನಿಂದ ಕುಮಾರಸ್ವಾಮಿ ಮುರಘೇಶನಾದನು ! ಈಗಲೂ, ಪಳನಿಯ ಸುಬ್ರಹ್ಮಣ್ಯಸ್ವಾಮಿಗೆ ಭಕ್ತರು ಕೋಳಿಯ ಹುಂಜಗಳನ್ನು ಹರಕೆಯ ಕಾಣಿಕೆಯಾಗಿ ಒಪ್ಪಿಸುತ್ತಾರೆ. ಅವು ದೇವಾಲಯದಲ್ಲಿ ನಿರಾತಂಕವಾಗಿ ಓಡಾಡುತ್ತಿರುತ್ತವೆ. ಯಾರೂ ಅವು

ಗಳನ್ನು ಕೊಲ್ಲುವುದಿಲ್ಲ. ಅವುಗಳಿಗೆ ಭಕ್ತಿಯಿಂದ ಆಹಾರವನ್ನು ಕೊಟ್ಟು ಕೈಮುಗಿಯುತ್ತಾರೆ. ಶಿಲಪ್ಪದಿಗಾರಮ್ ಎಂಬ ತಮಿಳುಕಾವ್ಯದಲ್ಲಿ ಈ ಮುರು(ಗ)ನನ್ನು ಮಹಾ ಮಾಯಾವಿಯೆಂದೂ, ಇಂದ್ರಜಾಲ ಮಹೇಂದ್ರಜಾಲಗಳಲ್ಲಿ ಪರಮ ನಿಷ್ಣಾತನೆಂದೂ ಹೇಳಿದೆಯೆಂದು ತಮಿಳು ವಿದ್ವಾಂಸರು ತಿಳಿಸುತ್ತಾರೆ. ಕುಮಾರ ಎಂದರೆ ಪರಾಕ್ರಮ ಮತ್ತು ಧರ್ಮಗಳ ಅರ್ಥಾತ್ ಕ್ರಿಯಾಜ್ಞಾನಗಳ ಸಂಕೇತವೆಂಬ ಭಾವನೆ ಬಹಳ ಹಿಂದಿನಿಂದಲೂ ದ್ರಾವಿಡ ಜನಾಂಗದಲ್ಲಿ ನೆ(ಲೆ)ಗೊಂಡಿದೆ. ಕಲಿಯುಗದಲ್ಲಿ ದೇವರೆಂದರೆ ಕುಮಾರಸ್ವಾಮಿಯೊಬ್ಬನೇ-ಎಂದು ಆ ಜನಾಂಗ ದೃಢವಾಗಿ ನಂಬಿದೆ. ಈ ಕುಮಾರಸ್ವಾಮಿಯು ಎಂದರೆ ಸ್ಕಂದನ ಪ್ರತಿಮಾರ್ಚನೆ ಮೊಟ್ಟಮೊದಲು ಪ್ರಾರಂಭವಾದುದು ಪರಕೀಯರ ಧಾಳಿಗಳಿಂ(ದ) ಭಾರತ ಸಂತ್ರಸ್ತವಾದ ಸುಮಾರಿಗೇ ! ಕುಮಾರಸ್ವಾಮಿ ಎಂದರೆ ಆಜನ್ಮ ಬ್ರಹ್ಮಚಾರಿ, ಆತ್ಮಧರ್ಮಸ್ವರೂಪಿ, ಮಹಾ ಪರಾಕ್ರಮಿಯೆಂದು ಸ್ಕಂದ ಮತದವ(ರು) ಆರಾಧಿಸುತ್ತಾರೆ. ಆದ್ದರಿಂದ ಅವನನ್ನು ವಿಕ್ರಮಾದಿತ್ಯ ಎಂದು ದಕ್ಷಿಣಾಪ(ಥ)ದಲ್ಲಿ ಜನರು ಗೌರವಿಸಿದರು. ಮೌರ್ಯ, ಕದಂಬ ಮತ್ತು ಚಾಲುಕ್ಯ ಮೊ(ದ)ಲಾದ ರಾಜವಂಶಗಳಲ್ಲಿ ಕುಮಾರ ಮತ್ತು ಆದಿತ್ಯ ಎಂಬ ಹೆಸರುಗಳು ಮೂ(ಡಿ)ದುವು. ಕುಮಾರನ ಪೂಜೆ ಪಶ್ಚಿಮ ಕರಾವಳಿಯಿಂದ ಕನ್ಯಾಕುಮಾರಿಯವರೆಗೂ ದಕ್ಷಿಣ ಭಾರತದಲ್ಲಿ ವ್ಯಾಪಿಸಿತು. ಗುಹೇಶ್ವರನೆಂಬರೂ ಕುಮಾಸ್ವಾಮಿಯೇ. ಶೈವದಲ್ಲಿ ಅನೇಕ ಶಾಖೆಗಳಿವೆ. 'ಅಲ್ಲ' ಸಂಪ್ರದಾಯವು ಇಂತಹ ಒಂದು ಶಾಖೆಯೆಂದು ತೋರುತ್ತದೆ. 'ಅಲ್ಲ' ಎಂಬ ಹೆಸರು ಪ್ರಾಚೀನ ಭಾರತೀಯ ಸಂಪ್ರದಾಯದಲ್ಲಿ ಎಲ್ಲಯೂ ದೊರೆಯುವುದಿಲ್ಲ. ಇದು ಆರನೆಯ ಶತಮಾನದಲ್ಲಿ ಕಂಡುಬರುತ್ತದೆ. ಇದು ಮಹಮ್ಮದೀಯರ ದೇವತಾನಾಮವನ್ನು ಹೋಲುತ್ತದೆ. ಈ 'ಅಲ್ಲ' ಸಂಪ್ರದಾಯ ಲಾಟ (ಈಗಿನ ಗುಜರಾತ್) ಮರಾಠ, ಮತ್ತು ಕರ್ಣಾಟಕಗಳಲ್ಲಿ ತುಂಬ ಪ್ರಚಾರದಲ್ಲಿತ್ತೆಂದು ಈ ವಾಙ್ಮಯಗಳಿಂದ ತಿಳಿದುಬರುತ್ತದೆ. ನಾಥಪಂಥ ಈ 'ಅಲ್ಲ' ಸಂಪ್ರದಾಯದ ಮೇಲೆ ತನ್ನ ಪ್ರಭಾವವನ್ನು ಬೀರಿತು. ಇದು ತುಂಬ ಪ್ರಬಲವಾದ ಪಂಥವಾಗಿತ್ತೆಂದು ನಿರ್ಧರವಾಗಿ ಹೇಳಬಹುದು. ಸನಾತನ ವೀರಶೈವದ ಪಂಚ ಆಚಾರ್ಯರು ಸೋಮನಾಥ, ಸಿದ್ಧನಾಥ, ಕೇದಾರನಾಥ, ರಾಮನಾಥ ಮತ್ತು ವಿಶ್ವನಾಥ ಲಿಂಗಗಳಲ್ಲಿ ಉದಯಿಸಿದರೆಂಬುದನ್ನು ನಾವು ಗಮನಿಸಬಹುದು. ಸಾಕ್ಷಾತ್ ಶಿವನೇ ಈ ನಾಥ

ಪಂಥದ ಮೂಲ ಪರಮಾಚಾರ್ಯನೆಂದು ಆ ಪಂಥದ ತತ್ತ್ವಗ್ರಂಥಗಳಲ್ಲಿ ಉಕ್ತವಾಗಿದೆ. ಅಲ್ಲಮಪ್ರಭು ಹನ್ನೆರಡನೆಯ ಶತಮಾನದಲ್ಲಿ ಪ್ರಚಾರ ಮಾಡಿದ ಶರಣಸಂಪ್ರದಾಯದಲ್ಲಿ ಹಲವಾರು ಶೈವಸಂಪ್ರದಾಯಗಳ ತತ್ತ್ವಸಾರ ಸುಮಧುರಪಾಕವಾಗಿ ಭಟ್ಟಿ ಇಳಿಯಿತು. ಅಲ್ಲಮ-ಬಸವಣ್ಣನವರ ಸಮಾಗಮದಿಂದ ಕುಮಾರಪಂಥ ಕರ್ಣಾಟಕದಲ್ಲಿ ಯೋಗಿನಾಥ ಮಾರ್ಗವಾಗಿ ಹಬ್ಬಿತು. ಹುಬ್ಬಳ್ಳಿ ಮೂರುಸಾವಿರ ಮಠ ಕುಮಾರಪಂಥದ ಮೂಲಕೇಂದ್ರವಾಗಿ ಬೆಳಗಿತೆಂದು ನಿಸ್ಸಂಶಯವಾಗಿ ಹೇಳಬಹುದು. ಬಸವಣ್ಣನವರ ಪರಮಾರಾಧ್ಯ ಸಂಗಮನಾಥನೆಂಬುದು ನಮ್ಮ ಊಹೆಯನ್ನು ದೃಢಪಡಿಸುತ್ತದೆ. ನಾಥಪಂಥ ಕುಮಾರ ಸಂಪ್ರದಾಯದಲ್ಲಿ ಬೆಳೆಯಿತು ! 'ಅಲ್ಲಮ' ಸಂಪ್ರದಾಯದಲ್ಲಿ ಪಲ್ಲವಿಸಿತು ! ಗುರುನಾಥಪಂಥ ವೈದಿಕಾಮಾರ್ಗ! ಯೋಗಿನಾಥಪಂಥ ದ್ರಾವಿಡಮಾರ್ಗ !

ಈಗಲೂ ಮೈಸೂರು ಜಿಲ್ಲೆಯ ನಂಜನಗೂಡು ಪ್ರಾಂತದ ದೇವನೂರು ಶರಣಮಠದಲ್ಲಿ "ಅಲಖ್ ನಿರಂಜನ ಗುರುಮಲ್ಲೇಶ್ವರ ಮಹಾ ಪ್ರಭೋ" ಎಂದು ಜಯಃಘೋಷ ಮಾಡುತ್ತಾರೆ. ಹೂಲಿಯ ಮಠದ ಗುರುಪರಂಪರೆಯಲ್ಲಿ ಕುಮಾರಸ್ವಾಮಿಯೇ ಮೊದಲನೆಯ ಗುರುವೆಂದು ಆ ಪೀಠದ ಚರಿತ್ರೆಯಿಂದ ಗೊತ್ತಾಗುತ್ತದೆ. ಇದು ಕಾಶಿಯ ವಿಶ್ವಾರಾಧ್ಯ ಗುರುಪೀಠದ ಪರಂಪರೆಗೆ ಸೇರಿದೆ. ಕಾಶಿಯ ಮಠದ ಮೂಲ ಆಚಾರ್ಯರು ಪರಶಿವನ ಈಶಾನ ಮುಖದಿಂದ ಅವತರಿಸಿ, ವಿಶ್ವನಾಥ ಲಿಂಗದಿಂದ ಉದಯಿಸಿದರು. ಇವರು ಸ್ಕಂದಗೋತ್ರಜರು. ಪಂಚವಕ್ತ್ರಗಣೇಶ್ವರರೂ ಶಿವನ ಈಶಾನ ಮುಖೋದ್ಭವರೇ ! ಅವರೂ ಸ್ಕಂದ ಗೋತ್ರಜರೇ ಆದಂತಾಯಿತು. ಇವರಿಬ್ಬರೂ ಅಭಿನ್ನರು. ಆದ್ದರಿಂದ ಕುಮಾರ ಪಂಥ ಅತ್ಯಂತ ಪ್ರಾಚೀನವಾದುದೆಂಬುದರಲ್ಲಿ ಅನುಮಾನವಿಲ್ಲ. ಇದೇ ಸ್ಕಾಂದ ಮತ. ವಿರಕ್ತಪಂಥ ವೀರಶೈವದ ಯೋಗಿನಾಥ ಪಂಥವಾಗಿ ಪ್ರಾರಂಭವಾಯಿತೆಂದು ತಿಳಿಯಬಹುದು. ಈ ನಿರಂಜನ ಪರಂಪರೆ ಆರ್ಷೇಯವಾದುದೆಂದು ಅಲ್ಲಮರು ಹೇಳಿದ್ದಾರೆ. ನಾಥಪಂಥದ ಗ್ರಂಥಗಳಲ್ಲಿ ನಿರಂಜನ ಸ್ಥಿತಿಯ ವರ್ಣನೆಯಿದೆ.

೮. ‘‘ಕೃತಯುಗದಲ್ಲಿ ನಾನು ಭಕ್ತಿ ಕಾರಣ
ಸ್ಥೂಲಕಾಯನೆಂಬ ಗಣೇಶ್ವರನಾಗಿರ್ದೆನಯ್ಯಾ
ತ್ರೇತಾಯುಗದಲ್ಲಿ ನಾನು ಭಕ್ತಿ ಕಾರಣ
ಶೂನ್ಯಕಾಯನೆಂಬ ಗಣೇಶ್ವರನಾಗಿರ್ದೆನಯ್ಯಾ
ದ್ವಾಪರದಲ್ಲಿ ನಾನು ಭಕ್ತಿ ಕಾರಣ
ಅನಿಮಿಷನೆಂಬ ಗಣೇಶ್ವರನಾಗಿರ್ದೆನಯ್ಯಾ
ಕಲಿಯುಗದಲ್ಲಿ ನಾನು ಭಕ್ತಿ ಕಾರಣ
ಅಲ್ಲಮಪ್ರಭುವೆಂಬ ಗುಹೇಶ್ವರನಾಗಿರ್ದೆ ಕಾಣಾ

ಎಂಬ ವಚನದಲ್ಲಿ ಅನಿಮಿಷ ದ್ವಾಪರ ಯುಗದಲ್ಲಿದ್ದನೆಂದೂ ಅಲ್ಲಮ ಆ ಯುಗದಲ್ಲಿ ಅನಿಮಿಷ ಗಣೇಶ್ವರರಾಗಿದ್ದರೆಂದೂ ಅರ್ಥವಾಗುತ್ತದೆ. ಹಾ ವರೆ, ಕಲಿಯುಗದಲ್ಲಿ ಅಲ್ಲಮರು ಕಂಡ ಅನಿಮಿಷಾರ್ಯನು ಯಾರು ? ಎ ಸಂದೇಹ ಬರುತ್ತದೆ. ಮತ್ಸ್ಯೇಂದ್ರನಾಥನಿಗೆ ಅನಿಮಿಷನೆಂಬ ಹೆಸರಿತ್ತೆ ಕೆಲವರು ಅನುಮಾನಿಸುತ್ತಾರೆ. ಮತ್ಸ್ಯೇಂದ್ರನಾಥನೇ ಅನಿಮಿಷನೆಂದು ಒ ವರೆ ಯಾವ ಸಂದೇಹವೂ ಇರಲಾರದು. ದ್ವಾಪರದ ಅನಿಮಿಷನೇ ಬೇ ಕಲಿಯುಗದ ಅನಿಮಿಷನೇ ಬೇರೆ–ಎಂದು ಹೇಳಬಹುದು. * ಸತ್ಯನಾ ಸತೋಕನಾಥ, ಆದಿನಾಥ, ಅನಾದಿನಾಥ, ಅಕುಳಿತನಾಥ, ಮಾತಂಗನಾ ಮಚ್ಛೇಂದ್ರನಾಥ, ಗೋರಕ್ಷನಾಥ–ಎಂಬ ನಾಥಸಂಪ್ರದಾಯದ ನಾಥಸಿ ಹೆಸರುಗಳು ನಿಜಗುಣರ ವಿವೇಕ ಚಿಂತಾಮಣಿಯಲ್ಲಿ ಉಕ್ತವಾಗಿವೆ. ಅಲ್ಲ ನಾಥರು ತಮ್ಮ ಪರಂಪರೆ ಅನಾದಿಗಣನಾಥನಿಂದ ಪ್ರಾರಂಭವಾಯಿತೆಂದು ಸ್ಪ ವಾಗಿ ತಿಳಿಸಿರುತ್ತಾರೆ.

---

* ಆದಯ್ಯನ ವಚನದಲ್ಲಿ–ವ್ಯಾಳಿನಾಥ, ಚರ್ಪಟನಾಥ, ಕೋರಾಂಟನಾಥ, ಘೋಷ, ಭೂತನಾಥ, ನಾಗಾರ್ಜುನ, ಮಚ್ಛೇಂದ್ರ, ಗೋರಕ್ಷ ಮತ್ತು ಮಂಜುನಾ ಎಂಬ ನವನಾಥ ಸಿದ್ಧರ ಹೆಸರುಗಳಿವೆ. ಅಲ್ಲಮರು ಶ್ರೀಶೈಲದಲ್ಲಿ ಕಂಡ ಗೋರಕ್ಷ ಬೇರೆ. ಹನ್ನೆರಡನೆಯ ಶತಮಾನದಲ್ಲಿ ಆದಿನಾಥ, ಮೀನನಾಥ, ಗೋರಕ್ಷಸಿದ್ಧ, ಪಾಕ್ಷಸಿದ್ಧ, ಮೇಘನಾಥ, ನಾಗಾರ್ಜುನ, ಅಲ್ಲಾಳಸಿದ್ಧ, ಬಲ್ಲಾಳಸಿದ್ಧ, ಕುಟಲಸಿ ಯುದ್ಧ ಕೋಲಾಹಲಸಿದ್ಧ, ನಂಜನಸಿದ್ಧ, ದೇರಸಿದ್ಧ, ಎಂಬ ಅನೇಕ ಮಂತ್ರಸಿ ರೆಂದು ತಿಳಿದುಬರುತ್ತದೆ. ಇವರೆಲ್ಲ ಲಕುಲೀಶ ಕಾಳಾಮುಖ–ಕಾಪಾಲಿಕ ಪಂಥ ಯಾಯಿಗಳೆಂದೂ ಗೊತ್ತಾಗುತ್ತದೆ.

೫. "ಅನಾದಿಗಣನಾಥನ ಶಿಷ್ಯನು ಆದಿಗಣನಾಥನು.
ಆದಿಗಣನಾಥನ ಶಿಷ್ಯನು ಅಧ್ಯಾತ್ಮ ಗಣನಾಥನು.
ಅಧ್ಯಾತ್ಮಗಣನಾಥನ ಶಿಷ್ಯನು ವ್ಯೋಮಸಿದ್ಧ ಗಣನಾಥನು.
ವ್ಯೋಮಸಿದ್ಧ ಗಣನಾಥನ ಶಿಷ್ಯನು ಬಸವನೆಂಬ ಗಣನಾಥನು.
ಬಸವನೆಂಬ ಗಣನಾಥನ ಶಿಷ್ಯನು ಅನಿಮಿಷನೆಂಬ ಗಣನಾಥನು.
ಅನಿಮಿಷನೆಂಬ ಗಣನಾಥನ ಶಿಷ್ಯನು ಅಲ್ಲಮಪ್ರಭುವೆಂಬ ಗಣನಾಥನು.

ಇಂತು ಅನಾದಿವಿಡಿದು ಬಂದ ಅನುಪಮ ಲಿಂಗವು ಗುಹೇಶ್ವರನೆಂಬ ಹೆಸರನೊಳಕೊಂಡು
ಎನ್ನ ಕರಸ್ಥಲಕ್ಕೆ ಸಾಧ್ಯವಾಯಿತ್ತು ಕಾಣಾ, ಸಿದ್ಧರಾಮಯ್ಯ"

ಎಂದು ಪ್ರಭುನಾಥರು ತಮ್ಮ ಕರಸ್ಥಲ ಲಿಂಗದ ಪೂರ್ವಾಪರವನ್ನು ಬಿಡಿಸಿ ಬಿಡಿಸಿ ಹೇಳಿದ್ದಾರೆ. ಇದರಲ್ಲಿ ಬಸವ ಎಂಬ ಹೆಸರು ಮಾತ್ರ ಅಚ್ಚ ಕನ್ನಡ ಪದ. ಬಸವ ಎಂಬ ಪದಕ್ಕೆ ಬದಲಾಗಿ ವೃಷಭ ಎಂಬ ಪದವನ್ನು ಹಾಕಬಹುದಾಗಿತ್ತು! ಇಲ್ಲವೆ, ನಂದಿ ಎಂಬ ಪದವನ್ನು ಸೇರಿಸಬಹುದಾಗಿತ್ತು! ಅನೇಕರು ಭಾವಿಸು ವಂತೆ ಈ ಬಸವ ಕಲ್ಯಾಣದ ಬಸವಣ್ಣನವರಲ್ಲವೆಂಬುದಂತೂ ನಿಜ. ಸಿಂಗಿರಾಜ ಪುರಾಣದಲ್ಲಿ ಅನಿಮಿಷಯ್ಯ ಪಟ್ಟದಕಲ್ಲಿನ ಚಾಲುಕ್ಯ ವಂಶದ ಚೂಡೇಶ-ಮಹ ಲೇಖೆಯರ ಮಗನೆಂದು ಹೇಳಿದೆ. ಈ ವಚನದಲ್ಲಿ ಬಂದಿರುವ ಬಸವಪದದ ಔಚಿತ್ಯವೇನು? ಇದರಲ್ಲಿ ಪ್ರತಿಯೊಬ್ಬರ ಹೆಸರೂ ನಾಥ-ಎಂದು ಅಂತ್ಯವಾಗಿದೆ! ಈ ಪ್ರಾಚೀನ ವಿರಕ್ತ-ನಾಥಪರಂಪರೆಯನ್ನು ಎಲ್ಲ ಶರಣರೂ ಒಂದೇ ರೀತಿಯಾಗಿ ಹೇಳಿಲ್ಲ. ಇದರಲ್ಲಿ ಅನೇಕ ವ್ಯತ್ಯಾಸಗಳು ಕಂಡುಬರುತ್ತವೆ.

ನವನಾಥರು ಎಂದರೆ ಒಂಭತ್ತು ಮಂದಿ ನಾಥಸಂಪ್ರದಾಯದ ಯೋಗೀ ಪುರುಷರು. ದತ್ತಮೂರ್ತಿಯೇ ಈ ಮಹಾತ್ಮರ ಗುರುವು. 'ಅಲಕನಿರಂಜನ' ವೆಂದು ಉಚ್ಚರಿಸುತ್ತ ಧರ್ಮರಕ್ಷಕರಾಗಿ, ಮಹಾಸಿದ್ಧಪುರುಷರಾಗಿ, ದೇಶವೆಲ್ಲ ಸಂಚರಿಸಿ, ಕಡೆಗೆ ವಜ್ರಮಾತೆಯ ಕ್ಷೇತ್ರದಲ್ಲಿ ಸಮಾಧಿಹೊಂದಿದರು. ಈ ಒಂಭತ್ತು ಸಿದ್ಧಪುರುಷರು ಬಹು ಪ್ರಚಂಡ ತತ್ತ್ವಾರ್ಥಿಗಳಾಗಿ, ಭರತಖಂಡ ವನ್ನೆಲ್ಲಾ ಸುತ್ತಾಡಿ, ಹಿಂದೂ ಧರ್ಮದ ರಕ್ಷಕರಾಗಿ ವೇದತತ್ತ್ವಗಳನ್ನು

ಪ್ರಚಾರ ಮಾಡುತ್ತಾ, ಅಲ್ಲಲ್ಲಿ ದೇವಮಂದಿರಗಳನ್ನು ಸ್ಥಾಪಿಸಿರುತ್ತಾರೆ. ಅವು ಇಂದು ಪ್ರಸಿದ್ಧಕ್ಷೇತ್ರಗಳಾಗಿ ಮೆರೆಯುತ್ತಿವೆ. ಅವರು ಸಂಚರಿಸಿದ ಸ್ಥಳಗಳಲ್ಲೆಲ್ಲಾ ನಾಥಸಂಪ್ರದಾಯ ಅಂದರೆ ನಿರಾಕಾರಬ್ರಹ್ಮ (ಅಲಕ್‌ನಿರಂಜನ) ತತ್ತ್ವವನ್ನು ಬೋಧಿಸಿ, ಅಲ್ಲಲ್ಲಿ ಯೋಗೀಮಠಗಳನ್ನು ನಿರ್ಮಿಸಿದರು. ಈ ಮಹಾತ್ಮರಲ್ಲಿ ಮಚ್ಛೇಂದ್ರನಾಥ, ಗೋರಖನಾಥರೆಂಬುವರು ಪ್ರಸಿದ್ಧರಾದವರು. ಮಚ್ಛೇಂದ್ರನಾಥರನ್ನು ಪರಮೇಶ್ವರ ಸಂಭೂತರೆಂದು ತಿಳಿಯಲಾಗುತ್ತದೆ. ಅವರ ಶಿಷ್ಯನೇ ಗೋರಖನಾಥ-ಮಹಾ ಹಠಯೋಗಿ. ಮಂಗಳೂರು ನಗರದ ಸ್ಥಳಪುರಾಣದಲ್ಲಿ ಇವರಿಬ್ಬರ ಹೆಸರು ಬರುತ್ತದೆ. ಇವರಲ್ಲದೆ, ಜಲಂಧರನಾಥ, ಕಾನೀಪನಾಥ, ಚರಪಟನಾಥ ಮೊದಲಾದ ಇತರ ಏಳು ಮಂದಿ ಸಿದ್ಧಪುರುಷರೂ ಠಾಣ ಬಳಿಯ ವಜ್ರೇಶ್ವರಿ ಜಗನ್ಮಾತೆಯಲ್ಲಿ ಐಕ್ಯರಾದರು. ಈ ನವನಾಥರು ಐಕ್ಯವಾದ ಶಕ್ತಿಗೆ ನವಶಕ್ತಿಯೆಂದು ಅನ್ನುತ್ತಾರೆ.

ಮಂಗಳೂರು-ಕದಿರೆ ದೇವಸ್ಥಾನದ ಒಳಾಂಗಣದಲ್ಲಿ ಮತ್ತು ಜೋಗೀಮಠದಲ್ಲಿ ನವನಾಥರ ವಿಗ್ರಹಗಳನ್ನು ಕಾಣಬಹುದು. ನವನಾಥರ ಚರಿತ್ರೆ ಎಂಬ ಗ್ರಂಥ ಇದೆ. ಶ್ರೀ ಕೇಶಾವನಂದಭುವ ಅವರು ರಚಿಸಿರುವ ಶ್ರೀ ನಿತ್ಯಾನಂದ ಮಹಿಮಾಮೃತ ಎಂಬ ಪುಸ್ತಕವನ್ನು ಅವಲೋಕಿಸಬಹುದು. ಚಿತ್ರದುರ್ಗದ ಜೋಗೀಮಠ-ಇದನ್ನು ಜೋಗಿಮಟ್ಟಿ-ಎಂದು ಕರೆಯುತ್ತಾರೆ ಮತ್ತು ಚಿತ್ರದುರ್ಗದ ಗಿರಿವೃಂದ ರಸಸಿದ್ಧರ ಆ ವಾಸಸ್ಥಾನವಾಗಿದ್ದಂತೆ ಪ್ರತೀತಿ ಇದೆ; ಸ್ಥಳಪುರಾಣದಲ್ಲಿಯೂ ಉಕ್ತವಾಗಿದೆ. ನವನಾಥಪಂಥ ಇಲ್ಲಿ ಹಬ್ಬಿದ್ದಿತೆಂದು ಇತಿಹಾಸವೂ ದೃಢಪಡಿಸುತ್ತಿದೆ. ಈ ನವನಾಥ ಸಂಪ್ರದಾಯವನ್ನು ಅನುಸರಿಸಿಯೇ ವಿರಕ್ತಪಂಥ ಈ ಎಡೆಯಲ್ಲಿ ಗರಿಗಟ್ಟಿಕೊಂಡಂತೆ ಊಹಿಸಲು ಅವಕಾಶವುಂಟು.

ಚನ್ನಬಸವಣ್ಣನವರು—

೬. "ಕೃತಯುಗದಲ್ಲಿ ಓಂಕಾರ ಸತ್ಯರೂಪ ದೇವಾಂಗನೆಂಬ ಭಕ್ತ
ಸ್ಥೂಲಕಾಯನೆಂಬ ಜಂಗಮ;
ಅಂದಿಗೆ ಪ್ರಥಮ ಮೂಲಸ್ಥಾನ ಕೇತಾರೇಶ್ವರ.

ತ್ರೇತಾಯುಗದಲ್ಲಿ ಘಂಟಾಕರ್ಣನೆಂಬ ಭಕ್ತನ ಮಾಡುವಲ್ಲಿ
ಶೂನ್ಯಕಾಯನೆಂಬ ಜಂಗಮ;
ಅಂದಿಗೆ ಪ್ರಥಮ ಮೂಲಸ್ಥಾನ ರಾಮೇಶ್ವರ.
ದ್ವಾಪರದಲ್ಲಿ ವೃಷಭನೆಂಬ ಭಕ್ತನ ಮಾಡುವಲ್ಲಿ
ಅನಿಮಿಷನೆಂಬ ಜಂಗಮ;
ಅಂದಿಗೆ ಪ್ರಥಮ ಮೂಲಸ್ಥಾನ ಸೌರಾಷ್ಟ್ರ.
ಕಲಿಯುಗದಲ್ಲಿ ಬಸವನೆಂಬ ಭಕ್ತನ ಮಾಡುವಲ್ಲಿ
ಪ್ರಭುವೆಂಬ ಜಂಗಮ; ಅಂದಿಗೆ ಪ್ರಥಮಸ್ಥಾನ ಶ್ರೀಶೈಲ.
ಇಂತೀ ನಾಲ್ಕು ಯುಗಕ್ಕೆ ನಾಲ್ಕು ಜಂಗಮಸ್ಥಲ;
ನಾಲ್ಕು ಯುಗಕ್ಕೆ ನಾಲ್ಕು ಲಿಂಗಸ್ಥಲ;
ಕೂಡಲ ಚನ್ನಸಂಗಮದೇವಾ"

ಎಂದು ನಾಲ್ಕು ಜಂಗಮ ಸ್ಥಾನಗಳನ್ನೂ, ನಾಲ್ಕು ಲಿಂಗಸ್ಥಾನಗಳನ್ನೂ ಹೇಳಿದ್ದಾರೆ. ಅವರು ಗುರುಸ್ಥಾನಗಳನ್ನು ಹೇಳಲಿಲ್ಲವೆಂಬುದನ್ನು ಗಮನಿಸಬಹುದು. ಕಾಶ್ಮೀರ, ತಮಿಳುನಾಡು, ಮಹಾರಾಷ್ಟ್ರ ಪ್ರಾಂತ ಮತ್ತು ಶ್ರೀಶೈಲ ಪ್ರಾಂತಗಳಲ್ಲಿ ಈ ಜಂಗಮ ಸಂಪ್ರದಾಯ ಹಬ್ಬಿತ್ತೆಂದು ಈ ವಚನ ಸ್ಪಷ್ಟಪಡಿಸುತ್ತದೆ.

೭. ಕೃತಯುಗದಲ್ಲಿ ಕೇತಾರವೆಂಬ ಮೂಲಸ್ಥಾನ;
ತ್ರೇತಾಯುಗದಲ್ಲಿ ವಾರಣಾಸಿಯೆಂಬ ಮೂಲಸ್ಥಾನ;
ದ್ವಾಪರದಲ್ಲಿ ವಿರೂಪಾಕ್ಷನೆಂಬ ಮೂಲಸ್ಥಾನ;
ಕಲಿಯುಗದಲ್ಲಿ ಪರ್ವತವೆಂಬ ಮೂಲಸ್ಥಾನ
ನಾ ನಾಸ್ಥಾನಂಗಳ ಮುಟ್ಟದೆ ಜಂಗಮವೆ ಲಿಂಗವೆಂದು ನಂಬಿದೆ
ಕೂಡಲ ಸಂಗಮದೇವಾ"

ಎಂದು ಬಸವಣ್ಣನವರು ಜಂಗಮಕ್ಷೇತ್ರಗಳನ್ನು ತಿಳಿಸಿದ್ದಾರೆ. ಬಹುಶಃ ಬಸವಣ್ಣನವರು ಹೇಳಿರುವ ವಿರೂಪಾಕ್ಷನೆಂಬ ಮೂಲಸ್ಥಾನ ಚನ್ನಬಸವಣ್ಣನವರು ಹೇಳಿರುವ ಸೌರಾಷ್ಟ್ರದಲ್ಲಿರಬಹುದೆ ? ಅಥವಾ ಅವರು ಹೇಳಿರುವ ವಿರೂಪಾಕ್ಷನೆಂಬ ಮೂಲಸ್ಥಾನ ಪಂಪಾಕ್ಷೇತ್ರವಿರಬಹುದೆ ? ಯಾವುದೇ ಆಗಿರಲಿ, ಅವರೂ

ಸಹ ಗುರುಸ್ಥಾನಗಳ ಹೆಸರುಗಳನ್ನು ತಿಳಿಸಿಲ್ಲ. ಶರಣಯುಗದಲ್ಲಿ ಸನಾತ
ವೀರಶೈವ ಗುರುಸ್ಥಾನಗಳು ಪ್ರಮುಖವಾಗಿರಲಿಲ್ಲವೆಂದು ತೋರುತ್ತದೆ! ಚತು
ಚಾರ್ಯ ಪೀಠಗಳಂತೆಯೇ ಚತುರ್ಜಂಗಮ ಪೀಠಗಳನ್ನು ಬಸವಣ್ಣನವ
ರಚಿಸಿದಂತೆ ಊಹಿಸಲು ಅವಕಾಶವುಂಟು. ಚನ್ನಬಸವಣ್ಣನವರೂ ಇದನ್ನ
ಸೂಚಿಸಿರುತ್ತಾರೆ. ನಾಥಪಂಥದ ಅಲ್ಲಮರು ಕಲ್ಯಾಣದಲ್ಲಿದ್ದ ಕಾಲದಲ್ಲಿ
ಆ ಶರಣ ಸಂಗೊಷ್ಠಿಯ ವಾತಾವರಣದಲ್ಲಿ ನಾಥಪಂಥವನ್ನು ಮಾರ್ಪ
ವಿರಕ್ತ ಪಂಥವನ್ನು ಒಪ್ಪಿಕೊಂಡಂತೆ ಕಾಣುತ್ತದೆ.

೮. "ಅನಿಮಿಷಂಗೆ ಲಿಂಗವ ಕೊಟ್ಟಾತ ಬಸವಣ್ಣ,
ಆ ಲಿಂಗ ನಿನಗೆ ಸಾರಿತ್ತಾಗಿ,
ಬಸವಣ್ಣನ ಸಂಪ್ರದಾಯದ ಕಂದನು, ನೋಡಾ, ನೀನು.
ಭಕ್ತಿದಳದುಳದಿಂದ ಚನ್ನಸಂಗಮನಾಥನೆಂಬ ಲಿಂಗವನು
ಗ್ರಹಿಸಿಕೊಂಡೆನಾ
ಬಸವಣ್ಣನ ಸಂಪ್ರದಾಯದ ಕಂದನು ನೋಡಾ, ನಾನು.
ಇಂತಿಬ್ಬರಿಗೆಯೂ ಒಂದೇ ಕುಲಸ್ಥಲವಾದ ಕಾರಣ
ಕೂಡಲ ಚನ್ನಸಂಗಯ್ಯನಲ್ಲಿ ಬಸವಣ್ಣನ ಮಹಾಮನೆಯ
ಪ್ರಸಾದ ಇಬ್ಬರಿಗೆಯೂ ಒಂದೆಕಾಣಾ, ಪ್ರಭು

ಎಂದು ಚನ್ನಬಸವಣ್ಣನವರು ಮತ್ತು ಅಲ್ಲಮರು ಇಬ್ಬರೂ ಒಂದೇ ಕುಲಸ್ಥ
ವನ್ನು ಅಂಗಿಕರಿಸಿದ್ದಾರೆ.ಬಸವಣ್ಣನವರ ಮಹಾಮನೆಯ ಪ್ರಸಾದದಿಂದ ಇಬ್ಬ
ಬಸವಪಂಥಾನುಯಾಯಿಗಳೇ ಆದರೆಂಬುದನ್ನು ಚನ್ನಬಸವಣ್ಣನವರು ನಿರ್ಧ
ವಾಗಿ ಹೇಳಿದ್ದಾರೆ. ಅಲ್ಲದೆ, ಮೇಲೆ ಕಂಡ ಆರನೆಯ ವಚನದಲ್ಲಿ ಅನಿಮಿ
ದ್ವಾಪರಯುಗದವನೆಂದು ಹೇಳಿ, ಬಸವ ಮತ್ತು ಅಲ್ಲಮ ಕಲಿಯುಗದವರೆ
ತಿಳಿಸಿದೆ. ನಾಲ್ಕು ಯುಗದ ಜಂಗಮ ಸ್ಥಲಗಳನ್ನೂ ಅದರಲ್ಲಿ ಸೂಚಿಸಿ
ಬಸವಣ್ಣನವರು ಮತ್ತು ಅಲ್ಲಮರು ಕಲಿಯುಗದವರೆಂಬುದು ನಿರ್ವಿವಾ
ಆದರೆ, ಚನ್ನಬಸವಣ್ಣನವರು "ಅನಿಮಿಷಂಗೆ ಲಿಂಗವ ಕೊಟ್ಟಾತ ಬಸವಣ್ಣ
ಆ ಲಿಂಗ ನಿನಗೆ ಸಾರಿತ್ತಾಗಿ, ಬಸವಣ್ಣನ ಸಂಪ್ರದಾಯದ ಕಂದ, ನೋಡಾ
ನೀನು" ಎಂದು ಮೇಲೆ ಎಂಟನೆಯ ವಚನದಲ್ಲಿ ಹೇಳಿದ್ದಾರೆ. ಮೇಲೆ ಕಂ

ಅಲ್ಲಮರ ಐದನೆಯ ವಚನದಲ್ಲಿ "ವ್ಯೋಮಸಿದ್ಧ ಗಣನಾಥನ ಶಿಷ್ಯನು ಬಸವನೆಂಬ ಗಣನಾಥನು, ಬಸವನೆಂಬ ಗಣನಾಥನ ಶಿಷ್ಯನು ಅನಿಮಿಷನೆಂಬ ಗಣನಾಥನು" ಎಂದು ಉಕ್ತವಾಗಿದೆ. ಅನಿಮಿಷನ ಶಿಷ್ಯ ಅಲ್ಲಮರೆಂಬುದರಲ್ಲಿ ಸಂಶಯವಿಲ್ಲ. ಆದರೆ, ಅನಿಮಿಷ ದ್ವಾಪರದವನೆಂಬುದಾಗಲಿ, ಅವನು ಬಸವನ ಶಿಷ್ಯನೆಂಬುದಾಗಲಿ ಸರಿಯಲ್ಲ. ಒಂದು ವೇಳೆ, ಈ ಬಸವ ಎಂಬ ಪದ ವೃಷಭ ಎಂಬ ಪದಕ್ಕೆ ಬದಲಾಗಿ ಬಂದಿದ್ದರೆ, ಚನ್ನಬಸವಣ್ಣನವರ ಅಭಿಪ್ರಾಯ ಮೇಲೆ ಕಂಡ ಆರನೆಯ ವಚನದಂತೆ ಸರಿಯಾಗಿರುತ್ತದೆ. ಸಿಂಗಿರಾಜ ಪುರಾಣದಲ್ಲಿ ಒಂದು ಪ್ರಸಂಗ ಬರುತ್ತದೆ. ಕಾರಣಾಂತರದಿಂದ ಕೈಲಾಸದ ವೃಷಭೇಶ್ವರ ಭೂಲೋಕಕ್ಕೆ ಬಂದಿದ್ದಾಗ, ತನ್ನ ಇಷ್ಟಲಿಂಗವನ್ನು ಪಟ್ಟದಕಲ್ಲಿನ ಅನಿಮಿಷಯ್ಯನಿಗೆ ಕೊಟ್ಟನು. ಇಷ್ಟಲಿಂಗವಿಲ್ಲದ ವೃಷಭೇಶ್ವರನನ್ನು ಕೈಲಾಸದ ದ್ವಾರಪಾಲಕರು ಒಳಕ್ಕೆ ಬಿಡಲಿಲ್ಲ. ಕೊನೆಗೆ, ವೃಷಭೇಶ್ವರನನ್ನು ಭೂಲೋಕದಲ್ಲಿ ಬಸವನಾಗಿಯೂ ದ್ವಾರಪಾಲಕರನ್ನು ಬಿಜ್ಜಳ ಮತ್ತು ಕರ್ಣದೇವರಾಗಿಯೂ ಹುಟ್ಟುವಂತೆ ಶಿವನ ಆಜ್ಞೆಯಾಯಿತಂತೆ ! ಇದರಂತೆ, ಅನಿಮಿಷನ ಗುರು ವೃಷಭನೆಂಬುದು ಸರಿ ಹೋಗುತ್ತದೆ. ಆದರೆ, ಅನಿಮಿಷ ದ್ವಾಪರದವನೆಂದು ಒಪ್ಪಲು ಅವಕಾಶವಿಲ್ಲ. ಏಕೆಂದರೆ, ಅಲ್ಲಮರ ಗುರು ಅನಿಮಿಷನಾದರೆ, ಅವರಿಬ್ಬರೂ ಕಲಿಯುಗದವರೇ ಆಗಿರಬೇಕು ! ಬಹುಶಃ ಇಬ್ಬರು ಅನಿಮಿಷರಿರಬಹುದೆ ? ಎಂಬ ಸಂದೇಹ ಬರುತ್ತದೆ. ಚನ್ನಬಸವಣ್ಣನವರು ಮೇಲೆ ಕಂಡ ಆರನೆಯ ವಚನದಲ್ಲಿ ನಾಲ್ಕು ಜಂಗಮಸ್ಥಾನಗಳನ್ನು ಹೇಳಿದ್ದಾರೆ. ಅಲ್ಲಮರು ಮೇಲೆ ಕಂಡ ಐದನೆಯ ವಚನದಲ್ಲಿ ನಾಲ್ಕು ಯುಗಗಳ ಮಾತನ್ನೇ ಹೇಳದಿದ್ದರೂ, ಅವರು ಸೂಚಿಸಿರುವ ಪರಂಪರೆಯನ್ನು ನೋಡಿದರೆ ನಾಲ್ಕು ಯುಗಗಳಿಗಿಂತಲೂ ಪೂರ್ವದಿಂದಲೇ ಅವರ ನಾಥಸಂಪ್ರದಾಯವಿದ್ದಿತೆಂದು ಅರ್ಥವಾಗುತ್ತದೆ. "ಅನಾದಿ ಗಣನಾಥನ ಶಿಷ್ಯನು ಆದಿಗಣನಾಥನು" ಎಂಬ ಮಾತಿನಲ್ಲಿ ಶೂನ್ಯಸ್ಥಿತಿಯಲ್ಲಿಯೇ ಈ ಸಂಪ್ರದಾಯ ಮೂಡಿತೆಂದು ಸೂಚಿಸಿದ್ದಾರೆ.

ನಾಥಸಂಪ್ರದಾಯದ ಅಲ್ಲಮರು 'ಬಸವಣ್ಣನ ಸಂಪ್ರದಾಯದ ಕಂದ'ರಾದ ಮೇಲೆ, ಅಲ್ಲಮ ಸಂಪ್ರದಾಯವೇ ನಿರಂಜನ ಸಂಪ್ರದಾಯವಾಯಿತು ! ಅದು ಶೂನ್ಯಸ್ಥಿತಿಯಲ್ಲಿಯೇ ಆರಂಭವಾಯಿತೆಂದು ಶರಣರು ನಂಬಿದರು ! ನಾಥಸಂಪ್ರದಾಯದ ಮೇಲೆ ಬಸವಮುದ್ರೆ ಬಿತ್ತು ! ಅದು ವಿರಕ್ತಸಂಪ್ರದಾಯವಾಯಿತು!

ನಾಥಸಿದ್ಧ ಅಲ್ಲಮರು ಶಿವಸಿದ್ಧರಾದರು ! ನಾಥಸಂಪ್ರದಾಯದ ಗುರು, ಲಿಂಗ, ಜಂಗಮ ತತ್ತ್ವಗಳು ವಿರಕ್ತ ಸಂಪ್ರದಾಯದ ಗುರು, ಲಿಂಗ, ಜಂಗಮ ತತ್ತ್ವಗಳಿಂದ ಅಷ್ಟೇನೂ ಭಿನ್ನವಾಗಿರಲಿಲ್ಲವೆಂದು ತೋರುತ್ತದೆ. ಆದರಿಂದಲೇ ಅಲ್ಲಮರು ಕಲ್ಯಾಣದಲ್ಲಿ ಶರಣಸಂಗೋಷ್ಠಿಯ ಪ್ರಭಾವದಿಂದ 'ಬಸವಣ್ಣನ ಸಂಪ್ರದಾಯದ ಕಂದ'ರಾದುದೇನೂ ಆಶ್ಚರ್ಯವಲ್ಲ ! ಇದು ಬಸವಣ್ಣನವರ ವಿರಕ್ತ ಸಂಪ್ರದಾಯದ ಅದ್ಭುತ ವಿಜಯ ! ನಾಥಪಂಥದಲ್ಲಿ ಗುರು, ಲಿಂಗ, ಜಂಗಮ ಮತ್ತು ಶೂನ್ಯತತ್ತ್ವ ವಿಚಾರಗಳಲ್ಲಿ ಅಲ್ಲಮರು ಅಪಾರ ಜ್ಞಾನಧನರಾಗಿದ್ದರು. ತತ್ತ್ವ ವಿಚಾರದಲ್ಲಿ ಎಂಥ ಸಂದಿಗ್ಧ ಪರಿಸ್ಥಿತಿಯಲ್ಲಿಯೂ ಅವರು ಸರ್ವಸಮ್ಮತವಾದ ನಿರ್ಣಯಗಳನ್ನು ಹೇಳುತ್ತಿದ್ದರು. ಶರಣಸಂಗೋಷ್ಠಿಯಲ್ಲಿ ಅವರು ಅಧ್ಯಕ್ಷರಾಗಿರಲು ಸಮರ್ಥರಾಗಿದ್ದರು. ಆ ಶರಣ ಸಂಕುಲ ಹೃದಯದಲ್ಲಿ ಅಲ್ಲಮರ ದಿವಾತ್ಮಜ್ಞಾನಪ್ರಭೆ ಪ್ರತಿಬಿಂಬಿಸಿತು. ಬಸವಣ್ಣನವರೂ ಚನ್ನಬಸವಣ್ಣನವರೂ ಅಲ್ಲಮರ ಸಿದ್ಧಿಯನ್ನು ಕಂಡು ಅವರಲ್ಲಿ ಪೂಜ್ಯಭಾವನೆಯನ್ನು ತಾಳಿದರು. ಅವರ ಸಂಗಡ ಬಂದಿದ್ದ ಸಿದ್ಧರಾಮಯ್ಯನವರೂ 'ಬಸವ ಸಂಪ್ರದಾಯದ ಕಂದ'ರಾದರು ! ಅಕ್ಕಮಹದೇವಿಯರಂಥ ವೀರವಿರಾಗಿಣಿಯರೂ ಅಲ್ಲಮರ ನಿರಂಜನ ಸ್ಥಿತಿಯನ್ನು ಅರಿತು ಧನ್ಯರಾದರು. ಅಲ್ಲಮರ ಪರಿವರ್ತನೆಯಿಂದ ವಿರಕ್ತ ಸಂಪ್ರದಾಯ ಪಲ್ಲವಿಸಿತು ! ಕೇತಾರದಿಂದ ರಾಮೇಶ್ವರದವರೆಗೂ ಸೌರಾಷ್ಟ್ರದಿಂದ ಶ್ರೀಶೈಲದವರೆಗೂ ಕಲ್ಯಾಣದಿಂದ ವಾರಣಾಸಿಯವರೆಗೂ ಈ ವಿರಕ್ತಪಂಥ ಲೋಕ ಪಾವನ ಮಾಡಿತು ! ಜಾತಿ, ಮತ, ಕುಲ, ಗೋತ್ರಗಳ ವ್ಯತ್ಯಾಸವನ್ನು ಹರಿದುಬಿಸುಟು ಮಾನವ ಕುಲವನ್ನೇ ಉದ್ಧಾರ ಮಾಡಿತು! ಪತಿತರೆಲ್ಲ ಪಾವನರಾದರು ! ಕಲ್ಯಾಣದಲ್ಲಿ ಬಸವಣ್ಣನವರ ಮಹಮನೆಯ ಶಿವಾನುಭವ ಮಂಟಪ ಭೂಕೈಲಾಸವಾಯಿತು ! ಅಲ್ಲಮರು ಕೆಲವು ಕಾಲ ಶರಣಸಂಗೋಷ್ಠಿಯಲ್ಲಿ ಉದಾತ್ತ ತತ್ತ್ವವಿಚಾರಗಳನ್ನು ಬಿತ್ತರಿಸಿದರು. ಇವರಲ್ಲಿ ಶಿವಜೀವೈಕ್ಯಸಿದ್ಧಿ ಫಲಿಸಿತು ! ಜೀವನ್ಮುಕ್ತರಾದರು ! ಪರಮ ನಿರಂಜನರಾದರು ! ಅವರು ತಮ್ಮ ಪರಿಪೂರ್ಣ ಶಿವಜ್ಞಾನ ಪ್ರಸಾದವನ್ನು ಲೋಕಕ್ಕೆ ನೀಡಲು ಆರಾಮೇಶ್ವರದಿಂದ ಕಾಶ್ಮೀರ ಪರ್ಯಂತ ದಿಗ್ವಿಜಯ ಮಾಡಿದರು. ಅನೇಕ ಪಾವನಕ್ಷೇತ್ರಗಳೆಲ್ಲ ಅವರ ಪಾದಸ್ಪರ್ಶದಿಂದ ಪಾವನತರ ಕ್ಷೇತ್ರಗಳಾದುವು; ಪುಣ್ಯತೀರ್ಥಗಳೆಲ್ಲ ಮಹಾ ಪುಣ್ಯಕ್ಷೇತ್ರಗಳಾದುವು ! ದಕ್ಷಿಣದ ತಮಿಳುಶೈವವೂ ಉತ್ತರದ ಕಾಶ್ಮೀರ

ಶೈವವೂ ವೀರಶೈವವಾದುವು ! ಅನೇಕ ಜಂಗಮಸಂಘಗಳೂ ನಾಡಿನಲ್ಲೆಲ್ಲ ಸುತ್ತಿ ಶಿವತತ್ತ್ವವನ್ನು ಹಬ್ಬಿಸಿದುವು. ವಿರಕ್ತಪಂಥ ನಾನಾಮುಖವಾಗಿ ಬೆಳೆಯಿತು. ಸನಾತನ ಜಂಗಮ ಸ್ಥಲವನ್ನೇ ವಿರಕ್ತಪಂಥ ಎಲ್ಲ ವಿಚಾರಗಳಲ್ಲಿಯೂ ಅನುಕರಿಸಿತು; ತಾನೇ ಜಂಗಮವೆಂದಿತು ನೂತನ ಸಮಾಜದಲ್ಲಿ. ವಿರಕ್ತ ಒಂದು ವಿಶಿಷ್ಟ ಧಾರ್ಮಿಕ ಪಂಥವೇ ಹೊರತು ಅದು ವೀರಶೈವ ಜಂಗಮಸ್ಥಲವಲ್ಲವೆಂಬುದು ಸನಾತನ ವೀರಶೈವ ಮತದ ಅಭಿಪ್ರಾಯ. ಅಲ್ಲಮರು ಕಲ್ಯಾಣವನ್ನು ಬಿಟ್ಟು ದೇಶಪರ್ಯಟನ ಮಾಡಿಕೊಂಡು ಮತ್ತೆ ೧೨ ವರ್ಷಗಳಾದಮೇಲೆ ಕಲ್ಯಾಣದತ್ತ ತಿರುಗಿದರು. ಬಸವಣ್ಣನವರು ಅಲ್ಲಮರ ಆಗಮನವನ್ನು ಕುತೂಹಲದಿಂದ ನಿರೀಕ್ಷಿಸುತ್ತಿದ್ದರು.

ಬಸವಣ್ಣನವರೂ ಅಲ್ಲಮರೂ ಭಾವೈಕ್ಯವನ್ನು ಪಡೆದರು. ಇವರಿಬ್ಬರ ಸಂಬಂಧ ಇಂದಿನದಲ್ಲ; ನಿನ್ನೆಯದಲ್ಲ ! ಎಷ್ಟೋ ಹಿಂದಿನಿಂದಲೂ ಬಂದಿತ್ತು ! ಅದು ಮುಂದಿನ ಕಾಲದಲ್ಲಿಯೂ ಇರುವುದೇ.

೯. **"ಕೃತಯುಗದಲ್ಲಿ ನೀನು ಸ್ಕಂದನೆಂಬ ಗಣೇಶನಾಗಿರ್ದುದ ನಾನು ಬಲ್ಲೆ. ತ್ರೇತಾಯುಗದಲ್ಲಿ ನೀನು ನೀಲಲೋಹಿತನೆಂಬ ಗಣೇಶ್ವರನಾಗಿರ್ದುದ ನಾನು ಬಲ್ಲೆ. ದ್ವಾಪರದಲ್ಲಿ ನೀನು ವೃಷಭನೆಂಬ ಗಣೇಶ್ವರ್ವರನಾಗಿರ್ದುದ ನಾನು ಬಲ್ಲೆ. ಕಲಿಯುಗದಲ್ಲಿ ನೀನು ಬಸವನೆಂಬ ಗಣೇಶ್ವರನಾಗಿ, ಸರ್ವಾಚಾರ ಸಂಪನ್ನನಾಗಿ, ಭಕ್ತಿಜ್ಞಾನದ ಕಣ್ದೆರವೆಯ ಮಾಡಿ, ಶಿವಾಚಾರದ ಘನದ ಬೆಳವಿಗೆಯ ಮಾಡಿ, ಶಿವಭಕ್ತಿಯ ಧ್ವಜವನೆತ್ತಿಸಿ, ಮರ್ತ್ಯಲೋಕದೊಳಗೆ ಹರಹಿದ ಭೇದವ ಭೇದಿಸಿ ನೋಡಿ ಆನು ಅರಿದೆ. ಗೊಹೇಶ್ವರ ಸಾಕ್ಷಿಯಾಗಿ, ನಿಮ್ಮ ಮಾಹಾತ್ಮೆಗೆ ನಮೋನಮೋ ಎನುತಿರ್ದೆನು, ಕಾಣಾ, ಸಂಗನಬಸವಣ್ಣಾ"**

ಎಂದು ಅಲ್ಲಮರು ತಮ್ಮ ವಚನದಲ್ಲಿ ತಮ್ಮ ಮತ್ತು ಬಸವಣ್ಣನವರ ಪೂರ್ವ ಪರಿಚಯವನ್ನು ತಿಳಿಸಿದ್ದಾರೆ. ಬಸವಣ್ಣನವರು ಕೃತಯುಗದಲ್ಲಿ ಸ್ಕಂದ, ತ್ರೇತಾಯುಗದಲ್ಲಿ ನೀಲಲೋಹಿತ, ದ್ವಾಪರದಲ್ಲಿ ವೃಷಭ, ಕಲಿಯುಗದಲ್ಲಿ ಬಸವ

ಎಂದು ಅವತರಿಸಿದರೆಂದು ಅಲ್ಲಮರು ಹೇಳಿದ್ದಾರೆ. ಅಲ್ಲಮರೂ ಸಹ ಬೇರೆ ಬೇರೆ ಯುಗಗಳಲ್ಲಿ ಬೇರೆಬೇರೆ ಹೆಸರಿನಿಂದ ಅವತಾರ ಮಾಡಿದ್ದರೆಂದು ಅವರ ವಚನಗಳಿಂದಲೇ ವ್ಯಕ್ತವಾಗುತ್ತದೆ. ಚನ್ನಬಸವಣ್ಣನವರೂ ಇದನ್ನು ಸಮರ್ಥಿಸುತ್ತಾರೆ. ಸ್ಕಂದ ಎಂದರೆ ಕುಮಾರನೇ ಈ ಸಂಪ್ರದಾಯದ ಮೂಲ ಪುರುಷನೆಂಬುದನ್ನು ಗಮನಿಸಬಹುದು. ಸ್ಕಂದ ಸನಾತನ ವೀರಶೈವದಲ್ಲಿ ಗೋತ್ರ ಪುರುಷನೂ ಆಗಿದ್ದಾನೆ. ವೀರಶೈವರು ಪುನರ್ಜನ್ಮವನ್ನು ಒಪ್ಪುವುದಿಲ್ಲ. ಸ್ಕಂದ ಒಂದೊಂದು ಯುಗದಲ್ಲಿಯೂ ಬೇರೆಬೇರೆ ಹೆಸರಿನಿಂದ ಅವತರಿಸುತ್ತಾನೆ. ಇದು ಮಹಾಂತರಲೀಲಾವಿನೋದ! ಮಾನವರ ಜನನ ಮರಣ ಪರ್ಯಟನವಲ್ಲ. ಪಂಚ ಆಚಾರ್ಯರ ಅವತಾರಗಳೂ ಲೀಲಾವಿನೋದವೇ.

*೧೦. "ಕೃತಯುಗದಲ್ಲಿ ದೇವಾಂಗನೆಂಬ ಗಣೇಶ್ವರನಾಗಿ ನೀವು ಬಂದು ಆರಾಧಿಸುವಲ್ಲಿ, ಸ್ಥೂಲಕಾಯನೆಂಬ ಜಂಗಮವಾಗಿ ಬಂದು ಲಿಂಗಾರ್ಚನೆಯ ಮಾಡಿ ಹೋದ. ಅದರ ಕ್ರಿಯಾಂಗವನು ಮರೆದೆಯಲ್ಲಾ ಬಸವಣ್ಣಾ. ತ್ರೇತಾಯುಗದಲ್ಲಿ ಘಂಟಾಕರ್ಣನೆಂಬ ಗಣೇಶ್ವರನಾಗಿ ಬಂದು ಆರಾಧಿಸುವಲ್ಲಿ ಶೂನ್ಯಕಾಯನೆಂಬ ಜಂಗಮವಾಗಿ ಬಂದು ಲಿಂಗಾರ್ಚನೆಯ ಮಾಡಿ ಹೋದ, ಅದರ ಕ್ರಿಯಾಂಗವ ಮರೆದೆಯಲ್ಲಾ ಬಸವಣ್ಣಾ. ದ್ವಾಪರದಲ್ಲಿ ನೀನು ವೃಷಭನೆಂಬ ಗಣೇಶ್ವರನಾಗಿ ಬಂದು ಆರಾಧಿಸುವಲ್ಲಿ ಅನುಮಿಷನೆಂಬ ಜಂಗಮವಾಗಿ ಬಂದು ಲಿಂಗಾರ್ಚನೆಯ ಮಾಡಿ ಹೋದ. ಅದರ ಕ್ರಿಯಾಂಗವ ಮರೆದೆಯಲ್ಲಾ ಬಸವಣ್ಣಾ. ಕಲಿಯುಗದಲ್ಲಿ ನೀನು ಬಸವನೆಂಬ ಗಣೇಶ್ವರನಾಗಿ ಬಂದು ಆರಾಧಿಸುವಲ್ಲಿ ಪ್ರಭುದೇವರೆಂಬ ಜಂಗಮವಾಗಿ, ಲಿಂಗಾರ್ಚನೆಯ ಮಾಡಬಂದ ಕಾರಣ, ಇಂತೀ ದೇವಭಕ್ತನೆಂಬ ನಾಮನಾಟಕ ಬಿನ್ನಾಣವಲ್ಲದೆ ಬೇರೆಂದು ಕಂಡವರಿಗೆ ನರಕ ತಪ್ಪದು ಕೂಡಲ ಚನ್ನಸಂಗಮದೇವಾ."

ಎಂದು ಚನ್ನಬಸವಣ್ಣನವರು ಬಸವ–ಅಲ್ಲಮರ ಯುಗಯುಗದ ಸಂಬಂಧವನ್ನು ಹೇಳಿದ್ದಾರೆ. ಇಲ್ಲಿಯೂ ಬಸವಣ್ಣನವರೂ ಅಲ್ಲಮರೂ ಕಲಿಯುಗದವರೇ ಆಗಿ

* ೧) ಚನ್ನಬಸವಣ್ಣನವರ ವಚನಗಳು: ಸಂಪಾದಕರು: ಡಾ॥ ಆರ್.ಸಿ. ಹಿರೇಮಠ ಎಂ.ಎ., ಪಿಎಚ್.ಡಿ., ಅವರು. ೨) ಹಾಲುಮತ-ದರ್ಶನ: ಶಂ.ಬಾ. ಜೋಶಿ

ಪ್ದಾರೆ. ದ್ವಾಪರದಲ್ಲಿ ಅವರಿಬ್ಬರೂ ವೃಷಭ-ಅನುಮಿಷರಾಗಿದ್ದರು. ಆದ್ದರಿಂದ ಕಲಿಯುಗದಲ್ಲಿ ಅಲ್ಲಮರ ಗುರು ಅನಿಮಿಷನೇ ಬೇರೆ! ಅಲ್ಲಮರು ದ್ವಾಪರದಲ್ಲಿ ಅನುಮಿಷರಾಗಿದ್ದರು. ಅಲ್ಲಮ-ಬಸವರ ಸಂಬಂಧ ದೇವಭಕ್ತ ಸಂಬಂಧ! ಎಷ್ಟು ಕೋಟಿ ಜನ್ಮಗಳ ಸುಕೃತವೊ! ಆ ಸುಕೃತ ಫಲವೇ ವೀರಶೈವನ್ನು ಉಳಿಸಿದೆ; ಬೆಳಸಿದೆ! ಸ್ಕಾಂದಮತ ಪ್ರಾಚೀನವಾದುದು. ಅದರಲ್ಲಿದ್ದ ನಾಥಪಂಥವೇ ವಿರಕ್ತ ಸಂಪ್ರದಾಯವಾಗಿ ವೀರಶೈವದಲ್ಲಿ ಸೇರಿತೆಂದು ಹೇಳಬಹುದು.

## ತರಂಗ ೪.

### ಶೂನ್ಯತತ್ತ್ವವಿಕಾಸ; ಶರಣವಿಲಾಸ

**ನಿಷ್ಕಲಂ ನಿಷ್ಕ್ರಿಯಂ ಶಾಂತಂ ನಿರವದ್ಯಂ ನಿರಂಜನಮ್ ।**
**ಅಮೃತಸ್ಯ ಪರಂ ಸೇತುಂ ದಗ್ಧೇಂಧನಮಿವಾನಲಮ್ ॥**

—ಶ್ವೇತಾಶ್ವತರೋಪನಿಷತ್.

ಮಾನವ ಈ ಜಗತ್ಸೃಷ್ಟಿಯ ಮೂಲವನ್ನು ನಾನಾಮುಖದಿಂದ ಪರಿಭಾವಿಸಿದನು. ವಿಶ್ವದ ಎಲ್ಲ ಜನಾಂಗಳೂ ಈ ಮೂಲ ಶಕ್ತಿಯ ಕಲ್ಪನೆಯನ್ನು ತಮ್ಮದೇ ಆದ ರೀತಿಯಲ್ಲಿ ಬೆಳಸಿಕೊಂಡವು. ಆ ಮೂಲ ಶಕ್ತಿಯನ್ನು ಸರ್ವ ಚೈತನ್ಯರೂಪವೆಂದು ಅರಿತರು. ಆ ಸ್ವರೂಪವನ್ನು ಪರಬ್ರಹ್ಮವೆಂದು ವೈದಿಕರು ಕರೆದರು. ಅದನ್ನೇ ಮಹಾ ಶೂನ್ಯವೆಂದು ವೀರಶೈವರು ಭಾವಿಸಿದರು. ಆ ಪರಾತ್ಪರ ವಸ್ತುವನ್ನು ಬ್ರಹ್ಮವೆಂದೂ ಲಿಂಗವೆಂದೂ ಕರೆಯುತ್ತಾರೆ. ಆ ಪರ ವಸ್ತುವನ್ನು ಅನುಭಾವಿಗಳು ಅನಂತಕಾಲದಿಂದಲೂ ಚಿಂತನೆ ಮಾಡಿದರು. ಇವರೇ ಮಹರ್ಷಿಗಳು, ದ್ರಷ್ಟಾರರು, ಅಪರೋಕ್ಷಜ್ಞಾನಿಗಳು, ಶರಣರು! ಶಿವಶರಣರು ಕಂಡ ಈ ಶೂನ್ಯತತ್ತ್ವ ಬೌದ್ಧರ ಶೂನ್ಯವಾದವಲ್ಲ; ಅದ್ವೈತಿಗಳ ಮಾಯಾವಾದವಲ್ಲ; ಜೈನರ ಮಿಥ್ಯಾದೃಷ್ಟಿಯೂ ಅಲ್ಲ. ಹನ್ನೆರಡನೆಯ ಶತಮಾನದ ಶಿವಶರಣರಲ್ಲಿ ಈ ಶೂನ್ಯತತ್ತ್ವ ಪೂರ್ಣ ವಿಕಾಸಗೊಂಡಿತು. ಈ ಶೂನ್ಯತತ್ತ್ವ

ವಿಕಾಸವೇ ಶರಣರ ಜೀವನವಿಲಾಸ ! ಷಟ್‌ಸ್ಥಲ ಮಾರ್ಗದಲ್ಲಿ ಸಾಧಕ ಮುಕ್ತ
ನಾಗಲು ಶಿವಯೋಗ ನಿರತನಾಗುತ್ತಾನೆ. ಅವನು ಪರಿಪೂರ್ಣ ಸ್ಥಿತಿಯ
ಶೂನ್ಯ ದರ್ಶನವನ್ನು ಪಡೆಯುತ್ತಾನೆ. ಆ ಪರಮೋಚ್ಚ ಪರಿಪೂರ್ಣಸ್ಥಿತಿಯೆ
ಶೂನ್ಯ ಸಿಂಹಾಸನ ! ಆ ಶೂನ್ಯ ಸಂದರ್ಶನವನ್ನು ಪಡೆದವನೇ ಷಟ್‌ಸ್ಥಲಬ್ರಹ್ಮ
ಅವನೇ ಆತ್ಮಜ್ಞಾನಿ! ಪರಮ ನಿರಂಜನ! ಆ ಸ್ಥಿತಿಯೇ ಲಿಂಗಾಂಗ ಸಾಮರಸ್ಯ
ಎಲ್ಲ ವೇದಾಂತಗಳಲ್ಲಿಯೂ ದರ್ಶನ ಮತ್ತು ಸಂಪ್ರದಾಯ ಎಂಬ ಎರಡು
ಮಾರ್ಗಗಳುಂಟು. ವೀರಶೈವದಲ್ಲಿ ದರ್ಶನಸ್ವರೂಪವೇ ಶಕ್ತಿ ವಿಶಿಷ್ಟಾದ್ವೈತಸ್ಥಿ
ಸಂಪ್ರದಾಯ ಮಾರ್ಗವೇ ಷಟ್‌ಸ್ಥಲ ಬ್ರಹ್ಮಸ್ಥಿತಿ ! ಈ ಎರಡರಲ್ಲಿಯೂ ಒಂದೇ
ಪ್ರಕಾಶ! ಈ ಪ್ರಕಾಶವೇ ಲಿಂಗಪ್ರಕಾಶ. ಎರಡರ ಶಕ್ತಿಯೂ ಒಂದೇ. ಈ ಲಿಂಗ
ಪ್ರಕಾಶವೇ ಅಂತಶ್ಚಕ್ಷು ! ಅದೇ ಪರಂಜ್ಯೋತಿ ! ಬಸವಣ್ಣನವರು ಷಟ್‌ಸ್ಥ
ಮಾರ್ಗವನ್ನು ವಿಶಿಷ್ಟ ರೀತಿಯಲ್ಲಿ ಪ್ರಚಾರ ಮಾಡಿದರು. ಈ ಷಟ್‌ಸ್ಥ
ಸಂಪ್ರದಾಯ ಸನಾತನ ವೀರಶೈವದಲ್ಲಿಯೂ ಇದೆ. ಶರಣರು ತಮ್ಮ ದಿವ್ಯಾನು
ಭವದಿಂದ ಶೂನ್ಯವನ್ನು ಅರಸಿದರು; ಕಂಡರು; ಜೀವನ್ಮುಕ್ತರಾದರು ! ಯಾ
ಬೇಕಾದರೂ ಶಿವಾಚಾರದಲ್ಲಿ ಸೇರಿ ಮುಕ್ತರಾಗಲು ಬಸವಣ್ಣನವರು ಅವಕಾ
ವನ್ನು ಕಲ್ಪಿಸಿದರು. ಇದು ಆ ಮಹಾನುಭಾವರ ಉದಾತ್ತ ದೃಷ್ಟಿ ! ಸನಾತ
ವೀರಶೈವದಲ್ಲಿ ಈ ಔದಾರ್ಯಭಾವವಿರಲಿಲ್ಲ, ಇದ್ದರೂ ಧೈರ್ಯದಿಂದ ಅದನ್ನು
ಆಚರಣೆಯಲ್ಲಿ ಯಾರೂ ತರಲಿಲ್ಲ; ತಂದರೂ ಬಹಳವಿಲ್ಲ ! ಪ್ರತಿಯೊಬ್ಬ ಶರಣ
ಹೃದಯವೂ ಶೂನ್ಯಸಿಂಹಾಸನವಾಯಿತು ! ಪ್ರತಿಯೊಬ್ಬ ಶರಣನೂ ನಿರಂಜ
ಸ್ವರೂಪಿಯಾದನು ! ಬಸವಣ್ಣನವರು ವೀರಶೈವ ತತ್ತ್ವಗಳನ್ನು ಸರಳ ಸುಂದ
'ವಚನ'ಗಳಲ್ಲಿ ಪ್ರಚಾರ ಮಾಡಿದರು. ಅನೇಕ ಶರಣರು ತಮ್ಮ ಶಿವಾನುಭ
ವನ್ನು 'ವಚನ' ರೂಪದಲ್ಲಿ ತಿಳಿಸಿದರು. ವಚನ ಸಾಹಿತ್ಯವನ್ನು ಕನ್ನಡ ಉಪ
ನಿಷತ್ತುಗಳೆಂದು ತತ್ತ್ವವೇತ್ತರು ಕರೆದಿರುತ್ತಾರೆ. ಬಸವಣ್ಣನವರ ಧರ್ಮ
ಪ್ರಭಾವ ಕನ್ನಡನಾಡಿನಲ್ಲಿಯೇ ಅಲ್ಲದೆ, ಹೊರನಾಡುಗಳಲ್ಲಿಯೂ ಹಬ್ಬಿತು
ಶರಣರು ಜನಜೀವನದಲ್ಲಿ ನವಚೈತನ್ಯವನ್ನು ಮೂಡಿಸಿದರು. ಲೋಕಜೀವ
ದಲ್ಲಿ ಮಹಾ ಧಾರ್ಮಿಕ ಕ್ರಾಂತಿಯೇ ಆಯಿತು !

ಶರಣರು ಸೃಷ್ಟಿಯ ಮೂಲ ಸ್ವರೂಪವನ್ನು ಶೂನ್ಯವೆಂದು ಕರೆದರು
ಆ ಶೂನ್ಯವನ್ನು ಮಹಾಲಿಂಗ ರೂಪದಲ್ಲಿ ಪರಿಭಾವಿಸಿದರು; ಆರಾಧಿಸಿದರು

ತ್ತಿಲ್ಲವುರು ಆ ಪರವಸ್ತುವನ್ನು ನಿರಾಕಾರ, ನಿರ್ಗುಣ, ನಿರವಯ ಎಂದು ಹೇಳಿದ್ದಾರೆ. ಅದೇ ಶೂನ್ಯ ! ನಾಥಸಂಥದವರೂ ಇದೇ ರೀತಿಯಲ್ಲಿ ಹೇಳುತ್ತಾರೆ.

೧೧. "ಆದಿಯಾಧಾರವಿಲ್ಲದಂದು; ಹಮ್ಮುಬಿಮ್ಮುಗಳಿಲ್ಲದಂದು; ಸುರಾಳನಿರಾಳವಿಲ್ಲದಂದು; ಶೂನ್ಯನಿಶ್ಶೂನ್ಯವಿಲ್ಲದಂದು; ಸಚರಾಚರವೆಲ್ಲ ರಚನೆಗೆ ಬಾರದಂದು; ಗುಹೇಶ್ವರನೊಬ್ಬನೇ ಇದ್ದೆಯಲ್ಲಾ ಇಲ್ಲದಂತೆ"

ಎಂದರೆ ಆ ಶೂನ್ಯ 'ಇದ್ದೆಯಲ್ಲ ಇಲ್ಲದಂತೆ' ಎಂಬ ಹಾಗೆ ಇದೆಯಂತೆ. ಅದು ಉಪಮಾತೀತವಾದುದು; ಅನಿರ್ವಚನೀಯವಾದುದು; ಅಗೋಚರವಾದುದು. ಆದರೆ, ಅದು ಅಪರೋಕ್ಷಜ್ಞಾನ ವೇದ್ಯವಾದುದು. ಶೂನ್ಯಸ್ಥಿತಿಯಲ್ಲಿ ನಾದ ಬಿಂದುಗಳಿರುವುದಿಲ್ಲ; ಅಹಂಕಾರ ಮಮಕಾರಗಳಿರುವುದಿಲ್ಲ; ಸಾಕಾರನಿರಾಕಾರಗಳಿರುವುದಿಲ್ಲ; ಜೀವಪರಮರಿರುವುದಿಲ್ಲ. ಆಗ ಪರಶಿವ ತಾನೊಬ್ಬನೇ ನಿಷ್ಕಲವಾಗಿರುತ್ತಾನೆ.

೧೨. "ತಾಯಿತಂದೆ ಇಲ್ಲದ ಕಂದಾ, ನಿನಗೆ ನೀನೆ ಹುಟ್ಟಿ ಬೆಳೆದೆಯಲ್ಲಾ ! ನಿನ್ನ ಪರಿಣಾಮವೇ ನಿನ್ನ ಪ್ರಾಣತೃಪ್ತಿಯಾಗಿ ಇದ್ದೆಯಲ್ಲಾ ! ಭೇದಕರಿಗೆ ಅಭೇದ್ಯನಾಗಿ ನಿನ್ನ ನೀನೇ ಬೆಳಗುತ್ತಿರ್ದೆಯಲ್ಲಾ ! ನಿನ್ನ ಚಾರಿತ್ರ ನಿನಗೆ ಸಹಜ ಗುಹೇಶ್ವರಾ"

ಆ ಪರವಸ್ತು ತನಗೆ ತಾನೇ ಹುಟ್ಟಿ ಬೆಳೆಯುತ್ತದೆ. ಅದು ತನಗೆ ತಾನೇ ಬೆಳಗುತ್ತದೆ. ಆ ಒಂದೇ ವಸ್ತು ಎಲ್ಲದರಲ್ಲಿಯೂ ತುಂಬಿರುತ್ತದೆ. ಈ ಸೃಷ್ಟಿ ಅದರಿಂದ ಹೊರಹೊಮ್ಮುತ್ತದೆ. ಅದು ಈ ಪ್ರಪಂಚವನ್ನು ನಿರ್ಮಿಸಿ, ಅದರಲ್ಲಿಯೇ ಅವ್ಯಕ್ತರೂಪದಲ್ಲಿ ವ್ಯಾಪಿಸಿ ಪ್ರಪಂಚದಿಂದ ನಿರ್ಲಿಪ್ತವಾಗಿಯೇ ಇರುತ್ತದೆ.

೧೩. "ನಾಮಠನಾಮವಿಲ್ಲ. ನಾನು ತಾನು ಮುನ್ನವೇ ಇಲ್ಲ. ಈ ಉಭಯನಾಮವಾವಸೀಮೆಯೊಳಗು ಇಲ್ಲ. ಒಡಲು ಇಲ್ಲ ನೆಳಲು ಇಲ್ಲ. ಏನೆಂಬುದೇನು ತಾನು ಮುನ್ನಿಲ್ಲ. ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ನಾನು ಇಲ್ಲ ನೀನು ಇಲ್ಲ."

ಎಂದು ಶರಣ ಘಟ್ಟಿವಾಳಯ್ಯನವರು ಶೂನ್ಯವನ್ನು ಪರಿಭಾವಿಸಿದ್ದಾರೆ. ಆ ನಿಜವಸ್ತು ಲಿಂಗ, ಅಂಗ ಎಂದು ಎರಡಾಗಿ ತೋರದ ಮುನ್ನ ನಾನು ತಾನು ಎಂಬು

ದಿಲ್ಲದೆ ನಿಷ್ಕಲವಾಗಿರುತ್ತದೆ. ಅದು ಸೀಮಾತೀತವಾದುದು. ಅದಕ್ಕೆ ಯಾವ ಹೆಸರೂ ಇಲ್ಲ. ಅದು ಏನು ಎಂಬುದನ್ನು ತಿಳಿಯುವಂತಿಲ್ಲ. ಅದನ್ನು ತಿಳಿಸಲು ಸಾಧ್ಯವಿಲ್ಲ. ಅದು ಬಯಲು. ಆ ಪರವಸ್ತುವನ್ನು ಅರಿಯಲು ಶರಣರು ಶಿವ ಯೋಗವನ್ನು ಆಚರಿಸಿದರು; ಶಿವಾನುಭವವನ್ನು ಪಡೆದರು. ಅದರ ಸಾಕಾರ ವನ್ನು ನೇತಿನೇತಿ ಎಂದು ಹೇಳುತ್ತ ಅದರ ನಿರಾಕಾರವನ್ನು ತಿಳಿಸಿದರು.

೧೪. "ಅಸುರಮಾಲೆಗಳಿಲ್ಲ, ತ್ರಿಶೂಲ ಡಮರುಗವಿಲ್ಲ, ಬ್ರಹ್ಮಕಪಾಲವಿಲ್ಲ, ಭಸ್ಮ ಭೂಷಣನಲ್ಲ, ವೃಷಭ ವಾಹನವಿಲ್ಲ, ಋಷಿಯ ಮಗಳೊಡನಿರ್ದಾತನಲ್ಲ, ಎಸಗುವ ಸಂಸಾರದ ಕುರುಹಿಲ್ಲದಾತಂಗೆ ಹೆಸರಾವುದೆಂದನಂಬಿಗ ಚೌಡಯ್ಯ"

ಆನಿಷ್ಕಲವಸ್ತು ತನ್ನ ಚಿದ್ವಿಲಾಸದಿಂದ ಸಗುಣವೆನಿಸುತ್ತದೆ. ಆಗ, ಅದು ಮೂರ್ತಿಸ್ವರೂಪವಾಗಿರುತ್ತದೆ. ಈ ಸಾಕಾರದಲ್ಲಿ ಅವನಿಗೆ ನಾನಾ ಹೆಸರು ಗಳುಂಟು; ವೇಷಭೂಷಣಗಳುಂಟು; ಮಡದಿ ಮಕ್ಕಳುಂಟು. ನಿಷ್ಕಲ ವಸ್ತು ಸ್ಥಿತಿಯಲ್ಲಿ ಅವನಿಗೆ ಹೆಸರಿಲ್ಲ; ಕುಲಸೀಮೆಗಳಿಲ್ಲ ಎಂದು ಶರಣ ಅಂಬಿಗ ಚೌಡಯ್ಯನವರು ತಿಳಿಸುತ್ತಾರೆ. ಎಲ್ಲ ಶರಣರೂ ಆ ಸಕಲ ಸ್ಥಿತಿಯನ್ನು ಚಿಂತಿಸಿ ಅದನ್ನು ನಿಷ್ಕಲವೆಂದು ಹೇಳುತ್ತಾರೆ.

೧೫. "ದ್ವೀಪಾದ್ವೀಪವಿಲ್ಲದಲ್ಲಿಂದತ್ತತ್ತ, ಕಾಲ ಕರ್ಮವಿಲ್ಲದಲ್ಲಿಂದತ್ತತ್ತ, ಮಾಯಾ ಮೋಹವಿಲ್ಲದಲ್ಲಿಂದತ್ತತ್ತ, ಏನು ಏನು ಇಲ್ಲದಲ್ಲಿಂದತ್ತತ್ತ ಆದಿ ಮೂವರಿಲ್ಲದಲ್ಲಿಂದತ್ತತ್ತ, ಚಿಮ್ಮಲಿಗೆಯ ಚೆನ್ನರಾಮನೆಂಬ ಲಿಂಗ ವಿಲ್ಲದಲ್ಲಿಂದತ್ತತ್ತ ನೀನು ನಿರಾಳನಯ್ಯಾ"

ಎಂದು ಶರಣ ಚಂದಿಮರಸರು ಭಾವಿಸುತ್ತಾರೆ. ಶಿವನ ಪಂಚವಿಂಶತಿಲೀಲೆಗಳು ನಡೆಯುದ ಮುಂಚೆ, ತತ್ತ್ವಾತತ್ತ್ವಗಳೇನೂ ಇಲ್ಲದ ಮುಂಚೆ ಆ ಪರವಸ್ತು ನಿಷ್ಕಲವಾಗಿತ್ತು. ಅದೇ ಶೂನ್ಯ ಸ್ಥಿತಿ. ದೇಹ, ಆತ್ಮ, ಪರಮಾತ್ಮ, ಸ್ಥೂಲ ಸೂಕ್ಷ್ಮ, ಸಾಕಾರ, ನಿರಾಕಾರ ಎಂಬ ಎಲ್ಲ ತತ್ತ್ವಗಳ ತೋರಿಕೆಯ ಪ್ರವರ್ತನೆ ನಿವರ್ತನೆಗಳೇನೂ ಇಲ್ಲದಂದು ಆ ನಿಷ್ಕಲಬ್ರಹ್ಮ ನಿಶ್ಶಬ್ದವಾಗಿತ್ತು.

೧೩. ಶೂನ್ಯ ಹುಟ್ಟದಂದು, ನಿಶ್ಶೂನ್ಯವಿಲ್ಲದಂದು, ಬ್ರಹ್ಮ, ವಿಷ್ಣು, ಮಹೇಶ್ವರ ರಿಲ್ಲದಂದು, ಹದಿನಾಲ್ಕು ಭುವನ ದಿಕ್ಕುವಿದಿಕ್ಕುವಳಯಂಗಳಿಲ್ಲದಂದು, ಕೂಡಲ ಚನ್ನಸಂಗಯ್ಯ ಹೆಸರಿಲ್ಲದಿರ್ದನಂದು"

ಶೂನ್ಯ ನಿಶ್ಶೂನ್ಯಗಳೆಂಬರೆ ನಾದಬಿಂದುಗಳಿಲ್ಲದ ಮುಂಚೆ, ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳು ರೂಪುಗೊಳ್ಳದ ಮುಂಚೆ, ಅನಂತ ಬ್ರಹ್ಮಾಂಡ ಗಳು, ದಿಕ್ಕುವಿದಿಕ್ಕುಗಳು ಮೂಡದ ಮುಂಚೆ ಆ ಪರಬ್ರಹ್ಮ ನಿಷ್ಕಲಾವಸ್ಥೆಯ ಲ್ಲಿತ್ತು. ಅದಕ್ಕೆ ಬ್ರಹ್ಮವೆಂಬ ಹೆಸರೂ ಇರಲಿಲ್ಲ. ಆಗ ಅದಕ್ಕೆ ಹೆಸರಿಟ್ಟು ಕರೆ ಯುವವರೇ ಇರಲಿಲ್ಲ. ಇದು ಆ ಶೂನ್ಯದ ಸ್ಥಿತಿ ಎಂದು ಷಟ್‌ಸ್ಥಲ ಜ್ಞಾನಿ ಚನ್ನಬಸವಣ್ಣನವರು ಸಾಕಾರದ ನಿಷೇಧಾತ್ಮಕವಾಗಿ ನಿರಾಕಾರವನ್ನು ಅರಿಯು ತ್ತಾರೆ. ಆ ಸಾಕಾರ ನಿರಾಕಾರ ಸ್ಥಿತಿಗಳನ್ನು ಮೀರಿದುದೇ ಪರವಸ್ತು. ಅದರ ಸಹಜ ಸ್ವರೂಪವೇ ಬಯಲು. ಶರಣ ಸಿದ್ಧರಾಮಯ್ಯನವರು—

೧೭. "ಸರ್ಪನ ಮೇಲೆ ಪೃಥ್ವಿ ರಚಿಸದಂದು, ಸಮುದ್ರಂಗಳೇಳೂ ಹಾಸದಂದು, ಅಷ್ಟದಿಗುದಂತಿಗಳು ಹೂಡದಂದು, ಸ್ವಯಂಭು ಶಕ್ತಿಗಳು ಇಲ್ಲದಂದು, ಗಂಗೆಗೌರೀ ವಲ್ಲಭರಿಲ್ಲದಂದು "ಬ್ರಹ್ಮಾ, ವಿಷ್ಣುಶ್ಚ ರುದ್ರಶ್ಚ ಈಶ್ವರಶ್ಚ, ಸದಾಶಿವಃ" ಈ ಐವರೂ ಇಲ್ಲದಂದು, ನಿಜಗುರು ಕಪಿಲಸಿದ್ಧ ಮಲ್ಲಿನಾಥ ಅತ್ತತ್ತ ನಿಮಗೆ ಹೆಸರಿಲ್ಲವಯ್ಯಾ"

ಎಂದು ಮನೋಜ್ಞವಾಗಿ ಹೇಳಿದ್ದಾರೆ. ಚರಾಚರ ಜಗತ್ತು ಉದಯವಾಗುವು ದಕ್ಕೆ ಮುಂಚೆ ಸರ್ವಶೂನ್ಯ ಸ್ಥಿತಿಯಲ್ಲಿ ಮಹಾಲಿಂಗ ತಾನು ಒಂದೇ ಇತ್ತು. ಜಗತ್ತಿನ ಸೃಷ್ಟಿಗೆ ಕಾರಣವಾದ ಪಂಚ ಸಾದಾಖ್ಯಗಳಿರಲಿಲ್ಲ; ಕಲಾಶಕ್ತಿಗಳಿರಲಿಲ್ಲ

೧೫. "ವೇದಾತೀತ ಷಡುವರ್ಣರಹಿತ ಅಷ್ಟತ್ರಿಂಶತ್ಕಳಾತೀತ ವ್ಯೋಮಾತೀತ ಕೂಡಲ ಸಂಗಮದೇವಾ"

ಎಂದು ಬಸವಣ್ಣನವರು ಆ ನಿಷ್ಕಲ ಲಿಂಗಸ್ಥಿತಿಯನ್ನು ಅರ್ಥಪೂರ್ಣವಾಗಿ ಸೂತ್ರರೂಪದಲ್ಲಿ ಹೇಳಿದ್ದಾರೆ. ಆ ಶೂನ್ಯ ಲಿಂಗಸ್ವರೂಪವನ್ನು ವೇದಗಳು ಅರಿಯಲಿಲ್ಲ; ಶ್ರುತಿಗಳು ತಿಳಿಯಲಿಲ್ಲ; ವಾಣಿ ನಿರೂಪಿಸಲಿಲ್ಲ; ಮನ ಭಾವಿಸ

ಲಿಲ್ಲ. ಹಳದಿ, ಬಿಳುಪು, ಹಸಿರು, ಕಿರಮಂಜಿ, ಬೂದು ಮತ್ತು ಗೌರ ಎಂಬ ಆರು ಬಣ್ಣಗಳಲ್ಲಿ ಯಾವ ಬಣ್ಣವೂ ಇಲ್ಲದುದೇ ಆ ಪರವಸ್ತು. ಮೂವತ್ತೆಂಟು ಕಲೆಗಳಿಂದಲೂ ಅದನ್ನು ಅರಿಯಲಾಗುವವಲ್ಲ. ಆಕಾಶಾದಿ ತತ್ತ್ವಗಳಿಲ್ಲದ ಅಖಂಡ ಸ್ಥಿತಿಯೇ ಆ ಮಹಾಲಿಂಗ. ಅದು ಅನುಪಮ ವಸ್ತು. ಶರಣರು ತಮ್ಮ ಶಿವಾನುಭವ ದೃಷ್ಟಿಯಿಂದ ಆ ಶೂನ್ಯ ಸ್ಥಿತಿಯನ್ನು ಕಂಡು ಆನಂದಿಸಿದರು. ಬಸವಣ್ಣನವರ ತರುವಾಯ ಸುಮಾರು ಮುನ್ನೂರು ವರ್ಷ ಕಾಲ ಈ ಶೂನ್ಯತತ್ತ್ವ ಸಂಪ್ರದಾಯ ನಾಡಿನಲ್ಲಿ ಬೆಳೆಯಿತು. ಈ ಸಂಪ್ರದಾಯದ ಅನೇಕ ಮಠಗಳು ನಿರ್ಮಾಣವಾದುವು. ಅವು ಧರ್ಮಕೇಂದ್ರಗಳಂತೆ ನೂತನ ವೀರಶೈವವನ್ನು ಪೋಷಿಸಿದುವು. ವಿರಕ್ತ ಸಂಕುಲ ಹೆಚ್ಚಿತು. ಮತ್ತೊಮ್ಮೆ ಹದಿನೈದನೆಯ ಶತಮಾನದಲ್ಲಿ ಎಡೆಯೂರು ಸಿದ್ಧಲಿಂಗ ಯತೀಶ್ವರರು ಈ ಶರಣಪಂಥವನ್ನು ಉಜ್ಜೀವನಗೊಳಿಸಿದರು. ಅವರು ಮಹಾಮಹಿಮರು; ಪರಮ ಶಿವಯೋಗಿಗಳು. ಅವರನ್ನು ದ್ವಿತೀಯ ಅಲ್ಲಮರೆಂದು ವಿರಕ್ತ ಪರಂಪರೆ ಗೌರವಿಸಿತು. ಅವರು ಶೂನ್ಯಸ್ಥಿತಿಯನ್ನು ಅರಿತು ಆನಂದಿಸಿದರು; ಅದನ್ನು ಜಗತ್ತಿಗೆ ಬೋಧಿಸಿದರು.

೧೯. "ಆದಿ ಅನಾದಿಗಳಿಲ್ಲದಂದು, ನಾದಬಿಂದು ಕಳೆದೋರದಂದು
ದೇಹಿದೇಹಂಗಳು ಉತ್ಪತ್ಯವಾಗದಂದು
ಜೀವಾತ್ಮ ಪರಮಾತ್ಮರೆಂಬುವರಿಲ್ಲದಂದು
ಸಕಲ ಚರಾಚರಂಗಳ ಸುಳುಹಿಲ್ಲದಂದು
ನೀನು ನಿಶ್ಶೂನ್ಯನಾಗಿ ಇರ್ದೆಯಯ್ಯಾ
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ"

ಎಂದು ಸಿದ್ಧಲಿಂಗ ಯತಿವರ್ಯರು ಶೂನ್ಯಲಿಂಗಸ್ವರೂಪವನ್ನು ತಿಳಿಸಿರುತ್ತಾರೆ. ಶೂನ್ಯವೆಂದರೆ ಏನೂ ಇಲ್ಲದ ಮಿಥ್ಯೆಯಲ್ಲ. ಅದು ಎಲ್ಲವನ್ನೂ ಒಳಗೊಂಡ ಎಲ್ಲದರಲ್ಲಿಯೂ ತುಂಬಿರುವ ಪರಿಪೂರ್ಣಸ್ಥಿತಿ. ಅದೇ ಬಯಲು. ಅದರಾಚೆ ಇರುವುದೇ ನಿರ್ಬಯಲು. ಈ ಬಯಲಿನಿಂದ ಮಹಾಲಿಂಗ ಉದಯವಾಗುತ್ತದೆ. ಇದನ್ನು ನಿರಾಕಾರ ಶರಣ ಎಂದೂ ಕರೆಯುತ್ತಾರೆ. ಇಲ್ಲಿ ಲಿಂಗ ಎಂದರೆ ಶಿಲಾಲಿಂಗವೆಂದು ಯಾರೂ ತಿಳಿಯಬಾರದು. ಅದು ಕೇವಲ ಸಂಕೇತವಾಗಿದ್ದೀತು. ಇಲ್ಲಿ ಲಿಂಗವೆಂದರೆ ಪರಬ್ರಹ್ಮ ಎಂದು ಅರ್ಥ. ಸಾಧಕ ಶಿವಯೋಗಬಲದಿಂದ

ಹಂತಹಂತವಲ್ಲಿಯೂ ಆ ಪರಬ್ರಹ್ಮವನ್ನು ಅರಿಯಬೇಕು; ಸಾಧಿಸಬೇಕು. ಈ ಸ್ಥಿತಿಯನ್ನು ಪಡೆಯಲು ಶಿವಯೋಗ ಪ್ರಖರವಾಗಬೇಕು. ಆಧಾರಚಕ್ರದಲ್ಲಿ ಆಚಾರ ಲಿಂಗಸ್ಥಿತಿಯನ್ನು ಪಡೆದು, ಸ್ವಾಧಿಷ್ಠಾನಚಕ್ರದಲ್ಲಿ ಗುರುಲಿಂಗವನ್ನು ಕಂಡು, ಮಣಿಪೂರಕದಲ್ಲಿ ಶಿವಲಿಂಗವನ್ನು ನೋಡಿ, ಅಲ್ಲಿಂದ ಮುಂದೆ, ಸಾಧನಾ ಬಲದಿಂದ ಪಾಯು ನಿವೃತ್ತಿಯನ್ನು ಪಡೆದು ಜಂಗಮಲಿಂಗವನ್ನು ಆರಾಧಿಸಿ, ವಿಶುದ್ಧಿಚಕ್ರದಲ್ಲಿ ಪ್ರಸಾದ ಲಿಂಗವನ್ನು ಅರಿತು, ಅನಂತರ ಆಜ್ಞಾಚಕ್ರದಲ್ಲಿ ಮಹಾಲಿಂಗವನ್ನು ಅರ್ಚಿಸಿ, ತರುವಾಯ ಬ್ರಹ್ಮರಂಧ್ರದಲ್ಲಿ ಸಹಸ್ರಾರಚಕ್ರದಲ್ಲಿ ನಿಷ್ಕಲ ಲಿಂಗವನ್ನು ಪೂಜಿಸಿ, ಮುಂದೆ ಶಿಖಾಚಕ್ರದಲ್ಲಿ ಶೂನ್ಯ ಲಿಂಗವನ್ನು ಅವಲೋಕಿಸಿ, ಪಶ್ಚಿಮ ಚಕ್ರದಲ್ಲಿ ನಿರಂಜನ ಲಿಂಗವನ್ನು ದೃಷ್ಟಿಸಿ, ಅಲ್ಲಿಂದ ಮುಂದೆ ನೋಡಿದರೆ ಬರಿಯ ಬಯಲು ಗೋಚರಿಸುತ್ತದೆ. ಅದೇ ಆತ್ಮದ ನಿಜ ನಿವಾಸ. ಈ ನವಲಿಂಗ ಪೂಜೆಯನ್ನು ನಿರಂತರವೂ ನಡಸುವವನೇ ಶಿವಯೋಗಿ! ಅವನಿಗೆ ಭವಬಂಧನವಿಲ್ಲ. ಅವನೇ ಜೀವನ್ಮುಕ್ತ ! ಪರಮ ನಿರಂಜನ ! ಎಂದು ಮಹಾ ಶರಣ ಅಖಂಡೇಶ್ವರರು ತಮ್ಮ ಶಿವಾನುಭವವನ್ನು ತಿಳಿಸಿರುತ್ತಾರೆ. ಇಂಥ ಶಿವಯೋಗಿ ಎಲ್ಲಿರುತ್ತಾನೆಯೊ ! ಈಗ ಪ್ರತಿಯೊಬ್ಬ ವಿರಕ್ತನೂ ಶಿವ ಯೋಗಿಯೆ ! ಪ್ರತಿಯೊಬ್ಬ ವಿರಕ್ತನೂ ನಿರಂಜನನೇ !

ಶೂನ್ಯ ಎಂದರೆ ಆ ನಿಜವಸ್ತು ಒಂದೇ. ಅದು ಸ್ವಲೀಲೆಯಿಂದ ಎರಡಾಗ ಬಲ್ಲುದು. ಆಗ ಲಿಂಗ, ಅಂಗ ಎಂದು ಎರಡಾದರೂ ಪುನಃ ಅಂಗ ಲಿಂಗದಲ್ಲಿಯೇ ಸೇರಿ ಲಯವಾಗಬಲ್ಲುದು. ಅದು ಆದಿಯಲ್ಲಿಯೂ ಒಂದೇ; ಅಂತ್ಯದಲ್ಲಿಯೂ ಒಂದೇ. ಲೀಲೆಯಾದರೆ ಉಮಾಪತಿ, ಲೀಲೆ ಮುಗಿದರೆ ಸ್ವಯಂಭು. ಇದು ಶರಣರು ಕಂಡ ದಿವ್ಯದರ್ಶನ. ಈ ಲೀಲೆ ಅನಾದಿಕಾಲದಿಂದಲೂ ನಡೆಯುತ್ತ ಬಂದಿದೆ. ಈ ಶೂನ್ಯವನ್ನು ಅರಿಯಲು ಷಟ್‌ಸ್ಥಲ ಮಾರ್ಗದಲ್ಲಿ ಸಾಧಕ ಮನೋವಿಕಾಸವನ್ನು ಪಡೆಯಬೇಕು. ಜೀವನು ಅಷ್ಟಾವರಣದಲ್ಲಿ ಪಂಚಾ ಚಾರಗಳನ್ನು ಆಚರಿಸುತ್ತ ಮಲತ್ರಯಗಳನ್ನು ಪರಿಹರಿಸಿಕೊಂಡು ಶಿವಯೋಗ ದಿಂದ ಶೂನ್ಯವನ್ನು ಅನುಭವಿಸಬಲ್ಲ. ಇದೇ ಮುಕ್ತಿ. ಗುರುಪದವಿಯಲ್ಲಿರುವವ ನಾಗಲಿ ಜಂಗಮ ಪದವಿಯಲ್ಲಿರುವವನಾಗಲಿ, ಮೊಟ್ಟಮೊದಲು, ಭಕ್ತಸ್ಥಲ ದಿಂದಲೇ ತನ್ನ ಸಾಧನೆಯನ್ನು ಪ್ರಾರಂಭಿಸಬೇಕು. ಸೋಪಾನದಿಂದ ಸೋಪಾನ ವನ್ನು ಹತ್ತಬೇಕು. ಒಂದು ಸೋಪಾನವನ್ನು ಬಿಟ್ಟು ಇನ್ನೊಂದು ಸೋಪಾನ

ವನ್ನು ಅಡರುವಷ್ಟು ಅಂತರದಲ್ಲಿ ಈ ಷಟ್‌ಸ್ಥಲ ಸೋಪಾನಗಳು ನಿರ್ಮಾಣ ವಾಗಿಲ್ಲ. ಭಕ್ತಸ್ಥಲ ಷಟ್‌ಸ್ಥಲಕಲ್ಪವೃಕ್ಷದ ತಾಯಿಬೇರಿದ್ದಂತೆ ! ಶಿವದೀಕ್ಷೆ ಯನ್ನು ಹೊಂದಿದ ಭಕ್ತ ಶಿವಾಚಾರ ಸಂಪನ್ನನಾಗಿರಬೇಕು.

೩೦. "ಭಕ್ತ ಶಾಂತನಾಗಿರಬೇಕು; ತನ್ನ ಕುರಿತು ಬಂದ ತಾಪಿನಲ್ಲಿ ಸತ್ಯನಾಗಿರ ಬೇಕು; ಗುರು ಲಿಂಗ ಜಂಗಮದೆಡೆಯಲ್ಲಿ ನಿಂದೆಯಿಲ್ಲದಿರಬೇಕು. ಭೂತ ಹಿತವಹ ವಚನವನು ನುಡಿಯಬೇಕು. ಸಕಲ ಪ್ರಾಣಿಗಳ ತನ್ನಂತೆ ಕಾಣಬೇಕು. ತನು ಮನ ಧನವ ಗುರುಲಿಂಗ ಜಂಗಮಕ್ಕೆ ಸವೆಸಬೇಕು. ಅಪಾತ್ರ ದಾನವ ಮಾಡಲಾಗದು. ಸಕಲೇಂದ್ರಿಯಂಗಳ ತನ್ನ ವಶ ಮಾಡಬೇಕು. ಇದೇ ಮೊದಲಲ್ಲಿ ಬೇಹ ಶೌಚ ನೋಡಾ ! ಲಿಂಗವ ಪೂಜಿಸಿ ಪ್ರಸಾದವ ಪಡೆವಡೆ ಎನಗಿದೇ ಸಾಧನ ಕೂಡಲ ಚನ್ನಸಂಗಮ ದೇವಾ"

ಎಂದು ಚನ್ನಬಸವಣ್ಣನವರು ಭಕ್ತಸ್ಥಲದ ಲಕ್ಷಣವನ್ನು ವಿವರಿಸಿರುತ್ತಾರೆ. ಭಕ್ತ ಪರಿಶುದ್ಧಾತ್ಮನಾಗಬೇಕು. ಆಮೇಲೆ ಅವನು ಮಹೇಶಸ್ಥಲದಲ್ಲಿ ಸಾಧಕ ನಾಗುತ್ತಾನೆ.

೩೧. ಆಸೆ ರೋಷ ಹರುಷಾದಿಗಳೆಂಬ ಕರಣೇಂದ್ರಿಯಂಗಳ ಮುಟ್ಟಲೀಯದೆ ಆಚಾರವ ಶಿವಾಚಾರವ ಮಾಡುವೆ; ಭಯ ಭಕ್ತಿಯಿಂದ ತೋರುವೆ ಮನದಲ್ಲಿ ವಂಚನೆಯಿಲ್ಲದೆ; ಭಾವಶುದ್ಧ ಪೂಜೆಯ ಮಾಡುವೆ, ಎನ್ನ ಪ್ರಾಣಶಕ್ತಿಯಿಂದ ಕೂಡುವೆ ಕೂಡಲಸಂಗಮದೇವರ"–ಎಂದು ಬಸವಣ್ಣ ನವರು ಮಹೇಶ್ವರ ಸ್ಥಲವನ್ನು ಪರಿಷ್ಕಾರವಾಗಿ ತಿಳಿಸಿದ್ದಾರೆ. ಭಕ್ತ ಈ ಮಹೇಶ ಸ್ಥಲದಲ್ಲಿ ಮತ್ತಷ್ಟು ನಿಷ್ಠೆಯಿಂದ, ದೃಢಭಕ್ತಿಯಿಂದ ಶೂನ್ಯದತ್ತ ನಡೆಯುತ್ತಾನೆ. ಮಹೇಶ್ವರ ಸ್ಥಲದಲ್ಲಿ ಭಕ್ತ ಸಮಚಿತ್ತಭಾವದಿಂದ ಶಿವಪೂಜೆಯಲ್ಲಿ ನಲಿಯು ತ್ತಾನೆ. ಅವನಲ್ಲಿ ಆಸೆಯಿಲ್ಲ; ರೋಷವಿಲ್ಲ; ಹರ್ಷವೂ ಇಲ್ಲ. ಭಕ್ತಸ್ಥಲದಲ್ಲಿ ಸಾಧಿಸಿದ ಆತ್ಮಗುಣಗಳನ್ನು ಬೆಳಸಿಕೊಂಡು, ಮಾಹೇಶ್ವರ ಸ್ಥಲದಲ್ಲಿ ಇನ್ನೂ ಉನ್ನತ ಆತ್ಮಭಾವ ಸಂಪನ್ನನಾಗುತ್ತಾನೆ.

ಮೂರನೆಯದು ಪ್ರಸಾದಿಸ್ಥಲ. ಈ ಸ್ಥಲದಲ್ಲಿ ಶಿವಯೋಗ ಪ್ರಖರವಾಗುತ್ತದೆ. ಇಲ್ಲಿ ಭಕ್ತ ತನ್ನನ್ನು ತಾನು ಶಿವನಿಗೆ ಒಪ್ಪಿಸಿಕೊಳ್ಳುತ್ತಾನೆ. ಆತ್ಮಾರ್ಪಣೆಯಿಂದ ಮಾತ್ರವೇ ಲಿಂಗಯ್ಯನೊಲುಮೆ !

೨೨. "ಪಂಡಿತನಾಗಲಿ, ಮೂರ್ಖನಾಗಲಿ, ಸಂಚಿತ ಕರ್ಮ ಉಂಡಲ್ಲದೆ ಬಿಡದು. ಪ್ರಾರಬ್ಧ ಕರ್ಮ ಭೋಗಿಸಿದಲ್ಲದೆ ಹೋಗದೆಂದು, ಶ್ರುತಿ ಸಾರುತ್ತೈದಾವೆ! ನೋಡಾ, ತಾನಾವಾವಲೋಕದೊಳಗಿದ್ದರೆಯೂ ಬಿಡದು. ಕರ್ಮ ಫಲಗೂಡಿ ಕೂಡಲ ಸಂಗಮದೇವಂಗೆ ಆತ್ಮನೈವೇದ್ಯವ ಮಾಡಿದವನೆ ಧನ್ಯ !"

ಎಂದು ಬಸವಣ್ಣನವರು ಪ್ರಸಾದಿಸ್ಥಲದ ಸಿದ್ಧಿಯನ್ನು ಮನಂಬುಗುವಂತೆ ತಿಳಿಸಿದ್ದಾರೆ. ಪ್ರಸಾದಿ ಸ್ಥಲದಲ್ಲಿ ಸಾಧಕ ವೈರಾಗ್ಯ ಮನೋಭಾವವನ್ನು ಪಡೆಯುತ್ತಾನೆ. ಎಲ್ಲವೂ ಈಶ್ವರಾಧೀನವೆಂಬ ಪಾರಮಾರ್ಥಿಕ ದೃಷ್ಟಿ ಮೂಡುತ್ತದೆ. ಪ್ರಾರಬ್ಧ ಕರ್ಮವನ್ನು ಅನುಭವಿಸಲೇಬೇಕು. ತಾನು ಸಂಪೂರ್ಣವಾಗಿ ಶಿವನನ್ನು ಶರಣುಹೋಗುತ್ತಾನೆ. ತಪಸ್ಸಂಸ್ಕಾರದಿಂದ ಭಕ್ತ ಈ ಪ್ರಸಾದಿ ಸ್ಥಲದಲ್ಲಿ ಶುದ್ಧ ಚೇತನನಾಗುತ್ತಾನೆ. ಇಲ್ಲಿಯವರೆಗೂ ಲಿಂಗ-ಅಂಗ ಎಂಬ ದ್ವೈತ ಭಾವವೇ ತುಂಬಿರುತ್ತದೆ. ಮುಂದೆ, ಶಿವಜ್ಞಾನಪ್ರಧಾನವಾದ ಪ್ರಾಣಲಿಂಗಿ ಸ್ಥಲದಲ್ಲಿ ಪರಿಪೂರ್ಣ ಲಿಂಗಸ್ವರೂಪಿಯೇ ಆಗುತ್ತಾನೆ.

೨೩. ನೆನೆನೆನೆಯೆಂದೊಡೆ ಏನ ನೆನೆವೆನಯ್ಯಾ ? ಎನ್ನ ಕಾಯವೇ ಕೈಲಾಸವಾಯಿತ್ತು ! ಮನಲಿಂಗವಾಯಿತ್ತು ! ತನುಸೆಜ್ಜೆಯಾಯಿತ್ತು ! ನೆನೆವರೆ ದೇವರುಂಟೆ ? ನೋಡುವರೆ ಭಕ್ತರುಂಟೆ ? ಗುಹೇಶ್ವರ ಲಿಂಗ ಲೀಯವಾಗಿತ್ತು."

ಎಂದು ಅಲ್ಲಮರು ಪ್ರಾಣಲಿಂಗಿಯ ಸ್ವರೂಪವನ್ನು ನಿರೂಪಿಸಿರುತ್ತಾರೆ. ಇದು ನಾಲ್ಕನೆಯ ಸ್ಥಲ. ಇಲ್ಲಿ ಅದ್ವೈತ ಮನೋಭಾವ ಬೆಳೆಯುತ್ತದೆ. ದಾಸೋಹಂ ಭಾವ ಅಳಿದು ಶಿವೋಹಂಭಾವ ಮೂಡುತ್ತದೆ. ಪ್ರಾಣಲಿಂಗಾನುಸಂಧಾನದಿಂದ ಸಾಧಕ ಊರ್ಧ್ವಮುಖಿಯಾಗಿ ದಿವ್ಯಾನಂದ ಪ್ರಭೆಯನ್ನು ಕಾಣುತ್ತಾನೆ.

ಅವನ ದೇಹವೇ ಕೈಲಾಸ; ಮನಸ್ಸು ಲಿಂಗರೂಪ ! ಅಷ್ಟೇ ಅಲ್ಲ, ಸರ್ವಾಂಗ ದೊಳಗೆಲ್ಲಾ ಲಿಂಗಕಾಂತಿಯೇ ತುಂಬಿ ಬರುತ್ತದೆ ! ಲಿಂಗಾಂಗ ಸಮರಸಜ್ಞಾನ ವಿಕಾಸವಾಗುತ್ತದೆ.

ಐದನೆಯ ಶರಣಸ್ಥಲದಲ್ಲಿ, ಸಾಧಕ ಸಿದ್ಧಸ್ವರೂಪನಾಗುತ್ತಾನೆ. ಲಿಂಗ ಅಭಿನ್ನ ಚಿಚ್ಛಕ್ತಿ ಸ್ವರೂಪವೇ ಶರಣ. ಇಲ್ಲಿ ಅದ್ವಯಜ್ಞಾನಾನಂದ ಲಭಿಸುತ್ತದೆ ಶರಣಸತಿ ಲಿಂಗಪತಿ ಭಾವ ತುಂಬಿರುತ್ತದೆ.

೨೪. "ಲಿಂಗಮುಂತಾಗಿಯೇ ನಡೆವನಾಶರಣ. ಲಿಂಗ ಮುಂತಾಗಿಯೇ ನುಡಿ ವನಾ ಶರಣ. ಲಿಂಗಮುಂತಾಗಿಯೇ ತೃಪ್ತನಾಶರಣ. ಲಿಂಗಕಾಯ ಶರಣ; ಶರಣಕಾಯ ಲಿಂಗ. ಇದು ಕಾರಣ ಕೂಡಲ ಚನ್ನಸಂಗಯ್ಯಾ, ನಿಮ್ಮ ಶರಣ ಸರ್ವಾಂಗಲಿಂಗಿ"

ಎಂದು ಚನ್ನಬಸವಣ್ಣನವರು ಪ್ರಾಣಲಿಂಗಿಸ್ಥಲದಲ್ಲಿ ಸಾಧಕನ ಆತ್ಮ ಪರಿಸ್ಥಿತಿ ಯನ್ನು ಅಭಿವ್ಯಕ್ತಗೊಳಿಸಿರುತ್ತಾರೆ. ಇದೇ ಆತ್ಮಭಾವವನ್ನು ಅಲ್ಲಮರು

೨೫. "ಹರಿವ ನದಿಗೆ ಮೈಯೆಲ್ಲಾ ಕಾಲು; ಉರಿವ ಕಿಚ್ಚಿಗೆ ಮೈಯೆಲ್ಲಾ ಬಾಯಿ; ಬೀಸುವ ಗಾಳಿಗೆ ಮೈಯೆಲ್ಲಾ ಕೈ; ಇದು ಕಾರಣ ಗುಹೇಶ್ವರಾ ನಿಮ್ಮ ಶರಣಂಗೆ ಸರ್ವಾಂಗವೆಲ್ಲಾ ಲಿಂಗಮಯುವಯ್ಯಾ"

ಎಂದು ಕಾವ್ಯವಾಣಿಯಲ್ಲಿ ನುಡಿದಿರುತ್ತಾರೆ. ಶರಣಸ್ಥಲದಲ್ಲಿ ಸಾಧಕ ಸಿದ್ಧನಾಗು ತ್ತಾನೆ. ಅವನ ಬಾಹ್ಯಕ್ರಿಯಾಚರಣೆಗಳು ಕಳಚಿಬೀಳುತ್ತವೆ. ಅವನ ದೃಷ್ಟಿ ದಿವ್ಯದೃಷ್ಟಿ; ಅವನ ವಾಣಿ ಶಿವವಾಣಿ; ಅವನ ರೂಪ ಪರಮಾನಂದ ರೂಪ! ಅವನು ಲೋಕವ್ಯಾಪಾರದಿಂದ ಅತೀತನಾಗಿರುತ್ತಾನೆ. ಶಿವಜ್ಞಾನತೇಜಸ್ಸು ಅವನ ಭಾವಲಿಂಗದ ಪ್ರಭಾವಳಿಯಾಗಿ ಜ್ಞಾನ ತೇಜಸ್ಸು ಅವನ ಭಾವ ಲಿಂಗದ ಪ್ರಭಾವಳಿಯಾಗಿ ಪ್ರಕಾಶಿಸುತ್ತದೆ! ಇದನ್ನು ಆರೂಢಸ್ಥಿತಿಯೆಂದು ಕರೆಯು ತ್ತಾರೆ. ಜೈನರು ಇದನ್ನು ಸಿದ್ಧಸ್ಥಿತಿ ಎಂದು ಹೇಳುತ್ತಾರೆ. ಸಾಧಕ ಲಿಂಗಾಂಗ ಸಾಮರಸ್ಯ ಭಾವದಿಂದ ಮಹಾ ಘನ ಲಿಂಗವೇ ಆಗಿರುತ್ತಾನೆ. ಅನಂತರ ಅವನು ಆರನೆಯ ಐಕ್ಯಸ್ಥಲದಲ್ಲಿ ವಿಹರಿಸುತ್ತಾನೆ.

೨೬. "ಎಮ್ಮವರಿಗೆ ಸಾವಿಲ್ಲ. ಎಮ್ಮವರು ಸಾವನರಿಯರು. ಸಾವೆಂಬುದು ಸ್ವಯವಲ್ಲ. ಲಿಂಗದಲ್ಲಿ ಉದಯವಾದ ಲಿಂಗೈಕ್ಯಂಗೆ ಆ ಲಿಂಗದಲ್ಲಿಯಲ್ಲದೆ ಬೇರೆ ಮತ್ತೊಂದೆಡೆಯುಂಟೆ ಕೂಡಲ ಸಂಗಮದೇವಾ?" — ಎಂದು ಬಸವಣ್ಣನವರೂ;

೨೭. ಬೆಳಗು ಕತ್ತಲೆಯ ನುಂಗಿ, ಒಳಗೆ ನಾನೊಬ್ಬನೆಯಾದೆ ! ಕಾಂಬ ಕತ್ತಲೆಯ ಕಳೆದುಳಿದು ನಿಮಗಾನುಗುರಿಯಾದೆ ಗುಹೇಶ್ವರಾ" — ಎಂದು ಅಲ್ಲಮರೂ;

೨೮. "ನೋಡಿಹೆನೆಂದರೆ ದೃಷ್ಟಿಕೊಳ್ಳದು. ಪೂಜಿಸಿಹೆನೆಂದರೆ ಪೂಜೆಗೊಳ್ಳದಿನ್ನೆಂತೋ ? ಅರಿದೆನೆಂದರೆ ಏನೂ ಇಲ್ಲ. ಘನದೃಷ್ಟಿ ಕೂಡಲ ಚನ್ನಸಂಗಯ್ಯ ಉಭಯಗೆಟ್ಟ ಲಿಂಗೈಕ್ಯನು"—ಎಂದು ಚನ್ನಬಸವಣ್ಣನವರೂ ಐಕ್ಯಸ್ಥಲದಲ್ಲಿ ಸಂಪೂರ್ಣ ಶೂನ್ಯಸ್ಥಿತಿಯನ್ನು ಕಂಡರಿದು ತಿಳಿಸಿರುತ್ತಾರೆ.

ಇದೇ ಜೀವನ್ಮುಕ್ತ ಸ್ಥಿತಿ. ಇಲ್ಲಿ ಸಾಮರಸ್ಯಜ್ಞಾನಜಲದಿಂದ ಭಾವಲಿಂಗಾಭಿಷೇಕ! ಓಂಕಾರ ಪ್ರಣವನಿನಾದ ! ಚಿತ್ಪ್ರಕಾಶ ನಂದಾದೀಪ ! 'ಸರ್ವಂ ಲಿಂಗಮಯಂ' ಭಾವ ಪೂಜೆ ! ಮುಕ್ತಿ ಪುಷ್ಪಾಂಜಲಿ ! ಪರಮ ನಿರಂಜನ ದರ್ಶನ ! ಇದೇ ಶೂನ್ಯ ಸಿಂಹಾಸನಾರೋಹಣ ! ಅಲ್ಲಮರು ಶರಣಗಣದಲ್ಲಿ ಈ ಪರಮಾನಂದ ಸ್ಥಿತಿಯಲ್ಲಿದ್ದರೆಂಬುದನ್ನು ಸೂಚಿಸುವುದೇ ಬಸವಣ್ಣನವರ ಶೂನ್ಯ ಸಿಂಹಾಸನ ಕಲ್ಪನಾ ವೈಭವದ ಸಂಕೇತ! ಆ ಶೂನ್ಯ ಸಿಂಹಾಸನ ಸುವರ್ಣ ಸಿಂಹಾಸನವಲ್ಲ! ಮಹೋನ್ನತ ಭಾವನಾ ಸಿಂಹಾಸನ ! ಅದು ಮಹಾನುಭಾವ ಬಸವಣ್ಣನವರ ದಿವ್ಯಾತ್ಮ ಶಿವಾನುಭವ ಸಿಂಹಾಸನ ! ಅಲ್ಲಮರೊಬ್ಬರೇ ನಿರಂಜನ ಮೂರ್ತಿ ! ಬಸವಣ್ಣನವರೊಬ್ಬರೇ ಮಹಾ ಭಕ್ತ! ಎಂದಮೇಲೆ. ಉಳಿದ ಶರಣರ ಮಾತೇಕೆ! ಈ ಸ್ಥಿತಿಯಲ್ಲಿ ಮಾನವ ದೇವನಾಗುತ್ತಾನೆ; ದೇವ ದೇವೋತ್ತಮನಾಗುತ್ತಾನೆ! ನರ ಹರನಾಗುತ್ತಾನೆ; ಉತ್ತುಂಗ ನಿರಂಜನ ಜಂಗಮನಾಗುತ್ತಾನೆ ! ಪಾರ್ವತೀ ವಲ್ಲಭತ್ವ ಮತ್ತು ಸೃಷ್ಟಿ ಸಾಮರ್ಥ್ಯ ಮಾತ್ರ ಶಿವನಿಗೆ ಮೀಸಲು !

೨೯. ಅಂಗಲಿಂಗಕ್ಕೆ ಗೂಡಾಯಿತ್ತು. ಲಿಂಗ ಅಂಗಕ್ಕೆ ಗೂಡಾಯಿತ್ತು. ಅಂಗಲಿಂಗ ಸಂಗವೆಂಬ ಸಂಪಳಿದು ನಿಜಲಿಂಗೈಕ್ಯವಾಯಿತ್ತು. ಭಾವನಿರ್ಭಾವ ನಿಷ್ಪತ್ತಿಯಾದಲ್ಲಿ ಮಹಾದಾನಿ•ಸೊಡ್ಡಳಂಗೆ ಸರ್ವನಿರ್ವಾಣವಾಯಿತ್ತು"

ಎಂದು ವೀರಶೈವರು ಜೀವನ್ಮುಕ್ತಿ ಸ್ಥಿತಿಯನ್ನು ನಿರ್ವಾಣವೆಂದು ಕರೆಯುತ್ತಾರೆ. ಜೈನರೂ ಈ ಸ್ಥಿತಿಯನ್ನು ನಿರ್ವಾಣವೆನ್ನುತ್ತಾರೆ. ಬೌದ್ಧರ ನಿರ್ವಾಣ ಈ ಸ್ಥಿತಿಯನ್ನು ಸೂಚಿಸುವುದಿಲ್ಲ.

೩೦. "ಹೊಸ ಮುತ್ತಿನ ಸುಪ್ಪಾಣಿಯಂತೆ ಲಿಂಗೈಕ್ಯವು ! ಸ್ಫಟಿಕದ ಘಟದೊಳಗಣ ಪ್ರಭೆಯಂತೆ ಲಿಂಗೈಕ್ಯವು. ವಾಯುವಿನ ಸಂಚದ ನಿಲವಿನಂತೆ ಲಿಂಗೈಕ್ಯನ ಸಂಬಂಧವದು ಗುಹೇಶ್ವರಾ"

೩೧. ತುಂಬಿ ಪರಿಮಳವನುಂಡುದೋ ? ಪರಿಮಳ ತುಂಬಿಯನುಂಡುದೋ ? ಲಿಂಗಪ್ರಾಣವಾಯಿತೋ ? ಪ್ರಾಣಲಿಂಗವಾಯಿತೋ ? ಗುಹೇಶ್ವರಾ, ಈ ಉಭಯದ ಭೇದವ ನೀನೇ ಬಲ್ಲೆ !"

ಎಂದು ಅಲ್ಲಮರು ಜೀವನ್ಮುಕ್ತಿ ಸ್ಥಿತಿಯನ್ನು ಸುಂದರ ಉಪಮಾನಗಳಲ್ಲಿ ತಿಳಿಸಿದ್ದಾರೆ; ಕಾವ್ಯಲಹರಿಯಲ್ಲಿ ಮಜ್ಜನ ಮಾಡಿಸಿರುತ್ತಾರೆ. ಇದೇ ಶಿವಾನುಭವವನ್ನು ಶರಣೆ ಸತ್ಯಕ್ಕನವರು—

೩೨. ಉದಕದೊಳಗಣ ಕಿಚ್ಚಿನಂತೆ ಲಿಂಗೈಕ್ಯವು ! ವಾಯು ನುಂಗಿದ ಪರಿಮಳದಂತೆ ಲಿಂಗೈಕ್ಯವು ! ಉರಿಯೊಳಡಗಿದ ಕರ್ಪೂರದಂತೆ ಲಿಂಗೈಕ್ಯವು ! ಭಾವ ನಟಿಸಿದ ಬಯಲಿನಂತೆ ಲಿಂಗೈಕ್ಯವು ! ಅರಿವು ನುಂಗಿದ ಮರಹಿನಂತೆ ಲಿಂಗೈಕ್ಯವು ! 'ಯತೋವಾಚೋನಿವರ್ತಂತೇ ಅಪ್ರಾಪ್ಯ ಮನಸಾ ಸಹ" ಎಂದುದಾಗಿ ವಾಙ್ಮನಕ್ಕಗೋಚರವಾದ ಮಹಾ ಘನ ಶರಣನೊಳಕೊಂಡು, ಥಳಥಳಿಸಿ ಬೆಳಬೆಳಗಿ ಹೊಳೆವುತ್ತ ನಿಶ್ಶಬ್ದ ಬ್ರಹ್ಮಾನಂದರ್ಶನಯ್ಯಾ ನಮ್ಮ ಶಂಭುಜಕ್ಕೇಶ್ವರನು"

ಎಂದು ತುಂಬ ಮನೋಜ್ಞವಾಗಿ ಹೇಳಿರುತ್ತಾರೆ. ಇದು ಷಟ್‌ಸ್ಥಲದ ಸರ್ವೋಚ್ಚ ಸೋಪಾನ! ಇಲ್ಲಿ ಶರಣ ಸ್ವತಂತ್ರ ಲಿಂಗವಾಗಿರುತ್ತಾನೆ. ಅವನ ಪ್ರವೃತ್ತಿ ಅವನಿಂದಲೇ ನಡೆಯುತ್ತದೆ. ಇದು ಸ್ವಲೀಲಾನಂದ ಭಕ್ತಿ ! ಈ ಜಗತ್ತು ಜೀವರೂ ಶೂನ್ಯದಿಂದ ಉದಯವಾಗಿ ಶೂನ್ಯದಲ್ಲಿಯೇ ಅಡಗಿಹೋಗುತ್ತಾರೆ ಬುದು ಷಟ್‌ಸ್ಥಲ ವೇದಾಂತ ! ವೀರಶೈವ ಸಿದ್ಧಾಂತ ! ಈ ಷಟ್‌ಸ್ಥಲದ ಶರಣರ ಅನುಸಂಧಾನ ರೀತಿ ಮತ್ತು ಅನುಷ್ಠಾನ ಮಾರ್ಗ ವಿವಿಧ ರೀತಿಯಲ್ಲಿ ವ್ಯಂತೆ ವ್ಯಕ್ತವಾಗುತ್ತದೆ. ಕೆಲವರಿಗೆ ಕೆಲವು ಸ್ಥಲಗಳಲ್ಲಿ ಹೆಚ್ಚು ಪ್ರವೃತ್ತಿಯಿತ್ತು

ಆದರೆ, ಅವರಲ್ಲಿ ಕೆಲವರಾದರೂ ಐಕ್ಯಸ್ಥಲವನ್ನು ಸಾಧಿಸಿದ್ದರೆಂಬುವುದರಲ್ಲಿ ಸಂಶಯವಿಲ್ಲ.

೩೩. ಭಕ್ತಸ್ಥಲ ಬಸವಣ್ಣಂಗಾಯಿತ್ತು, ಮಾಹೇಶ್ವರ ಸ್ಥಲ ಮಡಿವಾಳಯ್ಯಂಗಾಯಿತ್ತು, ಪ್ರಸಾದಿಸ್ಥಲ ಚನ್ನಬಸವಣ್ಣಂಗಾಯಿತ್ತು, ಪ್ರಾಣಲಿಂಗಿಸ್ಥಲ ಚಂದಯ್ಯಂಗಾಯಿತ್ತು. ಶರಣಸ್ಥಲ ಘಟ್ಟಿವಾಳಯ್ಯಂಗಾಯಿತ್ತು, ಐಕ್ಯಸ್ಥಲ ಅಜಗಣ್ಣಂಗಾಯಿತ್ತು ಇಂತೀ ಷಟ್‌ಸ್ಥಲ ಬ್ರಹ್ಮಿಗಳೆಲ್ಲರು ಎನ್ನಂಗದ ಮರದ ಮರೆಯಲ್ಲಿ ಸಂಗಾತಲೈದಾರೆ, ಆರಂಗದ, ಮೂರು ಸಂಗದ ತೋರಿಕೆಯ ತೋರಾ ಕಾಲಾಂತಕ ಭೀಮೇಶ್ವರ ಲಿಂಗವೇ"

ಎಂಬ ವಚನದಿಂದ ಕೆಲವರು ಶರಣರು ಕೆಲವು ಸ್ಥಲಗಳಲ್ಲಿಯೇ ನಿಂದು ಐಕ್ಯವನ್ನು ಅರ್ಥಾತ್ ಶೂನ್ಯವನ್ನು ಕಂಡರೆಂಬುದನ್ನು ಅರಿಯಬಹುದು. 'ಭಕ್ತಸ್ಥಲ ಬಸವಣ್ಣಂಗಾಯಿತ್ತು' ಎಂಬುದರಲ್ಲಿ ವೀರಶೈವ ತತ್ತ್ವವೇ ತುಂಬಿದೆ. ಷಟ್‌ಸ್ಥಲ ದಲ್ಲಿ ಮೊದಲು ನಿವೃತ್ತಿ ಮಾರ್ಗವನ್ನು ಅನುಸರಿಸಿ ಸಾಧಕ ಅನುಷ್ಠಾನದಿಂದ ಭಕ್ತಸ್ಥಲ ಮೊದಲುಗೊಂಡು ಐಕ್ಯಸ್ಥಲವನ್ನು ಹೊಂದಿ ಲಿಂಗಾಂಗ ಸಾಮರಸ್ಯ ವನ್ನು ಪಡೆಯಬೇಕು. ಅನಂತರ ಆ ಐಕ್ಯಸ್ಥಲದಲ್ಲಿಯೇ ನಿಲ್ಲಬಾರದು. ಅಲ್ಲಿಂದ ಪುನಃ ಪ್ರವೃತ್ತಿಮಾರ್ಗದಿಂದ ಅವರೋಹಣ ಕ್ರಮದಿಂದ ಭಕ್ತಸ್ಥಲದಲ್ಲಿ ನಿಲ್ಲ ಬೇಕು. ಆ ಭಕ್ತಸ್ಥಲದಲ್ಲಿಯೇ ಉಳಿದ ಎಲ್ಲ ಸ್ಥಲಗಳನ್ನೂ ಪಡೆದಿರಬೇಕು. ಬಸವಣ್ಣನವರೊಬ್ಬರೇ ಈ ಅನುಸಂಧಾನದಲ್ಲಿ ಕೃತಕೃತ್ಯರಾಗಿದ್ದ ಮಹಾ ಪುರುಷರು !

೩೪. "ಭಕ್ತನ ಮುಖದರ್ಪಣದಲ್ಲಿ ಲಿಂಗವ ಕಾಣಬಹುದು, ಭಕ್ತ ದೇಹಿಕ ದೇವ ಅನಿಮಿಷನಾಗಿ. ಕೂಡಲಸಂಗಮದೇವ ಭಕ್ತನ ನುಡಿಯು ನಡುವೆ ರಾಶಿಯಾಗಿರ್ಪನು"

ಎಂದು ಬಸವಣ್ಣನವರು ಭಕ್ತನ ದಿವ್ಯ ಶಕ್ತಿಯನ್ನು ಎಷ್ಟೊಂದು ಹೃದಯಸ್ಪರ್ಶಿಯಾಗಿ ಸೂಚಿಸಿರುತ್ತಾರೆಂಬುದನ್ನು ವಿರಕ್ತ ಜಂಗಮ ಕರಮಲ ಸಂಜಾತರು ಅರಿಯಬೇಕು ! ವಿರಕ್ತಗುರು ಸಾರ್ವಭೌಮರಿಗಿಂತಲೂ ಪರಮ ಭಕ್ತನೇ ಶ್ರೇಷ್ಠ ! ಪರಮ ವಿರಕ್ತ ಮೂರ್ತಿಗಿಂತಲೂ ನಿಜಭಕ್ತನೇ ಮಿಗಿಲು ! ಆದರೆ ಬಸವಣ್ಣನವರಂಥ ನಿತ್ಯಮುಕ್ತ ಭಕ್ತನಾಗಬೇಕು ! ಪವಿತ್ರ ಗೃಹಯೋಗಿಯಾಗ ಬೇಕು ! ಗುರುವಾದೆನೆಂದು ಬೀಗಬಹುದು ! ಶಿವಯೋಗಿಯಾದನೆಂದು ಆತ ವಂಚನೆ ಮಾಡಿಕೊಳ್ಳಬಹುದು ! ನಿಜಭಕ್ತನಾಗಿದ್ದೇನೆಂದು ಹೇಳಲು ಶಿವನೇ

ಆಗಿರಬೇಕೆಂಬ ಕಠೋರ ಸತ್ಯವನ್ನು ಗುರು ವಿರಕ್ತರು ಅರಿಯಲು ಅಸಮರ್ಥ... ನಿಜಭಕ್ತನಿರುವ ಸ್ಥಳವೇ ದೇವಲೋಕ! ಅವನ ಮನೆಯ ಅಂಗಳವೇ ವಾರಣಾ... ಅವನ ಕಾಯಕವೇ ಕೈಲಾಸ ! ಅವನ ಸಹಧರ್ಮಿಣಿಯೇ ಶ್ರೀಗೌರಿ ! ... ಸುತರೇ ವೀರಗುಹಗಣೇಶರು ! ಅವನ ಸುತೆಯರೇ ರುದ್ರಕನ್ಯೆಯರು ! ಈ ಭಾ... ಯಾವ ಗುರುದೇವನಿಗೆ ಲಭಿಸೀತು ! ಯಾವ ವಿರಕ್ತನಿಗೆ ದೊರೆತೀತು ! ... ವಣ್ಣನವರು ಭಕ್ತಸ್ಥಲದ ಔನ್ನತ್ಯವನ್ನು ಎತ್ತಿಹಿಡಿದಿರುತ್ತಾರೆ. ಬಸವಣ್ಣ... ಇಂಥ ಭಕ್ತೈಕ್ಯ ಸ್ಥಿತಿಯಲ್ಲಿ ಶೂನ್ಯಲಿಂಗರೂಪಿಯಾಗಿದ್ದರೆಂಬುವನ್ನು ಶ... ಬಲ್ಲರು. "ಏನಾದರೂ ಆಗಬಹುದು ಬಸವಣ್ಣನಾಗಲೂಬಾರದು" ಎ... ಶಿವಕವಿ ಪಾಲ್ಕುರಿಕೆಯ ಸೋಮನಾರಾಧ್ಯ ಹೇಳಿರುವ ಮಾತು ನಿಜ; ಸ... ಚಿತ !

ಷಟ್‌ಸ್ಥಲಗಳನ್ನು ಕ್ರಮವಾಗಿ ಸಾಧಿಸಿಯೇ ಪರಮ ಸಿದ್ಧಿಯ... ಪಡೆಯಬೇಕೆಂಬ ಕಟ್ಟಳೆಯೇನೂ ಇಲ್ಲ. ಪ್ರತಿಯೊಂದು ಸ್ಥಲದಲ್ಲಿಯ ... ಸ್ಥಲ ಅಂತರ್ಗತವಾಗಿರುತ್ತದೆ. ಯಾವ ಸ್ಥಲದಿಂದ ಆರಂಭಿಸಿದರೂ ಐಕ್ಯ... ಪಡೆಯಬಹುದು ಎಂಬ ಅಭಿಪ್ರಾಯವೂ ಇದೆ. ಶರಣಗಣದಲ್ಲಿ, ... ಹೃದಯದಲ್ಲಿ ಶೂನ್ಯತತ್ತ್ವ ವಿಕಾಸವಾಯಿತು; ಆ ಶೂನ್ಯತತ್ತ್ವಲತೆ ದಾಂ... ಯಿಟ್ಟಿತು; ಪಲ್ಲವಿಸಿ, ಹೂಬಿಟ್ಟು, ಫಲ ಕೊಟ್ಟಿತು ! ಪ್ರತಿಯೊಬ್ಬನ ಹೃದ... ದಲ್ಲಿಯೂ ಶೂನ್ಯ ಸಿಂಹಾಸನ ಮೆರೆಯಬೇಕು ! ಆತ್ಮಲಿಂಗದ ಪ್ರಭೆ ... ಬೇಕು ! ಇದು ಬಸವಣ್ಣನವರ ಮಂಗಳಾಕಾಂಕ್ಷೆ ! ನಿರಾಕಾರ ಶೂನ್ಯ ... ವನ್ನು ಸಾಕಾರ ಇಷ್ಟಲಿಂಗ ರೂಪದಲ್ಲಿ ಆರಾಧಿಸಿ ಲಿಂಗೈಕ್ಯತೆಯನ್ನು ಸಾಧಿ... ವಂತೆ, ನಿರಾಕಾರ ಶೂನ್ಯ ಸಿಂಹಾಸನ ಕಲ್ಪನೆಯನ್ನು ಸಾಕಾರ ಶೂನ್ಯ ಸಿಂಹಾ... ಸನ ರೂಪದಲ್ಲಿ ಬಸವಣ್ಣನವರು ಕಲ್ಯಾಣದಲ್ಲಿ ತಮ್ಮ ಮಹಮನೆಯ ಶಿವಾ... ಭವ ಮಂಟಪದಲ್ಲಿ ಪ್ರತಿಷ್ಠಾಪನೆ ಮಾಡಿದರು. ಆ ಸಿಂಹಾಸನವನ್ನು ಅಧಿ... ಹಣ ಮಾಡಲು ಅಲ್ಲಮರ ಆಗಮನವನ್ನು ಆನಂದಾತಿಶಯಭಕ್ತಿಯಿಂದ ನಿರೀ... ಸುತ್ತಿದ್ದರು. ಶೂನ್ಯಸಿಂಹಾಸನ ಯಾವೊಬ್ಬ ವಿರಕ್ತನ ಮಠದ ಸುಖಾಸನ... ಪ್ರತಿಯೊಬ್ಬ ಲಿಂಗಾಂಗಿಯ ಹೃದಯಮಂದಿರದ ಮಂಗಳಾಸನ ! ... ಬಸವಣ್ಣನವರು ಕಂಡ ಶೂನ್ಯ ಸಿಂಹಾಸನ ! ಭಾವಭದ್ರಾಸನ! ಎಂಥ ಉದಾ... ಕಲ್ಪನೆ ! ಎಂಥ ಮಹೋನ್ನತ ದೃಷ್ಟಿ !

# ತರಂಗ ೫

---

## ಕಲ್ಯಾಣ ಸಂದರ್ಶನ; ಅಲ್ಲಮರ ಆಗಮನ

"ಭೂಮಿಗೆ ಹುಟ್ಟಿದ ಕಲ್ಲು, ಕಲುಕುಟ್ಟಿಗರಕಯ್ಯ ಕಡಿಯಿಸಿಕೊಂಡ ಶಿಲೆಯನೆಂತು ಲಿಂಗವೆಂಬೆನಯ್ಯಾ? ಕೊಟ್ಟಾತ ಗುರುವೆ? ಕೊಂಡಾತ ಶಿಷ್ಯನೆ? ಅಲ್ಲಕಾಣಿರಯ್ಯಾ. ಶಿಲಾಲಿಖಿತವ ಕಳೆದು ಕಳಾಭೇದವನರಿದು ಕಳೆಯ ತುಂಬಿ ಕೊಡಬಲ್ಲರೆ ಗುರುವೆಂಬೆ. ಕೊಂಡಾತ ಶಿಷ್ಯನೆಂಬೆನಯ್ಯಾ.

ಯಥಾಕಲಾ ತಥಾಭಾವೋ ಯಥಾಭಾವಸ್ತಥಾಮನಃ ।
ಯಥಾಮನಸ್ತಥಾ ದೃಷ್ಟಿರ್ಯಥಾ ದೃಷ್ಟಿಸ್ತಥಾ ಸ್ಥಲಂ ॥

ಎಂದುದಾಗಿ ಈ ಭೇದವನರಿಯದೆ ಇಷ್ಟವ ಮಾರುವಾತಂಗೂ ಕೊಂಬಾತಂಗೂ ದುರ್ಗತಿ ತಪ್ಪದು ಕಾಣಾ ಮಹಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ."

—ತೋಂಟದ ಸಿದ್ಧಲಿಂಗೇಶ್ವರರು.

ಶೂನ್ಯ ಸಿಂಹಾಸನವಲ್ಲಿ ಮಂಡಿಸಿದ ಮೊದಲನೆಯ ಅಧ್ಯಕ್ಷ ನಿರಾಭಾರಿ ಅಲ್ಲಮಪ್ರಭು. ಅವರ ತರುವಾಯ ಶೂನ್ಯ ಸಿಂಹಾಸನದ ವಿರಕ್ತಪರಂಪರೆಯನ್ನು ಅರಿಯಲು ಆ ಶತಮಾನದ ಧಾರ್ಮಿಕ ಪರಿಸ್ಥಿತಿಯನ್ನು ತಿಳಿಯಬೇಕು. ಅಂದಿನ ಯುಗಪುರುಷ ಬಸವಣ್ಣನವರ ಜೀವನ ಪರಿಚಯವನ್ನು ಸ್ಥೂಲವಾಗಿಯಾದರೂ ಮಾಡಿಕೊಳ್ಳಬೇಕು. ಆಗ ನಡೆದ ಕಲ್ಯಾಣ ಕ್ರಾಂತಿಯೇ ಶೂನ್ಯ ಸಿಂಹಾಸನದ ಪ್ರಭಾವಳಿಯಾಯಿತೆಂಬುದನ್ನು ಮರೆಯುವಂತಿಲ್ಲ.

ಕರ್ಣಾಟಕದಲ್ಲಿ ಕಲ್ಯಾಣ ಚಾಲುಕ್ಯರಾಜ್ಯ ಕ್ರಿ. ಶ. 973ರಿಂದ 1160ರ ವರೆಗೆ ವೈಭವದಿಂದ ಬಾಳಿತು. ಈ ರಾಜಮನೆತನದಲ್ಲಿ ಮೂರನೆಯ ತೈಲಪ ಸಮರ್ಥನಾಗಿರಲಿಲ್ಲ. ಆಗ ಅವನ ಸಾಮಂತನಾಗಿದ್ದ ಬಿಜ್ಜಳ ತನ್ನ ಪ್ರಭು ತೈಲಪನನ್ನು ಕೊಂದು ತಾನೇ ಕಲ್ಯಾಣದ ರಾಜನೆನಿಸಿಕೊಂಡನು. ಬಿಜ್ಜಳನ ತಂದೆ ಪೆರ್ಮಾಡಿ ತರ್ದವಾಡಿಯಲ್ಲಿ ಸಾಮಂತ ರಾಜನಾಗಿದ್ದನು. ಇವನು ಕಲಚೂರ್ಯ ವಂಶದವನು. ಪೆರ್ಮಾಡಿಯ ಕಾಲದಲ್ಲಿ ಮೂರನೆಯ ಸೋಮೇ

ಶ್ವರ ಚಾಲುಕ್ಯ ಚಕ್ರವರ್ತಿಯಾಗಿದ್ದನು. ಅವನು ಇನ್ನೂ ತರುಣ; ಅಪ್ರಬುದ್ಧ. ಅದರಿಂದ ಪೆರ್ಮಾಡಿ ಆ ತರುಣ ಚಕ್ರವರ್ತಿಯನ್ನು ಲಕ್ಷಿಸುತ್ತಿರಲಿಲ್ಲ. ಅಷ್ಟೇ ಅಲ್ಲ, ತಾನು ಸ್ವತಂತ್ರನಾಗಲು ಅವನು ಹವಣಿಸುತ್ತಿದ್ದನು. ಅವನಿಗೆ ಅನುಕೂಲ ಸನ್ನಿವೇಶಗಳೂ ಒದಗಿಬಂದುವು. ಬಿಜ್ಜಳ ತನ್ನ ತಂದೆಯ ಮನೋಧರ್ಮವನ್ನೇ ಅನುಸರಿಸುತ್ತಿದ್ದನು. ಕಾಲ ಕಳೆಯಿತು. ಸೋಮೇಶ್ವರನ ತರುವಾಯ ತೈಲಪ ಚಾಲುಕ್ಯ ಚಕ್ರವರ್ತಿಯಾದನು. ಆಗ ಬಿಜ್ಜಳ ತರ್ದವಾಡಿಯ ಸಾಮಂತನಾಗಿದ್ದನು. ತೈಲಪನಿಗೆ ಲೋಕಾನುಭವವಿರಲಿಲ್ಲ. ಬಿಜ್ಜಳ ಸಮಯ ಸಂಧಾನ ಚಾತುರ್ಯದಿಂದ ತೈಲಪನನ್ನು ಕೊಂದು ತಾನೆ ಕಲ್ಯಾಣ ಚಾಲುಕ್ಯ ಸಾರ್ವಭೌಮನಾದನು ! ಅವನ ಪ್ರಧಾನ ಮಂತ್ರಿ ಬಲದೇವ; ದಂಡನಾಯಕ ಸಿದ್ಧ. ಇವರಿಬ್ಬರೂ ಬಿಜ್ಜಳನ ಪರಮಾಪ್ತರೂ ಆಗಿದ್ದರು. ಬಲದೇವನ ಕಾಲಾನಂತರ ಬಸವಣ್ಣನವರು ಬಿಜ್ಜಳನ ಪ್ರಧಾನಮಂತ್ರಿಯಾದರು ! ಅವರು ಕ್ರಿ. ಶ. 1105 ರಿಂದ 1168 ರ ವರೆಗೆ ಜೀವಿಸಿದ್ದರು. ಅವರು ಕೇವಲ 36 ವರ್ಷ ಕಾಲ ಬದುಕಿದ್ದರೆಂಬ ಅಭಿಪ್ರಾಯವೂ ಇದೆ. ಬಸವಣ್ಣನವರ ತಾಯಿತಂದೆ ಯಾರು? ಅವರ ಸ್ಥಳ ಯಾವುದು ? ಎಂಬ ವಿಚಾರಗಳು ಸ್ಪಷ್ಟವಾಗಿ ತಿಳಿದುಬಂದಿಲ್ಲ. ಇವರು ಬಿಜಾಪುರ ಜಿಲ್ಲೆಯ ಬಾಗೇವಾಡಿಯ ಸಮೀಪದ ಮಣಿಗವಳ್ಳಿ ಎಂಬ ಗ್ರಾಮದ ಚಂದಿರಾಜ-ಚಂದ್ರಾಂಬಿಕೆಯರ ಮಗನೆಂದೂ, ಅವರ ಬಾಲ್ಯದಲ್ಲಿಯೇ ತಾಯಿತಂದೆಗಳು ಕಾಲವಾದರೆಂದೂ, ಆಗ ಬಸವಣ್ಣನವರ ಮುತ್ತಜ್ಜಿಯೇ ಅವರನ್ನು ಕೆಲವು ಕಾಲ ಆರೈಕೆ ಮಾಡಿದರೆಂದೂ, ಅನಂತರ ಅವರನ್ನು ಬಾಗೇವಾಡಿಯ ಅಧಿಪತಿಯಾಗಿದ್ದ ಮಾದರಸ ಮತ್ತು ಅವನ ಹೆಂಡತಿ ಮಾದಲಾಂಬೆಯರು ಪೋಷಣೆ ಮಾಡಿದರೆಂದೂ ತಿಳಿದುಬರುತ್ತದೆ. ಮಣಿಗವಳ್ಳಿಯ ಚಂದಿರಾಜ ಬಾಗೆವಾಡಿಯ ಮಾದಿರಾಜನ ಸಂಬಂಧಿ. ಅವರು ಶೈವಬ್ರಾಹ್ಮಣರು ಎಂದರೆ, ಯಜ್ಞೋಪವೀತವನ್ನೂ ಇಷ್ಟಲಿಂಗವನ್ನೂ ಧರಿಸುತ್ತಿದ್ದ ಆರಾಧ್ಯ ಬ್ರಾಹ್ಮಣರು.ಬಸವಣ್ಣನವರು ಬಾಲ್ಯದಲ್ಲಿ ಕಪ್ಪಡಿ ಸಂಗಮಕ್ಷೇತ್ರದಲ್ಲಿ ಜಾತವೇದ ಮುನಿ ಎಂಬ ಗುರುವಿನ ಬಳಿಯಲ್ಲಿ ಶಾಸ್ತ್ರಾಭ್ಯಾಸ ಮಾಡಿ ನಿಷ್ಣಾತರಾದರು. ಕಪ್ಪಡಿಗ್ರಾಮ ಕೃಷ್ಣಾ-ಮಲಾಪ್ರಭಾ ನದಿಗಳ ಸಂಗಮಕ್ಷೇತ್ರದ ಸಮೀಪದಲ್ಲಿ ಮಲಪ್ರಭಾ ನದಿಯ ಎಡಗಡೆ ತೀರದಲ್ಲಿದೆ. ಆ ಕಾಲದಲ್ಲಿ ಅನೇಕ ವೀರಶೈವ ಪಂಡಿತಪ್ರಕಾಂಡರು ಆ ಕ್ಷೇತ್ರದಲ್ಲಿದ್ದ ಗುರುಕುಲಗಳಲ್ಲಿ ವೀರಶೈವವನ್ನು ಬೋಧಿ

ಸುತ್ತಿದ್ದವು. ಬಹಳ ಹಿಂದೆಯೇ ಆ ಪ್ರದೇಶದಲ್ಲಿ ಸಂಗಮನಾಥರೆಂಬ ಈಶಾನಶಿವ ಗುರು ವೀರಶೈವ ಆಚಾರ್ಯರಾಗಿ ಪ್ರಸಿದ್ಧವಾಗಿದ್ದರು. ಅವರ ಸಮಾಧಿ ಆ ಸಂಗಮಕ್ಷೇತ್ರದಲ್ಲಿದೆ. ಅನೇಕ ವೀರಶೈವ ಪಂಡಿತರೂ, ಜ್ಞಾನಿಗಳೂ ಆಗಾಗ ಆ ಕ್ಷೇತ್ರಕ್ಕೆ ಬಂದುಹೋಗುತ್ತಿದ್ದರು. ಅಲ್ಲಿ ಅನೇಕ ಶಾಸ್ತ್ರಾರ್ಥಗೋಷ್ಠಿಗಳೂ ನಡೆಯುತ್ತಿದ್ದುವು. ಬಸವಣ್ಣನವರು ಇಂಥಾ ವಾತಾವರಣದಲ್ಲಿ ಬೆಳೆದರು. ಅವರಿಗೆ ವೀರಶೈವದಲ್ಲಿ ಶ್ರದ್ಧೆ ಹೆಚ್ಚಿತು. ಆ ಧರ್ಮದ ಉದಾತ್ತ ತತ್ತ್ವಗಳನ್ನು ಅವರು ಮೆಚ್ಚಿದರು. ಅವರು ಪ್ರತಿದಿನವೂ ನಿಷ್ಠೆಯಿಂದ ಆ ಸಂಗಮೇಶ್ವರ ಲಿಂಗವನ್ನು ಆರಾಧಿಸುತ್ತಿದ್ದರು. ಮುಂದೆ ಅವರು ಕೂಡಲ ಸಂಗಮ ಎಂಬ ಅಂಕಿತದಿಂದಲೇ ತಾವು ಕಂಡ ವೀರಶೈವವನ್ನು ಹಬ್ಬಿಸಿದರು. ಕೂಡಲ ಸಂಗಮ ಲಿಂಗ ಸ್ಥಾವರಲಿಂಗವಲ್ಲ. ಅದು ಶಿವಯೋಗಿಯ ಸ್ಮಾರಕ ಲಿಂಗ! ಅದರಿಂದಲೇ ಆ ದೇವಾಲಯದಲ್ಲಿ ಪಾರ್ವತಿಯ ವಿಗ್ರಹವಿಲ್ಲ. ವೀರಶೈವ ಗದ್ದುಗೆಗಳಲ್ಲಿ ಸ್ತ್ರೀ ವಿಗ್ರಹಗಳಿರುವುದಿಲ್ಲ. ಈಶಾನಶಿವಗುರು ಶಿವನ ಈಶಾನ ಮುಖದಿಂದ ಆವಿರ್ಭವಿಸಿದ ಗಣಾಧೀಶ್ವರ ಪರಂಪರೆಯವನೆಂದು ನಿಶ್ಚಯಿಸಬಹುದು. ಅದರಿಂದಲೇ ಆ ಪ್ರಾಂತದಲ್ಲಿ ಎಂದರೆ ಮಲಪ್ರಭಾ ನದಿಯ ತೀರಪ್ರದೇಶದ ನಾಡಿನಲ್ಲಿ ಐಹೊಳೆ, ಪಟ್ಟದ ಕಲ್ಲು, ಅಮೀನಗಡ, ಗುಳೇದಗುಡ್ಡ, ಸಿರೂರು, ಬಾಗಲಕೋಟೆ ಬಿಜಾಪುರ ಮತ್ತು ಆ ಸುತ್ತಮುತ್ತಣ ನಾಡಿನಲ್ಲಿ ಬಸವಣ್ಣನವರ ಕಾಲಕ್ಕಿಂತಲೂ ಹಿಂದಿನ ವೀರಶೈವ ಸಂಪ್ರದಾಯದ ಗುರುಮಠಗಳೂ, ಜಂಗಮ ಮಠಗಳೂ ಹೆಚ್ಚಾಗಿವೆ. ಅವು ವೀರಶೈವಧರ್ಮ ಪ್ರಚಾರಕೇಂದ್ರಗಳಾಗಿರುತ್ತವೆ.ಶುದ್ಧ ವೀರ ಶೈವಕ್ಕೂ ಆರಾಧ್ಯ ಬ್ರಾಹ್ಮಣ ಮತಧರ್ಮಗಳಿಗೂ ಹೆಚ್ಚು ಅಂತರವಿಲ್ಲ. ಎರಡೂ ಸಮಾನ ಧರ್ಮಗಳೇ. ಆದರೆ, ಶಿವಾರಾಧ್ಯರಲ್ಲಿ ಪಂಚಾಕ್ಷರಿಯೂ, ಗಾಯತ್ರಿಯೂ ಉಪದೇಶ ಮಂತ್ರಗಳಾಗಿವೆ; ಶಿವಾಚಾರ್ಯರಲ್ಲಿ ಕೇವಲ ಪಂಚಾಕ್ಷರಿಯೇ ಉಪದೇಶ ಮಂತ್ರವಾಗಿದೆ. ಗಾಯತ್ರಿ ಯಜ್ಞ ಯಾಗ ಸಂಪ್ರದಾಯವನ್ನು ಒಪ್ಪುತ್ತದೆ; ಪಂಚಾಕ್ಷರಿ ಯಜ್ಞಯಾಗಗಳನ್ನು ನಿರಾಕರಿಸುತ್ತದೆ. ಸ್ವಭಾವತಃ ದಯಾರ್ದ್ರಹೃದಯರಾದ ಬಸವಣ್ಣನವರ ಮನಸ್ಸಿನ ಮೇಲೆ ವೀರ ಶೈವ ಧರ್ಮ ಪ್ರಬಲ ಪರಿಣಾಮಕಾರಿಯಾಯಿತು. ಬಸವಣ್ಣನವರಿಗೆ ಮೊದಲೇ ಶೈವದೀಕ್ಷೆಯಂತೆ ಉಪನಯನವೂ ಆಗಿತ್ತು. ಎಂದರೆ, ಯಜ್ಞೋಪವೀತಧಾರಣೆಯೊಂದಿಗೆ ಲಿಂಗಧಾರಣೆಯಾಗಿತ್ತು. ಅವರಿಗೆ ಈಶಾನಗುರು ಪರಂಪರೆಯ

ವೀರಶೈವದ ಒಲವು ಹೆಚ್ಚಿದಮೇಲೆ, ಶೈವಸಂಪ್ರದಾಯದಂತೆ ಆಗಿದ್ದ ಶೈವದೀಕ್ಷೆ
ಯನ್ನು ಪರಿತ್ಯಜಿಸಿ, ವೀರಶೈವ ಗುರುವಿನಿಂದ ಇಷ್ಟಲಿಂಗಧಾರಣೆಯನ್ನು ಶಿವ
ದೀಕ್ಷಾಪೂರ್ವಕವಾಗಿ ಹೊಂದಿದರು. ಅವರಿಗೆ ಸುಮಾರು ಹದಿನಾರನೆಯ
ವರ್ಷದಲ್ಲಿ ಶಿವದೀಕ್ಷೆಯಾದಮೇಲೆ ವಿವಾಹವೂ ಆಯಿತು. ಬಿಜ್ಜಳನ ಪ್ರಧಾನ
ಮಂತ್ರಿ ಬಲದೇವ ತನ್ನ ಮಗಳು ಗಂಗಾಂಬಿಕೆಯನ್ನು ಬಸವಣ್ಣನವರಿಗೆ
ಕೊಟ್ಟು ಮದುವೆ ಮಾಡಿದನು. ಆಕೆಯೂ ವೀರಶೈವ ದೀಕ್ಷೆಯನ್ನು ಪಡೆದಳು.
ಕೆಲವು ದಿನಗಳಲ್ಲಿಯೇ ಅವರು ಕೂಡಲ ಸಂಗಮಕ್ಷೇತ್ರವನ್ನು ಬಿಟ್ಟು ಅಕ್ಕ
ನಾಗಲಾಂಬಿಕೆ ಮತ್ತು ಅವರ ಪತಿ ಶಿವದೇವರೊಂದಿಗೆ ಕಲ್ಯಾಣದಲ್ಲಿ ನೆಲಸಿದರು.
ಬಿಜ್ಜಳನ ಆಸ್ಥಾನದಲ್ಲಿ ಬಸವಣ್ಣನವರು ಕರಣಿಕವೃತ್ತಿಯನ್ನು ಅವಲಂಬಿಸಿದರು.
ಆ ವೇಳೆಗಾಗಲೇ ಶಿವದೇವ-ನಾಗಲಾಂಬಿಕೆಯರಿಗೆ ಚನ್ನಬಸವಣ್ಣನೆಂಬ ಮಗ
ನಾಗಿದ್ದನು. ನಂದೀಶ್ವರ ವ್ರತನಿಯಮದಿಂದ ತಾಯಿ ಬಸವಣ್ಣನನ್ನು ಪಡೆದಿದ್ದ
ರಿಂದ, ಮಗನಿಗೆ ನಂದಿಯ ಹೆಸರೇ ಆದ ಬಸವಣ್ಣ ಎಂದು ಆ ಕನ್ನಡ ಮಹಿ
ನಾಮಕರಣ ಮಾಡಿದ್ದಳು. ಬಸವಣ್ಣನವರು ತನ್ನ ಮುದ್ದು ಸೋದರಳಿಯ
ನಿಗೆ ಚನ್ನಬಸವಣ್ಣ ಎಂದು ಹೆಸರಿಟ್ಟರು! ಬಸವಣ್ಣನವರು ತುಂಬ ಕುಶಲಮತಿ;
ಸೌಜನ್ಯ ನಿಧಿ; ಕರ್ತವ್ಯತತ್ಪರ ! ಅದರಿಂದಲೇ ಅವರು ಬಿಜ್ಜಳ ರಾಜನ ಪ್ರೀತಿ
ವಿಶ್ವಾಸಗಳಿಗೆ ಪಾತ್ರರಾದರು. ಬಲದೇವ ಮಂತ್ರಿ ಕಾಲವಾದ್ದರಿಂದ, ಬಿಜ್ಜಳ
ಆ ಮಂತ್ರಿಪದವಿಯನ್ನು ಬಸವಣ್ಣನವರಿಗೆ ವಹಿಸಿ ಗೌರವಿಸಿದನು. ರಾಜಕಾರ್ಯ
ಗಳಲ್ಲಿ ಬಸವಣ್ಣನವರು ಚತುರರಾಗಿದ್ದರು. ಪ್ರಜಾಕ್ಷೇಮವನ್ನು ಸಾಧಿಸಿದರು.
ಸಮಾಜವನ್ನು ನೀತಿಧರ್ಮಗಳ ಆಧಾರದ ಮೇಲೆ ನಿಯೋಜಿಸಲು ಮನಸಾರೆ
ಶ್ರಮಿಸಿದರು. ದಂಡನಾಯಕ ಸಿದ್ಧರಸ ಪರರಾಯರೊಂದಿಗೆ ನಡೆಸಿದ ಯುದ್ಧ
ದಲ್ಲಿ ಮಡಿದನು. ಆಗ ಬಿಜ್ಜಳ ತನ್ನ ರಾಜ್ಯಸೈನ್ಯದ ಮಹಾ ದಂಡನಾಯಕ
ಪಟ್ಟವನ್ನೂ ಬಸವಣ್ಣನವರಿಗೆ ಕಟ್ಟಿದನು ! ಬಿಜ್ಜಳ ತಾನು ತನ್ನ ತಂಗಿಯಂತೆ
ಅರಮನೆಯಲ್ಲಿ ಪೋಷಣೆ ಮಾಡಿದ್ದ ಸಿದ್ಧರಸನ ಮಗಳು ನೀಲಾಂಬಿಕೆಯನ್ನು
ಬಸವಣ್ಣನವರಿಗೆ ಕೊಟ್ಟು ರಾಜವೈಭವದಿಂದ ಮದುವೆ ಮಾಡಿದನು.

ಬಸವಣ್ಣನವರು ಕಲ್ಯಾಣರಾಜ್ಯದಲ್ಲಿ ಪ್ರಧಾನ ಮಂತ್ರಿಯಾಗಿಯೂ
ಪ್ರಮುಖ ದಂಡನಾಯಕನಾಗಿಯೂ ಇದ್ದರು. ಈ ಅಧಿಕಾರದ ಅವಧಿಯಲ್ಲಿ
ಅವರು ವೀರಶೈವದ ಉದಾತ್ತ ತತ್ತ್ವಗಳನ್ನು ಜನರಲ್ಲಿ ಪ್ರಚಾರ ಮಾಡಲು

ಪ್ರಯತ್ನಿಸಿದರು. ಕಲ್ಯಾಣ ವೀರಶೈವಧರ್ಮ ಕ್ಷೇತ್ರವಾಯಿತು ! ಬಸವಣ್ಣನವರ ಕೀರ್ತಿ ಎಲ್ಲ ಕಡೆಯೂ ಹಬ್ಬಿತು. ಅನೇಕರು ವೀರಶೈವ ದೀಕ್ಷೆಯನ್ನು ಹೊಂದಿ, ಬಸವಣ್ಣನವರ ತತ್ತ್ವಗಳನ್ನು ಅನುಸರಿಸುತ್ತಿದ್ದರು. ಜಾತಿಮತ ಪಂಥಗಳೆಂಬ ಭೇದವಿಲ್ಲದೆ ಸರ್ವರೂ ಆಧ್ಯಾತ್ಮಿಕ ದೃಷ್ಟಿಯಲ್ಲಿ ಸಮಾನರೆಂಬುದೇ ಈ ಹೊಸ ಸಮಾಜದ ಮುಖ್ಯ ಧರ್ಮವಾಯಿತು. ಹೆಣ್ಣುಮಕ್ಕಳೂ ಶಿವದೀಕ್ಷಾ ಸಂಸ್ಕಾರವನ್ನು ಪಡೆದು ನೀತಿ, ಧರ್ಮ, ಭಕ್ತಿ, ಜ್ಞಾನ, ವೈರಾಗ್ಯ ಸಂಪನ್ನೆಯರಾಗಿ ಮುಕ್ತರಾಗಬಹುದೆಂಬ ಅವಕಾಶ ಲಭಿಸಿತು. ವೈದಿಕ ಧರ್ಮದಲ್ಲಿ ಯಜ್ಞ ಯಾಗಗಳಲ್ಲಿ ಪಶುಬಲಿಯಾಗುತ್ತಿದ್ದುದನ್ನು ಈ ನೂತನ ಸಮಾಜ ನಿರಾಕರಿಸಿತು. ಸನಾತನ ವೀರಶೈವವೂ ಸ್ತ್ರೀಯರ ಸಂಸ್ಕಾರವನ್ನು ಅಂಗೀಕರಿಸಿತ್ತು; ಪಶುಬಲಿಯನ್ನು ನಿಷೇಧಿಸಿತ್ತು ! ಬಸವಣ್ಣನವರು ಸ್ಥಾವರ ಲಿಂಗಪೂಜೆಯನ್ನು ತ್ಯಜಿಸಿ, ಇಷ್ಟಲಿಂಗ ಪೂಜೆಯನ್ನು ಆಚರಿಸಬೇಕೆಂದು ಬೋಧಿಸಿದರು. ಸನಾತನ ವೀರಶೈವ ಸ್ಥಾವರ ಲಿಂಗಪೂಜೆಯನ್ನು ಆಚರಿಸುತ್ತಿತ್ತು. ಅಸ್ಪೃಶ್ಯತೆ, ಮದ್ಯಪಾನ, ಮಾಂಸಾಹಾರ ಭಕ್ಷಣೆ, ವ್ಯಭಿಚಾರ, ಕಳ್ಳತನ, ಅಸೂಯೆ, ಅಧರ್ಮ, ಅಸತ್ಯ, ಅನ್ಯಾಯ, ಅನಾಚಾರ ಮುಂತಾದ ದುರ್ಗುಣಗಳನ್ನು ಬಿಟ್ಟು, ವಿನಯ, ವಿವೇಕ, ಗುರುಹಿರಿಯರಲ್ಲಿ ಭಕ್ತಿ, ದೇವರಲ್ಲಿ ನಂಬುಗೆ, ಸದಾಚಾರ, ಶಿವಪೂಜೆ, ಶಿವಧ್ಯಾನ, ಶಿವಮಂತ್ರ ಜಪ, ಶಿವಯೋಗ, ಪರೋಪಕಾರ, ದಾನಧರ್ಮ, ದೀನಾನಾಥ ಸಂರಕ್ಷಣೆ, ಮಾತಾಪಿತೃ ಸೇವೆ, ಬಂಧುಪ್ರೇಮ, ಸರ್ವಜನ ಹಿತ ಚಿಂತನೆ–ಇವೇ ಮೊದಲಾದ ಸದ್ಗುಣಗಳನ್ನು ಪ್ರತಿಯೊಬ್ಬರೂ ಬೆಳಸಿಕೊಳ್ಳಬೇಕೆಂಬುದು ಬಸವಣ್ಣನವರ ಸಮಾಜದ ಜೀವಜೀವಾಳ ! ಕಲ್ಯಾಣದಲ್ಲಿ ಬಸವಣ್ಣನವರ ಮಹಮನೆಯಲ್ಲಿ ಅನುಭವ ಮಂಟಪ ಏರ್ಪಟ್ಟಿತು. ಅಲ್ಲಲ್ಲಿ ಜಂಗಮ ಸಂಘಗಳು ಅನುಭವಗೋಷ್ಠಿಗಳನ್ನು ನಡಸುತ್ತಿದ್ದವು. ಅನುಭವ ಮಂಟಪದಲ್ಲಿ ಎಲ್ಲ ಶರಣರೂ ಶರಣೆಯರೂ ಸೇರಿ ತತ್ತ್ವವಿಚಾರಗಳನ್ನು ಕುರಿತು ತಮ್ಮತಮ್ಮ ಅನುಭವವನ್ನು ಹೇಳುತ್ತಿದ್ದರು. ಅಲ್ಲಿ ಷಟ್‌ಸ್ಥಲ, ಅಷ್ಟಾವರಣ, ಪಂಚಾಚಾರ, ಕಾಯಕ, ದಾಸೋಹ, ಶಿವದೀಕ್ಷೆ, ಸ್ಥಾವರ ಲಿಂಗಪೂಜೆ, ಭವಿ, ಭಕ್ತ, ಮುಕ್ತಿ, ಶಕ್ತಿ, ಅಂಗ, ಲಿಂಗ, ಸ್ಥಲ, ಸೃಷ್ಟಿ, ಶೂನ್ಯ, ಆಚಾರ, ಪಂಚ ಸೂತಕ, ಜೀವ, ಆತ್ಮ, ಈಶ್ವರ, ಲಿಂಗಾಂಗ ಸಾಮರಸ್ಯ, ಶಿವಧರ್ಮ–ಇವೇ ಮೊದಲಾದ ವೀರಶೈವ ಧರ್ಮತತ್ತ್ವಗಳ ಜಿಜ್ಞಾಸೆ ನಡೆಯುತ್ತಿತ್ತು.

ಈ ಹೊಸ ಸಮಾಜದ ನೀತಿನಿಯಮಗಳನ್ನು ಜನಸಾಮಾನ್ಯರು ಒಪ್ಪಿದಂತೆಯೇ ಜೈನ, ಬ್ರಾಹ್ಮಣ ಪಂಗಡಗಳ ಅನೇಕ ಸುಸಂಸ್ಕೃತರೂ ಅಂಗೀಕರಿಸಿದರು. ಪಾಶು ಪತ, ಕಾಪಾಲಿ, ಕಾಳಾಮುಖ, ಗಾಣಪತ, ಸ್ಕಾಂದ ಮೊದಲಾದ ನಾನಾ ಶೈವ ಶಾಖೆಗಳ ವಿಚಾರವಂತರೂ ಬಸವ ಸಮಾಜದ ಅನುಯಾಯಿಗಳಾದರು. ಸಮಾಜ ನಾನಾಮುಖವಾಗಿ ಬೆಳೆಯಿತು. ಈ ನೂತನ ಧರ್ಮದಲ್ಲಿ ಬುದ್ಧಿವಂತ ವಿರಕ್ತ ಪಂಥವೊಂದು ನಾಡಿನಲ್ಲಿ ಉದಯವಾಯಿತು. ಅಲ್ಲಲ್ಲಿ ವಿರಕ್ತ ಮಠಗಳು ಸ್ಥಾಪನೆಯಾದುವು. ಅನೇಕ ಕೀಳು ಜಾತಿಯವರೂ ಈ ಹೊಸ ಧರ್ಮವನ್ನು ಅಂಗೀಕರಿಸಿದ್ದರಿಂದ ಅವರಿಗೆ ಧಾರ್ಮಿಕ ಶಿಕ್ಷಣ ಅತ್ಯಾವಶ್ಯಕವಾಗಿತ್ತು. ನಾಡಿನಲ್ಲೆಲ್ಲ ಸುತ್ತಿ ಈ ನೂತನ ತತ್ತ್ವಗಳನ್ನು ಧರ್ಮಶಾಸ್ತ್ರ ಸಂಪನ್ನರು ಪ್ರಚಾರ ಮಾಡುತ್ತಿದ್ದರು. ಅವರು ಷೋಡಶ ಸಂಸ್ಕಾರಗಳನ್ನು ನೆರವೇರಿಸುವು ದರಲ್ಲಿ 'ಅಯ್ಯ'ನವರೆಂಬ ಪುರೋಹಿತರಾಗಿರುತ್ತಿದ್ದರು. ಹೀಗೆ ಈ 'ಅಯ್ಯ' ಬಳಗದವರು ಮೊದಲು ಎಲ್ಲ ಕಡೆಯೂ ಸುತ್ತಿ ಹೊಸ ಬಗೆಯ ಭಕ್ತಸಂಕುಲ ವನ್ನು ಧಾರ್ಮಿಕ ಪಥದಲ್ಲಿ ನಡೆಸಬೇಕಾಗಿದ್ದುದರಿಂದಲೇ ಅವರನ್ನು 'ಜಂಗಮ'ರೆಂದು ಕರೆಯುತ್ತಿದ್ದರು. ಇಂಥ ಪಂಗಡ ಬಸವನ ಹಿಂದೆಯೂ ಸನಾತನ ವೀರಶೈವದಲ್ಲಿತ್ತು. ಈ 'ಅಯ್ಯ' ಶ್ರೇಣಿಯಲ್ಲಿ ಹೊಸದಾಗಿ ಸೇರಿದ ಕೀಳು ಜಾತಿಯ ಬುದ್ಧಿವಂತರೂ ಇರುತ್ತಿದ್ದರು. ಜೈನರೂ, ವೈದಿಕರೂ, 'ಪಾಶುಪತ'ರೂ, ಕಾಪಾಲಿಗಳೂ, ಶಾಕ್ತೇಯರೂ, ಕಾಳಾಮುಖರೂ, ಸನಾತನ ವೀರಶೈವ ವಿದ್ವಾಂಸರೂ, ಚತುರ್ವರ್ಣದವರೂ ಇರುತ್ತಿದ್ದರು. ಕ್ರಮೇಣ ಇವರು ಆಯಾ ಪಂಗಡಗಳ 'ಅಯ್ಯ'ನವರೆಂದೇ ಪ್ರಭೇದಗಳುಂಟಾದವು. ಮುಂ ಮುಂದೆ ಅನೇಕ ಕೀಳು ಜಾತಿಗಳ ಬುದ್ಧಿವಂತರೂ ಈ ಜಂಗಮಶ್ರೇಣಿಯಲ್ಲಿ ಸೇರುತ್ತ ಬಂದರು. 'ಜಂಗಮಕ್ಕೆ ಕುಲವಿಲ್ಲ ಲಿಂಗಕ್ಕೆ ಭೇದವಿಲ್ಲ' ಎಂಬ ಲೋಕೋಕ್ತಿ ಹುಟ್ಟಿತು. ನೂತನ ವೀರಶೈವದಲ್ಲಿ ಜಾತಿಭೇದವೆಂಬುದೇ ಇಲ್ಲ ವೆಂದೂ ಶಿವಸಂಸ್ಕಾರದಿಂದ ಎಲ್ಲರೂ ಲಿಂಗವಂತರಾದ್ದರಿಂದ ಸಮಾನರೆಂದೂ ಬಸವಣ್ಣನವರು ಉದಾತ್ತ ತತ್ತ್ವವನ್ನು ಪ್ರತಿಪಾದಿಸಿದರು. ಅಂದಿನ ನೂತನ ವೀರಶೈವ ಅದನ್ನು ಒಪ್ಪಿತು. ಆದರೆ, ಬುದ್ಧಿಜೀವಿಗಳಾದ 'ಅಯ್ಯ' ಬಳಗ ಆ ಜನಸಾಮಾನ್ಯ ಬಸವನ ಬಳಗದಿಂದ ತಾವು ಉತ್ತಮರೆಂಬ ಭಾವನೆಯಿಂದ ಬದುಕಿತು! ಇದು ಬಹುಶಃ ಪ್ರಕೃತಿ ನಿಯಮವೇನೋ! ಇಂದಿಗೂ ಮಹಾ

ಭಾವ ಬಸವಣ್ಣನವರ ಸರ್ವಸಮಾನ ಧರ್ಮದಲ್ಲಿ ಏರುಪೇರುಗಳಾಗಿರುವುದು ಈ ಬುದ್ಧಿಜೀವಿ 'ಅಯ್ಯಬಳಗ'ದವರಿಂದಲೇ ಎಂದು ಅನೇಕರು ಭಾವಿಸಿರುತ್ತಾರೆ. ಅಷ್ಟಾವರಣದ ಜಂಗಮ ಈ ವ್ಯವಹಾರ ಜಂಗಮದಿಂದ ಪ್ರತ್ಯೇಕವೆಂಬುದನ್ನು ಮರೆಯಬಾರದು. 'ಅಧ್ಯಕ್ಷ' ಎಂಬ ಪದ ಎಲ್ಲ ಸಂಘಸಂಸ್ಥೆಗಳ ಯಜಮಾನ ನಿಗೂ ಅನ್ವಯಿಸುವಂತೆ, ರಾಷ್ಟ್ರಾಧ್ಯಕ್ಷರಿಗೂ ಅನ್ವಯಿಸುತ್ತದೆ! ಅದರಂತೆ 'ಜಂಗಮ' ಪದವನ್ನು ಎಲ್ಲ ಕುಲಜಾತಿಗಳ ಪುರೋಹಿತರೂ, ಪೂಜಾರಿಗಳೂ, ಬುದ್ಧಿಜೀವಿಕಾಯಕದವರೂ ಲಿಂಗವಂತರಲ್ಲಿ ಬಳಸಿಕೊಳ್ಳುತ್ತಿದ್ದಾರೆ. ಇದು ಅಗ್ಗದ ಸರಕಾಗಿದೆ. ಬಸವಣ್ಣನವರ ಧಾರ್ಮಿಕ ಕ್ರಾಂತಿ ವೈದಿಕ ವರ್ಗವನ್ನು ಕೆರಳಿಸಿತು! ಜೈನಪಂಗಡದ ಬಹು ಭಾಗದವರೂ ಸನಾತನ ವೀರಶೈವದ ಅನೇಕ ಪಂಗಡಗಳವರೂ ಬಸವಣ್ಣನವರ ಸ್ಥಾನಬಲವನ್ನೂ ಅವರ ಜನಾನುರಾಗವನ್ನೂ ಎದುರಿಸಲಾರದಾದರು! ಸನಾತನ ವೀರಶೈವ ಪಂಗಡಗಳವರು ಉತ್ತರದ ಕಲ್ಯಾಣ ಪ್ರಾಂತವನ್ನು ಬಿಟ್ಟು, ತುಂಗಭದ್ರಾ ನದಿಯ ದಕ್ಷಿಣ ಪ್ರಾಂತಗಳಲ್ಲಿ ನೆಲಸಿದರು. ಅನೇಕ ಸನಾತನ ವೀರಶೈವ ಪಂಗಡಗಳವರು ಉತ್ತರ ಭಾಗಗಳಲ್ಲಿಯೇ ನಿಂತ ರಾದರೂ, ಬಸವಣ್ಣನವರ ಧಾರ್ಮಿಕ ಮನೋಭಾವವನ್ನು ಬಹಿರಂಗವಾಗಿ ವಿರೋಧಿಸಲಿಲ್ಲ! ಇವರು ಗುರುಸ್ಥಲದವರೆಂದು ವೀರಶೈವರಲ್ಲಿ ಪ್ರಮುಖ ಪ್ರಭೇದದವರಾದರು. ಕಾಲಕ್ರಮದಲ್ಲಿ ಇವರೂ ಬಸವಣ್ಣನವರ ನೂತನ ಸಮಾಜ ರಚನೆಯಲ್ಲಿ ಸಮಾವೇಶಗೊಂಡರೆಂಬುದನ್ನು ಮರೆಯುವಂತಿಲ್ಲ. 'ಜನರನ್ನು ಮೆಚ್ಚಿಸಲು ಜನಾರ್ದನನಿಂದಲೂ ಸಾಧ್ಯವಿಲ್ಲ' ಎಂಬಂತೆ, ಮಹಾತ್ಮ ಬಸವಣ್ಣನವರ ವಿಶಾಲ ಮನೋಭಾವವನ್ನು ಅಂದೂ ಅನೇಕರು ಒಪ್ಪಲಿಲ್ಲ. ಹೊಲೆಯರೂ ಮಾದಿಗರೂ ಮೊದಲುಗೊಂಡು ಉಚ್ಚವರ್ಣದವರೂ ಈ ನೂತನ ಸಮಾಜದಲ್ಲಿ ಸೇರಿದ್ದರಿಂದ ವರ್ಣಸಂಕರವಾಯಿತೆಂದು ಸಂಕುಚಿತಮನೋಭಾವ ದವರು ಕಳವಳಪಡುತ್ತಿದ್ದರು. ಬಸವಣ್ಣನವರು ರಾಜಕೀಯ ಒಳಸಂಚು ನಡಸು ತ್ತಿದ್ದಾರೆಂದೂ ಅನೇಕರು ಶಂಕಿಸಿದರು. ಬಸವಣ್ಣನವರ ಮಹಮನೆಯಲ್ಲಿ ಒಂದು ಲಕ್ಷ ತೊಂಬತ್ತಾರು ಸಾವಿರ ಜಂಗಮರು ನಿತ್ಯ ದಾಸೋಹದಿಂದ ತೃಪ್ತರಾಗು ತ್ತಿದ್ದರು! ಇವರೆಲ್ಲರೂ ಬಸವಣ್ಣನವರ ಗುಪ್ತದಳದವರೆಂಬ ಗುಜುಗುಂಪಲು ಅಂದು ಲೋಕದಲ್ಲಿತ್ತು! ಜನರು ಬಸವಣ್ಣನವರ ಚಲನವಲನಗಳನ್ನು ಪವಾಡ ಗಳೆಂದು ಬಣ್ಣಗಾಣಿಸಿ ಆಡಿಕೊಳ್ಳುತ್ತಿದ್ದರು. ಆ ಮಹಾ ಪುರುಷರ ನಿರ್ಮಲ

ಸಾತ್ವಿಕ ಮನೋಭಾವವನ್ನು ಮೂಢ ಲೋಕ ಅರಿಯಲಿಲ್ಲ! ಬಿಜ್ಜಳನೂ ಒಮ್ಮೊಮ್ಮೆ ಬಸವಣ್ಣನವರ ಸಾಮಾಜಿಕ ಸಂಘಟನೆಯ ರೀತಿನೀತಿಗಳನ್ನು ಕಂಡು ಸಂಶಯಪಡುತ್ತಿದ್ದನು. ಕಲ್ಯಾಣ ಕಲಚೂರ್ಯ ರಾಜ್ಯದ ರಾಜಧಾನಿಯಾಗಿದ್ದಂತೆಯೇ ನೂತನ ವೀರಶೈವದ ಧರ್ಮಕ್ಷೇತ್ರವಾಗಿಯೂ ಇತ್ತು. ಬಸವಣ್ಣನವರ ಸಮಾಜಸಂಸ್ಕರಣ ದೃಷ್ಟಿಯಿಂದ ಆಗ ಕಲ್ಯಾಣ ಹೇಗಿದ್ದಿತೆಂಬುದನ್ನು ಚನ್ನಬಸವಣ್ಣನವರು ತಮ್ಮ ಒಂದು ವಚನದಲ್ಲಿ ಹೇಳಿದ್ದಾರೆ:

೩೬. "ಸ್ವಸ್ತಿ ಸಮಸ್ತ ಪ್ರಶಸ್ತಿ ಸಹಿತ ಶ್ರೀಮತ್ ಕಲ್ಯಾಣಪುರದ ಮಹಾತ್ಮ್ಯವೆಂತೆಂದಡೆ: ವಿಸ್ತರಿಸಿ ಪೇಳುವೆನು, ಎಲ್ಲಾ ಶಿವಗಣಂಗಳು ಕೇಳಿ ಕೃತಾರ್ಥರಾಗಿರಯ್ಯಾ, ಹದಿನಾಲ್ಕು ಭುವನಕ್ಕೆ ಕಳಸವೆಂದೆನಿಸುವ ರುದ್ರ ಲೋಕವೆ ಮರ್ತ್ಯಕ್ಕಿಳಿತಂದು

ಕಲ್ಯಾಣವೆಂಬ ಪುರವಾಗಿ ಹುಟ್ಟಿತ್ತು ನೋಡಿರಯ್ಯಾ! ಅಲ್ಲಿ ಸತ್ಯರು, ಸಾತ್ವಿಕರು, ನಿತ್ಯರು, ನಿಜೈಕ್ಯರು, ಮಹಾ ಜ್ಞಾನಿಗಳು, ಪರಮ ಶಿವಯೋಗಿಗಳು, ಶಿವಾನುಭವ ಸಂಪನ್ನರು, ಶಿವಲಿಂಗಪ್ರಾಣಿಗಳು, ಶಿವಪ್ರಸಾದ ಪಾದೋದಕ ಸಂಬಂಧಿಗಳು, ಶಿವಾಚಾರವೇದ್ಯರು, ಶಿವಾಗಮಸಾಧ್ಯರು ಶಿವಸಮಯಪಕ್ಷರುಗಳಲ್ಲದೆ, ಮತ್ತಾರು ಅಲ್ಲಿಲ್ಲ ನೋಡಿರಯ್ಯಾ! ಪಾಪಿಗಳು, ಕೋಪಿಗಳು, ಅಸತ್ಯರು, ಅನಾಚಾರಿಗಳು, ಹೋಗಬಾರದು. ಕಲ್ಯಾಣವ ಮೀರಿ ಹೊಕ್ಕೆಹೆವೆಂಬರಿಗೆ ಬಾಳಬಾಯಿಃಧಾರೆ ನೋಡಿರಯ್ಯಾ ಆ ಕಲ್ಯಾಣ ಅಗಮ್ಯ ಅಗೋಚರ ನೋಡಿರಯ್ಯಾ ಆ ಮಹಾ ಕಲ್ಯಾಣದ ವಿಸ್ತೀರ್ಣ ತಾನೆಂತೆಂದಡೆ:

ಹನ್ನೆರಡು ಯೋಜನ ಪರಿಪ್ರಮಾಣದ ವಿಸ್ತೀರ್ಣ ಪಟ್ಟಣಕ್ಕೆ ಮುನ್ನೂರರುವತ್ತು ಬಾಗಿಲವಾಡ. ಆ ಬಾಗಿಲಿಂಗೆ ನೂರ ಐವತ್ತೈದು ವಜ್ರದ ಹಾರೆಯ ಕದಂಗಳು., ಇನ್ನೂರ ಇಪ್ಪತ್ತೈದು ಕಲುಗೆಲಸದ ದ್ವಾರ ಪಟ್ಟಕ್ಕೆ ನಾನೂರ ಐವತ್ತು ಸುವರ್ಣದ ಕೆಲಸದ ಕದಂಗಳು. ಅಲ್ಲಿ ನೂರ ಹದಿನೈದು ಚೋರಗಂಡಿ, ಅವಕ್ಕೆ ನೂರ ಹದಿನೈದು ಮೊಳೆಯ ಕದಂಗಳು. ಇಪ್ಪತ್ತು ಬಾಗಿಲು ಆಳ್ವರಿಯೊಳಗಿಪ್ಪವಾಗಿ ಅವಕ್ಕೆ ಕದಂಗಳಿಲ್ಲ. ಆ ಪಟ್ಟಣಕ್ಕೆ ಬಳಸಿಬಂದ ಕೋಟೆ ನಾಲ್ವತ್ತೆಂಟು ಯೋಜನ ಪ್ರಮಾಣು.

ಮಹುತರ [ನಿಯೋಗಿಗಳ] ಮನೆ ಲಕ್ಷ; ಮಂಡಳಿಕರ ಮನೆ ಲಕ್ಷ; ಸಾಮಂತರ ಮನೆ ಲಕ್ಷ; ರಾಯರಾವುತರ ಮನೆಯೊಳಗಡಗಿದ ಮನೆಗಳಿಗೆ ಲೆಕ್ಕವಿಲ್ಲ. ದ್ವಾದಶ ಯೋಜನ ವಿಸ್ತೀರ್ಣದ ಸೂರ್ಯವೀಥಿ ನೂರಿಪ್ಪತ್ತು; ದ್ವಾದಶ ಯೋಜನ ಸೋಮವೀಥಿ ನೂರಿಪ್ಪತ್ತೈದು. ಅದರಿಂಮಿಗಿಲಾದ ಒಳಕೇರಿ ಹೊರಕೇರಿಗೆ ಗಣನೆಯಿಲ್ಲ.

ಆ ಪಟ್ಟಣದೊಳಗೆ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಶಿವಾಲಯ, ಆ ಶಿವಾಲಯಗಳಿಗೆ ಮುಖ್ಯವಾದ ತ್ರಿಪುರಾಂತಕ ದೇವರ ಶಿವಾಲಯ. ಮುನ್ನೂರರುವತ್ತು ಪದ್ಮಪತ್ರತೀವಿದ ಸರೋವರಂಗಳು, ಎರಡು ಲಕ್ಷವು ಎಂಬತ್ತೈದು ಸಾವಿರದ ಏಳುನೂರೆಪ್ಪತ್ತು ದಾಸೋಹದ ಮಠಗಳು, ಆ ದಾಸೋಹದ ಮಠಗಳಿಗೆ ಮುಖ್ಯವಾದ ಬಸವರಾಜದೇವರ ಮಠದ ವಿಸ್ತೀರ್ಣ ವೆಂತೆಂದೊಡೆ: ಯೋಜನವರಿಯ ಬಿನ್ನಾಣದ ಕಲುಗೆಲಸದ ಪೌಳಿ; ಅತಿ ಸೂಕ್ಷ್ಮದ ಕುಸುರಿಗೆಲಸದ ದ್ವಾರವಟ್ಟವೈದು; ಅವಕ್ಕೆ ಪಂಚಾಕ್ಷರಿಯ ಶಾಸನ. ಮಿಸುನಿಯ ಕಂಭದ ತೋರಣಗಳಲಿ ರುದ್ರಾಕ್ಷಿಯ ಸೂಸಕ ಆ ಬಾಗಿಲುವಾಡದಲ್ಲಿ ಒಪ್ಪುತಿರ್ಪುವಯ್ಯಾ.

ನಂದಿಯ ಕಂಭದ ಧ್ವಜ, ಉಪ್ಪರಗುಡಿಪತಾಕೆ, ವ್ಯಾಸಧ್ವಜ ಒಪ್ಪುತಿರ್ಪವಯ್ಯಾ. ಆ ಮಧ್ಯದಲ್ಲಿ ಬಸವರಾಜ ದೇವರ ಸಿಂಹಾಸನದ ವಿಸ್ತೀರ್ಣ ಪ್ರಮಾಣ: ಸಹಸ್ರ ಕಂಭದ ಸುವರ್ಣದುಪ್ಪರಿಗೆ; ಆ ಮನೆಗೆತ್ತಿದ ಹೊನ್ನ ಕಳಸಸಾವಿರ. ಗುರುಲಿಂಗಜಂಗಮಕ್ಕೆ ಪಾದಾರ್ಚನೆಯ ಮಾಡುವ ಹೊಕ್ಕರಣೆ ನಾಲ್ಕು ಪುರುಷ ಪ್ರಮಾಣದ ಘಾತ, ಅಲ್ಲಿ ತುಂಬಿದ ಪಾದೋದಕದ ತುಂಬುಸುಚ್ಚಲು ಬೆಳೆವ ರಾಜಶಾಲಿಯ ಗದ್ದೆ ಹನ್ನೆರಡು ಕಂಡುಗ. ಆ ಯೋಜನವರಿಯ ಬಿನ್ನಾಣದ ಅರಮನೆಯ ವಿಸ್ತೀರ್ಣ ದೊಳಗೆ ಲಿಂಗಾರ್ಚನೆಯ ಮಾಡುವ ಮಠದ ಕಟ್ಟಳೆ ಲಕ್ಷದ ಮೇಲೆ ತೊಂಬತ್ತಾರು ಸಾವಿರ.

ಇನ್ನು ಬಸವರಾಜದೇವರು ಮುಖ್ಯವಾದ ಅಸಂಖ್ಯಾತರ ಮಠಗಳು ಆ ಕಲ್ಯಾಣದೊಳಗೆ ಎಷ್ಟು ಎಂದಡೆ: ಹದಿನೆಂಟುಸಾವಿರ ಕಟ್ಟಳೆಯ ನೇಮದ ಭಕ್ತರ ಮಠಂಗಳು; ಇಪ್ಪತ್ತೆಂಟು ಸಾವಿರ ಮಹಾ ಮನೆಗಳು; ಹತ್ತು ಸಾವಿರ ನಿತ್ಯನೇಮಿಗಳ ಮಠಂಗಳು; ಹದಿನೈದು ಸಾವಿರ ಚಿಲುಮೆ

ಯಗ್ಗವಣಿಯ ಪ್ರತಸ್ಥರ ಮಠಂಗಳು; ಐದುಸಾವಿರ ವೀರವ್ರತನೇಮಿಗಳ ಕಟ್ಟಳೆಯ ಮಠಂಗಳು; ಹನ್ನೆರಡು ಸಾವಿರ ಅಚ್ಚ ಪ್ರಸಾದಿಗಳ ಮಠಂಗಳು; ಒಂದು ಸಾವಿರದ ಅರವತ್ತುನಾಲ್ಕು ಶೀಲಸಂಪನ್ನರ ಮಠಂಗಳು; ನಿತ್ಯ ಸಾವಿರ ಜಂಗಮಕ್ಕೆ ಆರೋಗಣೆಯ ಮಾಡಿಸುವ ದಾಸೋಹಿಗಳ ಮಠಂಗಳು ಮೂವತ್ತೆರಡು ಸಾವಿರ; ನಿತ್ಯ ಐನೂರು ಜಂಗಮಕ್ಕೆ ಒಲಿದು ದಾಸೋಹವ ಮಾಡುವ ಸತ್ಯ ಸದಾಚಾರಿಗಳ ಮಠಂಗಳು ಐವತ್ತೆಂಟು ಸಾವಿರ; ನಿತ್ಯ ಸಾವಿರದೈನೂರು ಜಂಗಮಕ್ಕೆ ಒಲಿದು ದಾಸೋಹವ ಮಾಡುವ ದಾಸೋಹಿಗಳ ಮಠಂಗಳು ಹನ್ನೊಂದು ಸಾವಿರ; ನಿತ್ಯ ಆವಾರಿಯಿಂದ ಮಾಡುವ ಮಾಟಕೂಟದ ಸದ್ಭಕ್ತರಂಗಳ ಮಠಂಗಳು ಒಂದು ಲಕ್ಷ; ಜಂಗಮ ಸಹಿತ ಸಮಯಾಚಾರದಿಂದ ಲಿಂಗಾರ್ಚನೆಯ ಮಾಡುವ ಜಂಗಮ ಭಕ್ತರ ಮಠಂಗಳು ಎರಡುಸಾವಿರದೆಳ್ನೂರೆಪ್ಪತ್ತು. ಅಂತು ಎರಡು ಲಕ್ಷವು ಎಂಬತ್ತೈದುಸಾವಿರದ ಏಳನೂರೆಪ್ಪತ್ತು. ಇಂತಪ್ಪ ಅಸಂಖ್ಯಾತರಿಗೆ ಮುಖ್ಯವಾಗಿ, ರುದ್ರಲೋಕದಿಂದಿಳಿತಂದ ಪ್ರಮಥ ಗಣಂಗಳ ಮಠಂಗಳು ಏಳುನೂರೆಪ್ಪತ್ತು.

ಇಂತೀ ಮಹಾಪ್ರಮಥರಿಗೆ, ಪುರಾತರಿಗೆ, ಅಸಂಖ್ಯಾತ ಮಹಾಗಣಂಗಳಿಗೆ ಪ್ರಮಥ ನಾಯಕನಾಗಿ, ಏಕಮುಖ, ದಶಮುಖ, ಶತಮುಖ, ಸಹಸ್ರ ಮುಖ, ಲಕ್ಷಮುಖ, ಕೋಟಿ ಮುಖ, ಅನಂತಕೋಟಿ ಮುಖನಾಗಿ ಭಕ್ತರಿಗೆ ಒಡನಾಡಿಯಾಗಿಪ್ಪನು ಸಂಗನಬಸವಣ್ಣ; ಜಗದಾರಾಧ್ಯ ಬಸವಣ್ಣ; ಪ್ರಮಥಗುರು ಬಸವಣ್ಣ; ಶರಣಸನ್ನಿಹಿತ ಬಸವಣ್ಣ; ಸತ್ಯಸಾಕ್ಷಿಕ ಬಸವಣ್ಣ; ನಿತ್ಯನಿಜೈಕ್ಯ ಬಸವಣ್ಣ; ಷಡುಸ್ಥಲ ಸಂಪನ್ನ ಬಸವಣ್ಣ; ಸರ್ವಾಚಾರ ಸಂಪನ್ನ ಬಸವಣ್ಣ; ಸರ್ವಾಂಗಲಿಂಗಿ ಬಸವಣ್ಣ; ಸುಜ್ಞಾನ ಭರಿತ ಬಸವಣ್ಣ; ನಿತ್ಯ ಪ್ರಸಾದಿ ಬಸವಣ್ಣ; ಸಚ್ಚಿದಾನಂದಮೂರ್ತಿ ಬಸವಣ್ಣ; ಸದ್ಯೋನ್ಮುಕ್ತಿರೂಪ ಬಸವಣ್ಣ; ಅಖಂಡಪರಿಪೂರ್ಣ ಬಸವಣ್ಣ; ಅಕಾಯಚಾರಿತ್ರ ಬಸವಣ್ಣ; ಅಸಾಧ್ಯಸಾಧಕ ಬಸವಣ್ಣ; ಅಭೇದ್ಯ ಭೇದಕ ಬಸವಣ್ಣ; ಅನಾಮಯಮೂರ್ತಿ ಬಸವಣ್ಣ; ಮಹಾಮನೆಯ ಮಾಡಿದಾತ ಬಸವಣ್ಣ; ರುದ್ರಲೋಕವ ಮರ್ತ್ಯಲೋಕಕ್ಕೆ ತಂದಾತ ಬಸವಣ್ಣ; ಶಿವಾಚಾರದ ಘನವ ಮೆರೆದಾತ ಬಸವಣ್ಣ.

ಇಂತಹ ಬಸವಣ್ಣನ ಭಕ್ತಿಯನು ಒರೆದೊರೆದು ನೋಡುವ, ಪ್ರಜ್ವಲಿತವ ಮಾಡುವ ಅಶ್ವಪತಿ, ಗಜಪತಿ, ನರಪತಿರಾಯ ರಾಜಾಧಿರಾಜ ಬಿಜ್ಜಳ ರಾಯನೂ ಆ ಬಸವಣ್ಣನೂ ಆ ಕಲ್ಯಾಣ ಪಟ್ಟಣದೊಳಗೆ ಸುಖಸಂಕಥಾ ವಿನೋದದಿಂದ ರಾಜ್ಯಂಗೈಯ್ಯುತ್ತಿರಲು ಆ ಕಲ್ಯಾಣನಾಮವಿಡಿದು ವಿವಾಹಕ್ಕೆ ಕಲ್ಯಾಣವೆಂಬ ನಾಮವಾಯಿತ್ತು ಲೋಕದೊಳಗೆ ಕಲ್ಯಾಣವೆ ಕೈಲಾಸವೆನಿಸಿತ್ತು. ಇಂತಪ್ಪ ಕಲ್ಯಾಣದ ದರುಶನವ ಮಾಡಿದಡೆ ಭವಂ ನಾಸ್ತಿ; ಇಂತಪ್ಪ ಕಲ್ಯಾಣವ ನೆನೆವಡೆ ಪಾಪಕ್ಷಯ. ಇಂತಪ್ಪ ಕಲ್ಯಾಣದ ಮಹಾತ್ಮೆಯಂ ಕೇಳಿದಡೆ ಕರ್ಮಕ್ಷಯವಹುದು ಮೋಕ್ಷಸಾಧ್ಯವಹುದು. ಇದು ಕಾರಣ ಕೂಡಲ ಚನ್ನಸಂಗಮದೇವಾ ನಿಮ್ಮ ಭಕ್ತ ಬಸವಣ್ಣನಿಪ್ಪ ಠಾವೆ ಮಹಾ ಕಲ್ಯಾಣವೆಂದರಿದು ದಿವ್ಯ ಶಾಸನವ ಬರೆದು ಪತಿಸಿದ ಕಾರಣ ಎನ್ನ ಭವಂನಾಸ್ತಿಯಾಯಿತ್ತಯ್ಯಾ."

ಎಂಬ ಚನ್ನಬಸವಣ್ಣನವರ ಈ ವಚನದಲ್ಲಿ ಕಲ್ಯಾಣದ ವೈಭವವನ್ನು ಅರಿಯಬಹುದು. ಇದು ಶರಣನ ಸಾಹಿತ್ಯಶಾಸನ! ಅರಸನ ಶಿಲಾಶಾಸನವಲ್ಲ! ಇತಿಹಾಸ ಇದನ್ನು ಉಲ್ಲೇಖಿಸಿಲ್ಲ. ಆದರೂ ಧಾರ್ಮಿಕ ಮನೋರಾಜ್ಯದಲ್ಲಿ ಕಲ್ಯಾಣ ಪುಣ್ಯಭೂಮಿಯೆನಿಸಿತ್ತು! ಸಾವಿರಾರು ದೇವಾಲಯಗಳಿದ್ದುವು! ಸಾವಿರಾರು ಮಠಗಳಿದ್ದುವು! ಅಪಾರ ಐಶ್ವರ್ಯ ತುಂಬಿತ್ತು! ಬಸವಣ್ಣನವರ ಮಹಮನೆಯ ವೈಭವವೇನು! ಪಾದೋದಕವನ್ನು ಹಾಯಿಸಿ ಹನ್ನೆರಡು ಕಂಡುಗ ರಾಜಶಾಲಿಯ ಗದ್ದೆಯ ಬೆಳೆಯಾಗುತ್ತಿತ್ತಂತೆ! ಪವಿತ್ರ ಪಾದೋದಕದಿಂದ ಬತ್ತವನ್ನು ಬೆಳೆಯಿಸಬಹುದೇ? ಅದು ಜಂಗಮರು ಕೈಕಾಲು ತೊಳೆದ ನೀರಿರಬಹುದು! ಏಕೆಂದರೆ, ಪಾದೋದಕವನ್ನು ಬೀದಿಯಲ್ಲಿ ಚೆಲ್ಲುವಂತಿಲ್ಲ. ಆ ರಾಜಶಾಲಿ ಬತ್ತ ಜಂಗಮ ದಾಸೋಹಕ್ಕೆ ಉಪಯೋಗವಾಗುತ್ತಿತ್ತೇನೋ! ಸಾವಿರಾರು ಶಿವಾಲಯಗಳಲ್ಲಿ ಸ್ಥಾವರ ಲಿಂಗಪೂಜೆಯಾಗುತ್ತಿತ್ತು! ಶರಣರು ಸ್ಥಾವರ ಲಿಂಗಪೂಜೆಯನ್ನು ನಿರಾಕರಿಸುತ್ತಾರೆ. ಬಸವಣ್ಣನವರ ಕಲ್ಯಾಣದಲ್ಲಿ ಸನಾತನ ವೀರಶೈವವೂ ವೈದಿಕ ಶೈವವೂ ಪ್ರಬಲವಾಗಿದ್ದುವೆಂದು ವ್ಯಕ್ತವಾಗುತ್ತದೆ.

ಶರಣರು ಅನುಭವ ಮಂಟಪದಲ್ಲಿ ಸಮಾನ ಗೌರವವನ್ನು ಪಡೆದರು; ಆಧ್ಯಾತ್ಮಿಕ ವಿಚಾರಗಳನ್ನು ಮಥಿಸಿ ತಮ್ಮ ಶಿವಾನುಭವವನ್ನು ಮಂಡಿಸುತ್ತಿ

ದ್ದರು. ಯಾರು ಯಾವ ಉದ್ಯೋಗವನ್ನಾದರೂ ಮಾಡಬಹುದೆಂದೂ, ಪ್ರ
ಯೊಬ್ಬರೂ ಕಾಯಕದಿಂದ ದುಡಿದು ಜೀವನ ಮಾಡಬೇಕೆಂದೂ ಹೊಸ ಸನ್ನು
'ಕಾಯಕವೇ ಕೈಲಾಸ' ಎಂಬ ತತ್ತ್ವವನ್ನು ಸಾರಿತು! ಆದರಿಂದಲೇ ಪು
ವಾಳ ಮಾಚಯ್ಯ, ಅಂಬಿಗರ ಚೌಡಯ್ಯ, ಕಿನ್ನರಿ ಬೊಮ್ಮಯ್ಯ, ಢೋ
ಕಕ್ಕಯ್ಯ, ಮಾದರ ಚನ್ನಯ್ಯ, ನುಲಿಯ ಚಂದಯ್ಯ, ಮೇದರ ಕೇತಯ್ಯ
ಹಡಪದ ಅಪ್ಪಣ್ಣ, ಢಕ್ಕೆಯ ಬೊಮ್ಮಯ್ಯ, ಗಾಣದ ಕನ್ನಯ್ಯ, ಕಿ
ಸಂಗಯ್ಯ, ಕನ್ನಡಿ ಕಾಯಕದ ಅಮ್ಮಿದೇವಯ್ಯ, ಸತ್ತಿಗೆ ರಾಮಯ್ಯ
ಬಡಗಿ ಬಸವಯ್ಯ, ಮಲಹಾರ ಚಿಕ್ಕದೇವಯ್ಯ, ಸೂಜಿ ಕಾಯಕದ ರಾಮ
ವೈದ್ಯ ಸಂಗಣ್ಣ, ತಳವಾರ ಕಾಮಿದೇವಯ್ಯ, ಒಕ್ಕಲು ಮುದ್ದಯ್ಯ, ಸು
ಬಂಕಯ್ಯ, ರೇವಣಸಿದ್ಧ, ಮರುಳಸಿದ್ಧ, ಕರಿಸಿದ್ಧ, ಕಾಡುಸಿದ್ಧ, ರುದ್ರಮು
ಅರಿವಿನ ಮಾರಯ್ಯ, ರಾಯಸದ ಮಂಚಣ್ಣ, ವೀರಗೊಲ್ಲಾಳಯ್ಯ, ಕೋ
ಶಾಂತಯ್ಯ, ಬಿಬ್ಬಿಬಾಚಯ್ಯ, ಉರಿಲಿಂಗದೇವ, ಮೊಗವಾಡದ ಕೇಶಿರಾಜ
ಖಂಡೆಯ ಬೊಮ್ಮಣ್ಣ, ಮಿಂಡಮಲ್ಲಿನಾಥಯ್ಯ, ಅಮುಗಿ ದೇವಯ್ಯ,
ಲಿಂಗ ಪೆದ್ದಯ್ಯ, ಕಾಳಯ್ಯ-ಇವರೇ ಮೊದಲಾದ ನೂತನ ಪುರಾತನರು ಅ
ಭವ ಮಂಟಪದಲ್ಲಿ ಧಾರ್ಮಿಕ ಚಿತ್ತವೃತ್ತಿಯನ್ನು ಅನುಗೊಳಿಸಿಕೊಳ್ಳುತ್ತಿದ್ದ
ಕಾಶ್ಮೀರ ಪ್ರಾಂತದಿಂದ ಮಹಾದೇವಪ್ರಭು ಮೋಳಿಗೆ ಮಾರಯ್ಯನೆಂಬ ಹ
ನಿಂದ ತನ್ನ ಹೆಂಡತಿಯೊಂದಿಗೆ ಬಂದು ಕಲ್ಯಾಣದಲ್ಲಿ ನಿಂತನು. ದಕ್ಷಿಣ ಪ್ರಾ
ದಿಂದ ಸಕಲೇಶ ಮಾದರಸ, ಸೌರಾಷ್ಟ್ರದಿಂದ ಆದಯ್ಯ, ವಿದೇಹದಿಂದ ಮ
ಶಂಕರದೇವ, ತೆಲುಗು ನಾಡಿನಿಂದ ಮೈದುನ ರಾಮಯ್ಯ ಮೊದಲಾದ ಸಾಧ
ಬಂದು, ಅನುಭವ ಮಂಟಪದ ಶರಣಗೋಷ್ಠಿಯನ್ನು ಸೇರಿದರು. ಇವರಲ್ಲ
ಗಂಗಾಂಬಿಕೆ, ನೀಲಾಂಬಿಕೆ, ಅಕ್ಕ ನಾಗಲಾಂಬಿಕೆ, ಮಹದೇವಿ, ಲೇ
ಲಿಂಗಮ್ಮ, ರೆಮ್ಮವ್ವೆ, ಕಾಳವ್ವೆ, ಗಂಗಮ್ಮ, ಗೊಗ್ಗವ್ವೆ, ತಾಯಮ್ಮ, ಸ
ಯಕ್ಕ, ಸುವರ್ಣದೇವಿ, ಸತ್ಯಕ್ಕ ಮೊದಲಾದ ಶರಣೆಯರೂ ಅನುಭವ ಮಂ
ಟಪದ ಗೋಷ್ಠಿಗಳಲ್ಲಿ ಸೇರುತ್ತಿದ್ದರು. ಹೀಗೆ ಶರಣಸಂಗೋಷ್ಠಿ ಬಸವಣ್ಣನ
ಮಹಮನೆಯಲ್ಲಿ ನಡೆಯುತ್ತಿತ್ತು. ಒಂದು ದಿನ, ಅಲ್ಲಮರು ಸಿದ್ಧರಾಮ
ನವರೊಂದಿಗೆ ಕಲ್ಯಾಣ ನಗರ ಪ್ರವೇಶ ಮಾಡಿದರು.

"ಕಳಕಳಪ ಕಲ್ಯಾಣ ಪಟ್ಟಣ
ದೊಳಗೆ ನೋಡುತ ಬಸವರಾಜರ
ನಿಳಯಕಲ್ಲನು ಸಿದ್ಧರಾಮರು ಬಂದರೊಲವಿನಲಿ"

ಇವರಿಬ್ಬರೂ ಪರಶಿವನ ಸಗುಣನಿರ್ಗುಣರೂಪಿನಂತಿದ್ದರು ! ಅವರನ್ನು ಕಂಡು, ಮಹಮನೆಯ ಬಾಗಿಲಲ್ಲಿ ನಿಂತಿದ್ದ ಪ್ರತೀಹಾರಿ ಹಡಪದ ಅಪ್ಪಣ್ಣ ಒಳಗೆ ಹೋಗಿ, ಲಿಂಗಾರ್ಚನೆಯ ಮಾಡುತ್ತಿದ್ದ ಬಸವಣ್ಣನವರಿಗೆ—

೩೭. "ದೇವದೇವ, ಮಹಾಪ್ರಸಾದ. ಕಂಗಳಲ್ಲಿ ಕರುಳಿಲ್ಲ; ಕಾಯದಲ್ಲಿ ಹೊರೆಯಿಲ್ಲ; ನುಡಿಯಲ್ಲಿ ಕಡೆಯಿಲ್ಲ; ನಡೆಯಲ್ಲಿ ಗತಿಯಿಲ್ಲ. ಇದೆಂತಹ ಸುಳುಹೆಂದರಿಯೆ. ಇದೆಂತಹ ನಿಲುವೆಂದು ತಿಳಿಯಬಾರದು. ಮರುಳಿಲ್ಲದ ಮರುಳು, ಅರಿವಿಲ್ಲದ ಅರಿವು, ಬಸವಪ್ರಿಯ ಕೂಡಲ ಚನ್ನಸಂಗಯ್ಯನ ಬರವು, ಕೌತುಕವಾಯಿತು ಚಿತ್ತೈಸಯ್ಯ ಸಂಗನ ಬಸವಣ್ಣಾ"

ಎಂದು ಬಿನ್ನವಿಸಿದನು. ಆ ವೇಳೆಯಲ್ಲಿ ಬಸವಣ್ಣನವರು ಇಷ್ಟಲಿಂಗಾರ್ಚನೆಯನ್ನು ಬಿಟ್ಟು ಏಳಲೊಲ್ಲದೆ, 'ಎನ್ನ ಕಾಯವೇ ಭಕ್ತ ಪ್ರಾಣವೇ ಜಂಗಮ'ವಾಗಿರುವುದರಿಂದ ಅಲ್ಲಿ ಇಲ್ಲಿ ಎಂಬ ಭೇದವಿಲ್ಲ "ಕೂಡಲ ಸಂಗನ ಶರಣರು ಬಂದರೆ ಉಪಚಾರಕ್ಕೆ ಇಂಬಿಲ್ಲ. ಕರುಣದಿಂ ಬರ ಹೇಳಾ, ಅಪ್ಪಣ್ಣಾ" ಎಂದು ಬಸವಣ್ಣನವರು ಅಪ್ಪಣ್ಣನಿಗೆ ನಿರೂಪಿಸಿದರು. ಅಪ್ಪಣ್ಣ ಆತುರದಿಂದ ಬಂದು ಅಲ್ಲಮಪ್ರಭು-ಸಿದ್ಧರಾಮರಿಗೆ ಶರಣಾರ್ಥಿ ಎಂದು ಹೇಳಿ, "ದೇವ ಕರುಣಾಕರನೆ, ಬಿಜಯಂಗೈಯ್ಯುವುದೊಳಗಡೆಗೆ"–ಎಂದು ಬಿನ್ನಹ ಮಾಡಿದನು. "ಎಮಗೊಳಗಾವತತ್ತ್ವಪರವು ನಮಗೇಕರಸು ಮನೆಗಳಲಿ" ಎಂದು ಪ್ರಭುದೇವರು ವಿಡಂಬನ ಮಾಡಿದರು. ಅಪ್ಪಣ್ಣ ಪುನಃ ಒಳಗೆ ಹೋಗಿ, ಪ್ರಭುದೇವರು ಹೇಳಿದ ಮಾತನ್ನು ಬಸವಣ್ಣನವರಿಗೆ ತಿಳಿಸಿದನು. ಆಗ, ಬಸವಣ್ಣನವರು—

೩೮. "ಭಕ್ತನ ಕಾಯವ ಜಂಗಮ ಧರಿಸಿಪ್ಪ ನೋಡಾ ! ಜಂಗಮದ ಪ್ರಾಣವ ಭಕ್ತ ಧರಿಸಿಪ್ಪ ನೋಡಾ ! ಭಕ್ತನಲ್ಲಿಯೂ ಭಕ್ತ ಜಂಗಮವೆರಡು ಸನ್ನಿಹಿತ; ಜಂಗಮದಲ್ಲಿಯೂ ಜಂಗಮ ಭಕ್ತನೆಂಬೆರಡು ಸನ್ನಿಹಿತ. ಜಂಗಮಕ್ಕಾದರೂ ಭಕ್ತಿಯೇ ಬೇಕು. ಭಕ್ತಂಗೆ ಭಕ್ತಿಸ್ಥಲ ಬೇಕು. ಭಕ್ತನ

ಅರ್ಥ ಪ್ರಾಣಾಭಿಮಾನಕ್ಕೆ ತಾನೆ ಕರ್ತನೆಂದು ಬಂದ ಜಂಗಮ ಆ ಭಕ್ತನ ಮನೆಗೆ ತಾನೆ ಕರ್ತನಾಗಿ ಹೊಕ್ಕು ತನುಮನಧನಂಗಳನೆಲ್ಲವನೊ ಕೊಂಡು, ಆ ಭಕ್ತನ ಪಾವನವ ಮಾಡಬಲ್ಲರೆ ಆತ ಜಂಗಮನೆ ಆ ಜಂಗಮದ ಗಳಗರ್ಜನೆಗೆ ಸೈರಿಸಿ, ಮುಡುಹಿಂಗೆ ಮುನ್ನೂರು ಪಟ್ಟ ಕಟ್ಟಿದಡೆ ಆತ ಭಕ್ತನೆಂಬೆ. ತನ್ನ ಮಠಕ್ಕೆ ತಾಬಹರೆ ಮುನಿಸು ಕೂಡಲ ಸಂಗನ ಶರಣರ ಮನೆಯ ಬಾಗಿಲುಗಾಹಿ ಸಾನಾಗಿ ಕರ್ತರು ಗೃಹಕ್ಕೆ ಬಂದರೆ ಬೇಕು ಬೇಡೆನ್ನೆ"—ಎಂದು ಅಪ್ಪಣ್ಣನ ಮು ಪುನಃ ಪ್ರಭುದೇವರಿಗೆ ಹೇಳಿಕಳುಹಿಸಿದರು. ಬಸವಣ್ಣನವರಿಗೆ ಇನ್ನೂ ಅಹ ಕಾರ ಅಳಿದಿಲ್ಲ. ಹೃದಯ ಪರಿಪಕ್ವವಾಗಿಲ್ಲ ಎಂದು ಅಲ್ಲಮರು ಭಾವಿಸಿ—

೩೯. "ಭಕ್ತಜಂಗಮದ ಸಕೀಲಸಂಬಂಧವನಾರುಬಲ್ಲರು, ಹೇಳಾ? ಅರ್ಥ ನೊಪ್ಪಿಸಿದಾತ ಭಕ್ತನಲ್ಲ. ಪ್ರಾಣವನ್ನೊಪ್ಪಿಸಿದಾತ ಭಕ್ತನಲ್ಲ. ಮಾನವನೊಪ್ಪಿಸಿದಾತ ಭಕ್ತನಲ್ಲ. ಅದೇನು ಕಾರಣವೆಂದರೆ, ಸತ್ಯ ಚಾರಕ್ಕೆ ಸಲ್ಲನಾಗಿ. ಆ ಭಕ್ತನ ಮನೆಯ ಹೊಕ್ಕು ಪಾದಾರ್ಚನೆ ಮಾಡಿಸಿಕೊಂಡು, ಒಡಲಕಕ್ಕುಲಿತೆಗೆ ಅಶನವನುಂಡು, ವ್ಯಸನದ ಕಕ್ಕು ತೆಗೆ ಹಣವ ಬೇಡಿ, ಕೊಟ್ಟಡೆ ಕೊಂಡಾಡಿ ಕೊಡದಿರ್ದರೆ ದೂರಿಕೊಂ ಹೋಹಾತ ಜಂಗಮವಲ್ಲ. ಆದಿಯನಾದಿಯಿಂದತ್ತತ್ತ ಮುನ್ನ ಮಹಾ ಘನವ ಭೇದಿಸಿ ಕಂಡರಿದು, ಕಾಯದಜೀವದ ಹೊಲಿಗೆಯ ಬಿ ಬೀಸಾಡಿ ತನ್ನನೆ ಅರ್ಪಿಸಿ ಇರಬಲ್ಲಾತ ಭಕ್ತ. ಸುಳುಹಿನ ಸೂ ಮೈದೋರದೆ, ಒಡಲಕಳವಳದ ರುಚಿಗೆ ಹಾರೈಸದೆ, ಅರಿವೆ ಅಂಗ ಆಪ್ಯಾಯನವೆ ಭಕ್ತಿಯಾಗಿ, ಕಿಂಕುರ್ವಾಣವೆಂಬ ಶಿವಮಂತ್ರಕ್ಕೆ ನ ನಮೋ ಎನಬಲ್ಲರೆ ಆತ ಜಂಗಮ. ಆ ಜಂಗಮದ ಆ ಭಕ್ತನ ಸಮ್ಮೇ ಸಮ್ಮೇಳ. ಮಿಕ್ಕಿನ ಅರೆಭಕ್ತರೊಡತಣ ಸಂಗ ನಮ್ಮ ಗುಹೇ ಲಿಂಗಕ್ಕೆ ಸೊಗಸದು"—ಎಂದು ಹೇಳಿ, ತಾವು ಬಸವಣ್ಣನವರ ಮ ಮನೆಗೆ ಬರುವುದಿಲ್ಲವೆಂದು ತಿಳಿಸಿ, ಅಲ್ಲಿಂದ ಹಿಂದಿರುಗುವ ಮನೋಭಾವ ಸೂಚಿಸಿದರು. ಅಷ್ಟರಲ್ಲಿಯೇ, ಚನ್ನಬಸವಣ್ಣನವರು "ಕೂಡಲ ಚನ್ನಸಂ ಶರಣರು ಪ್ರಭುದೇವರು ಸಿದ್ಧರಾಮಯ್ಯದೇವರು ಬಂದು ಬಾಗಿಲಲ್ಲಿರಲು

ರಿಯದಿದ್ದರು ಕರುಳರಿಯಬೇಡವೆ ? ಸಂಗನಬಸವಣ್ಣಾ" ಎಂದು ಬಸವಣ್ಣನವ ರನ್ನು ಎಚ್ಚರಿಸಿದರು. ಕೂಡಲೇ, ಬಸವಣ್ಣನವರು ಧಾವಿಸಿ ಬಂದು—

೪೦. "ಇನ್ನೇವೆ ನಿನ್ನೇವೆ ? ಕೆಮ್ಮನೆ ಕೆಟ್ಟೆನು ! ಇನ್ನೇವೆ ನಿನ್ನೇವೆ ! ಕೆಮ್ಮನೆ ಕೆಟ್ಟೆನು !! ನಿಮ್ಮ ಶರಣರು ಬಂದು ಬಾಗಿಲೊಳಗಿರಲು, ದಿಮ್ಮನೆ ಇದಿ ರೆದ್ದು ವಂದಿಸಲರಿಯದೆ ಕೆಟ್ಟ ಕೇಡನೇನೆಂದುಪಮಿಸುವೆನು ? ಕೂಡಲ ಸಂಗಮದೇವಾ, ನಾನುಭಯಭ್ರಷ್ಟನೆಂಬುದು ಎನಗಿಂದರಿಯಬಂದಿತ್ತು"

—ಎಂದು ಎಲ್ಲ ಶರಣರೊಂದಿಗೆ ಅಲ್ಲಮರನ್ನು ಕಂಡು

೪೧. "ತಂದೆ ನೀವು ತಾಯಿ ನೀವು. ಬಂಧು ನೀವು ಬಳಗ ನೀವು. ನೀವಲ್ಲದೆ ಮತ್ತಾರೂ ಇಲ್ಲ. ಕೂಡಲ ಸಂಗಮದೇವಾ, ಹಾಲಲದ್ದು ನೀರಲದ್ದು"

ಎಂದು ವಿನಯದಿಂದ ಬಿನ್ನಹ ಮಾಡಿಕೊಂಡರು. ಪ್ರಭುದೇವರು ಪ್ರಸನ್ನಚಿತ್ತರಾ ದರು. ಅವರು ಸಿದ್ಧರಾಮದೇವರೊಂದಿಗೆ ಬಸವಣ್ಣನವರ ಮಹಮನೆಯನ್ನು ಪ್ರವೇಶಿಸಿದರು ಶರಣಗಣ ಆನಂದದಿಂದ ನಲಿದಾಡಿದರು. ಅಲ್ಲಮರು, ಸಿದ್ಧ ರಾಮರು, ಅಕ್ಕಮಹಾದೇವಿಯರು, ಚನ್ನಬಸವಣ್ಣನವರು, ಬಸವಣ್ಣನವರು ಆ ಶರಣಸಂಗೋಷ್ಠಿಯ ಪಂಚಪ್ರಾಣಗಳಂತಿದ್ದರು ! ಪ್ರಭು ಅಲ್ಲಮರು ಕೆಲವು ಕಾಲ ಅನುಭವ ಮಂಟಪದಲ್ಲಿ ಶರಣಗೋಷ್ಠಿಯ ಅಧ್ಯಕ್ಷರಾಗಿದ್ದರು. ಅವರು ಶರಣರ ತತ್ತ್ವ ವಿಚಾರಗಳನ್ನು ಕೇಳಿ, ಅವರ ಸಂಶಯಗಳನ್ನು ಪರಿಹರಿಸಿ, ಅವರಿಗೆ ಜೀವೈಕ್ಯ ತತ್ತ್ವವನ್ನು ಎಂದರೆ ಶೂನ್ಯ ಸ್ಥಿತಿಯನ್ನು ಬೋಧಿಸಿದರು. ಆತ್ಮಜ್ಞಾನಿ ಅಲ್ಲಮರನ್ನು ಬಸವಣ್ಣನವರು ನಿರಂಜನ ಜಂಗಮ ಎಂದು ಆರಾಧಿ ಸಿದರು. ಅಲ್ಲಮರೂ ಪರಮ ಭಕ್ತ ಬಸವಣ್ಣನವರ ಅನನ್ಯ ಭಕ್ತಿಯನ್ನು ಕಂಡು ಮೆಚ್ಚಿದರು. ಅಕ್ಕಮಹಾದೇವಿಯನ್ನು ಅನುಗ್ರಹಿಸಿದರು.

ಅಲ್ಲಮರು ಕಲ್ಯಾಣದಲ್ಲಿದ್ದಷ್ಟು ಕಾಲದಲ್ಲಿ ಬಸವಣ್ಣ, ಚನ್ನಬಸವಣ್ಣ, ಸಿದ್ಧರಾಮಣ್ಣ, ಮಡಿವಳ ಮಾಚಿದೇವರು ಮೊದಲಾದವರಿಗೆ ನಿಜದ ನೆಲೆಯ ರಹಸ್ಯವನ್ನು ತಿಳಿಸಿ, ಶರಣಸಂದೋಹವನ್ನು ಹರಸಿ, ಮತ್ತೆ ಹನ್ನೆರಡು ವರ್ಷ ಗಳಿಗೆ ಕಲ್ಯಾಣಕ್ಕೆ ಬರುವುದಾಗಿ ಹೇಳಿ, ಅಲ್ಲಿಂದ ದೇಶಪರ್ಯಟನ ಮಾಡಲು ಹೊರಟರು. ಅವರು ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೂ, ಪಶ್ಚಿಮ

ಕರಾವಳಿಯಿಂದ ಪೂರ್ವ ಕರಾವಳಿಯವರೆಗೂ ಸಂಚರಿಸಿದರು. ಅವರು ಶ್ರೀ ವತ್ಕೀತಾರದಲ್ಲಿ ಶೂನ್ಯಚಿಂತನೆಯಲ್ಲಿ ಸಮಾಧಿಮಗ್ನರಾಗಿ ಅನೇಕ ಕಾಲವಿದ್ದರು. ಇತ್ತ ಬಸವಣ್ಣನವರು ಶೂನ್ಯಸಿಂಹಾಸನವನ್ನು ರಚಿಸಿಕೊಂಡು ಪ್ರಭುದೇವರ ಆಗಮನವನ್ನು ನಿರೀಕ್ಷಿಸುತ್ತಿದ್ದರು. ಸುಮಾರು ಹನ್ನೆರಡು ವರ್ಷ ಕಳೆಯಿತು. ಶರಣರು ಅಲ್ಲಮರ ಆಗಮನವನ್ನು ನಿರೀಕ್ಷಿಸುತ್ತಿದ್ದರು.



## ತರಂಗ ೬.

### ಶೂನ್ಯಸಿಂಹಾಸನ ನಿರ್ಮಾಣ; ಶೂನ್ಯಸಿಂಹಾಸನಾರೋಹಣ

"ಯಂಯಂ ಲೋಕಂ ಮನಸಾ ಸಂವಿಭಾತಿ ವಿಶುದ್ಧಸತ್ವಃ ಕಾಮಯತೇ ಯಾಂಶ್ಚಕಾಮಾನ್ | ತಂತಂ ಲೋಕಂ ಜಯತೇತಾಂಶ್ಚ ಕಾಮಾಂಸ್ತ ಸ್ಮಾದಾತ್ಮಜ್ಞಂಹ್ಯರ್ಚಯೇದ್ಭೂತಿಕಾಮಃ"

—ಮುಂಡಕೋಪನಿಷತ್ತು

ಪರಿಶುದ್ಧಾತ್ಮರು ತಮ್ಮ ಮನಸ್ಸಿನಲ್ಲಿ ಯಾವ ಯಾವ ಲೋಕಗಳನ್ನು ನೋಡಲು ಬಯಸುತ್ತಾರೆಯೋ ಯಾವ ಯಾವ ಕಾಮನೆಗಳನ್ನು ಇಚ್ಛಿಸುತ್ತಾರೆಯೋ ಅಂಥ ಲೋಕಗಳನ್ನೂ ಕಾಮನೆಗಳನ್ನೂ ಪಡೆಯುತ್ತಾರೆ. ಆದುದರಿಂದ ಕಲ್ಯಾಣವನ್ನು ಇಚ್ಛಿಸುವವರು ಆತ್ಮಜ್ಞನನ್ನು ಅರ್ಚಿಸಬೇಕು ಎಂಬುದು ಋಷಿವಾಣಿ. ಬಸವಣ್ಣನವರು ಪರಿಶುದ್ಧಾತ್ಮರಾಗಿದ್ದರು. ಅವರು ಎಲ್ಲ ಲೋಕಗಳನ್ನೂ ನೋಡಬಲ್ಲ ದಿವ್ಯದೃಷ್ಟಿಯನ್ನು ಹೊಂದಿದ್ದರು. ಅವರು ಸಂಕಲ್ಪಮಾತ್ರದಿಂದಲೇ ತಮ್ಮ ಕಾಮನೆಯನ್ನು ಸಾಧಿಸಬಲ್ಲ ಮಹಾಂತರಾಗಿದ್ದರು. ಅವರ ಶೂನ್ಯ ಸಿಂಹಾಸನ ಅವರ ಹೃದಯ ಶಿವಾನುಭವ ಮಂಟಪದಲ್ಲಿ ನಿರ್ಮಾಣವಾಯಿತು ! ಅದೊಂದು ತತ್ತ್ವಚಿತ್ರ ! ಶೂನ್ಯ ತತ್ತ್ವದಂತೆಯೇ ಶೂನ್ಯ ಸಿಂಹಾಸನವೂ ಐಕ್ಯಸ್ಥಲದ ಔನ್ನತ್ಯದ ಸಂಕೇತ ! ಅದೊಂದು ಸಿದ್ಧಸ್ಥಳ

ನಿರಂಜನ ಸ್ಥಿತಿಯು ನೆಲೆ ! ಅದು ಭೌತಸ್ವರೂಪವಲ್ಲ ! ಅದು ಕೇವಲ ಭಾವನಾ ಸಿಂಹಾಸನ ! ಅದು ಪರಮ ನಿರಂಜನ ಸ್ಥಿತಿಯ ಮಣಿಪೀಠ ! ಜೈನ ಧರ್ಮದಲ್ಲಿ ಇದನ್ನು ಸಿದ್ಧಶಿಲೆ ಎನ್ನುತ್ತಾರೆ ! ಅಲ್ಲಮರಂಥ ಮಹಾ ನಿರಂಜನ ಸಿದ್ಧರು ಮಂಡಿಸಬಲ್ಲ ಜ್ಞಾನಜ್ಯೋತಿರಾಸನ ! ಅದು ಬಸವಣ್ಣನವರ ಮನಃಪರಿಪಾಕತೆಯ ಭವ್ಯ ನಿರ್ಮಾಣ ! ದಿವ್ಯ ಕಲ್ಪನೆ ! ಇದು ಎಲ್ಲ ಶರಣರ ಹೃದಯಗಳಲ್ಲಿಯೂ ಮೂಡುವ ಶೂನ್ಯಸ್ಥಿತಿಯ ಕಲ್ಪನಾವಿಲಾಸ ಚಿತ್ರ ! ಬಸವಣ್ಣನವರು ಆ ಶೂನ್ಯ ಸಿಂಹಾಸನವನ್ನು ಸ್ಥಾಪಿಸಲು ಯಾವುದೊಂದು ಶೂನ್ಯ ಮಠವನ್ನೂ ಕಟ್ಟಿಸಲಿಲ್ಲ ! ಶಿವಾನುಭವ ಮಂಟಪವನ್ನೇನೋ ಬಸವಣ್ಣನವರು ರಚಿಸಿದ್ದುಂಟು ! ಆದರೆ, ಅವರು ಈ ಶೂನ್ಯಸಿಂಹಾಸನವನ್ನು ಸ್ಥಾಪಿಸಲು ಶರಣಹೃದಯ ಶಿವಾನುಭವ ಮಂಟಪವನ್ನು ತತ್ತ್ವತಃ ರಚಿಸಿದರೆಂಬುದನ್ನು ಮರೆಯುವಂತಿಲ್ಲ. ಈ ಶೂನ್ಯ ಸಿಂಹಾಸನವನ್ನು ಕಣ್ಣು ಅರಿಯಲಾರದು; ಮಾತು ಬಣ್ಣಿಸಲಾರದು; ಕೈಸೋಂಕಲಾರದು; ಮೂಗು ಆಘ್ರಾಣಿಸಲಾರದು; ಕಿವಿ ಕೇಳಲಾರದು ! ಶಿಲ್ಪಿ ಮುಟ್ಟಿದ ಸಿಂಹಾಸನ ! ಅದು ನೆಲದಮೇಲಿಟ್ಟಿರುವುದಲ್ಲ ! ಅದು ವ್ಯೋಮಾಧಾರವಾದುದು ! ಸಾಧಕ ಶರಣಸ್ಥಿತಿಯಲ್ಲಿ ಅದನ್ನು ಭಾವಿಸಬಲ್ಲನು! ಅಂಥ ಶೂನ್ಯ ಸಿಂಹಾಸನದಲ್ಲಿ ಮಂಡಿಸಬಲ್ಲ ಮಹಾ ನಿರಂಜನಮೂರ್ತಿಯೆಂದರೆ ಕೇವಲಜ್ಞಾನಿ ಅಲ್ಲಮರೊಬ್ಬರೇ ! ಅವರ ತರುವಾಯ ಶೂನ್ಯಸಿಂಹಾಸನಾರೋಹಣ ಸಂಪ್ರದಾಯ ಬದ್ಧವಾಯಿತಷ್ಟೆ ! ವಿಚಾರ ಮರೆಯಾಯಿತು; ಆಚಾರ ತಲೆದೋರಿತು ! ತತ್ತ್ವ ಲಯವಾಯಿತು; ತತ್ತ್ವಛಾಯೆ ಸುಳಿಯಿತು ! ಎಂಟುನೂರು ವರ್ಷಗಳಲ್ಲಿ ಅದೆಷ್ಟೋ ಶೂನ್ಯಸಿಂಹಾಸನ ಮಠಗಳು ಹುಟ್ಟಿದುವು; ಅದೆಷ್ಟೋ ಶೂನ್ಯ ಸಿಂಹಾಸನಗಳು ನಿರ್ಮಾಣವಾದುವು ! ಅಲ್ಲಮರಂಥ ನಿರಂಜನ ಸಿದ್ಧರು ಹುಟ್ಟಿಬರಲಿಲ್ಲ ! ಇದು ಕೇವಲ ವೀರಶೈವದ ಪರಿಸ್ಥಿತಿಯೇ ಅಲ್ಲ; ಯಾವ ಮಠದಲ್ಲಿಯೂ ಮೂಲಸತ್ತ್ವ ಬಹಳ ಕಾಲ ಉಳಿಯುವುದಿಲ್ಲ ! ಅಂಥ ಮೂಲ ಸತ್ತ್ವ ಮತ್ತೆ ಮತ್ತೆ ಅವತಾರವಾಗಲು ಸಮಾಜದ ತಪಸ್ಸು ಪ್ರಖರವಾಗಬೇಕು ! ಸಕಾಲದಲ್ಲಿ ಆ ತಪಸ್ಸಿನ ಫಲ ಸಿದ್ಧಿಸೀತು ! ಪರಮಾತ್ಮ ಕಪಟನಾಟಕ ಸೂತ್ರಧಾರಿಯಲ್ಲವೆ ! ಈಗ ಶೂನ್ಯ ಸಿಂಹಾಸನ ಕಪಟ ನಾಟಕವನ್ನು ಆಡಿಸುತ್ತಿದ್ದಾನೆ ! ನೋಡುತ್ತಿದ್ದಾನೆ! ವೇಷಧಾರಿ ನಿರಂಜನರು ಮೆರೆಯುತ್ತಾರೆ ! ಸ್ವಾರ್ಥ ಭಕ್ತ–ಕಪಟ ಸೇವಕ ಪರಾಕು ಹೇಳುತ್ತಾನೆ !

ಬಸವಣ್ಣನವರ ಪರಮಾಪ್ತ ಸಚಿವನಂತಿದ್ದ ಹಡಪದ ಅಪ್ಪಣ್ಣ
ಆ ಶೂನ್ಯ ಸಿಂಹಾಸನದ ರಚನೆಯನ್ನು ತಾತ್ತ್ವಿಕ ದೃಷ್ಟಿಯಿಂದ ಪರಿಭಾಷಿ
ಮನೋಜ್ಞವಾಗಿ ತಿಳಿಸಿರುತ್ತಾರೆ.

೬೩. ಅಷ್ಟದಳ ಕಮಲದ ಹೊಗಲ್ಲ ಹಿಡಿದು ಶೂನ್ಯ ಸಿಂಹಾಸನಕ್ಕೆ ಧವಳ
ಲಯನೆತ್ತಿತ್ತು. ಚಂದ್ರಕಾಂತದ ಶಿಲೆಯಲ್ಲಿ ಪಶ್ಚಿಮದ್ವಾರವಂ ತೆಗೆ
ನೋಡುವರೆ ವಿಪರೀತ. ಏಕೋಭಾವವೆಂಬುದೊಂದು ಕಂಭ. ಅದಕ್ಕೆ
ಅನೇಕ ಚಿತ್ರಂಗಳಡಗಿದ ಪ್ರಭೆ. ಆ ಪ್ರಭೆಯೊಳಗೆ ಬ್ರಹ್ಮರಂಧ್ರ
ಮಸ್ತಕದ ಮೇಲೆ ಪಂಚಮೌಕ್ತಿಕದ ಮಾಲೆಯ ನಿಳಿವಿಟ್ಟ ಮೂ
ಮೂಲೆಗಳ ನಡುವೆ ಕಟ್ಟಿದ ನವರತ್ನದ ಗೊಂಡೆಯಂಗಳು. ಕಾಳಿಕೆಯ
ಕಪ್ಪಡವದಕೆ ಮೇಲು ಹೊದಕೆ. ಉಲುಹಿನ ಅರಳೆಲೆಯ ಬಳಸುದೋ
ರಣವ ಕಟ್ಟಿ ದಶವಾಯುವನೆಲ್ಲವನೊಂದ ಮಾಡಿ, ಲಿಂಗಸುಖವಾಯು
ಸಂತೈಸಿ ಆಲವಟ್ಟವಂ ಮಾಡಿ, ಲಂಬಿಸಿದ ಮದಾನಿಲನಂ ಮಲಗಂಮಾ
ಹರುಷವನೆ ವಸಂತನಚೌಕದ ಆಸನವಟ್ಟಿಗೆಯ ಮಾಡಿ, ನವನಾಳದೊ
ಮೊರೆವ ಶಬ್ದವಂ ಶುಕಪಿಕ ಭ್ರಮರಂಗಳ ಆಮೋದವಂ ಮಾ
ಪರಮ ಶಾಂತಿಯೆಂಬ ಶೈತ್ಯಾಕಾರದ ಸುಸೋಂಕಿನ ಚೂತಪಲ್ಲವಂಗ
ಹಾಸಿ, ಉತ್ತರ ದ್ವಾರವೆಂಬ ನುಸುಳುಗಂಡಿಯಂ ರಚಿಸಿ, ಪೂರ್ವಯೋ
ವೆಂಬ ಸೋಪಾನವಂ ಮಾಡಿ, ಪಶ್ಚಿಮದ್ವಾರವೆಂಬ ನಿಜದ್ವಾರವಟ್ಟ
ಮಾಡಿ, ಸಪ್ತವ್ಯಸನ ಪಂಚೇಂದ್ರಿಯಗಳೆಂಬ ಪೌಳಿಯನಿಕ್ಕಿ ಆಸೆಯಾ
ಷಮಂ ಕೆಡಿಸಿ, ಊರ್ಧ್ವಚಕ್ರವೆಂಬ ಮೇಲುಪ್ಪರಿಗೆಯಂಮಾಡಿ, ಚಂದ್ರ
ಸೂರ್ಯರೆಂಬ ದೀಪವಂ ಬೆಳಗಿ, ಸೋಽಹಂ ಎಂಬ ಶಿಖರಿಯ ಮೇ
ಮಹಾ ಜ್ಞಾನಪ್ರಕಾಶವೆಂಬ ಹೊನ್ನ ಕಳಶವಂ ಮಾಡಿ, ನಿಶ್ಶೂನ್ಯ
ನಿರಾಳವೆಂಬ ಶೂನ್ಯಸಿಂಹಾಸನವಂ ಮಾಡಿದ ಬಸವಪ್ರಿಯ ಕೂಡ
ಚನ್ನಸಂಗಯ್ಯನಲ್ಲಿ ಎನ್ನ ಪರಮ ಗುರು ಬಸವಣ್ಣನು"

ಇದು ಶೂನ್ಯಸಿಂಹಾಸನದ ಅನುಭಾವಚಿತ್ರ! ಅಮಲಬಸವಚಾರಿತ್ರ ಪುರಾಣ

"ಭಾವಬ್ರಹ್ಮಸ್ವರೂಪಿತ ತತ್ತ್ವನಿಜಮಹಾ
ಕೇವಲ ಜ್ಞಾನಜ್ಯೋತಿರ್ಲಿಂಗ ಲಿಂಗದೇ

ಹಾವಯುವ ನಿರ್ದೇಹ ದೇಹಿಕದಿ ಬಂದೆನ್ನ ದಾಸೋಽಹ ಕ್ರೀಕರ್ಮದ,
ತಾಪವಗ್ರಹಿಸೆನಗೆ ಸೋಽಹಾಮೃತವ ನೂಡಿ
ದಾವಿಭು ಪ್ರಸನ್ನೋತ್ತರದಿ ಮೂರ್ತಿಗೊಳಲಿರುವ
ಭಾವಕಿಕ್ಕಿದ ಪ್ರತಿಷ್ಠಿತವೆಸಲು ಶೂನ್ಯಸಿಂಹಾಸನಮಸಲ್ಲಿನೆಗಳ್ದ"

—ಎಂದು ಸಿಂಗಿರಾಜ ತನ್ನ ಕವಿವಾಣಿಯಲ್ಲಿ ಶೂನ್ಯಸಿಂಹಾಸನದ ರಚನೆಯನ್ನು ನಿರೂಪಿಸಿರುತ್ತಾರೆ. ಅದು ಭಾವಬ್ರಹ್ಮಸ್ವರೂಪವಾದುದು. ಕೇವಲ ಜ್ಞಾನಸ್ಥಿತಿಯಲ್ಲಿ ಜ್ಯೋತಿರ್ಲಿಂಗವೇ ನಿರ್ದೇಹದಿಂದ ಆ ಸಿಂಹಾಸನದಲ್ಲಿ ಬೆಳಗುತ್ತದೆ. ದಾಸೋಽಹಂಭಾವವಳಿದು ಸೋಽಹಂಭಾವದಿಂದ ಶೂನ್ಯಸ್ಥಿತಿಯೇ ಮೂರ್ತಿಗೊಂಡು ಆ ಶೂನ್ಯ ಸಿಂಹಾಸನದ ಮೇಲೆ ರಾರಾಜಿಸುತ್ತದೆ! ಚಾಮರಸನ ಪ್ರಭುಲಿಂಗಲೀಲೆಯೂ, ವಿರೂಪಾಕ್ಷ ಪಂಡಿತನ ಚನ್ನಬಸವಪುರಾಣವೂ ಶೂನ್ಯಸಿಂಹಾಸನವನ್ನು ಚಿತ್ರಿಸಿವೆ. ತೀರ್ಥಂಕರರ 'ಸಮವಸರಣ'ದಲ್ಲಿ ಲಕ್ಷ್ಮೀ ಮಂಟಪದಲ್ಲಿ ತ್ರಿಮೇಖಲಾ ಪೀಠದ ಮೇಲೆ ಗಂಧಕುಟಿಯಲ್ಲಿದ್ದ ಸಿಂಹಪೀಠವನ್ನು 'ಶೂನ್ಯ ಸಿಂಹಾಸನ' ನೆನಪಿಗೆ ತರುತ್ತದೆಂಬುದನ್ನು ಇಲ್ಲಿ ಸೂಚಿಸಬಹುದು.

ಸುಮಾರು ಹನ್ನೆರಡು ವರ್ಷ ಕಳೆಯಿತು. ಬಸವಣ್ಣನವರು ತಮ್ಮ ಚಿತ್ತ ನಿರಂಜನಮೂರ್ತಿಯ ಆಗಮನವನ್ನು ದಿನದಿನವೂ ನಿರೀಕ್ಷಿಸುತ್ತಿದ್ದರು. ಪೂರ್ವ ಪುಣ್ಯಬಲದಿಂದ ಆ ನಿರಂಜನ ದರ್ಶನ ಲಭಿಸಬೇಕು! ಕಾಲಸನ್ನಿಹಿತವಾಯಿತು! ಅಲ್ಲಮರು ತಮ್ಮ ಲೀಲೆಯ ಅಸ್ತಮಯ ಕಾಲವನ್ನು ಅನುಲಕ್ಷಿಸಿ, ಕಲ್ಯಾಣದತ್ತ ಬಂದರು.

೪೪. "ನಡೆದಡೆ ನಿರ್ಗಮನಿ, ನುಳಿದಡೆ ಗತಿವಿರಹಿತನನೇನೆಂಬೆನೆಂತೆಂಬೆ?
ಅಘಟಿತಘಟಿತನ ನೇನೆಂಬೆ ನೆಂತೆಂಬೆ? ಅಖಂಡಿತ ಮಹಿಮನ ನೇನೆಂಬೆ?
ಆದಿಯಿಂದತ್ತತ್ತ ಗುಹೇಶ್ವರನ ಶರಣ ಅಲ್ಲಯ್ಯನ ನುಳುಹು ಜಗಕ್ಕೆ ಪಾವನ"

ಅಲ್ಲಮರು ಭೂಪ್ರದಕ್ಷಿಣೆ ಮಾಡಿದರು! ಅಲ್ಲ, ಭೂಮಿಯೇ ಅಲ್ಲಮರನ್ನು ತ್ರಿಪ್ರದಕ್ಷಿಣೆ ಮಾಡಿತು! ಅವರ ಸ್ಪರ್ಶದಿಂದ ಲೋಕ ಪಾವನವಾಯಿತು!

೪೪. "ಇಹಲೋಕ ಪರಲೋಕ ತಾನಿದ್ದಲ್ಲಿ. ಗಗನ ಮೇರುಮಂದಿರ ತಾನಿದ್ದಲ್ಲಿ. ಸಕಲಭುವನ ಸತ್ಯಲೋಕ ತಾನಿದ್ದಲ್ಲಿ. ನಿತ್ಯನಿರಂಜನ ತತ್ತ್ವ ತಾನಿದ್ದಲ್ಲಿ. ಉತ್ತರೋತ್ತರ ಪದ ತಾನಿದ್ದಲ್ಲಿ. ಚಂದ್ರಸೂರ್ಯ ತಾರಾಮಂಡಲ ತಾನಿದ್ದಲ್ಲಿ. ಅಂತರಮಹದಂತರ ತಾನಿದ್ದಲ್ಲಿ. ಸ್ವತಂತ್ರ ಗುಹೇಶ್ವರ ತಾನಿದ್ದಲ್ಲಿ"

ಎಂಬಂತೆ ಅಲ್ಲಮರು ಅನಂತಕೋಟಿ ಬ್ರಹ್ಮಾಂಡಗಳನ್ನೂ ತನ್ನ ಮಹಾತ್ಮ ಪ್ರಕಾಶದಲ್ಲಿ ಆಲಿಂಗಿಸಿ ಸ್ವಯಂಪ್ರಭಾಪೂರ್ಣರಾಗಿ ಬೆಳಗುತ್ತ ಕಲ್ಯಾಣಪಟ್ಟಣ ದಲ್ಲಿ ಬರುತಿದ್ದರು. ಶರಣರು ರಾಜಬೀದಿಗಳಲ್ಲಿ ಅಲ್ಲಮರನ್ನು ನೋಡಿದರು. ಅಲ್ಲಮರೇ ಬರುತ್ತಿದ್ದರೆಂಬುದನ್ನು ಅನೇಕರು ಬಸವಣ್ಣನವರಿಗೆ ತಿಳಿಸಿದರು. ಎಲ್ಲರೂ ಕುತೂಹಲಾನಂದದಿಂದ ಮಹಮನೆಯ ಹತ್ತಿರ ನಿಂತು ಅಲ್ಲಮರ ಆಗಮನವನ್ನೇ ಈಕ್ಷಿಸುತ್ತಿದ್ದರು. ಬಸವಣ್ಣನವರು ಅಲ್ಲಮರೇ ಬರುತ್ತಿದ್ದರೆಂಬು ದನ್ನು ನಂಬಲೂ ಆರರು! ಅಲ್ಲಮರೇ ಆದರೆ,

೪೫. "ಬಡವಾಗಿಲ ಪೌಳಿಯು ಭರವಸದಿಂ ಪೊಕ್ಕು, ಪಶ್ಚಿಮದ್ವಾರದ ಗೃಹಾಂ ರಮಂ ಪಶ್ಚಿಮದಿ ಪೊಕ್ಕು, ತ್ರಿವಿಧಗತಿಯು ಶೂನ್ಯ ಸಿಂಹಾಸನದ ಮೇಲೆ ತರಹರವಾದಡೆ ನಂಬುವುದೆನ್ನಮನವು. ಕೂಡಲಸಂಗಮದೇವರ ಸಾಕ್ಷಿ ಯಾಗಿ, ನೀನು ನಮ್ಮ ಕೋಪಿಸಿಸಿದರೆ ಕೋಪಿಸು ಚೆನ್ನಬಸವಣ್ಣಾ"

—ಎಂದು ಬಸವಣ್ಣನವರು ತಮ್ಮ ನಿರೀಕ್ಷೆಯ ಗುರಿಯನ್ನು ತಿಳಿಸಿದರು. ಅಲ್ಲಮರು ಕಲ್ಯಾಣದ ಬೀದಿಗಳಲ್ಲಿ ಬರುತ್ತ ಬಸವಣ್ಣನವರ ಮಹಮನೆಯ ಕಡೆಗೆ ಬಂದರು! ಅಲ್ಲಮರನ್ನು ಹೊರತು, ಯಾವ ನಿರಾಭಾರಿ ನಿರುಪಾಧಿಕ ನಾದರೂ ನಡೆದುಬಂದಾನೆಯೇ? ವಾಹನರೂಢನಾಗಿ ಇಲ್ಲವೆ, ಅಡ್ಡಪಾಲಕಿಯಲ್ಲಿ ಮಂಡಿಸಿ ಚಿತ್ತೈಸಿಯಾನು ಇಂದಿನ ನಿರಾಭಾರಿ! ಆ ಮೊದಲೇ ತನ್ನ ಪ್ರತಿನಿಧಿ ಶ್ರೀಮುಖವನ್ನು ಪ್ರಮುಖರಿಗೆ ಮುಟ್ಟಿಸಿ, ಮೆರವಣಿಗೆಯ ಸಿದ್ಧತೆ ಯಾಗಿರುತ್ತಿತ್ತೇನೋ! ಆ ವಿರಕ್ತನನ್ನು ಬೆಂಗಳೂರಿನ ಭಕ್ತಮಂಡಲಿಯವರು ಆಹ್ವಾನಿಸಿದಂತೆ ಪ್ರತಿನಿಧಿಯ ಪ್ರಚಾರ! ಶ್ರೀಮಠದ ಬೊಕ್ಕಸದಿಂದಲೇ ಬೆಚ್ಚ! ಎಲ್ಲರೂ ಹೀಗಲ್ಲ! ಎಲ್ಲಿಯೋ ಹಲವರು ಹೀಗೆ ಮಾಡಿಯಾರು!

ಅಲ್ಲಮರು ಹಿಂದೆ ಕಲ್ಯಾಣಕ್ಕೆ ಬಂದಿದ್ದಾಗ ಶರಣರು ಅವರನ್ನು ನೋಡಿ ದ್ದರು. ಅದೇ ಶರಣರು ಈಗ ಅವರನ್ನು ಗುರುತಿಸಲಾರರು! ಅಂದಿನ ಆ ಅಲ್ಲಮರ ಗಾಂಭೀರ್ಯವೆಲ್ಲಿ! ಆ ತೇಜಃಪುಂಜ ಮುಖಮಂಡಲವೆಲ್ಲಿ! ಆ ಜಟಾ ಮುಕುಟ ಸೌಂದರ್ಯವೆಲ್ಲಿ! ಆ ಸದೃಢ ಶರೀರ ಸಂಪತ್ತೆಲ್ಲಿ! ಮಹಮನೆಯ ಕಡೆಗೆ ಬರುತ್ತಿದ್ದ ಆ ಶರಣನನ್ನು ಅಲ್ಲಮರೆಂದು ಹೇಳಲಾರರು! ಊಹಿಸಲಾರ ದಷ್ಟು ತಾರತಮ್ಯ! ಈ ಶರಣನ ರೀತಿಯೇ ಬೇರೆ!

೪೬. "ಅಟ್ಟೆಹಾವುತಲೊಮ್ಮೆ, ಹೋಗಿ ನಿಲುವುತಲೊಮ್ಮೆ, ಬೀಗಿ ನಗುತ ಲೊಮ್ಮೆ. ಮರುಳಿನಂತೆ ದೆಸೆದೆಸೆಯ ನೋಡುತ್ತ ಅಂಗಡಿಯ ರಾಜ ಬೀದಿಯ ಶೃಂಗಾರುಗಳ ನಲಿನಲಿದು ನೋಡುತ್ತ, ಗುಡಿ ಇಕ್ಕಿದಂತಿರೆ ನಿಂದಿರೆ ಬೀಳುತ್ತ ನಾಟ್ಯನಾಡುವವರಿಗೆ ಇದಿರಾಗಿ ತಾ ಮರಳಿಯಾಡುತ್ತ, ಹಾಡುತ್ತ, ಜೈವುತ್ತ, ತೆರಳಿ ನುಡಿವುತ್ತ, ವಾದ್ಯಮೇಳಾಪಮಂ ಕಂಡು ಆಳಿಗೊಂಡು ನಗುತ್ತ, ಹಸ್ತವನಾಡಿಸಿಗತಿಯನುಚ್ಚರಿಸಿ ಕಯ್ಯೊಡನೆ ಮರುಳಾಟವನಾಡುತ್ತ, ಮೆಲ್ಲಮೆಲ್ಲನೆ ನೋಡಿ ನಿಂದು ನಗುತ್ತ, ಎಂದಿನ ಸುಳುಹಿನೊಳಗಲ್ಲದ ಸುಳುಹು, ಬಸವಣ್ಣಾ, ಸೊಡ್ಡಳನಾಗದೆ ಮಾಣನು"

ಎಂಬ ಮರುಳನಂತೆ ಬರುತ್ತಿದ್ದ ಆ ಶರಣರನ್ನು ಕಂಡು ಅವನೇ ಅಲ್ಲಮರೆಂದು ಸೊಡ್ಡಳಬಾಚರಸರು ಅರೈದು ಬಸವಣ್ಣನವರಿಗೆ ತಿಳಿಸಿದರು. ಮಡಿವಾಳ ಮಾಚಯ್ಯನವರೂ, ಆ ಹುಚ್ಚನಂತಿದ್ದ ಶರಣನನ್ನು ನೋಡಿ ಬೆರಗಾದರು! ಅವರು ನೋಡುತ್ತಿದ್ದಂತೆಯೇ ಆ ಮರುಳಯ್ಯ—

೪೭. "ಬಾಲನಹನೊಮ್ಮೆ. ಲೋಲನಹನೊಮ್ಮೆ. ವೃದ್ಧನಹನೊಮ್ಮೆ. ಮತ್ತ ನಹನೊಮ್ಮೆ. ಹೊಳೆದು ತೋರುತ್ತಲೊಮ್ಮೆ.ತೋರಿಯಡಗುತ್ತಲೊಮ್ಮೆ. ವಿಶ್ವವು ನೋಡಿ ಬೆರಗಾಗುತ್ತಲಿರೆ, ಇರ್ದ ಠಾವಿನಲ್ಲಿರ್ದು ಮುಂದೆ ತೋರುತ್ತಿರಲು ಸಾಂಪ್ರದಾಯದವರು ಒಡನೊಡನೆ ಹರಿದುಬಂದು ಹೇಳುತ್ತಿರಲು ಹರಿದುಬಂದು ಹತ್ತೆ ಸಾರಿದ. ಬಸವನ ಮಹಾಮನೆಯ ತಲೆಯೆತ್ತಿ ನೋಡಿ, ಮನೆಯ ಮೂಲೆ ಮೂಲೆ ದಪ್ಪದೆ ಕುಸುರಿಗೆಲಸದ ನಂದಿಯ ಮಂಟಪಂಗಳ ಮೇಲುಪ್ಪರಿಗೆ ಭದ್ರಂಗಳ ನೋಡಿ ತಲೆ ದೂಗುತ್ತ, ಕಲಿದೇವರದೇವ ಬಸವನ ಮಹಾಮನೆಯ ಪ್ರದಕ್ಷಿಣ ಬಂದು ದ್ವಾರವಟ್ಟದ ಮುಂದೆ ನಿಂದಿರ್ದನು"

ಬಸವಣ್ಣನವರ ನಿರೀಕ್ಷೆಯಂತೆ, ಆ ಅತಿಮರುಳ ಬಡಗಲ ಪೌಳಿ... ಹೊಕ್ಕು ಶೂನ್ಯ ಸಿಂಹಾಸನದ ನೆಲೆಯುತ್ತ ಸಾಗಿಬಂದನು ! ಅವನೇ ... ರೆಂದು ಶರಣರು ಹರ್ಷಿಸಿದರು. ಅಲ್ಲಮರ ಅಂದಿನ ವೇಷವನ್ನು ಅವಲೋ... ಪರೆ, ಅವರು ಪಾಶುಪತ ಶಿವಯೋಗಿಯೆಂದು ತರ್ಕಿಸಬಹುದು. ಅಲ್ಲ... ಮರಳ—

೪೮. "ಮಲೆತು ಮೆಟ್ಟುತ್ತ, ತನುವನೊನೆವುತ್ತ, ತಲೆದೂಗಿ ಮನವನಲ್ಲಾ... ಭುವನಭುವನೇಶ್ವರನ ಹಿಂದುಮುಂದು ನೋಡುತ್ತ ನಗುತ್ತ ಮು... ತೋರಣಕ್ಕೆ ಹಾರೈಸಿ ಬಸವನರಮನೆಯ ಪೊಕ್ಕನು ಕಲಿದೇವರದೇವ... ಅಲ್ಲಿಂದ ಮುಂದೆ ಪುನಃ—

೪೯. "ಬಲಕ್ಕೆ ಮುರಿದನು. ಪೌಳಿಯ ಉತ್ತರಬಾಗಿಲಲ್ಲಿ ತಲೆವಾಗಿ ಹೊ... ಗತಿಯ ಪವಣಿನಲ್ಲಿ. ಧವಳಾರಮಪ್ಪ ಪಶ್ಚಿಮದ್ವಾರದಿಂ ತ್ರಿವಿಧಗ... ಶೂನ್ಯಸಿಂಹಾಸನದ ಮೇಲೆ ಮುಕ್ತಕೇಶದ ಪರಮ ಗುರುರಾಜನೆ... ಕಲಿದೇವರದೇವನು."

ಆ ಶೂನ್ಯ ಲಿಂಗ ಅಲ್ಲಮರು ಶೂನ್ಯ ಸಿಂಹಾಸನದ ಮೇಲೆ ಮಂಡಿಸಿ... ಬಸವಣ್ಣನವರು ಆ ಪ್ರಭುದೇವರ ಪಾದಪೂಜೆಯನ್ನು ಮಾಡಿ—

೫೦. "ಎನ್ನ ವಚನದಲ್ಲಿ ನಾಮಾಮೃತವ ತುಂಬಿ, ಎನ್ನ ನಯನ... ಮೂರುತಿ ತುಂಬಿ, ಎನ್ನ ಮನದಲ್ಲಿ ನಿಮ್ಮ ನೆನಹ ತುಂಬಿ, ಎನ್ನ... ಯಲ್ಲಿ ನಿಮ್ಮ ಕೀರ್ತಿ ತುಂಬಿ ಕೂಡಲ ಸಂಗಮದೇವಾ, ನಿಮ್ಮ ... ಕಮಲದೊಳಗಾನು ತುಂಬಿ"

ಎಂದು ಪರಮಾನಂದದಿಂದ ಆ ನಿತ್ಯ ನಿರಂಜನ ಜಂಗಮ ಮೂರ್ತಿಯ... ಹಾಡಿ ನಲಿದರು. ಗಂಗಾಂಬಿಕೆ, ನೀಲಾಂಬಿಕೆ, ಅಕ್ಕ ನಾಗಲಾಂಬಿಕೆ... ಆ ಆರೂಢ ಮೂರ್ತಿಗೆ ಮಂಗಳಾರುತಿಯನ್ನು ಬೆಳಗಿದರು ! ಅದೇನೂ ... ಪಟ್ಟ ಬಂಧೋತ್ಸವವಲ್ಲ ! ಬಸವಣ್ಣನವರು ಶಿಖಾಶೈಲವನ್ನೂ ಅಲ್ಲ... ನಿರಂಜನಲಾಂಛನವಾಗಿ ಒಪ್ಪಿಸಲಿಲ್ಲ ! ಶೂನ್ಯ ಸಿಂಹಾಸನವನ್ನು ಧಾರ್ಮಿಕ... ವೆಂದು ಅವರು ಸ್ಥಾಪಿಸಲಿಲ್ಲ ! ಅವರನ್ನು 'ಜಗದ್ಗುರು' ಎಂದು ಉಗ್ಗಡಿಸ...

ಅದು ಶಿಖಾಪಟ್ಟವಲ್ಲ; ಶಿವಾನುಭವ ಪಟ್ಟ ! ಈ ಸಂದರ್ಭದಲ್ಲಿ ಶೂನ್ಯ ಸಂಪಾದನೆಯಲ್ಲಿ ಯಾವ ಧಾರ್ಮಿಕ ಕಟ್ಟಳೆಗಳನ್ನೂ ಹೇಳಿಲ್ಲ ! ಅದು ಶಿವಾನುಭವ ಗೋಷ್ಠಿಯ ಅಧ್ಯಕ್ಷ ಪೀಠವೆಂದು ರಚಿತವಾದಂತೆ ಹೇಳಬಹುದು. ಅದು ಮುಂದೆ, ಧಾರ್ಮಿಕ ಪೀಠವಾಗಿ ಪರಿಗಣಿತವಾಗಿದ್ದರೆ ಆಶ್ಚರ್ಯವಲ್ಲ! ತಪ್ಪೇನೂ ಇಲ್ಲ !

ಆಗ ಮಧ್ಯಾಹ್ನ ಸಮಯ. ಆರೋಗಣೆಯ ವೇಳೆ ಮೀರಿತು. ನಿತ್ಯದಂತೆ ದಾಸೋಹ ಮಂಟಪಕ್ಕೆ ಬಂದಿದ್ದ ಲಕ್ಷದಮೇಲೆ ತೊಂಭತ್ತಾರು ಸಾವಿರ ಜಂಗಮರೆಲ್ಲಾ ಮುನಿಸಿದೆದ್ದು ಹೋದರು. ಅವರು ಜ್ಞಾನದಾಸೋಹದಿಂದ ತಣಿಯಲಿಲ್ಲ !

೩೧. "ಅರಳುಗಂಗಳವರಿಗೆ ಹರಳುಗಂಗಳವರು ಸ್ಥೈರಿಸವಂತೆ, ತುರುಬುಳ್ಳವರಿಗೆ ಹರಿಮುಂಡೆಯವರು ಸ್ಥೈರಿಸವಂತೆ, ಅರಸನ ಕಂಡು ಪುರುಷನ ಮರೆದಂತೆ ಮಾಡಿದನೀ ವ್ರತಗೇಡಿ ಬಸವನು. ಮಹೇಂದ್ರಜಾಲಿಕನೊಬ್ಬನ ಪ್ರಭುವೆಂದು ಕುಳ್ಳಿರಿಸಿಕೊಂಡು, ತನ್ನ ಪ್ರಾಣಲಿಂಗವೆಂದು ನಮ್ಮ ತಿರುಗಿ ನೋಡಲೊಲ್ಲ. ಆತನಲ್ಲಿ ಏನಲೇಸ ಕಂಡನು? ನಮ್ಮಲ್ಲಿ ಏನು ಹೊಲ್ಲಹವ ಕಂಡನು ? ಕಂಚನೊಲ್ಲದೆ ಬಿಟ್ಟು ಹಂಚ ಹಿಡಿದನು. ಅನಾಚಾರಿಯಾದನೊಬ್ಬ, ವ್ರತಗೇಡಿ ಬಸವನೊಬ್ಬ, ಇವರಿಬ್ಬರೂ ದೇವಲೋಕ ಮರ್ತ್ಯಲೋಕಕ್ಕೆ ಹೊರಗು. ಇವಂದಿರ ಮುಖವ ನೋಡಲಾಗದು ಎನುತ ಹೋದರು ಕಲಿದೇವನ ಶರಣರು."

ಎಂದು ಮಡಿವಾಳ ಮಾಚಯ್ಯನವರು ಅಂದು ನಡೆದ ಘಟನೆಯನ್ನು ಹೇಳಿದ್ದಾರೆ. ಬಸವಣ್ಣನವರ ಶೂನ್ಯತತ್ತ್ವಮೀಮಾಂಸೆ ಅವರ ಅನುಭವ ಮಂಟಪದ ವಾತಾವರಣದಲ್ಲಿ ಬೆಳೆದ ಜಂಗಮೋತ್ತಮರಿಗೇ ಹಿಡಿದಿರಲಿಲ್ಲವೇನೋ ! ನಿತ್ಯ ನಿತ್ಯ ಶರಣಸಂಗೋಷ್ಠಿಯಲ್ಲಿ ತತ್ತ್ವಾರ್ಥವನ್ನು ಕೇಳಿ, ಚನ್ನಬಸವಣ್ಣನವರ ಮಾರ್ಗದರ್ಶನದಲ್ಲಿ ಷಟ್‌ಸ್ಥಲ ಜ್ಞಾನವಿದರಾಗಿದ್ದ ಆ ಮಹಮನೆಯ ಜಂಗಮ ಶ್ರೇಣಿಯಲ್ಲಿ ಜ್ಞಾನವಾಗಲಿ, ವೈರಾಗ್ಯವಾಗಲಿ ಇರದಿದ್ದರೂ ಚಿಂತೆಯಿಲ್ಲ, ಭಕ್ತಿಯಾದರೂ ಇರಬೇಡವೆ ? ಅಂಥ ನಿತಾಂತ ತತ್ತ್ವಬೋಧೆಯಿಂದಲೇ ಪರಿಪಕ್ವವಾಗದ ಆ ಜಂಗಮರನ್ನು ನೋಡಿದರೆ, ಕೇವಲ ಸಂಸ್ಕಾರದಿಂದ ಲಿಂಗಾಂಗಿ

ಗಳಾಗಿದ್ದ ಆ ಶಿವಭಕ್ತರಿಂದ ಇನ್ನೆಂಥ ಸಂಸ್ಕೃತಿಯನ್ನು ಲೋಕ ನಿರೀಕ್ಷಿಸ
ಹನ್ನೆರಡು ವರ್ಷದ ಸಂಸ್ಕಾರದಿಂದ, ಅದೂ ಕಲ್ಯಾಣದಲ್ಲಿ ಬಸವಣ್ಣನ
ಸಮುಖದಲ್ಲಿ ತತ್ತ್ವಗೋಷ್ಠಿಯಲ್ಲಿ ಕೃತಕೃತ್ಯರಾಗದ ಆ ಜಂಗಮರಿಂದ
ವಣ್ಣನವರ ಶೂನ್ಯತತ್ತ್ವಜ್ಞಾನ ಬೆಳದೀತೆ! ಎಂಬ ಸಂಶಯ ಮಡಿ
ಮಾಚಯ್ಯನವರಂಥ ಕೆಲವರು ಶರಣರಲ್ಲಿ ಅಂಕುರಿಸಿತು! ಅನುದಿನವೂ
ಮನೆಯಲ್ಲಿ ದಾಸೋಹದಿಂದ ತೃಪ್ತರಾಗುತ್ತಿದ್ದ ಆ ಜಂಗಮಶ್ರೇಣಿ
ಆರೋಹಣೆಯ ಸಮಯ ಮೀರಿತೆಂದು ಸಿಡಿಮಿಡಿಗೊಂಡು ಎದ್ದು ಹೋದ
ಇದು ಆ ಜಂಗಮದ ಸಂಸ್ಕೃತಿಯನ್ನು ವ್ಯಕ್ತಪಡಿಸುತ್ತದೆ! ಆ ಮಹಾನು
ಬಸವಣ್ಣನವರನ್ನು ವ್ರತಗೇಡಿಯೆಂದು ಕರೆಯುವಷ್ಟು ಪ್ರಮಾದವೇನೂ
ಲಿಲ್ಲ! ಅವರು ಪ್ರಭುದೇವರನ್ನು ಗುರುತಿಸಲಿಲ್ಲವೆಂದು ಒಪ್ಪಿದರೂ, ಬಸ
ನವರು ಗೌರವಿಸಿದ ವ್ಯಕ್ತಿಯನ್ನು ಮಹೇಂದ್ರಜಾಲಿಕನೆಂದೂ, ಬಸವಣ್ಣ
ರನ್ನು ವ್ರತಗೇಡಿಯೆಂದೂ ಕರೆದುದು ಧಾರ್ಷ್ಟ್ಯವೇ ಸರಿ! ಬಸವಣ್ಣನ
ಆ ಮಹಾತ್ಮ ಅಲ್ಲಮರೂ ಇಹಪರಗಳಿಗೆ ಹೊರಗು—ಎಂದೂ ಅವರ ಮುಖವ
ನೋಡಬಾರದೆಂದೂ ಆ ಜಂಗಮರು ಅಂದು ಆಡಿದ ನುಡಿ ಕಠಿಣವಾಯಿತೆನ
ಆ ಪರಮ ದಯಾನಿಧಿ ಬಸವಣ್ಣನವರೆಷ್ಟು ಮರುಗಿದರೋ! ಹೊಗಳಿಕೆ
ಅವರಿಗೆ ಹೊನ್ನಶೂಲವೆಂಬ ಬಸವಣ್ಣನವರು ಈ ಕಠಿಣ ವಚನವನ್ನು ಹೂ
ಹಾರವಂತೆ ಧರಿಸಿದರೇನೋ! ಮಹಾತ್ಮರ ಮನೋಧರ್ಮವೇ ಅಂಥ
ಆ ಬಿರುನುಡಿಯನ್ನು ನೆನೆದರೆ ಈಗಲೂ ನಮ್ಮ ಮನಸ್ಸು ನೋಯುತ್ತ
ಆ ಜಂಗಮಶ್ರೇಣಿಯಲ್ಲಿ ಹಲವಾರು ಕೀಳುಜಾತಿ ಮತಗಳಿಂದ ಬಂದ
ಇದ್ದರು! ಅಂಥವರಲ್ಲಿ ತಪಶ್ಶಕ್ತಿಗಿಂತಲೂ ತಮಶ್ಶಕ್ತಿ ಹೆಚ್ಚಾಗಿತ್ತು! ಆ
ಬಲಕ್ಕಿಂತಲೂ ದೇಹಬಲ ಮಿಗಿಲಾಗಿತ್ತು! ಅನಾಯಾಸವಾಗಿ ವಿರಕ್ತ
ಅನಾಥರಿದ್ದರು; ಅವರಲ್ಲಿ ಕಣ್ಣು ಮಂಜಾದವರಿದ್ದರು; ಹಲ್ಲು ಬಿದ್ದವರಿದ್ದ
ಸತ್ಯವನ್ನು ಅರಿಯದವರಿದ್ದರು; ವ್ರತಗೇಡಿಗಳಿದ್ದರು; ವಚನಭ್ರಷ್ಟರಿದ್ದ
ವಿದ್ವಾಂಸರನ್ನು ಅರಿಯದ ಪರದೇಶಿಗಳಿದ್ದರು! ಸಮಯ ಸಂದರ್ಭಗಳ
ಅರಿತು ನಡೆಯುವಷ್ಟು ತಾಳ್ಮೆಯಾಗಲಿ ವಿವೇಕವಾಗಲಿ ಅವರಲ್ಲಿರಲಿಲ್ಲ! ಆ
ದಾಸೋಹದ ಜಂಗಮರು ಎದ್ದು ಹೋದ ಸಂಗತಿಯನ್ನು ಕೇಳಿ ಬಸವಣ್ಣನವ
ಪರಿತಪಿಸಿದರು. ಅಲ್ಲಮರಿಗೂ ಆ ವಿಚಾರ ತಿಳಿಯಿತು. ಮುನಿದ ಜಂಗಮವ

ತ್ರಿಪುರಾಂತಕ ದೇವಾಲಯದಲ್ಲಿ ಸೇರಿದ್ದರು. ಬಸವಣ್ಣನವರು ಅವರನ್ನು ಭಕ್ತಿಯಿಂದ ಸಮಾಧಾನ ಪಡಿಸಿ ಮಹಮನೆಗೆ ಕರೆತಂದರು. ಮಹಾನುಭಾವ ಗುಣ! ಪ್ರಭುದೇವರ ಆರೋಗಣೆಯಾಯಿತು! ಹಸಿದಿದ್ದ ಜಂಗಮರು ಕುಳಿತೆಡೆಯಲ್ಲಿ ಭೂರಿ ಭೋಜನದಿಂದ ತೃಪ್ತರಾದಂತಾಯಿತು! "ಬಸಿರು ಹೆಂಗುಸಿ ನೂಟ ಹೊಟ್ಟೆಯ ಶಿಶುವ ತಣಿಸುವ ಮಾಳ್ಕೆಯಲಿ" ಜಂಗಮ ತಣಿಯಿತು! ಅಲ್ಲಮರು ವಿಶ್ವಲಿಂಗರೂಪಿಯಲ್ಲವೆ!

ಶಿವಯೋಗಿನಿ ಸಂತೃಪ್ತೇ ತೃಪ್ತೋಭವತಿ ಶಂಕರಃ ।
ತತ್ತೃಪ್ತ್ಯಾ ತನ್ಮಯಂವಿಶ್ವಂ ತೃಪ್ತಮೇತಿ ಚರಾಚರಂ ॥

ಎಂದು ಆಚಾರ್ಯ ರೇಣುಕರು ಶಿವಯೋಗಿಯ ತಪಃಪ್ರಭಾವವನ್ನು ಜಗತ್ತಿಗೆ ಸಾರಿರುತ್ತಾರೆ. ಶಿವಯೋಗಿ ತೃಪ್ತನಾದರೆ ಶಿವನು ಸಂತೃಪ್ತನಾದಂತೆ; ಶಿವನು ಸಂತೃಪ್ತನಾದರೆ, ಸಕಲ ಚರಾಚರ ಜಗತ್ತೂ ತೃಪ್ತವಾದಂತೆಯೇ! ಆಗ ಆ ಜಂಗಮರಿಗೆ ಜ್ಞಾನೋದಯವಾಯಿತು! ಪ್ರಭು ಸನ್ನಿಧಿಯಲ್ಲಿ ಅಡ್ಡಬಿದ್ದರು!

ಅಲ್ಲಮರು ಕೆಲವು ಕಾಲ ಕಲ್ಯಾಣದಲ್ಲಿದ್ದು, ಶೂನ್ಯ ಸಿಂಹಾಸನದಲ್ಲಿ ಮಂಡಿಸಿ, ಸಕಲ ಶರಣರಿಗೆ ಶಿವಮಾರ್ಗವನ್ನು ತಿಳಿಸಿದರು.

೩೨. "ಅವಧಿ ಅಳಿಯಿತ್ತು. ವ್ಯವಧಾನ ಉಳಿಯಿತ್ತು. ನಿಜವೆ ನಿಜವನೊಡಗೂಡಿತ್ತು ಕೇಳಾ ಬಸವಣ್ಣಾ. ಕಲಿಯುಗದಲ್ಲಿ ಮುಂದೆ ಇರಬಾರದು ನಿಜಶರಣರಿಗೆ. ನಡೆ ನೀನು ಕಪ್ಪಡಿಯ ಸಂಗಯ್ಯನಲ್ಲಿ ಒಡಗೂಡು. ಉಳುವೆಯಲ್ಲಿ ನಿಜವನೆಯ್ದು ನಡೆ ಚೆನ್ನಬಸವಣ್ಣಾ. ಮಹವನೊಡಗೂಡು ಮಡಿವಾಳಯ್ಯಾ. ಸೊಡ್ಡಳ ಬಾಚರಸರು ಮೊದಲಾದ ಪ್ರಮಥರೆಲ್ಲರೂ ನಿಜವನೈದುವುದು ನಿರ್ವಯಲ ಸಮಾಧಿಯಲ್ಲಿ, ಬಗಿದು ಹೊಗಿ ಲಿಂಗದೊಳಗೆ ಹೊಗುವರೆಲ್ಲರೂ. ನಡೆಯಿರಿ ಕಾಯವೆರಸಿ ಕೈಲಾಸಕ್ಕೆ ಕಾಯಸಹಿತೈದುವುದು ನಿಮಗೆಲ್ಲರಿಗೆಯೂ ಉಪದೇಶಮಂತ್ರ ತಪ್ಪದು. ನಮಗೆ ಕದಳಿಯಲ್ಲಿ ಹೊಕ್ಕು ನಿಜದಲ್ಲಿ ಅಡಗುವ ಪರಿಣಾಮ. ಇದು ನಮ್ಮ ಗುಹೇಶ್ವರ ಲಿಂಗದಾಣತಿ ನಿಮಗೆಲ್ಲರಿಗೆಯೂ"

ಎಂದು ಅಲ್ಲಮರು ಶರಣರಿಗೆಲ್ಲ ಅವರವರು ಬಯಲಾಗುವ ರೀತಿಯನ್ನು ತಿಳಿಸಿ

ಶ್ರೀಶೈಲವತ್ತ ನಡೆದರು. ಅವರು ಶ್ರೀಶೈಲದಲ್ಲಿ ಗೋರಕ್ಷ ಸಿದ್ಧನಿಗೆ ಶಿವಜ್ಞಾ-ವನ್ನು ಬೋಧಿಸಿ ಅನುಗ್ರಹಿಸಿದರು. ಮುನಿವೃಂದವನ್ನು ಮೋಕ್ಷ ಮಾರ್ಗ-ನಡಸಿದರು. ಅಲ್ಲಮರು ಶ್ರೀಶೈಲದ ಕದಳಿ ವನದಲ್ಲಿ ಶಿವಯೋಗಾನಂದ ಸ-ಯಲ್ಲಿದ್ದು ನಿಶ್ಶೂನ್ಯ ಲಿಂಗದಲ್ಲಿ ಲೀನರಾದರು !

ಅಲ್ಲಮರ ಆತ್ಮಜ್ಯೋತಿ ಸದಾ ಲೋಕದಲ್ಲಿ ಬೆಳಗಲಿ !



## ತರಂಗ ೭.

### ನಿರಾಭಾರಿ ಪಟ್ಟಿವಲ್ಲರಿ; ಇತಿಹಾಸ ಪ್ರಭಾವಳಿ

೫೩. "ನೆಲನ ಹೊದ್ದದು. ಆಕಾಶವ ಮುಟ್ಟದು. ಎಡೆಯಲೊಂದು ರೂ-ಭಾವವೆಂಬ ಜ್ಞಾನವೆ ನಿವಾಸ. ನೆಲವೆ ಭಿತ್ತಿ. ನಿರಹಂಕಾರವೆ ಶಿ-ಮಹದಹಂಕಾರವೆ ಶೃಂಗಾರ ಕಳಶ. ಸಹಸ್ರ ಪತ್ರದ ನವಕಮಲ ಸಿಂ-ಸನದ ನಿತ್ಯವೆ ಮಲಗು. ನಿಜವೆಂಬ ವಿಸ್ತರದಲ್ಲಿ ನಿತ್ಯ ನಿರಾಕ-ಮಹಾಘನವು ಬಂದು ಮೂರ್ತಿಗೊಳ್ಳಲು ಕಾಯದಕಂಗೆ ಕಾಣಬಾ-ಮನದ ಮುಂದೆ ಅಳವಡದು; ಭಾವದ ಬಗೆಗೆ ವೈದೋರದು. ಬ-ಪ್ರಿಯ ಕೂಡಲ ಚೆನ್ನಸಂಗಯ್ಯನಲ್ಲಿ ಪ್ರಭುದೇವರ ಶ್ರೀಪಾದಕ್ಕೆ ನಮೋ ನಮೋ ಎಂಬೆನು."

—ಶರಣ ಹಡಪದ ಅಪ್ಪಣ್ಣ

ಬಸವಣ್ಣನವರು ಶೂನ್ಯ ತತ್ತ್ವವನ್ನು ನಿರೂಪಿಸಿರುವ ರೀತಿ ಉಪನಿಷ-ಗಳಲ್ಲಿ ಆತ್ಮಾ ಅಥವಾ ಬ್ರಹ್ಮವನ್ನು ಕುರಿತು ಮಹರ್ಷಿಗಳು ಹೇಳಿರುವ ರೀ-ಯಲ್ಲಿಯೇ ಇದೆ. ಆತ್ಮಾ ಅಥವಾ ಬ್ರಹ್ಮ ಎಂಬುದು ಶೂನ್ಯ ಎಂಬರ್ಥ-ಶರಣರು ಭಾವಿಸಿರುತ್ತಾರೆ. ಬ್ರಹ್ಮ ಎಂಬ ವಸ್ತು ಎಲ್ಲಿಯೋ ಬಹುದೂರ-ಎಂದು ಭಾವಿಸಬಾರದು. ಅದು ಎಲ್ಲೆಲ್ಲಿಯೂ ತುಂಬಿರುತ್ತದೆ. ಶರಣರು ಹೇ-ವಂತೆ ಶೂನ್ಯದಲ್ಲಿಯೇ ನಾವು ಚಲಿಸುತ್ತೇವೆ; ಅದರಲ್ಲಿಯೇ ಇರುತ್ತೇವೆ. ಅ-ಬಿಟ್ಟು ಯಾರೂ ಇರಲಾರರು; ಅಲುಗಾಡಲಾರರು. ಜಗತ್ತು ಹುಟ್ಟ-

ಶೂನ್ಯದಲ್ಲಿ, ಅದು ಇರುವುದು ಶೂನ್ಯದಲ್ಲಿ, ಕೊನೆಗೆ ಅದು ಸಾಯುವುದೂ ಶೂನ್ಯದಲ್ಲಿ. ಇಂದ್ರಿಯಗಳು ತಿಳಿಯಬಲ್ಲ ಮತ್ತು ಇಂದ್ರಿಯಗಳು ತಿಳಿಯಲಾರದ ಎಲ್ಲ ವಸ್ತುಗಳೂ ಶೂನ್ಯಮಯವೇ ಆಗಿರುತ್ತವೆ. ಆದ್ದರಿಂದ ಬೌದ್ಧರು ಹೇಳುವ ಸರ್ವಶೂನ್ಯವಲ್ಲ ಶರಣರು ಕಂಡ ಶೂನ್ಯ! ಶರಣರ ಶೂನ್ಯವೆಂದರೆ ಬ್ರಹ್ಮ! ಬ್ರಹ್ಮ ಎಂದರೆ ಜೀವ, ಜಗತ್ತು, ಈಶ್ವರ–ಈ ಮೂರು ತತ್ತ್ವಗಳೂ ಅಡಗಿರುವ ಪರವಸ್ತು. ಬೌದ್ಧರ ಶೂನ್ಯವಾದದಿಂದ ನಿರೀಶ್ವರ ಮನೋಭಾವವೇ ಲೋಕದಲ್ಲಿ ಬೆಳೆಯಿತು. ಶಂಕರಾಚಾರ್ಯರು ಬಹಳ ಎಚ್ಚರಿಕೆಯಿಂದ ಬೌದ್ಧರ ಶೂನ್ಯವನ್ನು ಮಾಯೆಯೆಂದು ಕಲ್ಪಿಸಿ, ಜಗತ್ತು ಮಾಯಾಮಯವೆಂದು ಹೇಳಿ, ಮಾಯಾ ನಿರಸನದಿಂದ ಜಗತ್ತೂ ಮಿಥ್ಯೆಯೆಂದು ಸಾರಿದರು. ಅಷ್ಟುಮಟ್ಟಿಗಾದರೂ ಜಗತ್ತು ಇದೆಯೆಂಬುದನ್ನು ಒಪ್ಪಿದರು. ವೀರಶೈವರು ಜಗತ್ತೂ ಸತ್ಯ, ಬ್ರಹ್ಮವೂ ಸತ್ಯ ಎಂದರು. ಬಸವಣ್ಣನವರು ಶೂನ್ಯ ಎಂಬ ಶಬ್ದವನ್ನೇ ಹಿಡಿದು ಶೂನ್ಯವೆಂದರೆ ಪರಬ್ರಹ್ಮವೆಂಬುದನ್ನು ಕನ್ನಡ ನುಡಿಯಲ್ಲಿ ಜನರಿಗೆ ವಿವರಿಸಿ ದೇವರಲ್ಲಿಯೂ ಜಗತ್ತಿನಲ್ಲಿಯೂ ನಂಬುಗೆಯನ್ನು ಬೆಳಸಿದರು. ಆ ಶೂನ್ಯ ತತ್ತ್ವವನ್ನು ಪ್ರಚಾರ ಮಾಡಲು ಶಿವಾನುಭವ ಮಂಟಪ ಸ್ಥಾಪನೆಯಾಯಿತು. ಆ ತತ್ತ್ವ ಪ್ರಚಾರಗೋಷ್ಠಿಯ ಅಧ್ಯಕ್ಷ ಪೀಠವನ್ನು ಶೂನ್ಯ ಸಿಂಹಾಸನವೆಂದು ಕರೆದರು! ಆ ಶೂನ್ಯದ ಪರಿಯನ್ನು ಹಡಪದ ಅಪ್ಪಣ್ಣ ಶರಣರು ಜ್ಞಾನದೃಷ್ಟಿಯಿಂದ ವಿವರಿಸಿರುತ್ತಾರೆ. ಅಂಥ ಶೂನ್ಯ ಸಿಂಹಾಸನವನ್ನು ಆರೋಹಣ ಮಾಡಲು ಶೂನ್ಯಮೂರ್ತಿಯಿಂದಲೇ ಸಾಧ್ಯ!

ಅಲ್ಲಮರು ಶೂನ್ಯ ಸಿಂಹಾಸನದ ಮೊದಲನೆಯ ನಿರಂಜನ ಪಟ್ಟಾಧ್ಯಕ್ಷರು. ಅವರ ತರುವಾಯ ಶೂನ್ಯ ಸಿಂಹಾಸನವಿತ್ತೆ? ಮೂಲ ಶೂನ್ಯಮಠವೊಂದು ಸ್ಥಾಪನೆಯಾಯಿತೆ? ಆ ಮಠ ಕಲ್ಯಾಣದಲ್ಲಿಯೇ ನಿರ್ಮಾಣವಾಗಿತ್ತೆ? ಅಥವಾ ಅದು ಮುಂದೆ ಮತ್ತೆಲ್ಲಿಯಾದರೂ ಸ್ಥಾಪನೆಯಾಯಿತೆ? ಮೂಲ ಶೂನ್ಯಪೀಠ ಈಗ ಎಲ್ಲಿದೆ? ಆ ಮೂಲ ಪೀಠದ ವಿರಕ್ತ ಪರಂಪರೆ ಈಗಲೂ ನಡೆದುಬರುತ್ತಿದೆಯೆ? ಶಿವಾನುಭವ ಪೀಠವೆಂದು ಸ್ಥಾಪನೆಯಾದ ಶೂನ್ಯ ಸಿಂಹಾಸನ ಧಾರ್ಮಿಕ ಪೀಠವಾಗಿ ಯಾವಾಗ ಪರಿವರ್ತಿತವಾಯಿತು? ವೀರಶೈವದಲ್ಲಿ ಶೂನ್ಯತತ್ತ್ವ ಬಸವಣ್ಣನವರಿಗಿಂತ ಹಿಂದಿನಿಂದ ಆಚರಣೆಯಲ್ಲಿದ್ದರೂ ಶೂನ್ಯ ಸಿಂಹಾಸನವನ್ನು ಸ್ಥಾಪಿಸಲು ಕಾರಣವೇನು? ಇದರ ವೈಶಿಷ್ಟ್ಯವೇನು? ಇವೇ ಮೊದಲಾದ

ಸಂಗತಿಗಳನ್ನು ಐತಿಹಾಸಿಕ ಮತ್ತು ಧಾರ್ಮಿಕ ಹಿನ್ನೆಲೆಯಲ್ಲಿ ಅರಿಯಬೇಕಾ ದುದು ಆವಶ್ಯಕ.

ಅಲ್ಲಮರು ಕಲ್ಯಾಣವನ್ನು ಬಿಟ್ಟು ಶ್ರೀಶೈಲದತ್ತ ಹೋದಮೇಲೆ ಬಸವಣ್ಣ ನವರು ಕೆಲವು ಕಾಲದಲ್ಲಿಯೇ ತಮ್ಮ ಮಂತ್ರಿಪದವಿಯನ್ನು ಚನ್ನಬಸವಣ್ಣನವ ರಿಗೆ ಒಪ್ಪಿಸಿ, ಬಿಜ್ಜಳನ ಅನುಮತಿಯಿಂದಲೇ ಕಪ್ಪಡಿ ಸಂಗಮಕ್ಷೇತ್ರಕ್ಕೆ ಹೋಗಿ ನಿಂತರೆಂದು ವೀರಶೈವ ವಾಙ್ಮಯದಿಂದ ಗೊತ್ತಾಗುತ್ತದೆ. ಆ ತರುವಾಯ ಸ್ವಲ್ಪ ದಿನಗಳಲ್ಲಿಯೇ ಕಲ್ಯಾಣ ಕ್ರಾಂತಿಯಾಯಿತೆಂದೂ ತಿಳಿದುಬರುತ್ತದೆ.

* "ಈ ಶೂನ್ಯಪೀಠದ ಪ್ರಥಮ ಗುರುವೆಂದರೆ ಪ್ರಭುದೇವರೇ. ಅಂತೆಯೇ ಆ ಪರಂಪರೆಗೆ 'ಪ್ರಭು ಸಂಪ್ರದಾಯ' ಎಂದು ಕರೆಯಲಾಗುತ್ತಿದೆ. ಪ್ರಭು ದೇವರು ನಿರಂಜನ ಜಂಗಮ ಮೂರ್ತಿ. ಆತನು ಲಿಂಗಲೀಲೆಯಲ್ಲಿ, ಒಂದೆಡೆ ನಿಲ್ಲದಂತೆ ನಿರಂತರ ಸಂಚಾರದಲ್ಲಿರುವನು. ಆದರೆ, ಕಲ್ಯಾಣದ ಅನುಭವ ಮಂಟಪದ ದೈನಂದಿನ ಕಾರ್ಯಕಲಾಪಗಳೆಲ್ಲ ಎಡೆಬಿಡದೆ ನಡೆಯಬೇಕಾಗಿತ್ತು. ಆದುದರಿಂದ ಪ್ರಭು ಶೂನ್ಯ ಪೀಠವನ್ನೇರಿ ಮರಳಿ ಸಂಚಾರಕ್ಕೆ ಹೊರಟನು. ಚನ್ನಬಸವಣ್ಣನವರನ್ನು ಪ್ರಮಥರು ಆ ಪೀಠದ ಮೇಲೆ ಕುಳ್ಳಿರಿಸಿದಂತಿದೆ. ಅದರ ಮುಖ್ಯ ಕಾರ್ಯವಾದ ಷಟ್‌ಸ್ಥಲ ನಿರ್ಣಯ, ಹಾಗೂ ಉದ್ಧಾರಗಳು ಶೂನ್ಯ ಪೀಠಸ್ಥಲದಿಂದಲೇ ನಡೆದಿರಬೇಕು. ಆದುದರಿಂದ ಚನ್ನಬಸವಣ್ಣನವರನ್ನು ಶೂನ್ಯ ಪೀಠದ ಎರಡನೆಯ ಅಧಿಕಾರಿಗಳೆಂದು ಕರೆಯುವ ರೂಢಿ ವೀರಶೈವ ದಲ್ಲಿದೆ. ಇದಕ್ಕೆ ಪುಷ್ಟಿಯನ್ನು ಕೊಡುವಂತೆ ಕೆಲವು ಉಲ್ಲೇಖನಗಳು ಅಲ್ಲಲ್ಲಿ ದೊರೆಯುತ್ತವೆ." "ಶೂನ್ಯವನ್ನೇರಿದ ತಮ್ಮ ಅಂತಃಸ್ಥಿತಿಯನ್ನು ಚನ್ನಬಸವಣ್ಣ ನವರೇ ತಮ್ಮದೊಂದು ವಚನದಲ್ಲಿ

೨೪. "ಎನ್ನ ಮನದಲ್ಲಿ ಇದೇ ಪಥವಯ್ಯಾ, ಬೆರಸುವಡೆ:
ಪ್ರಾಣದ ಮಥನಭಾವನಟ್ಟು, ತನುಸ್ಥಿತಿಮರೆದು;
ಭ್ರಾಂತುಸೂತಕವೆಲ್ಲಾ [ನಿವಾ]ರಿಸಿ ಹೋದವು ಶೂನ್ಯ
ಸಿಂಹಾಸನದ ಮೇಲೆ
ಕೂಡಲ ಚನ್ನಸಂಗಾ, ನಿಮ್ಮ ಶರಣನ ಪ್ರಭೆಯಿಂದ" ಎಂದು ಹೇಳಿ

* ಷಟ್‌ಸ್ಥಲ ಚಕ್ರವರ್ತಿ ಚನ್ನಬಸವಣ್ಣನವರು: ಸಂಪಾದಕರು: ಡಾ॥ ಆರ್. ಸಿ. ಹಿರೇಮಠ, ಎಂ.ಎ., ಪಿ.ಹೆಚ್.ಡಿ., ಅವರು.

ತ್ತಾರೆ. ಇದರಿಂದ ಚನ್ನಬಸವಣ್ಣನವರು ಅನುಭವ ಮಂಟಪದಲ್ಲಿ ಶೂನ್ಯ ಪೀಠ ದಲ್ಲಿ ಅಧಿಕಾರಿಗಳಾಗಿದ್ದರೆಂದು ವ್ಯಕ್ತವಾಗುತ್ತದೆ." ಚನ್ನಬಸವಣ್ಣನವರಲ್ಲಿ ಭಾವ ಲಿಂಗಜ್ಞಾನ ತುಂಬಿ, ನಿರ್ದೇಹ ಮನೋಭಾವ ಬಲಿತು, ಸೂತಕದ ಭ್ರಾಂತು ಹರಿದು, ಶೂನ್ಯಪಥ ನೆಲೆಸಿತ್ತು. ಆದರೆ, ಅಲ್ಲಮರು ಶೂನ್ಯಸಿಂಹಾಸನದ ಮೊದ ಲನೆಯ ಅಧಿಕಾರಿಯೆಂದಮೇಲೆ, ಅವರು ಆ ಅಧಿಕಾರ ಸ್ಥಾನವನ್ನು ತ್ಯಜಿಸಿ, ಕಲ್ಯಾಣದಿಂದ ಹೊರಟರೆ ? ಅಥವಾ ಅವರು ಶೂನ್ಯ ಪೀಠದ ಅಧಿಕಾರವನ್ನು ಚನ್ನಬಸವಣ್ಣನವರಿಗೆ ವಹಿಸಿಕೊಟ್ಟರೇ ? ಇದು ವಚನವಾಙ್ಮಯದಿಂದ ಗೊತ್ತಾಗುವುದಿಲ್ಲ. ಶೂನ್ಯ ಸಿಂಹಾಸನ ಒಂದು ಧಾರ್ಮಿಕ ವಿರಕ್ತ ಪೀಠವಾಗಿ ದ್ದರೆ ಅಲ್ಲಮ ಪ್ರಭುದೇವರಿಗೆ ವಿಧಿವತ್ತಾಗಿ ಪೀಠಾಧಿಕಾರವನ್ನು ವಹಿಸಿ ಪಟ್ಟ ಕಟ್ಟಬೇಕಾಗಿತ್ತು ! ಅದು ಪ್ರಪ್ರಥಮ ಪಟ್ಟ. ಶಾಸ್ತ್ರಮುಖದಿಂದ ನಡೆದಿರ ಬೇಕು. 'ಶಿಖಾಶೈಲ'ಗಳನ್ನು ಅಥವಾ ವೃಷಭಾಂಕಿತ ಮುದ್ರೆಯನ್ನು ಕೊಟ್ಟು ನಿರಂಜನ ಪೀಠದ ಮೇಲೆ ಕೂಡಿಸಬೇಕಾಗಿತ್ತು. ಪ್ರತ್ಯೇಕ ಬೃಹನ್ಮಠವೂ ಆಗ ನಿರ್ಮಾಣವಾದಂತಿಲ್ಲ ! ಶಿವಾನುಭವ ಮಂಟಪದಲ್ಲಿ ನಡೆಯುತ್ತಿದ್ದ ಶರಣರ ಶಿವಾನುಭವಗೋಷ್ಠಿಯ ಅಧ್ಯಕ್ಷ ಸ್ಥಾನವನ್ನು ಶೂನ್ಯ ಸಿಂಹಾಸನವೆಂದು ಹೆಸರಿಟ್ಟು, ಬಸವಣ್ಣನವರು ಆ ತತ್ತ್ವಾರ್ಥ ವಿಚಾರಮಥನಗೋಷ್ಠಿಯ ಅಧ್ಯಕ್ಷ ರನ್ನಾಗಿ ಅಲ್ಲಮರನ್ನು ಗೌರವಿಸಿದರೆಂಬುದು ಸ್ಪಷ್ಟವಾಗಿದೆ. ಇಷ್ಟೊಂದು ವಚನಗಳನ್ನು ನುಡಿದ ಶರಣರು ಅಲ್ಲಮರಿಗೆ ಆದ ನಿರಾಭಾರಿ ಪಟ್ಟಬಂಧನ ವಿಧಾನವನ್ನು ಸೂಚಿಸುವ ಮತಪ್ರಕ್ರಿಯೆಗಳ ವಚನಗಳನ್ನು ನುಡಿಯದಿರುತ್ತಿರ ಲಿಲ್ಲ. ಶೂನ್ಯ ಸಿಂಹಾಸನ ನೂತನ ಸಮಾಜ ರಚನೆಯ ಪ್ರಮುಖ ಸಂಕೇತ ವಾಗಿ, ವಿಚಾರಗೋಷ್ಠಿಯ ಅಧ್ಯಕ್ಷಸ್ಥಾನವಾಗಿ ಏರ್ಪಟ್ಟಿರಬೇಕೆಂಬುವುದರಲ್ಲಿ ಅನುಮಾನವಿಲ್ಲ. ಅದು ಒಂದು ನಿರಾಭಾರಿ ಪೀಠವೆಂಬ ಕಲ್ಪನೆ ಬಸವಣ್ಣನವರ ತರುವಾಯ ಎಷ್ಟೋ ಕಾಲದಮೇಲೆ ಮೂಡಿರಬೇಕು ! ಅಲ್ಲಮರು ಮೊದಲ ನೆಯ ಸಲ ಸಿದ್ಧರಾಮಯ್ಯನವರೊಂದಿಗೆ ಕಲ್ಯಾಣಕ್ಕೆ ಬಂದಾಗ, ಅನುಭವ ಗೋಷ್ಠಿಯಲ್ಲಿ ಶೂನ್ಯ ಸಿಂಹಾಸನ ರಚನೆಯಾಗಿರಲಿಲ್ಲ. ಅದರ ಕಲ್ಪನೆಯು ಶರಣರಲ್ಲಿರಲಿಲ್ಲ. ಅಲ್ಲಮರು ಕಲ್ಯಾಣದಿಂದ ದೇಶಪರ್ಯಟನ ಮಾಡಲು ಪಣವನ್ನು ಬೀಳ್ಕೊಂಡು ಪುನಃ ಹನ್ನೆರಡು ವರ್ಷಗಳ ತರುವಾಯ ಕಲ್ಯಾಣಕ್ಕೆ ಬರುವುದಾಗಿ ಹೇಳಿಹೋದಮೇಲೆ, ಬಸವಣ್ಣನವರು ಶೂನ್ಯ ಸಿಂಹಾಸನವನ್ನು

ರಚಿಸಿಕೊಂಡು ಅಲ್ಲಮರ ಆಗಮನವನ್ನು ನಿರೀಕ್ಷಿಸುತ್ತಿದ್ದರೆಂದು ಶೂನ್ಯ ಸಂಪಾ
ದನೆಯಿಂದ ಗೊತ್ತಾಗುತ್ತದೆ. ಅವರ ದೇಶಪರ್ಯಟನ ಕಾಲದಲ್ಲಿ ಚನ್ನಬಸವಣ್ಣ
ನವರಾಗಲಿ, ಮಡಿವಳ ಮಾಚಯ್ಯನವರಾಗಲಿ ಶರಣಸಂಗೋಷ್ಠಿಯ ಅಧ್ಯಕ್ಷ
ರಾಗಿರುತ್ತಿದ್ದರೇನೋ ! ಅದು ಕೇವಲ ಶರಣಸಂಗೋಷ್ಠಿಯ ನಿಯಮದಂತೆ
ನಡೆಯುತ್ತಿತ್ತು. ಅಲ್ಲಮರು ದೇಶಪರ್ಯಟನದಲ್ಲಿದ್ದಾಗಲೇ ಚನ್ನಬಸವಣ್ಣ
ನವರಿಗೆ ನಿರಂಜನ ಪಟ್ಟವಾಗಲು ಅವಕಾಶವಿಲ್ಲ. ಆಗ ಅಲ್ಲಮರಿಗೇ ನಿರಂಜನ
ಪಟ್ಟವಾಗಿರಲಿಲ್ಲ ! ಹನ್ನೆರಡು ವರ್ಷಗಳ ತರುವಾಯ ಅಲ್ಲಮರು ಕಲ್ಯಾಣಕ್ಕೆ
ಬಂದಮೇಲೆ ಅವರು ಶೂನ್ಯಸಿಂಹಾಸನಾರೋಹಣ ಮಾಡಿದರು ! ಅನಂತರ
ಅವರು ಬಹುಶಃ ಮೂರು ತಿಂಗಳ ಕಾಲ ಕಲ್ಯಾಣದಲ್ಲಿದ್ದು, ಶ್ರೀಶೈಲದತ್ತ ನಿರ್ಗ
ಮಿಸಿ, ಅಲ್ಲಿಯೇ ಬಯಲಾದರು. ಅವರು ಎರಡನೆಯ ಸಲ ಕಲ್ಯಾಣವನ್ನು
ಬಿಟ್ಟು ಹೊರಡುವ ಕಾಲದಲ್ಲಿ ಶೂನ್ಯ ಸಿಂಹಾಸನದ ಅಧಿಕಾರವನ್ನು ಚನ್ನಬಸ
ವಣ್ಣನವರಿಗೆ ವಹಿಸಿಕೊಟ್ಟರೆಂದು ಶೂನ್ಯ ಸಂಪಾದನೆಯಲ್ಲಿಯೇ ಆಗಲಿ, ಅಥವಾ
ಇತರ ವೀರಶೈವ ಸಾಹಿತ್ಯದಲ್ಲಿಯೇ ಆಗಲಿ ನಮಗೆ ತಿಳಿದಮಟ್ಟಿಗೆ ಎಲ್ಲಿಯೂ
ಹೇಳಿಲ್ಲ. ಶೂನ್ಯ ಸಿಂಹಾಸನ ಕೇವಲ ಶರಣ ಸಂಗೋಷ್ಠಿಯ ಅಧ್ಯಕ್ಷ ಪೀಠವಾ
ದ್ದುದರಿಂದ ಅದನ್ನು ಅವರು ವಿಧ್ಯುಕ್ತವಾಗಿ ಚನ್ನಬಸವಣ್ಣನವರಿಗೇ ಆಗಲಿ,
ಇತರರಿಗೇ ಆಗಲಿ ವಹಿಸಿಕೊಡಬೇಕಾದ ಪ್ರಮೇಯವಿರಲಿಲ್ಲ. ಚನ್ನಬಸವಣ್ಣ
ನವರು ಆ ತರುವಾಯ ಆ ಶೂನ್ಯ ಸಿಂಹಾಸನದ ಎರಡನೆಯ ಅಧ್ಯಕ್ಷರಾದ
ರೆಂಬುದರಲ್ಲಿ ಯಾವ ಪ್ರಮಾಣವೂ ಇಲ್ಲ; ಅನುಮಾನವೂ ಇಲ್ಲ. ಆದರೆ, ಇದು
ನಿರಾಭಾರಿ ಪಟ್ಟವಲ್ಲ.

ಸಿಂಗಿರಾಜ ಪುರಾಣದಲ್ಲಿ—

"ನೋಡಿದರೆ ! ಚನ್ನಬಸವಂಗೆ ಪಟ್ಟವ ಕಟ್ಟಿ
ನಾಡೆಲ್ಲವಂ ಬೇಗದಿಂ ತನ್ನ ಕೈವಶಂ
ಮಾಡಿಕೊಂಡೇನ ಮಾಡುವನೊ ನಿಮ್ಮಡಿಗೆಂಬ ಸಂದೆಗಂ
ತೋರುತಿದೆಕೋ!

ಎಂದು ಕೊಂಡೆಯ ಮಂಚಣ್ಣ ಬಿಜ್ಜಳನಿಗೆ ತಿಳಿಸುವ ಸಂದರ್ಭದಲ್ಲಿ "ಚನ್ನಬಸ
ವಂಗೆ ಪಟ್ಟವ ಕಟ್ಟಿ" ಎಂಬ ಮಾತೇನೋ ಬಂದಿದೆ. ಇಲ್ಲಿ 'ಪಟ್ಟವ ಕಟ್ಟಿ

ಎಂಬ ಪದ ನಿರಾಭಾರಿ ಪಟ್ಟವನ್ನು ಸೂಚಿಸುವುದಿಲ್ಲ. ಬಸವಣ್ಣನವರು ರಾಜಕೀಯ ಸಂಘಟನಾ ಕಾರ್ಯಗಳಲ್ಲಿ ಚನ್ನಬಸವಣ್ಣನವರನ್ನು ಪ್ರಮುಖ ಸ್ಥಾನದಲ್ಲಿರಿಸಿ ಸಂಚು ನಡಸುತ್ತಿದ್ದರೆಂಬ ಧ್ವನಿ ಬರುವಂತೆ ಮಂಚಣ್ಣ ಬಿಜ್ಜಳನಿಗೆ ಚಾಡಿ ಹೇಳಿರುತ್ತಾನೆಂಬುದು ಸ್ಪಷ್ಟವಾಗಿದೆ. ರಾಜಕೀಯದ ಒಳಸಂಚಿನ ಭೂತದ ನೆರಳಿಗೆ ಬಿಜ್ಜಳ ಬೆದರಬೇಕಾಗಿತ್ತು! ಏಕೆಂದರೆ, ಅವನು ರಾಜ್ಯ ಸಂಪಾದಿಸಿದ್ದು ಒಳಸಂಚಿನಿಂದಲೇ! ಶರಣಸಂಗೋಷ್ಠಿಯ ಅಧ್ಯಕ್ಷಪಟ್ಟದಿಂದ ಬಿಜ್ಜಳನಿಗೇನೂ ಭಂಗವಿಲ್ಲ! ಒಂದು ವೇಳೆ ಚನ್ನಬಸವಣ್ಣನವರಿಗೆ ಮಂತ್ರಿ ಪಟ್ಟ ಕಟ್ಟಿದ್ದರಿಂದ ಬಿಜ್ಜಳನಿಗೇನಾಗಬಹುದೋ ಎಂಬ ಶಂಕೆಯಿರಬಹುದೇ! ಎಂದರೆ, ಬಸವಣ್ಣನವರು ಕಲ್ಯಾಣದಲ್ಲಿದ್ದಾಗಲೇ ಮಂತ್ರಿಪಟ್ಟ ಚನ್ನಬಸವಣ್ಣನವರಿಗೆ ಆಯಿತು; ಅದು ಬಿಜ್ಜಳನ ಸಮ್ಮತಿಯಿಂದಲೇ ಆಗಿರುತ್ತದೆ! ಆದ್ದರಿಂದ ಚನ್ನಬಸವಣ್ಣನವರಿಗೆ ನಿರಾಭಾರಿ ಪಟ್ಟವಾಗಿತ್ತೆಂದು ಊಹಿಸಲು ಸಾಧ್ಯವಿಲ್ಲ. ಇಲ್ಲಿ 'ಪಟ್ಟವ ಕಟ್ಟಿ' ಎಂಬುದು ವ್ಯಂಗ್ಯಾರ್ಥ ಸೂಚನೆ! ಅದು ಭಾರಿ ಪಟ್ಟ! ಮಂಚಣ್ಣ ಈ ಮಾತನ್ನು ಬಸವಣ್ಣನವರು ಕಲ್ಯಾಣವನ್ನು ಬಿಟ್ಟುಹೋದಮೇಲೆ ಬಿಜ್ಜಳನಿಗೆ ಹೇಳಿದ್ದರೆ, ಅದನ್ನು ಮಂತ್ರಿ ಪಟ್ಟವೆಂದು ನಂಬಿದರೂ, ಅದನ್ನು ಒಪ್ಪಿದ್ದ ಬಿಜ್ಜಳನನ್ನು ಮಂಚಣ್ಣ ಮೂದಲಿಸಿದಂತಾಗುತ್ತದೆ! ಹಾಗಿರಲಾರದು. ಆದ್ದರಿಂದ, ಚನ್ನಬಸವಣ್ಣನವರಿಗೆ ನಿರಾಭಾರಿ ಪಟ್ಟವಾಯಿತೆಂದು ಸಿಂಗಿರಾಜ ಪುರಾಣ ಸಮರ್ಥಿಸುವುದಿಲ್ಲ.

ಆದರೆ, ವಚನವಾಙ್ಮಯವನ್ನು ಸೂಕ್ಷ್ಮದೃಷ್ಟಿಯಿಂದ ಅವಲೋಕಿಸಿದರೆ, ಬಸವಣ್ಣನವರ ಮಹಮನೆಯನ್ನು ಮಠವೆಂದು ಶರಣರು ಅನೇಕ ಸಂದರ್ಭಗಳಲ್ಲಿ ಹೇಳಿರುವುದನ್ನು ಗಮನಿಸಬಹುದು. ಬಸವಣ್ಣನವರ ತರುವಾಯ ಶೂನ್ಯ ಸಂಪ್ರದಾಯದ ಮೂಲ ಮಠವೊಂದು ಕಲ್ಯಾಣದಲ್ಲಿ ಸ್ಥಾಪನೆಯಾಯಿತೆಂದು ಹೇಳಬಹುದು. ಶಿವಾನುಭವ ಪ್ರಚಾರವೇ ಆ ಮಠದ ಉದ್ದೇಶವಾಗಿತ್ತು. ಅಲ್ಲಮನಂಥ ಜಂಗಮರೇ ಶಿವಾನುಭವ ಮಂಟಪದಲ್ಲಿ ಶರಣಸಂಗೋಷ್ಠಿಯಲ್ಲಿ ಅಧ್ಯಕ್ಷರಾದುದರಿಂದ, ಅವರ ಹೆಸರಿನಿಂದಲೇ ಶೂನ್ಯ ಸಿಂಹಾಸನ ಪರಂಪರೆಯೊಂದು ಪ್ರಾರಂಭವಾಯಿತು! ಅದನ್ನು ವಿರಕ್ತ ಸಂಪ್ರದಾಯವೆಂದು ಕರೆಯುತ್ತಿದ್ದರು. ನೂತನ ಧರ್ಮದಲ್ಲಿ ವಿರಕ್ತರೆಲ್ಲಾ ಜಂಗಮರಾದರೂ ಜಂಗಮರೆಲ್ಲ ವಿರಕ್ತರಲ್ಲ! ವಿರಕ್ತಾಶ್ರಮವೇ ಸೃಷ್ಟಿಯಾಯಿತು! ಜೈನರ ಪಂಚಪರಮೇಷ್ಠಿ

ಗಳಲ್ಲಿ ಸಾಧು, ಬೌದ್ಧರಲ್ಲಿ ಪರಿವ್ರಾಜಕ, ವೈದಿಕರಲ್ಲಿ ಸಂನ್ಯಾಸಿ, ಈ ವೀರಶೈವ ವಿರಕ್ತನಂತೆ ! ಆದರೆ, ವೈಷ್ಣವರಲ್ಲಿಯೂ, ಜೈನರಲ್ಲಿಯೂ, ಬೌದ್ಧರಲ್ಲಿಯೂ ಗೃಹಸ್ಥಾಶ್ರಮಿ ಸಂನ್ಯಾಸಿಯಾಗುತ್ತಾನೆ. ಶೈವ ಮತ್ತು ವೀರಶೈವದಲ್ಲಿ ಆ ಪ ಪಾತವಿಲ್ಲ. ಬಸವಣ್ಣನವರ ತರುವಾಯ, ಕಲ್ಯಾಣದ ಕ್ರಾಂತಿಯಾದ ಕಲ್ಯಾಣದಲ್ಲಿ ವಿರಕ್ತ ಪೀಠ ಸ್ಥಾಪನೆಯಾಗಿರಲು ಸಾಧ್ಯ. ಆಗ ಚನ್ನಬಸವಣ್ಣ ನವರೂ ಕಲ್ಯಾಣವನ್ನು ಬಿಟ್ಟುಹೋಗಿದ್ದಿರಬೇಕು ! ಅನಂತರ ಅದು ಧಾರ್ಮಿಕ ಪೀಠವಾಯಿತೆಂದು ತೋರುತ್ತದೆ.

ಬಸವಣ್ಣನವರು ಸಮಾಜದಲ್ಲಿ ವಿಚಾರ ಕ್ರಾಂತಿಯನ್ನು ತಂದರು. ಅವ ಸಮಾಜದಲ್ಲಿ ರೂಢಮೂಲವಾಗಿದ್ದ ಅನೇಕ ಮೂಢ ನಂಬುಗೆಗಳನ್ನು ಬೇರು ಸಹಿತ ಅಲ್ಲಾಡಿಸಿದರು. ಅವರು ಕಂಡ ಹೊಸ ಸಮಾಜದಲ್ಲಿ 'ಹಾರುವ ಮೊದ ಅಂತ್ಯಜಕಡೆಯಾಗಿ ಅಂಗದ ಮೇಲೆ ಲಿಂಗವಿದ್ದವರೆಲ್ಲ ಒಂದೇ'. ಈ ಸಮಾಜ ವರ್ಣಭೇದವಿಲ್ಲ; ಆಶ್ರಮ ಪರಿಪಾತವಿಲ್ಲ; ಪಂಚಸೂತಕಗಳಿಲ್ಲ; ಧರ್ಮ ಯಲ್ಲಿ ಹೆಣ್ಣು ಗಂಡೆಂಬ ತಾರತಮ್ಯವಿಲ್ಲ. 'ಆತ್ಮ ಗಂಡೂ ಅಲ್ಲ; ಹೆಣ್ಣೂ ಅ ಲಿಂಗಧಾರಣೆಯಿಂದ ಶ್ವಪಚನೂ ಪವಿತ್ರನಾಗುತ್ತಾನೆ. ಸ್ಥಾವರ ಲಿಂಗ ಯನ್ನು ತ್ಯಜಿಸಿ, ಇಷ್ಟಲಿಂಗ ಪೂಜೆಯನ್ನು ಶಿವಭಕ್ತರೆಲ್ಲ ಮಾಡಬಹು ಗುರು, ಲಿಂಗ, ಜಂಗಮ ಇವು ಸಮಾಜದಲ್ಲಿ ಮುಖ್ಯ ಆರಾಧ್ಯತ್ರಯ. ನೀ ಧರ್ಮ, ಭಕ್ತಿ, ಜ್ಞಾನ, ವೈರಾಗ್ಯ ತತ್ತ್ವಗಳ ಮೇಲೆ ಈ ಸಮಾಜದ ರ ಯಾಯಿತು. ಈ ಸಮಾಜ ಜನಸಾಮಾನ್ಯರನ್ನೂ ಆಕರ್ಷಿಸಿತು. ಇಂಥ ಸು ಸುಂದರ ಸಮಾಜವನ್ನು ಬಸವಣ್ಣನವರು ಸ್ಥಾಪಿಸಿ, ಅದರ ವ್ಯವಸ್ಥೆಯ ಉಳಿಸಿಕೊಳ್ಳಲು ಧಾರ್ಮಿಕ ಪೀಠವೊಂದನ್ನು ಪ್ರತ್ಯೇಕವಾಗಿ ಸ್ಥಾಪಿಸಬೇ ದುದು ಸಹಜವಾಗಿಯೇ ಇತ್ತು ! ಸನಾತನ ವೀರಶೈವ ಈ ನೂತನ ವಿಚಾ ಕ್ರಾಂತಿಯನ್ನು ಒಪ್ಪಲಿಲ್ಲ ! ಈ ಮೊದಲೇ ಪಂಚ ಆಚಾರ್ಯ ಪೀಠಗಳಿದ್ದು ಶೂನ್ಯತತ್ತ್ವ ವಿವೇಚನೆ ಆ ಪ್ರಾಚೀನ ವೀರಶೈವ ಸಿದ್ಧಾಂತದಲ್ಲಿಯೇ ನಡೆದಿತ್ತು ಆದರೆ ಅವು ಬಸವಣ್ಣನವರ ಉದಾರ ನೀತಿಯನ್ನು ಅಂಗೀಕರಿಸಲಿಲ್ಲ. ಈ ಸಮಯದಲ್ಲಿ ಬಸವಣ್ಣನವರ ವಿಚಾರಕ್ರಾಂತಿಯನ್ನು ಅಂಗೀಕರಿಸಿ ರೇವ ಸಿದ್ಧರೂ ಮರುಳಸಿದ್ಧರೂ ವೀರಶೈವದ ಗುರುಸ್ಥಾನದಲ್ಲಿ ನಿಂತರು. ನೂತ ಗುರುಪೀಠಗಳೂ ಪ್ರಾಚೀನ ಗುರುಪರಂಪರೆಯನ್ನು ಹಿಡಿದು ಸ್ಥಾಪನೆಯಾದ

ಹನ್ನೆರಡನೆಯ ಶತಮಾನಕ್ಕಿಂತ ಹಿಂದೆಯೇ ಕೆಲವು ಗುರುಪೀಠಗಳಿದ್ದುವು. ನೂತನ ಆಚಾರ್ಯ ಪೀಠಗಳೂ ಉದಯವಾದುವು. ಅಂಥ ಗುರುಪೀಠಗಳಲ್ಲಿ ಸುತ್ತೂರು, ಎಳನಡು–ಅರಸಿಕೆರೆ, ಹೂಲಿ, ಶಿವಗಂಗೆ, ನಿಡುಮಾಮಿಡಿ, ತರಳ ಬಾಳು ಆಚಾರ್ಯ ಪೀಠಗಳು ಬಸವಣ್ಣನವರ ನೂತನ ಸಮಾಜವನ್ನು ನಾಡಿನಲ್ಲಿ ಬೆಳಸಿದುವು. ಕಲ್ಯಾಣದ ಕ್ರಾಂತಿಯಾಗುವ ಮೊದಲು ಶೂನ್ಯಸಿಂಹಾಸನ ರೂಪು ಗೊಂಡು ಬಹಳ ಕಾಲವಾಗಿರಲಿಲ್ಲ. ಅಲ್ಲಮರು ಶೂನ್ಯ ಪೀಠದಲ್ಲಿ ಮಂಡಿಸಿ, ಕಲ್ಯಾಣವನ್ನು ಬಿಟ್ಟುಹೋದ ಮರುವರ್ಷದಲ್ಲಿಯೇ ಕಲ್ಯಾಣ ಕ್ರಾಂತಿಯಾಯಿ ತೆಂದು ಸ್ಪಷ್ಟವಾಗಿ ತಿಳಿದುಬರುತ್ತದೆ. ಮೊದಲೇ ಬಸವಣ್ಣನವರು ಶಿವಭಕ್ತ ಮಾದಿಗರ ಹರಳಯ್ಯನ ಮಗನೊಂದಿಗೆ ಶಿವಭಕ್ತ ಬ್ರಾಹ್ಮಣ ಮಧುವರಸಯ್ಯನ ಮಗಳ ಮದುವೆಯನ್ನು ಮಾಡಿಸಿದ್ದರಿಂದ ಬಿಜ್ಜಳ ಕುಪಿತನಾದನು. ಆ ಇಬ್ಬರು ಶಿವಭಕ್ತರನ್ನೂ ಬಿಜ್ಜಳ ಆನೆಯ ಕಾಲಿಗೆ ಕಟ್ಟಿಸಿ ರಾಜಬೀದಿಯಲ್ಲಿ ಎಳೆಯಿಸಿ ದನು! ಬಿಜ್ಜಳನಿಗೂ ಬಸವಣ್ಣನವರಿಗೂ ಮನಸ್ತಾಪ ಬಂತು. ಬಸವಣ್ಣನವರು ಕಲ್ಯಾಣವನ್ನು ಬಿಟ್ಟುಬಂದಮೇಲೆ, ಸುಮಾರು ಮೂರು ತಿಂಗಳಲ್ಲಿಯೇ ಬಿಜ್ಜಳನ ಕಗ್ಗೊಲೆಯಾಯಿತು. ಬಸವಣ್ಣನವರ ತರುವಾಯ ಬಿಜ್ಜಳ ಚನ್ನಬಸವಣ್ಣನವ ರನ್ನು ಪ್ರಧಾನ ಮಂತ್ರಿಯಾಗಿ ನೇಮಿಸಿಕೊಂಡಿದ್ದನು. ಈ ಅಲ್ಪ ಅವಧಿಯಲ್ಲಿ ಚನ್ನಬಸವಣ್ಣನವರು ಶೂನ್ಯ ಸಿಂಹಾಸನದ ನಿರಾಭಾರಿ ಅಧಿಕಾರಿಯೂ ಆಗಿದ್ದರೆ? ವಿರಕ್ತಪೀಠದಲ್ಲಿ ಮಂಡಿಸಿದ ಚನ್ನಬಸವಣ್ಣನವರು ಮಂತ್ರಿಯಾಗಿರಲು ಸಾಧ್ಯವೆ? ಬಸವಣ್ಣನವರು ಮಂತ್ರಿಯಾಗಿದ್ದುದರಲ್ಲಿ ಪ್ರಮಾದವೇನೂ ಇಲ್ಲ. ನಿರಾಭಾರಿ ಪೀಠದಲ್ಲಿ ಪಟ್ಟಭದ್ರರಾದ ಚನ್ನಬಸವಣ್ಣನವರು ಮಂತ್ರಿಯೂ ದಂಡನಾಯ ಕನೂ ಆಗಿರಲು ಅವಕಾಶವಿಲ್ಲ. ಆದ್ದರಿಂದ ಶೂನ್ಯಪೀಠ ಆಗ ಕೇವಲ ಶಿವಾನು ಭವ ಗೋಷ್ಠಿಯ ಅಧ್ಯಕ್ಷ ಪೀಠವಾಗಿ ಮಾತ್ರ ಇತ್ತೆಂದು ನಿರ್ಧರಿಸಬಹುದು. ಚನ್ನಬಸವಣ್ಣನವರು ಶೂನ್ಯ ಸಿಂಹಾಸನದ ನಿರಂಜನ ಪಟ್ಟಾಧಿಕಾರಿಯಾಗಿ ದ್ದಂತೆ ಅವರ ವಚನಗಳಿಂದ ಗೊತ್ತಾಗುವುದಿಲ್ಲ.

ಬಿಜ್ಜಳನ ಕಗ್ಗೊಲೆಯೇನೋ ನಡೆಯಿತು! ಆಗ ಬಸವಣ್ಣನವರು ಕಲ್ಯಾಣದಲ್ಲಿಯೇ ಇದ್ದರೆಂದೂ, ಅವರ ಸಂಚಿನಿಂದಲೇ ಬಿಜ್ಜಳನ ವಧೆಯಾಯಿ ತೆಂದೂ ಬಸವರಾಜದೇವರ ರಗಳೆಯಲ್ಲಿಯೂ, ಗುಮ್ಮಳಾಪುರದ ಸಿದ್ಧಲಿಂಗ ದೇವರು ಮತ್ತು ಗೂಳೂರು ಸಿದ್ಧವೀರಣಾರ್ಯರು ರಚಿಸಿರುವ 'ಶೂನ್ಯ ಸಂಪಾ

ವಚನಗಳಲ್ಲಿಯೂ ಉಕ್ತವಾಗಿದೆ. ಜೈನ ಕಾವ್ಯಗಳೂ ಇವನ್ನು ಅನುಮೋದಿಸು ತ್ತಿವೆ ಭೀಮಕವಿ, ವಿರೂಪಾಕ್ಷ ಪಂಡಿತ, ಷಡಕ್ಷರದೇವ ಇವರೆಲ್ಲರೂ ಬಸವಣ್ಣ ನವರ ಆದೇಶದಂತೆ ಬಿಜ್ಜಳನ ಕೊಲೆಯಾಯಿತೆಂದು ಹೇಳುತ್ತಾರೆ. ಆದರೆ, ಸ್ಥಿತ ಪ್ರಜ್ಞರೂ ಪ್ರಶಾಂತಚಿತ್ತರೂ ಆದ ಬಸವಣ್ಣನವರು ಇಂಥ ದುಷ್ಕೃತ್ಯವನ್ನು ಮಾಡಿಸಲಾರರೆಂದು ನಂಬಲು ಸಾಕಾದಷ್ಟು ಪ್ರಮಾಣಗಳಿವೆ. ಸಿಂಗಿರಾಜ ಪುರಾಣದಲ್ಲಿ ಬಿಜ್ಜಳನ ಕೊಲೆಯ ವಿಚಾರವೇ ಇಲ್ಲ. ಬಸವಣ್ಣನವರ ಸಲಹೆ ಯಂತೆ ಬಿಜ್ಜಳನು ಚನ್ನಬಸವಣ್ಣನವರನ್ನು ಮಂತ್ರಿ ಪದವಿಗೆ ನೇಮಕ ಮಾಡಿ ಕೊಂಡನೆಂದು ಸಿಂಗಿರಾಜ ಪುರಾಣದಲ್ಲಿ ಹೇಳಿದೆ. ಇದು ಹೆಚ್ಚು ವಿಶ್ವಸನೀಯ ವಾಗಿದೆ. ಬಸವಣ್ಣನವರ ವಚನಗಳಲ್ಲಿಯೇ ಆಗಲಿ, ಇತರ ಯಾವ ಶರಣ ವಚನಗಳಲ್ಲಿಯೇ ಆಗಲಿ ಬಸವಣ್ಣನವರು ಬಿಜ್ಜಳನನ್ನು ವಧೆ ಮಾಡಿಸಿದರೆಂದು ಹೇಳಿಲ್ಲ. ಆ ಕಾಲದ ಯಾವುದೊಂದು ಶಿಲಾಶಾಸನದಲ್ಲಿಯೂ ಈ ವಿಚಾರ ಬಂದಿಲ್ಲ. ಅಲ್ಲದುದು ಕಲ್ಯಾಣದಿಂದ ನಿರ್ಗಮಿಸಿದಮೇಲೆ ಬಸವಣ್ಣನವರು ಕಪ್ಪಡಿ ಸಂಗಮಕ್ಷೇತ್ರಕ್ಕೆ ಬಂದು ನೆಲಸಿದರೆಂದು ನಿರ್ಧಾರವಾಗಿ ಹೇಳಬಹುದು. ಬಿಜ್ಜಳನ ವಧೆಯಾದಮೇಲೆ, ಆಳಿಯ ಬಿಜ್ಜಳನು ಚನ್ನಬಸವಣ್ಣನವರ ಮಹದಾನೆಯನ್ನು ಮುತ್ತಿದನು. ಆ ವೇಳೆಗಾಗಲೇ ಅವರು, ಮಡಿವಾಳ ಮಾಚಯ್ಯ, ಕಿನ್ನರಿ ಬೊಮ್ಮಯ್ಯ, ಪಡಿಹಾರಿ ಉತ್ತಣ್ಣ, ಕೂಗಿನ ಮಾರಯ್ಯ, ಹಡಪದ ರೇಚಣ್ಣ ಮೊದಲಾದ ಅಸಂಖ್ಯಾತ ಶರಣರೊಂದಿಗೆ ಕಲ್ಯಾಣವನ್ನು ಬಿಟ್ಟು, ಉಳವಿಯ ಕಡೆಗೆ ಧಾವಿಸಿದ್ದರು.

ಚನ್ನಬಸವಣ್ಣನವರು ಆಗ ಶೂನ್ಯ ಸಿಂಹಾಸನದ ಪಟ್ಟಾಧಿಕಾರಿಯಾಗಿ ಲಿಲ್ಲವೆಂದು ಹೇಳಲು ಅವಕಾಶವುಂಟು. ಕಲ್ಯಾಣದಲ್ಲಿ ಕ್ರಾಂತಿಯ ಕಿಡಿ ಹಾರು ತ್ತಿದ್ದುದನ್ನು ಮೊದಲೇ ಮನಗಂಡಿದ್ದ ಚನ್ನಬಸವಣ್ಣನವರು ಶೂನ್ಯ ಸಿಂಹಾಸ ನದ ಅಧಿಕಾರವನ್ನು ಸಿದ್ಧರಾಮಯ್ಯನವರಿಗೆ ವಹಿಸಿಕೊಡಲು ಪ್ರಯತ್ನ ಮಾಡಿ ದರು. ಆಗ ಸೊನ್ನಲಾಪುರದಲ್ಲಿದ್ದ ಸಿದ್ಧರಾಮಯ್ಯನವರು ಶೂನ್ಯಪೀಠ ಅಧ್ಯಕ್ಷರಾಗಲು ಒಪ್ಪಲಿಲ್ಲ. ಅಲ್ಲದೆ, ಆ ಪಟ್ಟವನ್ನು ಕಲ್ಯಾಣದಲ್ಲಿಯೇ ಇದ್ದ ರುದ್ರಮುನಿದೇವರಿಗೆ ವಹಿಸಬಹುದೆಂದೂ ಸಿದ್ಧರಾಮಯ್ಯನವರು ಹೇಳಿಕಳಿಸಿ ದರು. ಅವರಂತೆಯೇ ರುದ್ರಮುನಿದೇವರಿಗೆ ಈ ಪಟ್ಟವಾಯಿತೆಂದು ಹೇಳಬಹುದು. ಕಲ್ಯಾಣದ ವಿಪ್ಲವ ನಡೆದಾಗ ರೇವಣಸಿದ್ಧರು ರುದ್ರಮುನಿ ದೇವರನ್ನು ಆ ಸ್ಥಳ

ದಿಂದ ಬಿಡಿಸಿ, ಅವರೊಂದಿಗೆ ಶ್ರೀಶೈಲಕ್ಕೆ ಹೋಗಿ, ಅಲ್ಲಿ ಶೂನ್ಯ ಸಿಂಹಾಸನವನ್ನು ಸ್ಥಾಪಿಸಿದರೆಂದು ವೀರಶೈವ ವಾಙ್ಮಯದಿಂದ ಗೊತ್ತಾಗುತ್ತದೆ. ಚನ್ನಬಸವಣ್ಣನವರು ಆಗ ರಾಜಕೀಯ ಮುಖಂಡರಾಗಿದ್ದರು. ಅವರಿಗೆ ಇನ್ನೂ ಚಿಕ್ಕ ವಯಸ್ಸು. ಬಸವಣ್ಣನವರ ನೆರವೂ ಇರಲಿಲ್ಲ. ಆ ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ ಚನ್ನಬಸವಣ್ಣನವರಿಗೆ ಸೂಕ್ತ ಸಲಹೆ ಹೇಳಬಲ್ಲ ಸಮರ್ಥ ರಾಜಕೀಯ ನಿಪುಣರಿರಲಿಲ್ಲ. ಎಷ್ಟೋ ಜನ ಶರಣರಿದ್ದರು ! ಜಂಗಮಪುಂಗವರಿದ್ದರು ! ಅವರೆಲ್ಲ ತತ್ತ್ವಜ್ಞಾನ ಸಂಪನ್ನರಾಗಿದ್ದರೇ ಹೊರತು, ರಾಜಕಾರ್ಯ ಸಂಧಾನಚತುರರಾಗಿರಲಿಲ್ಲ ! ಚನ್ನಬಸವಣ್ಣನವರು ಮೊದಲುಗೊಂಡು ಯಾವ ಶರಣರೂ ಯುದ್ಧಮುಖವನ್ನೇ ಅರಿಯರು ! ರಾಜನೀತಿಯನ್ನು ತಿಳಿಯರು ! ಸುಸಜ್ಜಿತವಾದ ರಾಜಸೈನ್ಯವನ್ನು ಎದುರಿಸಲು ಶರಣರಿಗೆ ಧೈರ್ಯವೂ ಇರಲಿಲ್ಲ ! ಸಾಹಸವೂ ಇರಲಿಲ್ಲ ! ಅವರೆಲ್ಲ 'ವಚನ' ಪ್ರವೀಣರಾಗಿದ್ದರು ! ಉಳವಿ ಕ್ಷೇತ್ರ ಆಗ ಘೋರಾರಣ್ಯ ಪ್ರದೇಶವಾಗಿತ್ತು. ಅದು ಪಶ್ಚಿಮ ದಿಕ್ಕಿನಲ್ಲಿ ಸಹ್ಯಾದ್ರಿಶ್ರೇಣಿಯ ಸಾನುಪ್ರಾಂತದಲ್ಲಿದೆ. ಚನ್ನಬಸವಣ್ಣನವರು ತಮ್ಮ ಹಿಂಬಾಲಕರೊಂದಿಗೆ ಆ ರಾತ್ರಿ ಕಗ್ಗತ್ತಲೆಯಲ್ಲಿಯೇ ಕಲ್ಯಾಣವನ್ನು ಬಿಡಬೇಕಾಯಿತು. ಅಂಥ ದಾರುಣ ಪರಿಸ್ಥಿತಿ ಅಂದು ಕಲ್ಯಾಣದಲ್ಲಿತ್ತು ! ಆ ಗಡಿಬಿಡಿಯಲ್ಲಿ ಅವರು ಶೂನ್ಯ ಪೀಠವನ್ನೇ ಏಕೆ, ಕಲ್ಯಾಣವನ್ನೇ ಬಿಟ್ಟರೆಂದಮೇಲೆ, ಅವರು ಶೂನ್ಯ ಪೀಠದ ಶಿಖಾಶೈಲಗಳನ್ನೇನುಮಾಡಿದರೋ ! ಈ ವಿಚಾರವನ್ನು ಸಾವಧಾನ ಚಿತ್ತದಿಂದ ಆಲೋಚಿಸಬೇಕು ! ಚನ್ನಬಸವಣ್ಣನವರ ಕಾಲದಲ್ಲಿ ಶೂನ್ಯ ಸಿಂಹಾಸನ ಮಠವೊಂದು ಪ್ರತ್ಯೇಕವಾಗಿ ನಿರ್ಮಿತವಾಗಿರಲಿಲ್ಲ. ಬಸವಣ್ಣನವರ ಮಹಮನೆಯೇ ಶೂನ್ಯಪೀಠವಾಗಿತ್ತು ! ಆ ಶೂನ್ಯ ಸಿಂಹಾಸನ.ಧಾರ್ಮಿಕ ಪೀಠವಾಗಿದ್ದಿದ್ದರೆ, ಆ ನಿರಾಭಾರಿ ಅಧಿಕಾರಸೂಚಕವಾದ ಶಿಖಾಶೈಲವೇ ಮೊದಲಾದ ಸೂಚಮುದ್ರೆಗಳು ಸಿದ್ಧವಾಗಿರಬೇಕಾಗಿತ್ತು ! ಅವು ಸಿದ್ಧವಾಗಿದ್ದಿದ್ದರೆ, ಚನ್ನಬಸವಣ್ಣನವರು ಅವುಗಳನ್ನು ಆಗ ಶೂನ್ಯಪೀಠಾಧಿಕಾರಿಯಾದ ರುದ್ರಮುನಿದೇವರಿಗೆ ಕೊಟ್ಟಿರಬೇಕು ! ಇಲ್ಲವೆ, ಸಿದ್ಧರಾಮಯ್ಯನವರಿಗಾದರೂ ಕೊಟ್ಟಿರುತ್ತಿದ್ದರು ! ಒಂದು ವೇಳೆ ಅವರಲ್ಲಿ ಯಾರೊಬ್ಬರಿಗೂ ಕೊಡಲಿಲ್ಲವೆಂದರೂ, ಅವುಗಳನ್ನು ಭದ್ರಪಡಿಸಲು ಲಕ್ಷದಮೇಲೆ ತೊಂಭತ್ತಾರು ಸಾವಿರ ಜಂಗಮರಲ್ಲಿ ಯಾರೊಬ್ಬರ ವಶದಲ್ಲಿ ಆದರೂ ಇಡಬಹುದಾಗಿತ್ತು ! ಅದೂ ಆಗದಿದ್ದರೆ,

ಅವುಗಳನ್ನು ಸುರಕ್ಷಿತವಾಗಿ ತಮ್ಮ ಜೊತೆಯಲ್ಲಿಯೇ ಕೊಂಡಯ್ಯಬಹುದಾ ಗಿತ್ತು ! ವಚನಸಾಹಿತ್ಯದಲ್ಲಿ ಎಲ್ಲಿಯೂ ಈ ಪ್ರಸ್ತಾಪವೇ ಬಂದಿಲ್ಲ! ಪ್ರಾ ಭವದಿಂದ ಶರಣರ ಸಮೂಹ ಉಳವಿಯತ್ತ ಓಡಿದರೂ ಕಲ್ಯಾಣದ ದಂ ಅವರನ್ನು ಅಟ್ಟಿಸಿಕೊಂಡು ಹೋಗಿ, ನಡುದಾರಿಯಲ್ಲಿ ಕಾಳಗ ಮಾಡಿರ ಬೇಕು ! ಶರಣರು ಶತ್ರುಗಳೊಂದಿಗೆ ಬಡಿದಾಡಿದರೆಂಬ ಪ್ರತೀತಿಯಿದೆ. ಆದ್ದ ರಿಂದ, ಆತ್ಮರಕ್ಷಣೆ ಮಾಡಿಕೊಳ್ಳಲು ಸುಸಜ್ಜಿತರಾಗಿದ್ದರೆಂದು ತಿಳಿಯಬಹುದು. ಚನ್ನಬಸವಣ್ಣನವರ ಸಂಗಡ ಆ ಲಕ್ಷ ತೊಂಬತ್ತಾರು ಸಾವಿರ ಜಂಗಮರು ಸಹಾಯಕರಾಗಿದ್ದಂತೆ ಕಾಣುವುದಿಲ್ಲ. ಅವರು ಆ ಮಹಾ ಕ್ರಾಂತಿಯಲ್ಲಿ ದಿಕ್ಕು ಗೆಟ್ಟು, ದಾರಿ ತಪ್ಪಿ, ಭಯಭ್ರಾಂತರಾಗಿ, ಕಪಿನಿ ಕಮಂಡಲಗಳನ್ನೂ ಬಿಟ್ಟು ಸಿಕ್ಕಿದ ಕಡೆಗೆ ಓಡಿಹೋಗಿರಲೂ ಸಾಧ್ಯ ! ಅಂದಿನ ವಿದ್ಯಮಾನಗಳನ್ನು ಯಥಾ ವತ್ತಾಗಿ ಯಾವ ಶರಣರೂ ತಮ್ಮ ವಚನಗಳಲ್ಲಿ ತಿಳಿಸಿಲ್ಲ.

೫೫. "ಬಂದಿತ್ತು ದಿನ ಬಸವಣ್ಣ ಕಲ್ಲಿಗೆ, ಚನ್ನಬಸವಣ್ಣ ಉಳುವೆಯಲ್ಲಿಗೆ, ಪ್ರಭು
ಅಕ್ಕ ಕದಳಿದ್ವಾರಕ್ಕೆ, ಮಿಕ್ಕಾದ ಪ್ರಮಥರೆಲ್ಲರೂ ತಮ್ಮ ಲಕ್ಷ್ಯಕ್ಕೆ, ನಾನು
ತುರುವಿನ ಬೆಂಬಳಿಯಲ್ಲಿ ಹೋದ ಮರೆಯಲ್ಲಿ, ಅಡಗಿಹರೆಲ್ಲರೂ ಆ
ಮದ ಕೇಳಿ, ನಾ ಗೋಪತಿನಾಥ ವಿಶ್ವೇಶ್ವರ ಲಿಂಗದಲ್ಲಿಯೆ ಉಡುಗುವೆನು"

ಎಂದು ತುರುಗಾಹಿ ರಾಮಣ್ಣನವರ ವಚನದಿಂದ ವ್ಯಕ್ತವಾಗುತ್ತದೆ. ಆ ಕಲ್ಯಾ ಣದ ವಿಪ್ಲವದಲ್ಲಿ ಶರಣರು ತಮ್ಮ ತಮ್ಮ ಗಮ್ಯ ಸ್ಥಳಗಳಿಗೆ ಹೋದರು. ಚನ್ನ ವೃಂದ ಕಲ್ಯಾಣದಿಂದ ಹೊರಟು ತದ್ದೇವಾಡಿಯ ಪ್ರಾಂತವನ್ನು ದಾಟಿ, ಮಲ ಪ್ರಭಾ ನದಿಯ ತೀರದಲ್ಲಿಯೇ ನಡೆದು ಉಳವಿಯನ್ನು ಸೇರಿತೆಂದು ಚೆನ್ನಬಸವ ಪುರಾಣ, ಶರಣಲೀಲಾಮೃತ ಮತ್ತು ಕಾಲಜ್ಞಾನ ವಚನಗಳಿಂದ ತಿಳಿದುಬರು ತ್ತದೆ. ಅಲ್ಲದೆ, ಶರಣರು ಉಳುವೆಂಗುತ್ತ ಸುಳಿದಂತೆ ಅನೇಕ ಸ್ಥಳಗಳಲ್ಲಿ ಶಿಲಾ ವಿಗ್ರಹಗಳ ಕುರುಹುಗಳೂ ಇವೆ. ಈ ಶರಣರು ಗುಂಪು ಗುಂಪುಗಳಾಗಿ ಬೇರೆ ಬೇರೆ ಕಡೆಗಳಲ್ಲಿ ತಂಗುತ್ತ ತಮ್ಮ ತಮ್ಮ ಐಕ್ಯಸ್ಥಲಗಳಿಗೆ ಹೋದರೆಂದು ಈ ಕುರುಹುಗಳು ಸೂಚಿಸುತ್ತವೆ. ಈ ಶರಣರು ಕಲ್ಯಾಣದಿಂದ ಉಳುವೆಗೆ ಹೋದ ಮಾರ್ಗವನ್ನು ಸೂಚಿಸುವಂತೆ ಚನ್ನಬಸವಣ್ಣನವರ ಪರಮಾಪ್ತ ಶರಣರಾಗಿದ್ದ ರೇಚಣ್ಣನವರ ವಚನವೂ ಕಾಲಜ್ಞಾನವೂ ಅತಿ ಮುಖ್ಯವಾದ ಶೂನ್ಯ ಸಿಂಹಾಸನ ಪಟ್ಟವನ್ನು ಕುರಿತು ಏನೂ ಹೇಳಿಲ್ಲ ! ಸಂಸ್ಕೃತ, ಕನ್ನಡ ಮತ್ತು ಶಾಸನ

ಸಾಹಿತ್ಯದಲ್ಲಿಯೂ ಶೂನ್ಯ ಸಿಂಹಾಸನದ ವಿಚಾರವಾಗಲಿ, ಆ ಶೂನ್ಯ ಸಿಂಹಾಸನದ ಪಟ್ಟಾವಳಿಯಾಗಲಿ ನಿರ್ದುಷ್ಟವಾಗಿ ಎಲ್ಲಿಯೂ ಸೂಚಿತವಾಗಿಲ್ಲ. ಬಸವಣ್ಣನವರ ತರುವಾಯ ಬಂದ ಯಾವ ವಚನಕಾರರೂ ಶೂನ್ಯ ಸಿಂಹಾಸನವನ್ನು ಧಾರ್ಮಿಕ ಪೀಠವೆಂದು ಹೇಳಿಲ್ಲ. ಅಲ್ಲದೆ, ಆ ಪೀಠದ ನಿರಾಭಾರಿ ಪಟ್ಟಾವಳಿಯನ್ನೂ ತಿಳಿಸಿಲ್ಲ. ಹದಿನೈದನೆಯ ಶತಮಾನದಲ್ಲಿ ತೋಂಟದ ಸಿದ್ಧಲಿಂಗ ಯತೀಶ್ವರರು ತಮ್ಮ ಸಂಪ್ರದಾಯದ ನಿರಾಭಾರಿ ಪಟ್ಟಾವಳಿಯನ್ನು ತಮ್ಮ ಒಂದು ವಚನದಲ್ಲಿ ಹೇಳಿದ್ದಾರೆ. ತೋಂಟದ ಸಿದ್ಧಲಿಂಗ ಯತೀಶ್ವರರವರಿಗೆ ಆಗಿಹೋದ ಯಾವ ನಿರಾಭಾರಿಯೂ ಶೂನ್ಯ ಸಿಂಹಾಸನ ಪಟ್ಟಾವಳಿಯನ್ನು ಹೇಳಿಲ್ಲ. ಅವರಲ್ಲಿ ಅನೇಕರು ಮಹಾಮಹಿಮರಾಗಿದ್ದರು.; ಆದರೆ ವಚನಕಾರರಾಗಿರಲಿಲ್ಲ ! ಸಾಹಿತ್ಯ ರಚನೆ ಮಾಡಲಿಲ್ಲ ಎಂದು ತಿಳಿಯಬಹುದು. ಅಲ್ಲಮ ಸಂಪ್ರದಾಯದಲ್ಲಿ ಬಂದ ನಿರಾಭಾರಿ ಪಟ್ಟಾವಳಿಯನ್ನು 'ನಿರಂಜನ ವಂಶ ರತ್ನಾಕರ' ಎಂಬ ಅತ್ಯಾಧುನಿಕ ಗ್ರಂಥದಲ್ಲಿ ಹೇಳಿದೆ. ಇದನ್ನು ಲಿಂಗೈಕ್ಯ ರಾ|| ಬ|| ಪಿ. ಜಿ. ಹಳಕಟ್ಟಿ, ಬಿ.ಎ.,ಎಲ್‌ಎಲ್.ಬಿ., ಬಿಜಾಪುರ-ಅವರು ಸಂಪಾದಿಸಿ ಪ್ರಕಟಿಸಿರುತ್ತಾರೆ. ಇದನ್ನು ಬರೆದವರ ಹೆಸರು ಕುಲ ಗೋತ್ರಗಳು ತಿಳಿದು ಬಂದಿಲ್ಲ. ಇದನ್ನು ಪೂರ್ಣ ಪ್ರಮಾಣ ಗ್ರಂಥವೆಂದು ಹೇಳಲು ಸಾಧ್ಯವಿಲ್ಲ



# ತರಂಗ ೮.



## ನಿರಂಜನ ವಂಶರತ್ನಾಕರ; ನಿರಂಜನ ಪರಂಪರೆ

೩೬. "ತನುಬತ್ತಲೆ ಇದ್ದರೇನಯ್ಯಾ, ಮನ ಶುಚಿಯಾಗದನ್ನಕ್ಕರ ? ಮಂಡೆ ಬೋಳಾದಡೇನು ಭಾವಬಯಲಾಗದನ್ನಕ್ಕರ? ಭಸ್ಮವ ಪೂಜಿಸಿದಡೇನು, ಕರಣಾದಿಗುಣಂಗಳನೊತ್ತಿ ಮೆಟ್ಟಿ ಸುಡದನ್ನಕ್ಕರ ? ಇಂತೀ ಆಸೆಯ ವೇಷದ ಗುಹೇಶ್ವರ ಸಾಕ್ಷಿಯಾಗಿ ಛೀ ಎಂಬೆನು ಕಾಣಾ ಸಂಗನ ಬಸವಣ್ಣಾ."

—ಅಲ್ಲಮಪ್ರಭು.

ಚನ್ನಬಸವಣ್ಣನವರ ತರುವಾಯ ಶೂನ್ಯಪೀಠವನ್ನು ಸಿದ್ಧರಾಮದೇವರು

ಆರೋಹಣ ಮಾಡಿದರೆಂದು ಆ ಸಂಪ್ರದಾಯದವರು ಹೇಳುತ್ತಾರೆ. ಶ್ರೀ
ಪ್ರಭುದೇವರು, ಚನ್ನಬಸವಣ್ಣದೇವರು, ಸಿದ್ಧರಾಮದೇವರು–ಈ ಮೂವ
ಈ ಸಂಪ್ರದಾಯದಲ್ಲಿ ಪ್ರಸಿದ್ಧರಾಗಿದ್ದಾರೆ. ನಿರಂಜನ ವಂಶ ರತ್ನಾ
"ಶ್ರೀ ಗುರುಬಸವಲಿಂಗಾಯ ನಮಃ" ಶ್ರೀಮನ್ಮಹಾ ಶೂನ್ಯ ಸಿಂಹಾಸನಾಧೀ
ಜಗದ್ಗುರುಗಳಾದ ಅಲ್ಲಮ ಪ್ರಭು ಚನ್ನಬಸವರಾಜೇಂದ್ರ ಸ್ವಾಮಿಗಳವರ
ಪರಂಪರ ವಂಶರತ್ನಾಕರ ಪ್ರಭುವಂಶೋದ್ಭವರಾದ ಗುರುಗಳವರ ವಿವ
ಎಂದು ಪ್ರಾರಂಭವಾಗುತ್ತದೆ. ಅದರಲ್ಲಿ ೧. ಅಲ್ಲಮಪ್ರಭು ೨. ಚನ್ನಬಸ
೩. ಸಿದ್ಧರಾಮೇಶ್ವರ ೪. ಅನಾದಿ ಗಣನಾಥ ೫. ಆದಿಗಣೇಶ್ವರ ೬. ನಿ
ಗಣೇಶ್ವರ ೭. ನಿರಂಜನಸ್ವಾಮಿ ೮. ಜ್ಞಾನಾನಂದಸ್ವಾಮಿ ೯. ಆತ್ಮಗಣ
೧೦. ಅಧ್ಯಾತ್ಮ ಗಣಾನಾಥ ೧೧. ರುದ್ರಮುನಿಸ್ವಾಮಿ ೧೨. ಬಸವ
೧೩. ಆದಿಲಿಂಗಸ್ವಾಮಿ ೧೪. ಚನ್ನವೀರಸ್ವಾಮಿ ೧೫. ಗೋಸಲ ಸಿದ್ಧೇ
ಸ್ವಾಮಿ ೧೬. ಶಂಕರಾಚಾರ್ಯಸ್ವಾಮಿ ೧೭. ದಿವ್ಯಲಿಂಗೇಶ್ವರಸ್ವಾ
೧೮. ಚನ್ನಬಸವೇಶ್ವರ ೧೯. ತೋಂಟದ ಸಿದ್ಧಲಿಂಗೇಶ್ವರ ೨೦. ನಿ
ಬೋಳ ಬಸವೇಶ್ವರ ೨೧. ಸಿದ್ಧವೀರೇಶ ೨೨. ಗುರುಸಿದ್ಧದೇಶಿಕ ೨೩. ಗು
ದಾರ್ಯ ೨೪. ಸಿದ್ಧವೀರಸ್ವಾಮಿ ೨೫. ನೋಡ ಸಿದ್ಧಲಿಂಗದೇಶಿಕ-ಎ
ಇಪ್ಪತ್ತೈದು ಜನ ಸಿರಾಭಾರಿ ಪಟ್ಟಭದ್ರರ ಹೆಸರುಗಳನ್ನು ಅರಿಯಬಹು
ಒಬ್ಬೊಬ್ಬರ ವಿಷಯದಲ್ಲಿಯೂ ಯುಕ್ತ ಕಂಡಂತೆ ವಿವರಗಳನ್ನೂ ಅದು
ಸುತ್ತದೆ.

"ಶ್ರೀಮಚ್ಛಿನ್ಮೂಲಾದ್ರಿ ಸಮಸ್ತ ಪ್ರಭು ದ್ವಾರಾವತಿ ಜಟಪುರ ಶೂ
ಸಿಂಹಾಸನ ಬೃಹನ್ಮಠ ಮಹಾ ಗುರು ಸನ್ನಿಧಾನದಲ್ಲಿ ಕಲ್ಯಾಣ ಆದಿಯ
ಜಗದ್ಗುರುಗಳಾದ ಅಲ್ಲಮಪ್ರಭು ಚನ್ನಬಸವರಾಜೇಂದ್ರರು............ಮೂ
ಗುರುವು ಚನ್ನಬಸವೇಶ್ವರ ಸ್ವಾಮಿಗಳವರು........ಎಂದು ಮೊದಲನೆಯ ಪು
ದಲ್ಲಿ ಪ್ರಾರಂಭಿಸಿ ಎರಡನೆಯ ಪುಟದ ಅರ್ಧ ಭಾಗದಲ್ಲಿ ಈ ವಾಕ್ಯ ಮುಗಿ
ತ್ತದೆ. ಇದನ್ನು ನೋಡಿದರೆ ಈ ಪುಸ್ತಕವನ್ನು ಚಿತ್ರದುರ್ಗದ ಮುರು
ಮಠದವರು ಬರೆಯಿಸಿದರೆಂದು ವ್ಯಕ್ತವಾಗುತ್ತದೆ. ಇದರಲ್ಲಿರುವ ದ್ವಾರ
ಜಟಪುರ ಶೂನ್ಯ ಸಿಂಹಾಸನ ಎಂಬುದರ ವಿವರಗಳು ನಮಗೆ ಗೊತ್ತಿಲ್ಲ. ಇ
ಶಿವಾನುಭವ ಚರಂತಿಕೆ ಪಟ್ಟವೆಂದೂ ಹೇಳಿದೆ. ಜಗದ್ಗುರು ಎಂಬ ಉ

ಯನ್ನು ನಿರಾಭಾರಿಗಳಿಗೆ ಉಪಯೋಗಿಸಿರುತ್ತದೆ. ಈ ಪುಸ್ತಕ ೧೯೩೬ ನೆಯ ಇಸವಿಯಲ್ಲಿ ಮುದ್ರಣವಾಗಿದೆ. ಇದರಲ್ಲಿ ಉಕ್ತವಾಗಿರುವ ನೋಡಸಿದ್ಧಲಿಂಗ ದೇಶಿಕರು ಇಪ್ಪತ್ತೈದನೆಯ ನಿರಾಭಾರಿ. ಅವರ ಕಾಲ ಹದಿನೆಂಟನೆಯ ಶತಮಾನವೆಂದು ನಿರ್ಧರವಾಗಿರುತ್ತದೆ. ಆಗ ಇನ್ನೂ ಇಂಗ್ಲಿಷರು ಮೈಸೂರು ಸಂಸ್ಥಾನವನ್ನು ಜಯಿಸಿರಲಿಲ್ಲ, ಅವರ ಆಳಿಕೆ ಇಲ್ಲಿರಲಿಲ್ಲ. ಆಗಿನ್ನೂ ನವಾಬ್ ಹೈದರ್ ಅಲಿಖಾನ್ ಮೈಸೂರು ರಾಜ್ಯದ ರಾಜಪ್ರತಿನಿಧಿಯಾಗಿದ್ದನು. ಅವನ ತರುವಾಯ ಟೀಪೂ ಸುಲ್ತಾನ್ ಇಲ್ಲಿ ಆಳಿದನು. ಅವನು ಕ್ರಿ. ಶ. ೧೭೯೯ ರಲ್ಲಿ ನಾಲ್ಕನೆಯ ಮೈಸೂರು ಯುದ್ಧದಲ್ಲಿ ಮಡಿದಮೇಲೆ ಮುಮ್ಮಡಿ ಶ್ರೀಕೃಷ್ಣರಾಜ ಒಡೆಯರು ರಾಜ್ಯಾಧೀಶ್ವರರಾಗುತ್ತಾರೆ. ಅವರಿಗಿನ್ನೂ ಐದು ವರ್ಷ ವಯಸ್ಸು. ಆಗ ರಾಜ್ಯವನ್ನು ಗಡಿಗಳೆಂದೂ ತುಕಡಿಗಳೆಂದೂ ವಿಂಗಡಿಸಿರುತ್ತಾರೆ. ಈಗಿನ ತಾಲ್ಲೂಕನ್ನು ಆಗ ಗಡಿಯೆಂದು ಕರೆಯುತ್ತಿದ್ದರು. ಕಂಠೀರಾಯ ವರಹ ಆಗ ರಾಜ್ಯದ ಚಲಾವಣೆಯ ನಾಣ್ಯ. ಇಂಗ್ಲಿಷರು ಮೈಸೂರು ರಾಜ್ಯವನ್ನು ಅನೇಕ ರಾಜಕೀಯ ಕಾರಣಗಳಿಂದ ತಮ್ಮ ಆಡಳಿತಕ್ಕೆ ವಹಿಸಿಕೊಳ್ಳುತ್ತಾರೆ. ಕ್ರಿ. ಶ. ೧೮೩೦ ರಿಂದ ಇಂಗ್ಲಿಷರು ಮೈಸೂರು ದೇಶವನ್ನು ಸುಮಾರು ೫೦ ವರ್ಷಕಾಲ ಆಳಿದರು. ಅವರ ಆಳ್ವಿಕೆಯಲ್ಲಿ ಎಂದರೆ ಸುಮಾರು ೧೮೫೦ ರಲ್ಲಿ ರಾಜ್ಯವನ್ನು ತಾಲ್ಲೂಕುಗಳಾಗಿ ವಿಂಗಡಿಸಿ, ಡಿಸ್ಟ್ರಿಕ್ಟ್ ಎಂಬ ವಿಭಾಗಗಳನ್ನು ಮಾಡಿದರು. ಗಡಿ ಎಂಬ ಪ್ರದೇಶ ತಾಲ್ಲೂಕು ಎಂದಾಯಿತು. ಕಂಠೀರಾಯ ಹಣದ ಚಲಾವಣೆ ನಿಂತು, ರೂಪಾಯಿ ನಾಣ್ಯ ವ್ಯವಹಾರದಲ್ಲಿ ಬಂದಿತು. ನಿರಂಜನ ವಂಶ ರತ್ನಾಕರದಲ್ಲಿ ತಾಲ್ಲೂಕು, ರೂಪಾಯಿ ಎಂಬ ಶಬ್ದಗಳು ಪ್ರಯೋಗವಾಗಿರುವುದನ್ನು ಗಮನಿಸಿದರೆ, ಅದು ಬಹುಶಃ ಇಪ್ಪತ್ತನೆಯ ಶತಮಾನದಲ್ಲಿ ರಚಿತವಾದುದೆಂದು ಧಾರಾಳವಾಗಿ ನಿರ್ಧರಿಸಬಹುದು. ಇದರ ಭಾಷೆ ಬಂಧುರವಾಗಿಲ್ಲ; ಶೈಲಿಯಲ್ಲಿ ಪಾಂಡಿತ್ಯವಿಲ್ಲ. ಇದು ನೀರಸ, ನಿರ್ಗುಣಗ್ರಂಥ. ಇದನ್ನು ಪೂರ್ಣಪ್ರಮಾಣ ಗ್ರಂಥವೆಂದು ಒಪ್ಪಲು ಸಾಧ್ಯವಿಲ್ಲ. ಗ್ರಂಥಕರ್ತನ ಹೆಸರಾಗಲಿ, ಅವನ ಊರಾಗಲಿ, ಅವನ ಸ್ಥಾನಮಾನವಾಗಲಿ ತಿಳಿದುಬರುವುದಿಲ್ಲ. ಯಾರೋ ಮಠದ ಆಶ್ರಯದಲ್ಲಿದ್ದ 'ಅಯ್ಯ' ಈ ಗ್ರಂಥವನ್ನು ಆ ಮಠದ ವಿರಕ್ತರು ಒಪ್ಪುವಂತೆ ಬರೆದಿರುತ್ತಾನೆ. ಸಂಪಾದಕರಾದ ರಾವ್‌ಬಹಾದೂರ್ ಹಳಕಟ್ಟಿಯವರು ತಮ್ಮ ಪ್ರಸ್ತಾವನೆಯಲ್ಲಿ ಈ ಗ್ರಂಥದ ವಿಚಾರವನ್ನು ಕೂಲಂಕಷವಾಗಿ ವಿವರಿಸಿಲ್ಲ.

ಅದು ಯಾವಾಗ ರಚಿತವಾಗಿರಬಹುದೆಂಬುದನ್ನಾಗಲಿ, ಅದರಲ್ಲಿ ಬರುವ ಐ
ಹಾಸಿಕ ಘಟನೆಗಳನ್ನಾಗಲಿ ಅವರು ವಿಮರ್ಶಿಸುವ ಪ್ರಯತ್ನಗಳನ್ನೂ ಮಾ
ಲಿಲ್ಲ. ಇದು ಅವರ ಜಾಯಮಾನಕ್ಕೇ ಒಗ್ಗದ ರೀತಿ! ಇವರ ಹಸ್ತಲಿಖಿತ ಪ್ರತಿ
ಸಹಾಯದಿಂದ ಈ ಗ್ರಂಥವನ್ನು ಪ್ರಕಟಿಸಿದಂತೆ ಅವರು ಹೇಳಿರುತ್ತಾರೆ. ಆದ
ಪೂರ್ಣ ಪ್ರತಿಯೂ ದೊರೆಯಲಿಲ್ಲವಂತೆ! ಅದು ಯಾರಲ್ಲಿದೆಯೋ! ಮಠವ
ಪ್ರಯತ್ನಿಸಿದರೆ ಸುಲಭವಾಗಿ ದೊರೆತೀತು ! ಈ ಪುಸ್ತಕದ ಕಡೆಯ ಪುಟ
............"ಶ್ರೀ ಮುರಿಗಾರಾಜೇಂದ್ರ ಸ್ವಾಮಿಗಳವರು ಸರಿಯಾಗಿ ಸಿಂಹಾಸ
ರೂಢರಂ ಮಾಡಿಸಿ ಆಂಧೋಳಿಕ ಮುಂತಾದ ೭೨ ಬಿರುದುಗಳ ಸಮೇತವಾ
ಉತ್ಸಹಂಗೊಳಿಸಿ ಮಹಾ ಗಣಾರಾಧನೆಯಂ ಮಾಡಿಸಿದ ಬಳಿಕ ಸಕಲ ದೇ
ಭಕ್ತರು ಕಾಣಿಕೆಯಂ ಒಪ್ಪಿಸಿ ಉಭಯ"... .ಎಂದು ಸೂಚಿಸಿ ಇದಕ್ಕಿದ್ದಂತೆಯ
ನಿಂತುಬಿಟ್ಟದೆ. ಪಾಪ! ಮಹಾಗಣಾರಾಧನೆಯಾದಮೇಲೆ, ಕಾಣಿಕೆ ಒಪ್ಪಿ
ಮೇಲೆ ಇನ್ನೇನಿದೆ! ಎಂಥ ಅಮೂಲ್ಯ ಗ್ರಂಥ! ಪೂರ್ಣವಾಗಲಿಲ್ಲವೆಂದು ಪ
ದಿಸಬೇಕಾಗಿದೆ. ಈ ಪುಸ್ತಕದ ೪ನೆಯ ಪುಟದಲ್ಲಿ "ತಮ್ಮ ವಾಸದಲ್ಲಿ ಇದ್ದ ಸು
ರ್ಣದ ಶೂನ್ಯ ಸಿಂಹಾಸನ ಪ್ರಣವ ಶಿಖಾಶೈಲ ಶಿವಾನುಭವ ಪುಸ್ತಕವಂ ಶ್ರೀ ಚ
ಬಸವರಾಜೇಂದ್ರರಿಗೆ ಕೊಟ್ಟು" ಅಲ್ಲಮರು ಶ್ರೀಶೈಲದತ್ತ ಹೋದರೆಂದು ಹೇ
ಈ ಸುವರ್ಣದ ಸಿಂಹಾಸನ ಯಾವುದು ? ಯಾರು ಯಾವಾಗ ಮಾಡಿಸಿದ
ಪ್ರಣವ ಶಿಖಾಶೈಲ ಅಲ್ಲಮರಿಗೆ ಯಾರು ಕೊಟ್ಟರು ? ಶಿವಾನುಭವ ಪುಸ್ತ
ವೆಂದರೆ ಯಾವುದು ? ಇವೆಲ್ಲವೂ ಅಲ್ಲಮರಲ್ಲಿದ್ದುವೆಂಬುದಕ್ಕೆ ಸರಿಯಾ
ಆಧಾರವೇನು ? ಇದು ನಿರಂಜನ ವಂಶರತ್ನಾಕರದಲ್ಲಿ ಕಂಡ ಅಮೂಲ್ಯ ಸಿ
ಈಗಲೂ ಈ ಸುವರ್ಣ ಸಿಂಹಾಸನ, ಶಿಖಾಶೈಲ, ಶಿವಾನುಭವ ಪುಸ್ತಕ ಯಾ
ಶೂನ್ಯ ಸಿಂಹಾಸನ ಮಠದಲ್ಲಿವೆಯೋ ? ಇವು ಚಿತ್ರದುರ್ಗದ ಮುರುಘಾ ಮ
ದಲ್ಲಿವೆಯೇ? ಅಥವಾ ಇನ್ನಾವ ವಿರಕ್ತ ಮಠದಲ್ಲಿವೆಯೋ? ನಮಗೆ ತಿಳಿಯದ
ಚನ್ನಬಸವಣ್ಣನವರು ೭೨ ಬಿರುದುಗಳೊಂದಿಗೆ ಉತ್ಸವ ಮಾಡಿಸಿಕೊಳ್ಳುತ್ತಿ
ರೆಂದು ಈ ಪುಸ್ತಕದ ೬ ನೆಯ ಪುಟದಲ್ಲಿ ಹೇಳಿದೆ. ಈ ೭೨ ಬಿರುದುಗಳ
ಕೊಟ್ಟವರು ಯಾರು ? ಬಿಜ್ಜಳರಾಜ ಕೊಟ್ಟನೋ ! ಇಲ್ಲವೆ ಶಿವಭಕ್ತ ಸ
ಲವೇ ಅರ್ಪಿಸಿತೋ! ಅಲ್ಲಮರಿಗೆ ಈ ಬಿರುದಾವಳಿಗಳಿರಲಿಲ್ಲವೇನೋ? ಈಗ
ಈ ಬಿರುದುಗಳು ಈ ಸಂಪ್ರದಾಯದ ಮಠದಲ್ಲಿವೆಯೇ ? ಎಂಬುದನ್ನು ತಿಳಿ

ಪೇಕು. ಇದೇ ಪುಸ್ತಕದ ೭ ನೆಯ ಪುಟದಲ್ಲಿ ಬಿಜ್ಜಳ ರಾಜನು "ಹರಳಯ್ಯ ಮಧುವರಸರೆಂಬ ಶಿವಶರಣರನ್ನು ಎಳಹೂಟೆಯಿಂ ಕಟ್ಟಿಸಿ ಎಳಿಸತಕ್ಕ ಪ್ರಯತ್ನ ವನ್ನು ಪಟ್ಟಿದ್ದರಿಂದ ಇಂತಹ ಉತ್ಪಾತವನ್ನು ಕಣ್ಣಿಂದ ನೋಡಬಾರದೆಂತ ಚನ್ನಬಸವರಾಜೇಂದ್ರರು ಈ ಕಾಲಸೂಚನೆಯನ್ನು ತಮ್ಮ ದಿವ್ಯ ಜ್ಞಾನದಿಂದ ತಿಳಿದು ಪ್ರಭುದೇವರ ಅನುಭವ ಮಂಟಪಕ್ಕೆ ಸಕಲ ಪ್ರಮಥ ಗಣಂಗಳನ್ನು ಕರಿಸಿ ಸೂಚಿಸಿ ಮುಂದಾಗುವ ಕಾಲಜ್ಞಾನ ಸೂಚನೆಯಿಂ ಸಿದ್ಧರಾಮೇಶ್ವರ ರುದ್ರಮುನಿ ಸ್ವಾಮಿಗಳು ಮುಂತಾದ ಗಣಸಮೂಹಕ್ಕೆ ಅಪ್ಪಣೆಯಿಂ ಕೊಟ್ಟು" ಸಕಲ ಪ್ರಮಥರ ಮುಂದಿಟ್ಟುಕೊಂಡು ೧೨ ಸಾವಿರ ದಂಡಿಗೆ ಅಧಿಪತಿಯಾದ ಸೈನ್ಯಾಧೀಶನಾದ ಡಿಳ್ಳಿಯಿಂದ ಬಂದ ಮಲ್ಲುಖಾನನೆಂಬ ವಜೀರನನ್ನು ಕರಿಸಿ" ಸುವರ್ಣ ಶೂನ್ಯ ಸಿಂಹಾಸನ ಪ್ರಣವ ಶಿಖಾಶೈಲ ಈ ಮೂರು ವಸ್ತುಗಳನ್ನು ಆ ವಜೀರನ ಕೈಲಿ ಕೊಟ್ಟು, "ಇವುಗಳನ್ನು ನೀನು ಡಿಳ್ಳಿಗೆ ತೆಗೆದುಕೊಂಡು ಹೋಗುವಲ್ಲಿ ಕೆಲವು ದಿವಸದಲ್ಲಿ ನಿನಗೆ ಡಿಳ್ಳಿ ದವಲತ್ತು ಆಗಿ ಸಂಸ್ಥಾನವನ್ನು ನೀನೇ ಸುಖದಿಂದ ಆಳುವಿ" ಎಂದು ಹೇಳಿ ಮುಂದೆ ಇಬ್ಬರು ಮಹಿಮಾ ಪುರುಷರು ಡಿಳ್ಳಿಗೆ ಬಂದು ನಿನ್ನ ಸತ್ತ ಪಟ್ಟದ ಆನೆಯನ್ನು ಬದುಕಿಸುತ್ತಾರೆಂದೂ ಅವರಿಗೆ ಆ ಮೂರು ವಸ್ತುಗಳನ್ನು ಕೊಟ್ಟು ಕಳಿಸಬೇಕೆಂದೂ ಹೇಳಿದರೆಂದು ಉಕ್ತವಾಗಿದೆ. ಅಲ್ಲದೆ, "ನಾವು ನಮ್ಮ ಗಣ ಸಮೂಹ ಸಹಿತವಾಗಿ ಉಳವಿಗೆ ದಯಮಾಡಿಸುವೆವು. ನಮ್ಮ ಬೆಂಬಲವಾಗಿ ಉಳವಿ ಸಮೀಪವಾದ ಕರೆಹೊಳೆಯ ಗಟ್ಟದವರೆಗೂ ನಿನ್ನ ದಂಡು ಸಮೇತವಾಗಿ ಬಾಹುದೆಂದು ಅಪ್ಪಣೆಯಿಂ ಕೊಟ್ಟು" ಆಮೇಲೆ ತಮ್ಮ ಶಿಷ್ಯರಾದ ಸೊನ್ನಲಾಪುರದ ಸಿದ್ಧರಾಮೇಶ್ವರ ದೇವರಿಗೆ "ಮೂರು ಸಾವಿರ ವಿರಕ್ತರಿಂಗೆ ಗುರುಗಳಾಗಿರುವುದೆಂದು ಆಜ್ಞಾಪಿಸಿ ತಮ್ಮ ಶಿವಾನುಭವ ಚರಂತಿಗೆ ಪುಸ್ತಕವಂ ಕೊಟ್ಟು ಆಶೀರ್ವಾದವಂ ಮಾಡಿ, ಆಮೇಲೆ ಗಣಪರ್ವದ ಉದ್ದಿಶ್ಯ ಹೋಗುತ್ತೇವೆ ಎಂದು ಬಿಜ್ಜಳರಾಯನಿಗೆ ತಿಳಿಸಿ" ಚನ್ನ ಬಸವಣ್ಣನವರು ಉಳವಿಯತ್ತ ಹೊರಟರೆಂದು ಈ ನಿರಂಜನ ವಂಶರತ್ನಾಕರದಲ್ಲಿ ಹೇಳಿದೆ. ಎಂದರೆ, ಚನ್ನಬಸವಣ್ಣನವರು ಕಲ್ಯಾಣವನ್ನು ಬಿಡುವ ಸಮಯದಲ್ಲಿ ಹರಳಯ್ಯ ಮಧುವರಸರನ್ನು ಬಿಜ್ಜಳ ಎಳಹೂಟೆಯಿಂದ ಕೊಲ್ಲಿಸಿರಲಿಲ್ಲವೆಂದು ಸ್ಪಷ್ಟವಾಗಿದೆ. ಚನ್ನಬಸವಣ್ಣನವರೇ ಜ್ಞಾನದೃಷ್ಟಿಯಿಂದ ಮುಂದಾಗುವುದನ್ನು ಅರಿತು, ಮಲ್ಲೂಖಾನನಿಗೆ ಸುವರ್ಣ ಶೂನ್ಯ ಸಿಂಹಾಸನ, ಪ್ರಣವ ಶಿಖಾಶೈಲ

ಗಳನ್ನು ಒಪ್ಪಿಸಿ, ಸಿದ್ಧರಾಮಯ್ಯನವರಿಗೆ ಶಿವಾನುಭವ ಚರಂತಿಗೆ ಪುಸ್ತಕವನ್ನು ಕೊಟ್ಟು ಬಿಜ್ಜಳನಿಗೆ ತಿಳಿಸಿ ಗಣಪರ್ವದ ನೆಪದಿಂದ ಉಳವಿಗೆ ಹೊರಟರೆಂದು ಅರ್ಥವಾಗುತ್ತದೆ. ಅವರು ಹಾಗೆ ಕಲ್ಯಾಣದಿಂದ ಹೊರಟ ಸುದ್ದಿಯನ್ನು ಕೇಳಿ ಬಿಜ್ಜಳ ಅವರ ಬೆನ್ನಹತ್ತಿ ಬಂದನಂತೆ ! ಆ ಸಮಯದಲ್ಲಿ ಜಗದೇವ, ಮಲ್ಲ ಬೊಮ್ಮಯ್ಯ ಎಂಬ ಇಬ್ಬರು ಶಿವಭಕ್ತರು ಬಿಜ್ಜಳನನ್ನು ವಧೆ ಮಾಡಿದರಂತೆ! ಅಳಿಯ ಬಿಜ್ಜಳ ಶರಣರನ್ನು ಅಟ್ಟಿಸಿಕೊಂಡು ಹೋದನಂತೆ ! ಚನ್ನಬಸವಣ್ಣ ನವರು ಬಿಜ್ಜಳನ ಕೊಲೆಯನ್ನು ಕಣ್ಣಾರೆ ಕಂಡವರಲ್ಲ ! ಅವರು ಕಲ್ಯಾಣವನ್ನು ಬಿಡುವಾಗ ಪ್ರಶಾಂತ ಪರಿಸ್ಥಿತಿಯೇ ರಾಜಧಾನಿಯಲ್ಲಿತ್ತು ! ಆದ್ದರಿಂದ, ಅವರು ಶೂನ್ಯ ಸಿಂಹಾಸನ, ಶಿಖಾಶೈಲ ಇವುಗಳನ್ನೂ ಸಿದ್ಧರಾಮದೇವರೊಂದಿಗೆ ಸೊನ್ನ ಲಾಪುರಕ್ಕೆ ಕಳುಹಿಸಬಹುದಾಗಿತ್ತು ! ಸುವರ್ಣ ಶೂನ್ಯ ಸಿಂಹಾಸನವನ್ನು ಮಲ್ಲೂಖಾನನು ಡಿಳ್ಳಿಗೆ ಸಾಗಿಸುವುದಾದರೂ ಹೇಗೆ ? ಅವನೂ ಬಿಜ್ಜಳನ ವಜೀ ರನೇ ! ಬಿಜ್ಜಳನ ವಧೆಯಾದಮೇಲೆ ಕಲ್ಯಾಣದಲ್ಲಿ ಎಲ್ಲ ಶಿವಾಲಯಗಳೂ ಮಠ ಗಳೂ ಸುರಕ್ಷಿತವಾಗಿಯೇ ಇದ್ದುವು ! ಶೂನ್ಯ ಸಿಂಹಾಸನವೂ ಕಲ್ಯಾಣದಲ್ಲಿಯೇ ಮುಕ್ಕಾಗದಂತೆ ಇರಬಹುದಾಗಿತ್ತು! ಅಥವಾ ಸೊನ್ನಲಿಗೆಯಲ್ಲಾಗಲಿ, ಶ್ರೀಶೈಲ ದಲ್ಲಾಗಲಿ ನಿರಾತಂಕವಾಗಿ ಅದನ್ನು ಕಾಪಾಡಬಹುದಾಗಿತ್ತು ! ಶಿಖಾಶೈಲಗಳ ನ್ನಂತೂ ಎಲ್ಲಿಬೇಕಾದರೂ ಅಡಗಿಸಿಡಬಹುದಾಗಿತ್ತು ! ಸಿಂಹಾಸನದ ಮಾತಿ ರಲಿ ! ಶಿಖಾಶೈಲವನ್ನೂ ಶಿವಾನುಭವ ಪುಸ್ತಕದ ಜೊತೆಯಲ್ಲಿ ಸಿದ್ಧರಾಮದೇವ ರಿಗೇ ಕೊಡಬಹುದಾಗಿತ್ತು ! ಹಾಗೆ ಕೊಟ್ಟಿದ್ದರೆ ಶಿವಾನುಭವ ಚರಂತಿಗೆ ಪಟ್ಟ ವನ್ನೂ ಶಿಖಾ ಪಟ್ಟವನ್ನೂ ಸಿದ್ಧರಾಮಯ್ಯನವರಿಗೆ ಕೊಟ್ಟಂತಾಗುತ್ತಿತ್ತು! ಆಗ ಶಿಖಾ ಪಟ್ಟವೂ ಅವಿಚ್ಛಿನ್ನವಾಗಿ ನಡೆದುಬರಬಹುದಾಗಿತ್ತು ! ಮೂರು ಸಾವಿರ ವಿರಕ್ತರಿಗೆ ಗುರುವಾಗಬಹುದಾದ ಸಿದ್ಧರಾಮಯ್ಯನವರು ಶಿಖಾಶೈಲ ವನ್ನು ಪಡೆದು ಶೂನ್ಯ ಸಿಂಹಾಸನ ಪಟ್ಟದ ಸಿರಿಭಾರಿಯೇ ಆಗಿರಬಹುದಾಗಿತ್ತು! ಆದರೆ, ನಿರಂಜನವಂಶರತ್ನಾಕರವನ್ನು ಬರೆಯಿಸಿದವರು ಶಿಖಾಪಟ್ಟ ಚನ್ನಬಸ ವಣ್ಣನವರ ತರುವಾಯ ಚಿತ್ರದುರ್ಗದ ಮುರುಘಾ ಸಂಪ್ರದಾಯದವರಿಗೆ ಬಂದಿ ತೆಂಬುದನ್ನು ಸ್ಥಾಪಿಸಲು ಸಂಕಲ್ಪಿಸಿದಂತೆ ಬುದ್ಧಿವಂತರು ತಿಳಿಯಬಲ್ಲರು. ಶರಣರನ್ನು ಬೆನ್ನಟ್ಟಿ ಬಂದ ಅಳಿಯ ಬಿಜ್ಜಳ ಶರಣರ ಕೈಸೆರೆಯಾದನಂತೆ! ಬಿಜ್ಜಳನ ಸೈನಿಕರು ಅನೇಕರು ಮಡಿದುಬಿದ್ದರಂತೆ ! ಆಗ ಅಕ್ಕ ನಾಗಲಾಂಬಿ

ಪ್ರಾಣಿ ಹಿಂಸೆಯಾಯಿತೆಂದು ಚಿಂತಿಸಲು, ಚನ್ನಬಸವಣ್ಣನವರು ಮಡಿದವರಿಗೆ ಪ್ರಾಣದಾನ ಮಾಡಿ, ಅಳಿಯ ಬಿಜ್ಜಳನನ್ನು ಸೆರೆಯಿಂದ ಬಿಡಿಸಿ, ಅವನಿಗೇ ಕಲ್ಯಾಣದ ಪ್ರಭು ಪಟ್ಟವನ್ನು ಕಟ್ಟಿ ಕಳಿಸಿದರಂತೆ! ಸತ್ತವರನ್ನೆಲ್ಲಾ ಬದುಕಿಸುವ ಶಕ್ತಿಯಿದ್ದ ಚನ್ನಬಸವಣ್ಣನವರು ಕಲ್ಯಾಣವನ್ನು ಬಿಟ್ಟೇಕೆಬಂದರು! ಅದನ್ನು ಮುರುಘೇಶನೇ ಬಲ್ಲ! ಇದೇ ನಿರಂಜನ ವಂಶರತ್ನಾಕರದ ೧೨ ನೆಯ ಪುಟದಲ್ಲಿ "ಶ್ರೀ ಬಸವರಾಜೇಂದ್ರರು ಸಂಗಮನಾಥನಲ್ಲಿ ಅಡಕವಾದ ಮೂರು ತಿಂಗಳಿಗೆ ಚನ್ನಬಸವರಾಜೇಂದ್ರರು ಉಳಿವೆ ಮಹಾಮನೆಗೆ ದಯಮಾಡಿಸಿದರು. ಇಲ್ಲಿಗೆ ಅಲ್ಲಮ ಪ್ರಭು ಸ್ವಾಮಿಗಳವರ ಹಿಡಿದು ಶಿವಾನುಭವಪಟ್ಟವೆರಡು" ಎಂದು ಹೇಳಿದೆ. "ಮೂರನೆಯ ಶಿವಾನುಭವ ಚರಂತಿಗೆ ಪಟ್ಟದವರಾದ ಸೊನ್ನಲಿಗೆಯ ಸಿದ್ಧರಾಮೇಶ್ವರನು.........." ಎಂದೂ ಅದೇ ಪುಟದಲ್ಲಿ ಹೇಳಿದೆ. ಆದ್ದರಿಂದ ಚನ್ನಬಸವಣ್ಣನವರಿಗೆ ಶಿವಾನುಭವ ಪಟ್ಟವಾಗಿತ್ತೆಂದು ನಿರ್ಧರವಾಗಿ ಹೇಳಿದೆ. ಅವರ ತರುವಾಯ, ಸಿದ್ಧರಾಮಯ್ಯನವರಿಗೂ ಶಿವಾನುಭವ ಪಟ್ಟವೇ ಆದಂತೆ ಹೇಳಿದೆ. ಇಲ್ಲಿ ಶಿಖಾ ಪಟ್ಟದ ಪ್ರಸ್ತಾಪವೇ ಇಲ್ಲ. ಈ ವಿಚಾರದಲ್ಲಿ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳ ಭಾಷಣ ಮುಗ್ಗರಿಸಿದೆ; ದಾರಿ ತಪ್ಪಿದೆ. ಅಲ್ಲಮರು ಶ್ರೀಶೈಲದಲ್ಲಿ ಕದಳೀ ವನದಲ್ಲಿ ಬಯಲಾದರು: ಚನ್ನಬಸವಣ್ಣನವರು ಉಳವಿಯಲ್ಲಿ ಬಯಲಾದರು! ಮೂರನೆಯ ಸಿದ್ಧರಾಮರು ಸೊಲ್ಲಾಪುರದಲ್ಲಿ ಬಯಲಾದರು ಸಿದ್ಧರಾಮರು ಚರಂತಿಗೆ ಪಟ್ಟವನ್ನು ಅನಾದಿಗಣವರರಿಗೆ ಮಾಡಿದರು. ಅನಾದಿಗಣವರ ಗೊಹೆ ಎಂಬ ಸ್ಥಳದಲ್ಲಿ ಸಮಾಧಿ ಹೊಂದಿದರು. ಅವರ ತರುವಾಯ ಆದಿ ಗಣೇಶ್ವರರು ಪಟ್ಟಭದ್ರರಾದರು! ಅವರು ಗೊಹೆಯ ಮಠದಲ್ಲಿದ್ದರು. ಇವರ ಸಮಾಧಿ ಶಂಭುಲಿಂಗನ ಬೆಟ್ಟದ ಸಮೀಪದ ಪ್ರಭುಸ್ವಾಮಿ ಬೆಟ್ಟದಲ್ಲಿದೆ. ಅವರ ತರುವಾಯ ಶಿವಾನುಭವ ಚರಂತಿಗೆ ಪಟ್ಟ ನಿರ್ಮಾಯ ಗಣೇಶ್ವರರಿಗಾಯಿತು. ಇವರೇ ಪ್ರಸಿದ್ಧರಾದ ಮಹದೇಶ್ವರಸ್ವಾಮಿ. ಇವರು ಮಹದೇಶ್ವರ ಬೆಟ್ಟದಲ್ಲಿ ಬಯಲಾದರು. ಅವರ ಸಮಾಧಿ ಈಗಲೂ ಆ ಬೆಟ್ಟದ ಮೇಲಿದೆ. ಅವರ ತರುವಾಯ ನಿರಂಜನ ಗಣನಾಥರು ಶೂನ್ಯ ಸಂಪ್ರದಾಯದ ಸಿಂಹಾಧಾರಿಯಾದರು. ಇವರು ಹೊಯ್ಸಳ ದೇಶದ ವಿಷ್ಣುವರ್ಧನನ ಕಾಲದಲ್ಲಿ ಹರಿಹರ, ರಾಘವಾಂಕ, ಕೆರೆಯ ಪದ್ಮರಸ ಮೊದಲಾದ ಕವಿಗಳನ್ನು ಹರಸಿ, ಅಲ್ಲಿಂದ ಕಲ್ಯಾಣಕ್ಕೆ ಹೋಗಿ, ಅಲ್ಲಿರುವ ತ್ರಿಪುರಾಂತಕ ಕೆರೆಯ ತಟದಲ್ಲಿರುವ

ರುದ್ರಮುನಿಸ್ವಾಮಿಯ ಮಠದಲ್ಲಿ ಕೆಲವುಕಾಲ ಶಿವಯೋಗದಲ್ಲಿದ್ದರು. ಕ್ಷ ಜ್ಞಾನಾನಂದರೆಂಬ ವಿರಕ್ತರಿಗೆ ಶಿವಾನುಭವ ಚರಂತಿಗೆ ಪಟ್ಟವನ್ನು ಕೊ ಆ ಮಠದ ಹತ್ತಿರ ಒಂದು ಸಾವಿರ ಬಿಲ್ವ ವೃಕ್ಷಗಳನ್ನು ನೆಡಸಿ, ಕ್ಷ ಲಿಂಗೈಕ್ಯರಾದರು. ಆ ಮಠದಲ್ಲಿ ಎರಡು ಗದ್ದುಗೆಗಳಿವೆ. ಒಂದು ರುದ್ರ ಸ್ವಾಮಿಯ ಗದ್ದುಗೆ; ಇನ್ನೊಂದು ನಿರಂಜನ ಸ್ವಾಮಿಯ ಗದ್ದುಗೆ. ಈ ವಿರುವ ಸ್ಥಳವನ್ನು ಮರಿದೇವರಗುಡ್ಡವೆನ್ನುತ್ತಾರೆ.

ಜ್ಞಾನಾನಂದಸ್ವಾಮಿ ಎಂಬುವರು ಎಂಟನೆಯ ಶೂನ್ಯ ಪೀಠಾಧಿಪ ವರು. ಇವರು ಕಲ್ಯಾಣದಲ್ಲಿ ಪ್ರಭುಸ್ವಾಮಿ ಮಠವನ್ನು ಕಟ್ಟಿಸಿ, ಹಿಂದೆ ವಣ್ಣನವರು ಅಲ್ಲಮರನ್ನು ಶೂನ್ಯ ಸಿಂಹಾಸನದ ಮೇಲೆ ಕೂಡಿಸಿ ಪೂಜೆ ಮಾ ಸ್ಥಳದಲ್ಲಿಯೇ ಶೂನ್ಯ ಸಿಂಹಾಸನವನ್ನು ರಚಿಸಿ, ಅಲ್ಲಿಯೇ ಅನೇಕ ಕಾಲ ಜಂಗಮ ದಾಸೋಹವನ್ನು ನಡಸುತ್ತ ಲಿಂಗಪೂಜಾನಂದದಲ್ಲಿದ್ದರು. ಕ್ಷ ಅವರು ಶ್ರೀಶೈಲಕ್ಕೆ ಹೋದರು. ಅಲ್ಲಿ ಶಿವಾನುಭವ ಚರಂತಿಗೆ ಪಟ್ಟವನ್ನು ಗಣನಾಥರಿಗೆ ವಹಿಸಿ, ತಾವು ಶ್ರೀಶೈಲದಲ್ಲಿಯೇ ಬಯಲಾದರು. ಮೂಲ ಸಿಂಹಾಸನ ವಾಸ್ತವವಾಗಿ ಇವರ ಕಾಲದಲ್ಲಿ ಕಲ್ಯಾಣದಲ್ಲಿ ಸ್ಥಾಪನೆಯಾ ಇದು ಧಾರ್ಮಿಕ ವಿರಕ್ತ ಪೀಠವೆಂದು ಪರಿಗಣಿತವಾಯಿತು! ಇವರ ಗದ್ದು ಶ್ರೀಶೈಲದಲ್ಲಿ ಪ್ರಭುದೇವರ ಮಠದಲ್ಲಿದೆ. ಅನಂತರ ಆತ್ಮ ಗಣನಾಥ ಕೂಡಲೇ ವಿರಕ್ತ ಪಟ್ಟವನ್ನು ವೈರಾಗ್ಯಭಾವದಿಂದ ತ್ಯಜಿಸಿ, ಅಧ್ಯಾತ್ಮ ಗಣನಾ ರಿಗೆ ಪಟ್ಟ ಕಟ್ಟಿದರು. ಆತ್ಮ ಗಣನಾಥರ ಗದ್ದುಗೆ ಕದಳೀವನದಲ್ಲಿದೆ.

ಹತ್ತನೆಯ ಸಿರಾಭಾರಿ ಪಟ್ಟದ ಅಧ್ಯಾತ್ಮ ಗಣನಾಥರು ತಮಿಳುನಾ ಸಂಚರಿಸುತ್ತ ಅರುಣಾಚಲದಲ್ಲಿ ಶಿವಯೋಗ ನಿರತರಾಗಿ ಬಹಳ ಕಾಲ ಅಲ್ಲಿ ಇದ್ದರು. ಅವರು ರುದ್ರಮುನಿ ಸ್ವಾಮಿ ಎಂಬುವರಿಗೆ ನಿರಂಜನ ಪಟ್ಟವನ್ನು ಗ್ರಹಿಸಿ, ಅವರು ಅಲ್ಲಿಯೇ ಲಿಂಗವಾದರು. ಅವರ ತೋರ ಗದ್ದುಗೆ ತಿರುವ ಮಲೆಯಲ್ಲಿದೆ. ಅವರಿದ್ದ ಗವಿಯನ್ನು ಕೆಂಗನಮಶ್ಶಿವಾಯರ ಗವಿ ಕರೆಯುತ್ತಾರೆ. ಹನ್ನೊಂದನೆಯವರೇ ಈ ಪರಂಪರೆಯಲ್ಲಿ ರುದ್ರಮುನಿಸ್ವಾ ಎಂಬುವರು. ಇವರನ್ನು ತಿಪ್ಪೇರುದ್ರಸ್ವಾಮಿ ಎಂದೂ ಕರೆಯುತ್ತಾರೆ. ತಮಿಳುನಾಡಿನಿಂದ ಹೊರಟು, ಹದಿನಾಡು ರಾಜ್ಯದಲ್ಲಿ ಸಂಚರಿಸಿ, ಎಳಂದೂ ನಂಜನಗೂಡು, ಎಡೆಯೂರು, ಶಿವಗಂಗೆ, ಸಿದ್ಧಗಂಗೆ, ಸಿದ್ಧರ ಬೆಟ್ಟ-

ಲಾದ ಪ್ರಾಂತಗಳಲ್ಲಿ ಸಂಚರಿಸಿ, ನಿಡುಗಲ್ಲು, ಪಟ್ಟಣಕ್ಕೆ ಬಂದರು. ಅಲ್ಲಿ ಚನ್ನಪ್ಪಯ್ಯನೆಂಬ ಕವಿಯನ್ನು ಅನುಗ್ರಹಿಸಿ, ರಾಯದುರ್ಗ, ಎರಡುಕೆರೆ, ಮೊಳಕಾಲ್ಮುರು, ಮಾರ್ಗವಾಗಿ ನಾಯಕನಹಟ್ಟಿಗೆ ಬಂದು ಅಲ್ಲಿ ಶಿವಯೋಗದಲ್ಲಿದ್ದು ಬಯಲಾದರು. ಜನರು ಇವರನ್ನು ತಿಪ್ಪೇರುದ್ರಸ್ವಾಮಿ ಎಂದು ಕರೆಯುತ್ತಾರೆ. ಇವರ ಗದ್ದುಗೆ, ದೇವಸ್ಥಾನ ಈಗಲೂ ನಾಯಕನಹಟ್ಟಿಯಲ್ಲಿವೆ. ಇವರ ಗದ್ದುಗೆಯನ್ನು ನಾಯಕರೆಂಬ ಬೇಡರ ಜಾತಿಯವರು ಪೂಜಿಸುತ್ತಾರೆ. ಇದು ಚಿತ್ರದುರ್ಗದಿಂದ ಪೂರ್ವಕ್ಕೆ ಎರಡು ಗಾವುದ ದೂರದಲ್ಲಿದೆ. ನಿಡುಗಲ್ಲು ಕವಿ ಚನ್ನಪ್ಪಯ್ಯನವರು ಈ ಲೇಖಕರ ವಂಶದ ಮೂಲ ಪುರುಷ ಓದಿನ ನಂಜಪ್ಪಯ್ಯನವರ ಕಿರಿಯ ಸಹೋದರರೆಂದು ನಮ್ಮ ಹಿರಿಯರು ಹೇಳುತ್ತಾರೆ. ಇವರು ಕೂಲಿಯ ಮಠದ ಅಯ್ಯನವರಾಗಿದ್ದರು. ನಿಡುಗಲ್ಲು ಮಠದ ನಂಜಪ್ಪಯ್ಯನವರ ವಂಶದ ಓದಿನ ಮಲ್ಲಯ್ಯನವರು ನಿಡುಗಲ್ಲು ಪಾಳೆಯಪಟ್ಟು ಹಾಳಾದ ಕಾಲದಲ್ಲಿ ಇತರ ಬಂಧುಗಳೊಂದಿಗೆ ಉತ್ತರ ಪಿನಾಕಿನಿ ತೀರಪ್ರದೇಶಗಳಲ್ಲಿ ಬಂದು ನಿಂತರು. ಇವರ ಮನೆತನದವರು ಮಿಡಿಗೇಶಿ, ಹೊಳವನಹಳ್ಳಿ, ಇರಕಸಂದ್ರ, ನ್ಯೈದಾಳ, ಮಧುಗಿರಿ, ಮಂಚೇನಹಳ್ಳಿ, ಅದ್ದೆಕೊಪ್ಪ, ಶ್ರಾವಂಡನಹಳ್ಳಿ, ಗೋಡಲಾಪುರ ಮೊದಲಾದ ಸ್ಥಳಗಳಲ್ಲಿ ನೆಲಸಿದರಂತೆ! ಓದಿನ ಮಲ್ಲಯ್ಯನವರು ಪುರಾಣ ಪ್ರವಚನ ನಿಪುಣರೆಂದು ಜನರು ಹೇಳುತ್ತಿದ್ದರು. ಅವರ ತರುವಾಯ, ಅವರ ಹಿರಿಯ ಪುತ್ರರು ಓದಿನ ನಂಜುಂಡಯ್ಯನವರು ಜ್ಯೋತಿಷ್ಯ ಶಾಸ್ತ್ರ, ಪುರಾಣಗಳಲ್ಲಿ ಪಂಡಿತರಾಗಿದ್ದರಂತೆ. ಅವರು ಜೈನಶಾಸ್ತ್ರದಲ್ಲಿಯೂ ವಿದ್ವಾಂಸರಾಗಿದ್ದು, ಜೈನರ ಬಸದಿಗಳಲ್ಲಿ ತಿಂಗಳುಗಟ್ಟಲೆ ಕಾಲ ಜೈನ ಪುರಾಣಗಳನ್ನು ಓದಿ ಅರ್ಥ ಹೇಳುತ್ತಿದ್ದರು. ಜೈನರ ವಿವಾಹಾದಿ ಶುಭ ಕಾರ್ಯಗಳಲ್ಲಿ ಓದಿನ ನಂಜುಂಡಯ್ಯನವರು ಶಾಸ್ತ್ರ ಕಾರ್ಯಗಳನ್ನು ಜೈನ ಪುರೋಹಿತರ ಸಹಾಯದಿಂದ ನಡಸುತ್ತಿದ್ದರೆಂದು ಈಗಲೂ ಜೈನ ಬಂಧುಗಳಲ್ಲಿ ಹಿರಿಯರು ಹೇಳುತ್ತಾರೆ. ನಮಗೆ ಜೈನ ಮತದಲ್ಲಿ ತುಂಬ ಗೌರವವಿದೆ. ಈಗಲೂ ಮೂಡಲ ಸೀಮೆಯ ಜೈನರು ನಮಗೆ ಹಿತವರೂ, ಮಿತ್ರರೂ, ಆಪ್ತರೂ ಆಗಿದ್ದಾರೆಂದು ಅಭಿಮಾನದಿಂದ ಹೇಳುತ್ತೇವೆ. ಈ ಮನೆತನದ ಅದ್ದೇಕೊಪ್ಪದ ಪಟ್ಟದದೇವರ ಮಗಳು ಸಿದ್ಧಲಿಂಗಮ್ಮನವರನ್ನು ಗುಬ್ಬಿ ತೋಟದಪ್ಪನವರಿಗೆ ಕೊಟ್ಟು ಮದುವೆಯಾಗಿತ್ತು. ಈಗ ನಿಡುಗಲ್ಲು ವಂಶದವರು ವ್ಯಾಪಾರ, ವ್ಯವಸಾಯಗಳಲ್ಲಿ ಹೆಚ್ಚು ಪರಿಶ್ರಮವು

ಳ್ಳವರಾಗಿದ್ದಾರೆ. ಶಾಸ್ತ್ರಾಭ್ಯಾಸಗಳಲ್ಲಿ ಹಿಂದೆ ನಿಂತರು. ಇಂಗ್ಲಿಷ್ ಭಾಷಾಭ್ಯಾಸ ದಲ್ಲಿ ಅನೇಕರು ಪದವೀಧರರಾಗಿ ಸರ್ಕಾರದ ಹುದ್ದೆಗಳಲ್ಲಿ ಅಧಿಕಾರಿಗಳಾಗಿದ್ದಾರೆ. ಕಾಲಾಯತಸ್ಮೈನಮಃ !

ಹನ್ನೆರಡನೆಯ ಪಟ್ಟ ಬಸವಪ್ರಭುಸ್ವಾಮಿ. ಇವರ ಗದ್ದುಗೆ ಶ್ರೀ... ದಲ್ಲಿದೆ. ಅಲ್ಲಿ ಶೂನ್ಯ ಪೀಠವೆಂಬ ಗದ್ದುಗೆಯನ್ನು ನಿರ್ಮಿಸಿ, ಅದರ... ಮುಗಿ, ಬೆತ್ತ, ಹಾವುಗೆಗಳನ್ನು ಇರಿಸಿರುತ್ತಾರೆ. ಇದನ್ನು ಮುಗಿ ಪ್ರಭು ಗ... ಎಂದು ಕರೆಯುತ್ತಾರೆ. ಇದನ್ನು ಶೂನ್ಯ ಪೀಠವೆಂದು ಕೆಲವರು ಹೇಳುತ್ತಾರೆ. ಆದರೆ, ಅದನ್ನು ಆ ಸಂಪ್ರದಾಯದ ಮಠವೆಂದು ಹೇಳಬಹುದು.

ಹದಿಮೂರನೆಯ ಆದಿಲಿಂಗಸ್ವಾಮಿಗಳ ಗದ್ದುಗೆ ಕಲ್ಲೂರಲ್ಲಿದೆ. ... ಗೊಡಚಿ ವೀರೇಶನ ದೇವಾಲಯದಲ್ಲಿ ತಮ್ಮ ಶಿವಾನುಭವ ಚರಂತಿಗೆ ಪಟ್ಟ... ಚನ್ನವೀರಸ್ವಾಮಿ ಎಂಬುವರಿಗೆ ವಹಿಸಿದರು. ಅವರು ಭಕ್ತರಿಗೆ ಅನುಗ್ರಹ... ಭಸ್ಮದ ಗಟ್ಟಿಯನ್ನೇ ಜನರು ಪೂಜಿಸುತ್ತಿರಲು, ಕೆಲವು ಕಾಲಾನಂತರ, ... ಸಿದ್ಧೇಶ್ವರನೆಂಬ ಶಿಲಾಮೂರ್ತಿಯಾಯಿತು ! ಅದನ್ನು ಈಗಲೂ ಸಿದ್ಧೇ... ಎಂದು ಪೂಜಿಸುತ್ತಾರೆ.

ಹದಿನಾಲ್ಕನೆಯ ಪಟ್ಟ ಚನ್ನವೀರಸ್ವಾಮಿ. ಇವರು ಶಿವಗಂಗೆಯ ... ಮುನಿದೇವರ ಸಂಗಡ ಸೊಗಲಕ್ಷೇತ್ರ, ಮುನಿಪಲ್ಲಿಯ ಪಂಚಲಿಂಗೇಶ್ವರ ಕ್ಷೇ... ಹೂಲಿ ಕ್ಷೇತ್ರಗಳಲ್ಲಿ ಸಂಚರಿಸಿ, ಹೂಲಿಯಲ್ಲಿ ಶಿವಾನುಭವ ಚರಂತಿಯ ... ವನ್ನು ಗೋಸಲ ಸಿದ್ಧೇಶ್ವರರಿಗೆ ವಹಿಸಿ, ಮುನಿಪಲ್ಲಿಯ ಪಂಚಲಿಂಗೇಶ್ವರ ದೇ... ಲಯದಲ್ಲಿರುವ ಮಠದಲ್ಲಿ ಬಯಲಾದರು. ರುದ್ರಮುನಿದೇವರೂ ಅಲ್ಲಿ... ಲಿಂಗವಾದರು. ಈ ರುದ್ರಮುನಿದೇವರು ಯಾರೋ ತಿಳಿಯದು.

ಹದಿನೈದನೆಯ ಗೋಸಲ ಸಿದ್ಧೇಶ್ವರರು ಐಹೊಳೆ, ಪಟ್ಟದಕಲ್ಲು, ... ಲಾದ ಸ್ಥಳಗಳಲ್ಲಿ ಸಂಚರಿಸಿ, ಐಹೊಳೆಯ ಪಂಚವಕ್ತ್ರ ಗಣಾಧೀಶ್ವರನನ್ನು ... ಗ್ರಹಿಸಿದರು. ಇದು ಸರಿಯಲ್ಲ. ಪಂಚವಕ್ತ್ರ ಗಣಾಧೀಶ್ವರರು ಸನಾತನ ... ಚಾರ್ಯರಿಗಿಂತಲೂ ಹಿಂದೆ ಇದ್ದವರೆಂದು ಹೇಳಬಹುದು. ಈ ವಿರಕ್ತರ ... ದಲ್ಲಿ ಮಹಾನಾಡಶೆಟ್ಟಿ ಮತ್ತು ವಾಣಿಜ್ಯಶೆಟ್ಟಿ ಎಂಬ ಪಂಗಡಗಳು ಲಿಂಗಾ... ರಲ್ಲಿ ಏರ್ಪಟ್ಟವಂತೆ. ಇದು ವಿಶ್ವಾಸಾರ್ಹವಲ್ಲ. ಸಮಾಜದ ರಚನೆ ...

ಶತಮಾನಗಳ ಹಿಂದೆಯೇ ನಡೆದಿತ್ತು. ಬಹುಶಃ ಬಸವಣ್ಣನವರ ಶರಣ ಸಮಾಜದಲ್ಲಿ ಈ ವ್ಯವಸ್ಥೆಯಾಯಿತೇನೋ ? ಇದು ಗಮನಾರ್ಹವಾದ ಸಂಗತಿ. ಅನಂತರ ಸಿದ್ಧೇಶ್ವರರು ಈಗಿನ ಹರಪನಹಳ್ಳಿ ಎಂದರೆ ವಾಣಿಜ್ಯಪುರದ ಮಠದಲ್ಲಿ ಶಿವಾನುಭವ ಚರಂತಿಗೆ ಪಟ್ಟವನ್ನು ಶಂಕರಾಚಾರ್ಯ ಸ್ವಾಮಿಗಳಿಗೆ ಕಟ್ಟಿ, ಅಲ್ಲಿಂದ ಸಂಚರಿಸುತ್ತ ತುಮಕೂರಿಗೆ ಹರಿದಾರಿ ದೂರದಲ್ಲಿರುವ ಸಿದ್ಧಗಂಗಾ ಕ್ಷೇತ್ರದ ಬೆಟ್ಟದಲ್ಲಿ ತಪಸ್ಸು ಮಾಡಿದರು. ಅವರೊಂದಿಗೆ ಇದ್ದ ನೂರೊಂದು ವಿರಕ್ತರೂ ಅಲ್ಲಿರುವ ನೂರೊಂದು ಗುಹೆಗಳಲ್ಲಿ ಶಿವಯೋಗನಿರತರಾಗಿದ್ದರು. ಅವರಲ್ಲಿ ಒಬ್ಬ ವಿರಕ್ತರಿಗೆ ನಡುರಾತ್ರಿಯಲ್ಲಿ ಅವಸಾನಕಾಲ ಪ್ರಾಪ್ತವಾಯಿತು. ಆಗ ಆ ಗುಹೆಯಲ್ಲಿ ಎಣ್ಣೆಯಿಲ್ಲದೆ ದೀಪ ನಂದಿಹೋಗುತ್ತಿತ್ತು. ಪ್ರಾಣೋತ್ಕ್ರಮಣ ಸಮಯದಲ್ಲಿ ನೀರು ಬೇಕಾಯಿತು. ಆ ವಿರಕ್ತರ ಸ್ಥಿತಿಯನ್ನು ತಿಳಿದು ಸಿದ್ಧೇಶ್ವರರು ಕೂಡಲೇ ಆ ಗುಹೆಯನ್ನು ಪ್ರವೇಶಿಸಿ, ತಮ್ಮ ಮೊಣಕಾಲಿನಿಂದ ಬಂಡೆಯನ್ನು ಅದುಮಲು ಅಲ್ಲಿಯೇ ಒಂದು ಶಿಲಾವಾಪಿ ಎಂದರೆ ಒಂದು ತಂಬಿಗೆ ಹಿಡಿಯುವಷ್ಟು ಒಂದು ಮೊಳ ಆಳವಾದ ಗುಂಡಿಯಾಯಿತು. ಅದರಲ್ಲಿ ಗಂಗೋದಯವಾಯಿತು. ಆ ನೀರನ್ನು ದೀಪಕ್ಕೆ ಸುರಿಯಲು ಎಣ್ಣೆಯಂತೆ ಉರಿಯಿತು ! ನೀರಿನಿಂದ ಆ ವಿರಕ್ತರಿಗೆ ಸ್ನಾನ ಮಾಡಿಸಿ, ಲಿಂಗಾಭಿಷೇಕ ಮಾಡಿಸಿ, ಗಂಗಾಪಾನ ಮಾಡಿಸಿದರು. ಆ ವಿರಕ್ತರು ಮುಕ್ತರಾದರು. ಸಿದ್ಧೇಶ್ವರರ ತಪಶ್ಶಕ್ತಿಯಿಂದ ಗಂಗೋದಯವಾದುದರಿಂದ ಆ ಪುಣ್ಯಕ್ಷೇತ್ರ ಸಿದ್ಧಗಂಗಾ ಎಂದು ಪ್ರಖ್ಯಾತವಾಯಿತು. ಸಿದ್ಧೇಶ್ವರರು ಅನೇಕ ಕಾಲ ಅಲ್ಲಿಯೇ ಶಿವಯೋಗದಲ್ಲಿದ್ದು ಬಯಲಾದರು. ಅವರ ಮಠವೂ ಅಲ್ಲಿ ನಿರ್ಮಾಣವಾಯಿತು. ಅವರ ಗದ್ದುಗೆ ಸಿದ್ಧಗಂಗಾ ಗಿರಿಯಲ್ಲಿದೆ. ಇದು ಪುಣ್ಯ ಕ್ಷೇತ್ರ. ಈಗ ಸಿದ್ಧಗಂಗಾ ಮಠದ ಜಗದ್ಗುರು ಶ್ರೀ ಶಿವಕುಮಾರ ಸ್ವಾಮಿಗಳು ಪರಮ ತಪೋಧನರೂ, ವಿದ್ವಾಂಸರೂ, ಅಭಿನವ ಬಸವೇಶ್ವರರೂ ಎಂದು ಪ್ರಸಿದ್ಧರಾಗಿದ್ದಾರೆ. ಇಲ್ಲಿ ಸುಮಾರು ಮೂರು ಸಾವಿರ ವಿದ್ಯಾರ್ಥಿಗಳಿದ್ದಾರೆ. ಇವರು ಮೂರು ಸಾವಿರ ಚರಮೂರ್ತಿಗಳ ನೆನಪನ್ನುಂಟುಮಾಡುತ್ತಾರೆ. ಈ ಮಹಾ ಗುರುಕುಲದಲ್ಲಿ ಜಾತಿಭೇದವಿಲ್ಲ; ಕೀಳು, ಮೇಲು ಎಂಬ ದುರಭಿಮಾನವಿಲ್ಲ. ಶ್ರೀಗಳವರು ಅನೇಕ ವಿದ್ಯಾ ಸಂಸ್ಥೆಗಳನ್ನು ಸ್ಥಾಪಿಸಿ ನಡಸಿಕೊಂಡು ಬರುತ್ತಿದ್ದಾರೆ. ಇದು ಪ್ರಾಚೀನ ಶೂನ್ಯ ಸಿಂಹಾಸನ ! ಇಲ್ಲಿರುವ ಶಿವಾನುಭವ ಮಂಟಪದಲ್ಲಿ ಧರ್ಮ

ತತ್ತ್ವಗೋಷ್ಠಿ ನಡೆಯುತ್ತಿದೆ. 'ಸಿದ್ಧಗಂಗಾ' ಎಂಬ ಮಾಸ ಪತ್ರಿಕೆ ಮೂಲಕ ಶರಣಧರ್ಮ ಪ್ರಚಾರವಾಗುತ್ತಿದೆ. ಇಲ್ಲಿ ನಿತ್ಯ ದಾಸೋಹ ಸಂತೆಯೇ ಪ್ರಸಿದ್ಧಿಯಾಗಿದೆ. ಪ್ರತಿವರ್ಷವೂ ಶಿವರಾತ್ರಿ ಸಮಯದಲ್ಲಿ ಸಿದ್ಧಲಿಂಗೇಶ್ವರ ಸ್ವಾಮಿಯ ರಥೋತ್ಸವ ವೈಭವದಿಂದ ನಡೆಯುತ್ತ ಸುಮಾರು 50 ಸಾವಿರ ಜನರಿಗೆ ಜಾತ್ರೆಯ ಕಾಲದಲ್ಲಿ ಹತ್ತು ದಿನ ಅನ್ನದ ಮಾಡುತ್ತಾರೆ. ಇವರು ಪರಿಪೂರ್ಣ ಪ್ರಸನ್ನಚಿತ್ತರು; ಸ್ಥಿತಪ್ರಜ್ಞರು; ಜೀವ ಕ್ತರು ! ಇತ್ತೀಚೆಗೆ, ಧಾರವಾಡ ಕರ್ಣಾಟಕ ವಿಶ್ವವಿದ್ಯಾಲಯ ಶ್ರೀ ಶಿವಕುಮಾರ ಸ್ವಾಮಿಗಳಿಗೆ ಡಾಕ್ಟರೇಟ್ ಗೌರವ ಪ್ರಶಸ್ತಿಯನ್ನಿತ್ತು ಸ ಸಿತು. ಇವರು ಯಾವುದೊಂದು ಪ್ರಶಸ್ತಿಯನ್ನೂ ಬಯಸುವವರಲ್ಲ; ನಿಷ್ಠಾ ಕರ್ಮಸಿದ್ಧರು. ಇವರು ತಮ್ಮ ವಿರಕ್ತ ಪೀಠಕ್ಕೆ ಅನೂಚಾನವಾಗಿ ಭಕ್ತ ಯಿಂದ ಬಂದಿರುವ 'ಜಗದ್ಗುರು' ಪ್ರಶಸ್ತಿಯನ್ನು ಹೊಗಳಿಸಿಕೊಳ್ಳಲು ಕಾ ರಾಗಿಲ್ಲ. 'ಶಿವನೊಬ್ಬನೇ ಜಗದ್ಗುರು ನಾವೆಲ್ಲ ಅವನ ಕೈಂಕರ್ಯಪರಿವಾರ' ಮನೋಭಾವ ಇವರಲ್ಲಿದೆ. ಸುಮಾರು ೫೦-೬೦ ವರ್ಷಗಳ ಹಿಂದೆ ಸಾಮ ಮಠವಾಗಿದ್ದು, ತನ್ನ ಜಾಣ್ಮೆಯಿಂದ ಇಂದು ಬೃಹನ್ಮಠವಾಗಿ, ಯಾರೂ ದಿದ್ದರೂ 'ಜಗದ್ಗುರು'ವೆಂದು ತಮಗೆ ತಾವೇ ಹೇಳಿಕೊಳ್ಳುವ ಗುರುವಿರಕ್ತ ಗಳಿಗೇನೂ ನಮ್ಮ ಸಮಾಜದಲ್ಲಿ ಕೊರತೆಯಿಲ್ಲ. ಸಮಾಜೋತ್ಕರ್ಷ ಸ ಯಜ್ಞದಲ್ಲಿ ಅಧ್ವರ್ಯುವಾಗಿರುವ ಮಠಾಧೀಶ್ವರರೇ 'ಜಗದ್ಗುರು'ಗಳು. ಜಗದ್ಗುರು ಮಹಾ ಪಟ್ಟ ಶ್ರೀ ಸಿದ್ಧಗಂಗಾ ಮಠಾಧೀಶ್ವರರಿಗೆ ಪೂರ್ವ ದಿಂದಲೂ ನಡೆದುಬಂದಿರುತ್ತದೆ. ಇಲ್ಲಿರುವ ಜಗದ್ಗುರು ಉದ್ಧಾನ ಶಿವಯೋ ಶ್ರಮದಲ್ಲಿ ವಟುಗಳಿಗೆ ಉತ್ತಮ ಶಿಕ್ಷಣ ದೊರೆಯುತ್ತಿದೆ. ಸುಸಂಸ್ಕೃ ಯಾರುಬೇಕಾದರೂ ಶಿವದೀಕ್ಷೆಯನ್ನು ಹೊಂದಿ ವಿರಕ್ತ ಮಾರ್ಗವನ್ನು ಸ್ವೀ ಈ ಆಶ್ರಮದಲ್ಲಿ ಅಧ್ಯಾತ್ಮ ಯೋಗಸಾಧಕರಾಗಿ ಸಿದ್ಧಿ ಪಡೆಯಲು ಅವಕಾ ಅವರು ಮುಂದೆ ಮಠಗಳಲ್ಲಿ ಸ್ವಾಮಿಗಳಾಗಲು ಅರ್ಹರಾಗುತ್ತಾರೆ. ವಿದ್ಯಾಕ್ಷೇತ್ರವಾಗಿದೆ ಸಿದ್ಧಗಂಗೆ ! ಶ್ರೀ ಶ್ರೀ ಶಿವಕುಮಾರಸ್ವಾಮಿಗಳನ್ನು ಪರಮ ನಿರಂಜನ ಮೂರ್ತಿಗಳೆಂದೂ, ವಿರಕ್ತ ಜಗದ್ಗುರುವೆಂದೂ ವಿಶೇಷ ಗೌ ದಿಂದ ಭಾವಿಸುತ್ತಾರೆ.

ಹನ್ನೆರಡನೆಯ ಶತಮಾನದಲ್ಲಿ ಶಿವಶರಣರು ಈ ಕ್ಷೇತ್ರದಲ್ಲಿ

ಮಾಡಿದರೆಂದು ತಿಳಿಯಬರುತ್ತದೆ. ಚನ್ನಬಸವಣ್ಣನವರು ಉಳವಿಯಲ್ಲಿ ಬಯಲಾದಮೇಲೆ, ಅವರ ಪರಮಾಪ್ತ ಶರಣ ರೇಚಣ್ಣದೇವರು ಅಲ್ಲಲ್ಲಿ ಸಂಚರಿಸುತ್ತ ಕಾವೇರಿಯ ತೀರದಲ್ಲಿ ರೇವಣಸಿದ್ಧರ ಆಶ್ರಮದಲ್ಲಿ ಕೆಲವು ಕಾಲವಿದ್ದು, ಅನಂತರ ಶಿವಗಂಗೆಯಲ್ಲಿ ರುದ್ರಮುನೀಶ್ವರರನ್ನು ಸಂದರ್ಶಿಸಿ, ಸಿದ್ಧಗಂಗೆಗೆ ಬಂದು ಇಲ್ಲಿ ಅರುವತ್ತುಮೂರು ಮಠಗಳನ್ನು ಕಟ್ಟಿಸಿ, ಅರುವತ್ತುಮೂರು ಪುರಾತನರ ತತ್ತ್ವಗಳನ್ನು ಈ ಪ್ರಾಂತದಲ್ಲಿ ಪ್ರಚಾರ ಮಾಡಿದರು. ಶರಣ ರೇಚಣ್ಣನವರು ವಿರಕ್ತಾಶ್ರಮವನ್ನು ಸ್ವೀಕರಿಸಿ ಮೊದಲನೆಯ ಜಗದ್ಗುರು ಅಟವೀಸ್ವಾಮಿಗಳೆಂಬ ಅಭಿಧಾನದಿಂದ ಪ್ರಸಿದ್ಧರಾದರು. ಈ ಅಟವೀಶಯ್ಯ ವಿರಕ್ತರು ಸಿದ್ಧಗಂಗಾ ಕ್ಷೇತ್ರದಲ್ಲಿ ಅನಂತಕಾಲ ಶಿವಯೋಗದಲ್ಲಿದ್ದು ಇಲ್ಲಿಯೇ ಬಯಲಾದರು. ಅವರ ತೋರುಗದ್ದುಗೆ ಈಗಲೂ ಅಲ್ಲಿದೆ. ಈ ಪರಂಪರೆಯಲ್ಲಿ ಬಂದವರೇ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು. ಇವರ ಹಿಂದೆ, ಉದ್ದಾನ ಶಿವಯೋಗೀಶ್ವರರೂ ಅವರ ಹಿಂದೆ, ಎರಡನೆಯ ಅಡವೀಸ್ವಾಮಿಗಳೆಂಬುವರೂ ಇಲ್ಲಿ ವಿರಕ್ತಮೂರ್ತಿಗಳಾಗಿದ್ದರು. ಈ ಅಡವೀಸ್ವಾಮಿಗಳ ತೋರುಗದ್ದುಗೆ ಇಲ್ಲಿಗೆ ಸಮೀಪದಲ್ಲಿರುವ ತೊಟ್ಟಿಲುಕೆರೆ ಗ್ರಾಮದಲ್ಲಿದೆ. ಈ ಮಠದ ಎಲ್ಲ ವಿರಕ್ತಸ್ವಾಮಿಗಳ ಹೆಸರೂ ಉಪಲಬ್ಧವಾಗಿಲ್ಲ. ಸಂಶೋಧನೆಯಿಂದ ಈ ವಿರಕ್ತ ಪಟ್ಟಾವಳಿಯನ್ನು ನಿರ್ಧರಿಸಬಹುದು. ಸ್ವತಂತ್ರ ಸಿದ್ಧಲಿಂಗೇಶ್ವರರೆಂಬುವರು ಹದಿನೈದನೆಯ ಶತಮಾನದಲ್ಲಿ ಈ ಮಠದ ನಿರಾಭಾರಿಯಾಗಿದ್ದರೆಂದು ಗೊತ್ತಾಗುತ್ತದೆ. ಅವರು ಸುಪ್ರಸಿದ್ಧ ವಚನಕಾರರೂ ಆಗಿದ್ದರು. ಈ ಮಠ ಅನೇಕಾನೇಕ ವಿರಕ್ತ ಮಠಗಳಿಗಿಂತ ಪ್ರಾಚೀನವಾದುದು! ವಿರಕ್ತರಲ್ಲಿ ಸಮಯಭೇದಗಳು ಹುಟ್ಟುವುದಕ್ಕಿಂತ ಆರುನೂರು ವರ್ಷಗಳ ಹಿಂದೆಯೇ ಶೂನ್ಯಪೀಠ ಇಲ್ಲಿ ಸ್ಥಾಪನೆಯಾಯಿತು! ಇದು ಮಹಾ ವಿರಕ್ತ ಪರಂಪರೆಯ ಶೂನ್ಯ ಸಿಂಹಾಸನ ಕ್ಷೇತ್ರ.

ಹದಿನಾರನೆಯ ನಿರಾಭಾರಿ ಶಂಕರಾಚಾರ್ಯಸ್ವಾಮಿಗಳು ಹಂಪೆಯ ಕ್ಷೇತ್ರದಲ್ಲಿ ವಿಜಯನಗರದ ಪ್ರೌಢದೇವರಾಯನನ್ನು ಅನುಗ್ರಹಿಸಿ, ನೂರೊಂದು ವಿರಕ್ತರೊಂದಿಗೆ ಸಂಚರಿಸುತ್ತ ಸಿದ್ಧಗಂಗೆಯಲ್ಲಿ ತಮ್ಮ ಗುರು ಸಿದ್ಧೇಶ್ವರರ ಮಠದಲ್ಲಿದ್ದು ಅಲ್ಲಿಯೇ ಬಯಲಾದರು. ಇವರ ತೋರುಗದ್ದುಗೆ ಇಲ್ಲಿಗೆ ಸಮೀಪದಲ್ಲಿರುವ ಸಿದ್ಧರ ಬೆಟ್ಟದಲ್ಲಿದೆ. ರೇವಣಸಿದ್ಧರೂ ಈ ಬೆಟ್ಟದಲ್ಲಿ ಅನೇಕ ಕಾಲ ತಪೋನಿರತರಾಗಿದ್ದರೆಂದು ಗೊತ್ತಾಗುತ್ತದೆ.

ಹದಿನೇಳನೆಯ ದಿವ್ಯಲಿಂಗೇಶ್ವರರು ಹರಪನಹಳ್ಳಿಯ ಶೂನ್ಯಪೀಠದಲ್ಲಿ ಇದ್ದು ತಮ್ಮ ಮಹಿಮೆಯಿಂದ ಲೋಕ ಕಲ್ಯಾಣವನ್ನು ಸಾಧಿಸಿದರು. ಇವರು ತಮ್ಮ ಶಿವಾನುಭವ ಚರಂತಿಗೆ ಪಟ್ಟವನ್ನು ಗೋಸಲ ಚನ್ನಬಸವೇಶ್ವರರಿಗೆ ವಹಿಸಿದರು. ಅಲ್ಲಿಯೇ ಬಯಲಾದರು. ಇವರ ಗದ್ದುಗೆ ಹರಪನಹಳ್ಳಿ ಮಠದಲ್ಲಿ

ಹದಿನೆಂಟನೆಯ ಪಟ್ಟಭದ್ರರೇ ಗೋಸಲ ಚನ್ನಬಸವೇಶ್ವರರು. ಇವರ ಪುಣ್ಯ ಸಮಾಧಿ ಗುಬ್ಬಿಯಲ್ಲಿದೆ. ಇವರು ಮಹಾ ಮಹಿಮರು; ಪರಮ ಸಿದ್ಧರು. ಇವರು ಹರದನಹಳ್ಳಿಯ ಶೂನ್ಯ ಸಿಂಹಾಸನಾಧೀಶ್ವರರಾಗಿ ಮಹಾ ವೈರಾಗ್ಯಮೂರ್ತಿಗಳೆಂದು ವಿಖ್ಯಾತರಾದರು. ಇವರ ಶಿಷ್ಯರೇ ತೋಂಟದ ಸಿದ್ಧಲಿಂಗೇಶ್ವರರು. ಇವರಿಗೆ ಸುಪ್ರಭೇದಾಗಮದ ಸೂತ್ರವಿಡಿದು ನಿರಾಭಾರ ವೀರಶೈವ ದೀಕ್ಷೆಯಾಯಿತು. ಇವರಿಗೆ ಗೋಸಲ ಚನ್ನಬಸವೇಶ್ವರರು ಶಿವಾನುಭವ ಚರಂತಿಗೆಯ ಪಟ್ಟವನ್ನು ಅನುಗ್ರಹಿಸಿದರು. ಅನಂತರ ಚನ್ನಬಸವೇಶ್ವರರು ತಮ್ಮ ಪರಮಗುರು ಸಿದ್ಧೇಶ್ವರರು ತಮ್ಮ ಮಹಿಮೆಯಿಂದ ಶಿಲೆಯಲ್ಲಿ ಗಂಗೋದ್ಭವವನ್ನುಂಟುಮಾಡಿದ ಸಿದ್ಧಗಂಗಾ ಕ್ಷೇತ್ರಕ್ಕೆ ದಯಮಾಡಿಸಿ, ಅಲ್ಲಿ ಬಹು ಕಾಲ ಶಿವಯೋಗನಿರತರಾಗಿದ್ದರು. ಆಗ ಗುಬ್ಬಿ ಮಲ್ಲಣಾರ್ಯ ಕವಿಯು ಅನೇಕ ಶಿವಭಕ್ತ ಸಮೂಹದೊಂದಿಗೆ ಸಿದ್ಧಗಂಗೆಗೆ ಹೋಗಿ ಶ್ರೀ ಚನ್ನಬಸವೇಶ್ವರರನ್ನು ಗುಬ್ಬಿಗೆ ಕರೆದುಕೊಂಡುಹೋದರು. ಅಲ್ಲಿ ಅನೇಕ ಕಾಲ ಶಿವಯೋಗದಲ್ಲಿದ್ದು, ನಿರ್ಬಯಲಾದರು. ಅವರ ಗದ್ದುಗೆ ಈಗಲೂ ಗುಬ್ಬಿ ಕ್ಷೇತ್ರದಲ್ಲಿದೆ. ಆ ಗದ್ದುಗೆ ಭವ್ಯ ಮನೋಹರವಾಗಿ ಕಂಗೊಳಿಸುತ್ತಿದೆ. ಆ ಸ್ವಾಮಿಯ ದರ್ಶನದಿಂದ ಜನ ಕೃತಾರ್ಥರಾಗುತ್ತಿದ್ದಾರೆ. ಸಿದ್ಧಗಂಗೆ ಶೂನ್ಯ ಸಿಂಹಾಸನದ ಕೇಂದ್ರವಾಗಿ ಮೆರೆಯಿತು.

ಹತ್ತೊಂಭತ್ತನೆಯವರೇ ವೀರ ವೈರಾಗ್ಯಮೂರ್ತಿ ಸಿದ್ಧಲಿಂಗದೇಶಿಕರು. ನಿರಂಜನ ಗಣೇಶ್ವರನೇ ಸಿದ್ಧಲಿಂಗದೇಶಿಕರಾಗಿ ಅವತರಿಸಿದ್ದರೆಂದು ಭಾವುಕರು ನಂಬುತ್ತಾರೆ. ಇವರೊಂದಿಗೆ ಏಳುನೂರು ಮಂದಿ ವಿರಕ್ತರೂ ಮೂರು ಸಾವಿರ ಚರ ಜಂಗಮರೂ ಇದ್ದರು. ಹರದನಹಳ್ಳಿಯಲ್ಲಿ ಶೂನ್ಯ ಸಿಂಹಾಸನಾಧೀಶ್ವರರಾಗಿ ಸಿದ್ಧಲಿಂಗದೇಶಿಕರು ಮಹಿಮೆಯನ್ನು ಮೆರೆದರು. ಅವರು ಏಳುನೂರು ಚರಜಂಗಮರಿಗೆ ಶಿವಾನುಭವ ಚರಂತಿಗೆಯನ್ನು ಅನುಗ್ರಹಿಸಿ, ಏಳುನೂರು ಬುಡಕಟ್ಟು ಅಥವಾ ಪ್ರಭೇದಗಳನ್ನು ವಿಂಗಡಿಸಿದರು. ಈ ಸಂಪ್ರದಾಯದ

ಸಿದ್ಧಲಿಂಗೇಶ್ವರರ ಬಳಿವಿಡಿದು ಶಿಷ್ಯ ಪರಂಪರೆಯಿಂದ ಬಂದ ಶಿವಾನುಭವ ಚರಂತಿಗೆ ಪಟ್ಟದ ಸೂತ್ರವುಳ್ಳ ಕಟ್ಟಿಗೆಹಳ್ಳಿ ಸ್ವಾಮಿಗಳಿಂದ ಅನುಗ್ರಹ ಹೊಂದಿದವರೇ ಮೂಲ ಶೂನ್ಯ ಸಿಂಹಾಸನ ಮಠದ ನಿರಾಭಾರಿಗಳು; ಇದೇ ಮೂಲ ಪೀಠ. ಇದರ ಸೂತ್ರವಿಡಿದುಬಂದ ವಿನಾ ನಿರಾಭಾರಿ ವಿರಕ್ತ ಆಶ್ರಮ ಸಿಂಧುವಾಗುವುದಿಲ್ಲ. ಈ ಸೂತ್ರವಿಡಿದುಬಂದುದೇ ಶಿವಾನುಭವಪಟ್ಟ; ಈ ಸೂತ್ರವಲ್ಲದೆ ಸ್ಥಾಪನೆಯಾದುದು ಶಿಖಾಪಟ್ಟ. ಈ ಮೂಲ ಸೂತ್ರವುಳ್ಳ ಮಠಗಳು ಅನೇಕ ಇವೆ. ಮೂಲ ಸೂತ್ರವಿಡಿದು ಬಂದ ಮಠಗಳಲ್ಲಿ ಗುರುಪರಂಪರೆಯಿಂದ ಬಂದ ಮೂಲ ಸೂತ್ರದವರೇ ಶೂನ್ಯ ಸಿಂಹಾಸನಾಧೀಶ್ವರರು. ಅವರೇ ಜಗದ್ಗುರುಗಳು ! ಎಂದು ಸಿದ್ಧಲಿಂಗದೇಶಿಕರ ಕಾಲದಲ್ಲಿ ಕಟ್ಟಳೆಯಾಯಿತೆಂದು ತಿಳಿದುಬರುತ್ತದೆ. ಸಿದ್ದಲಿಂಗೇಶ್ವರರು ಅರುಣಾಚಲದಲ್ಲಿ ಶಿವಯೋಗದಲ್ಲಿದ್ದು, ತಮ್ಮ ಶಿವಾನುಭವ ಚರಂತಿಗೆ ಪಟ್ಟವನ್ನು ನಿರಕ್ಷರ ಬೋಳ ಬಸವೇಶ್ವರರಿಗೆ ವಹಿಸಿದರು. ಅಲ್ಲಿಂದ ಅವರು ಸಿದ್ಧಗಂಗಾ ಕ್ಷೇತ್ರಕ್ಕೆ ದಯಮಾಡಿಸಿದರು. ಅಲ್ಲಿ ತಮ್ಮ ಗುರುಗವ್ದುಗೆಗಳಲ್ಲಿ ಶಿವಯೋಗದಲ್ಲಿದ್ದು, ಮುಂದೆ ಕಗ್ಗೆರೆಯ ಸಮೀಪದ ತೋಟದಲ್ಲಿ ಲಿಂಗಾನಂದ ಯೋಗದಲ್ಲಿ ಕುಳಿತರು. ಅವರ ಸುತ್ತಲೂ ಹುತ್ತ ಬೆಳೆಯಿತು. ಒಂದು ಗೋವು ಮಾತ್ರ ಪ್ರತಿದಿನವೂ ಆ ಸ್ವಾಮಿಯ ಸುತ್ತಲೂ ಬೆಳೆದಿದ್ದ ಹುತ್ತದ ಮೇಲೆ ನಿಂತು ಆ ಹುತ್ತದ ಬಿಲಕ್ಕೆ ತಾನಾಗಿಯೇ ಹಾಲು ಸೂಸುತ್ತಿತ್ತು ! ಸ್ವಾಮಿಗಳು ಬಹಳ ಕಾಲಾನಂತರ ಶಿವಯೋಗದಿಂದ ಎಚ್ಚರವಾದರು ! ಆ ಹುತ್ತದಿಂದ ಓಂಕಾರ ಧ್ವನಿ ಮೊಳಗುತ್ತಿತ್ತು! ಆಗ ಶಿವಭಕ್ತರು ಆ ಹುತ್ತವನ್ನು ಎಚ್ಚರಿಕೆಯಿಂದ ಬಿಡಿಸಿದರು. ದಿವ್ಯ ತೇಜೋಮೂರ್ತಿ ಸಿದ್ಧಲಿಂಗದೇಶಿಕರು ಗೋಚರಿಸಿದರು. ಅಂದಿನಿಂದ ಅವರಿಗೆ ತೋಂಟದ ಸಿದ್ಧಲಿಂಗೇಶ್ವರರೆಂದು ಹೆಸರಾಯಿತು. ತೋಂಟದಾರ್ಯರೆಂದೂ ಅವರನ್ನು ಕರೆಯುತ್ತಾರೆ. ಅವರು ಕೆಲವು ಕಾಲದ ಮೇಲೆ ನಾಗಿಣಿ ನದಿಯ ತೀರದಲ್ಲಿರುವ ಎಡೆಯೂರು ಕ್ಷೇತ್ರದಲ್ಲಿ ಬಯಲಾದರು. ಅವರ ತೋರಗದ್ದುಗೆ ಈಗಲೂ ಅಲ್ಲಿದೆ. ನಯನ ಮನೋಹರ ಪ್ರಕೃತಿ ಸೌಂದರ್ಯದ ಮಧ್ಯದಲ್ಲಿ ಎಡೆಯೂರು ಸಿದ್ಧಲಿಂಗೇಶ್ವರ ಸ್ವಾಮಿಯ ಆತ್ಮಲಿಂಗ ದೇವಾಲಯ ಕಂಗೊಳಿಸುತ್ತಿದೆ. ಈಗಲೂ ನೂತನ ಪಟ್ಟಾಂಕಿತರಾದ ವಿರಕ್ತರು ಎಡೆಯೂರಿಗೆ ಬಂದು ಆ ದಿವ್ಯ ಲಿಂಗಸ್ವರೂಪಿ ಶಿವಯೋಗಿಯನ್ನು ದರ್ಶನ ಮಾಡುತ್ತಾರೆ.

ಇಪ್ಪತ್ತನೆಯವರು ನಿರಕ್ಷರ ಜೋಳ ಬಸವೇಶ್ವರರು. ಇವರು ಮೂ
ಸಾವಿರ ವಿರಕ್ತರಿಗೂ ಏಳು ನೂರು ಚರ ಜಂಗಮರಿಗೂ ಗುರುವಾಗಿದ್ದ
ಎಡೆಯೂರು ಶೂನ್ಯ ಪೀಠದಲ್ಲಿಯೇ ಇದ್ದು, ಶಿವತತ್ತ್ವವನ್ನು ಬೆಳಗಿಸಿ
ಅವರು ಗಡ್ಡದ ಸಿದ್ಧವೀರಣ್ಣಸ್ವಾಮಿ ಎಂಬುವರಿಗೆ ಶಿವಾನುಭವ ಚರಂತಿಗೆ ಪ
ವನ್ನು ಕೊಟ್ಟು, ಮಧುಗಿರಿಯಲ್ಲಿ ಬಯಲಾದರು. ಇದನ್ನು ದುರ್ಗದ ಮ
ವೆಂದು ಕರೆಯುತ್ತಾರೆ.

ಇಪ್ಪತ್ತೊಂದನೆಯವರು ಸಿದ್ಧವೀರೇಶ್ವರರು. ಇವರು ಗುಮ್ಮಳಾಪು
ಲಿಂಗೈಕ್ಯರಾದರು. ಇದು ಆನೇಕಲ್ಲು ತಾಲ್ಲೂಕಿನಲ್ಲಿದೆ. ಇವರ ಗದ್ದುಗೆ ಅಲ್ಲಿ
ಇವರ ತರುವಾಯ ಗುರುಸಿದ್ಧ ದೇಶಿಕರು ಶಿವಾನುಭವ ಚರಂತಿಗೆಗೆ ಬಂ
ಇವರು ಅನೇಕ ಶಿವಭಕ್ತರಿಗೆ ಗುಮ್ಮಳಾಪುರದಲ್ಲಿ ದೀಕ್ಷೆಯನ್ನು ಮಾಡಿ
ವಂತರನ್ನು ಮಾಡಿದರು. ಇದೊಂದು ಪ್ರಭೇದ. ಅಲ್ಲಿಂದ ತುಮಕೂರು ಬಳಿ
ಗೂಳೂರು ಗ್ರಾಮದಲ್ಲಿ ಅನೇಕ ಕಾಲ ಶಿವಯೋಗ ನಿರತರಾಗಿದ್ದು ಅಲ್ಲಿ
ಬಯಲಾದರು. ಇವರ ಶಿಷ್ಯರೇ ಗಗನದಾರ್ಯರು. ಇವರಿಗೆ ಶಿವಾನುಭವ ಚರಂ
ಪಟ್ಟವಾಯಿತು. ಇವರು ಈ ಸಂಪ್ರದಾಯದಲ್ಲಿ ಇಪ್ಪತ್ತರಡನೆಯ ಪಟ್ಟಭದ್ರ

ಇಪ್ಪತ್ತಮೂರನೆಯ ಪಟ್ಟ ಗಗನದಾರ್ಯಸ್ವಾಮಿಗಳು. ಇವರು ಮಾ
ಯಲ್ಲಿ ಅರುವತ್ತಾರು ಮಠಗಳನ್ನು ಕಟ್ಟಿಸಿ, ಶಿವಭಕ್ತಿಯನ್ನು ಬೆಳಸಿ
ಗೂಳೂರಿನಲ್ಲಿ ಕೆಲವು ಕಾಲವಿದ್ದು, ಶಿವಾನುಭವ ಚರಂತಿಗೆ ಪಟ್ಟವನ್ನು ಕ
ಹಳ್ಳಿ ಸಿದ್ಧವೀರಸ್ವಾಮಿ ಎಂಬುವರಿಗೆ ವಹಿಸಿಕೊಟ್ಟು, ಭೈರನದುರ್ಗದಲ್ಲಿ ಬ
ವಾದರು. ಇವರ ಗದ್ದುಗೆ ಭೈರನದುರ್ಗದಲ್ಲಿದೆ.

ಇಪ್ಪತ್ತು ನಾಲ್ಕನೆಯ ಸಿರಾಭಾರಿ ಪಟ್ಟಾಂಕಿತರು ಕಟ್ಟಿಗೆಹಳ್ಳಿ ಸಿದ್ಧ
ಸ್ವಾಮಿಗಳು. ಇವರ ಬಳಿಯಲ್ಲಿದ್ದ ಸಂಪಾದನೆ ಸಿದ್ಧವೀರಣ್ಣನೆಂಬ ಜಂ
ತನ್ನ ಸ್ವಾಮಿಗಳಲ್ಲಿ ದ್ವೇಷ ಬುದ್ಧಿಯಿಂದ ಅವರ ಶಿಷ್ಯವೃಂದವನ್ನು
ಹಾಗಲವಾಡಿಯಲ್ಲಿ ನೆಲಸಿ ಅಲ್ಲಿಯೇ ಮಠವನ್ನು ಸ್ಥಾಪಿಸಿಕೊಂಡನು.
ಸಂಪಾದನೆಯ ಸಮಯವೆಂಬ ನವೋದಯ ! ಈ ಸಮಯದ ಮ
ಬೆಂಗಳೂರು, ಹಾಗಲವಾಡಿ, ಹುಕ್ಕೇರಿನಾಡು, ಒಂಟಿಮುರಿ, ನರೇಂದ್ರ
ವಾಡಿ ಮೊದಲಾದ ಕಡೆಗಳಲ್ಲಿವೆ. ಕಟ್ಟಿಗೆಹಳ್ಳಿ ಸ್ವಾಮಿಗಳು ಅಷ್ಟೊಂದು ಸ

ಧ್ಯಾನಚಿತ್ತರಾಗಿದ್ದಂತೆ ಕಾಣುವುದಿಲ್ಲ. ಅವರು ಮಾಗಡಿಯಲ್ಲಿ ಮಹಾ ಗಣಾರಾಧನೆಯನ್ನು ಮಾಡಿಸಿ, ತಮ್ಮ ಶಿಷ್ಯರಲ್ಲಿ ಇಬ್ಬರನ್ನು ಆರಿಸಿ, ಹಿರಿಯ ಶಿಷ್ಯನಿಗೆ ಶಿವಾನುಭವ ಚರಂತಿಗೆ ಪಟ್ಟವನ್ನು ಮಾಡಿದರು; ಅವರಿಗೆ ನೋಡಸಿದ್ಧಲಿಂಗ ಸ್ವಾಮಿಯೆಂದು ಹೆಸರಿಟ್ಟರು. ಎರಡನೆಯ ಶಿಷ್ಯ ಮುರಿಗೆರುದ್ರಸ್ವಾಮಿ ಎಂಬುವನಿಗೆ ನೋಡಸಿದ್ಧಲಿಂಗಸ್ವಾಮಿಗಳಿಂದ ಅನುಗ್ರಹವನ್ನು ಮಾಡಿಸಿದರು. ಅನಂತರ ಅವರಿಬ್ಬರನ್ನೂ ಡಿಳ್ಳಿಯ ಪಾಚ್ಛಾನಲ್ಲಿದ್ದ ಸುವರ್ಣದ ಶೂನ್ಯಪೀಠ, ಪ್ರಣವ ಶಿಖಾಶೈಲ,-ಇವುಗಳನ್ನು ತರಲು ದಿಳ್ಳಿಗೆ ಕಳಿಸಿದರು ! ಹಿಂದೆ ಹನ್ನೆರಡನೆಯ ಶತಮಾನದಲ್ಲಿ ಚನ್ನಬಸವಣ್ಣನವರು ಕಲ್ಯಾಣದಿಂದ ಉಳವಿಗೆ ತಪ್ಪಿಸಿಕೊಂಡು ಓಡಿಹೋದ ಕಾಲದಲ್ಲಿ ಮುಲ್ಲೂಖಾನನೆಂಬ ವಜೀರನ ಕೈಗೆ ಆ ಪವಿತ್ರ ವಸ್ತುಗಳನ್ನು ಒಪ್ಪಿಸಿದ್ದರು. ಕಟ್ಟಿಗೆಹಳ್ಳಿ ಸ್ವಾಮಿಗಳು ಅಲ್ಲಿಂದ ಸಂಚರಿಸುತ್ತ ಬನವಾಸಿ ಪ್ರಾಂತದಲ್ಲಿ ವರದಾ ನದಿಯ ತೀರದಲ್ಲಿರುವ ತಿಳುವಳ್ಳಿ ಎಂಬ ಸ್ಥಳದಲ್ಲಿ ನಿಂತರು. ಕೆಲವು ದಿನಗಳಲ್ಲಿ ಅವರು ಅಲ್ಲಿಯೇ ಕಾಲವಾದರು. ಇವರ ಗದ್ದುಗೆ ತಿಳುವಳ್ಳಿಯಲ್ಲಿದೆ.

ಇಪ್ಪತ್ತೈದನೆಯ ಪಟ್ಟ ನಿರಂಜನರೇ ನೋಡಸಿದ್ಧಲಿಂಗ ದೇಶಿಕರು. ಇವರು ಮುರಿಗೆಯ ರುದ್ರಸ್ವಾಮಿಯ ಸಂಗಡ ಕಲ್ಯಾಣವನ್ನು ಸೇರಿ, ಅಲ್ಲಿ ಪ್ರಭುದೇವರ ಮಠದಲ್ಲಿ ನಿಂತು. ಶೂನ್ಯ ಸಿಂಹಾಸನ ಮಠದ ಗದ್ದುಗೆಯನ್ನು ಪೂಜಿಸಿ, ಡಿಳ್ಳಿಗೆ ಹೋದರು. ಅಲ್ಲಿ ಮುದಿಮಲ್ಲಪ್ಪನೆಂಬ ಶಿವಭಕ್ತನ ಮನೆಯಲ್ಲಿ ಇಳಿದುಕೊಂಡರು.ಆ ಸಮಯದಲ್ಲಿ ಬಾದಷಹನ ಪಟ್ಟದ ಆನೆ ಸತ್ತುಹೋಗಿತ್ತು. ಅದನ್ನು ಕೇಳಿ ಈ ಇಬ್ಬರು ವಿರಕ್ತರೂ ಆ ಸತ್ತ ಆನೆಯನ್ನು ತಮ್ಮ ಶಿವಯೋಗ ಸಿದ್ಧಿಯ ಶಕ್ತಿಯಿಂದ ಬದುಕಿಸಿದರು. ಬಾದಷಹನು ಅವರನ್ನು ಗೌರವಿಸಿ ಭದ್ರಾಸನಗಳ ಮೇಲೆ ಕುಳ್ಳಿರಿಸಿ ಖಿಲ್ಲತ್ತುಗಳನ್ನು ಕೊಟ್ಟನು. ಆಮೇಲೆ, ಆ ಉಭಯ ವಿರಕ್ತರ ಆಗಮನ ಕಾರಣವನ್ನು ಕೇಳಿ, ಕೂಡಲೆ ತನ್ನ ದಫ್ತರ ಕಛೇರಿಯಲ್ಲಿ ದಾಖಲೆಗಳನ್ನು ಹುಡಿಕಿಸಿ ಅಲ್ಲಿದ್ದ ಬಂಗಾರದ ಶೂನ್ಯ ಪೀಠ, ಪ್ರಣವಶಿಖಾಶೈಲ ಇವುಗಳನ್ನು ತರಿಸಿ, ಆ ವಿರಕ್ತರಿಗೆ ಒಪ್ಪಿಸಿದುದಲ್ಲದೆ, ಅವನು ಅವರಿಗೆ ಲಾಲಶಿಖೆ, ಹಸರಜುಷ್ಟಿ, ಸದರಗುಂಡು ಇವುಗಳನ್ನೂ ಕಾಣಿಕೆಯಾಗಿ ಕೊಟ್ಟನು. ಅವರು ಅಲ್ಲಿಯೇ ಕೆಲವು ದಿನವಿದ್ದರು. ಬಾದಷಹನ ಸಮಕ್ಷದಲ್ಲಿ ಶಿವಾನುಭವ ಚರಂತಿಗೆ ಪಟ್ಟದ ನೋಡಸಿದ್ಧಲಿಂಗಸ್ವಾಮಿಯವರು ಮುರಿಗೆಯ

ರುದ್ರಸ್ವಾಮಿಗೆ ಶಿಖಾ ಪಟ್ಟವನ್ನು ಡಿಳ್ಳಿಯಲ್ಲಿಯೇ ಮಾಡಿದರು ! ಮುರಿಗ
ರುದ್ರಸ್ವಾಮಿ ಆಗ ಯಾವ ಮಠದ ಸ್ವಾಮಿಯಾದರೋ ! ಇದನ್ನು ನಿರಂ
ವಂಶರತ್ನಾಕರದಲ್ಲಿ ಹೇಳಿಲ್ಲ. ಬಾದಷಹನು ಆ ವಿರಕ್ತಪುಂಗವರಿಗೆ 72 ಬಿರು
ಗಳನ್ನೂ "ಜಂಗಮಜಿತಾ ಫಕೀರು ಮುರಿಗಾ ಸಿದ್ಧಲಿಂಗ ಪಾಚ್ಛಾ"ರೆಂಬ ಕೀ
ಬನ್ನೂ ಕೊಟ್ಟು ಮಂದಿಮಾರ್ಬಲದೊಂದಿಗೆ ಅವರನ್ನು ಬೀಳ್ಕೊಟ್ಟನು! ಅಲ್ಲಿ
ಅವರು ಹೈದರಾಬಾದ್ ಷಹರಿಗೆ ಬಂದರು. ಅಲ್ಲಿಯೂ ಆ ನವಾಬನ ಪಟ್ಟ
ಆನೆ ರೋಗದಿಂದ ನರಳುತ್ತಿತ್ತು. ನವಾಬನ ಪಟ್ಟದ ಆನೆ ಸತ್ತುಹೋಗಿತ್ತೆ
'ಶ್ರೀ ಜಯದೇವ ಲೀಲೆ'ಯಲ್ಲಿ ಹೇಳಿದೆ. ಆ ಜಂಗಮ ಮಹಾಂತರು ತ
ದಿವ್ಯ ಶಕ್ತಿಯಿಂದ ಅದನ್ನೂ ಬದುಕಿಸಿದರು ! ಆ ನವಾಬನು ಅನೇಕ ಬಿರು
ಬಾವಲಿಗಳನ್ನು ಕೊಟ್ಟು ಆ ನಿತ್ಯ ನಿರಂಜನರನ್ನು ಕಳುಹಿಸಿಕೊಟ್ಟನು. ಅ
ಅಲ್ಲಿಂದ ಸ್ವಾದೆ ಸೀಮೆಯಲ್ಲಿರುವ ಇಸಳೂರಿಗೆ ಬಂದರು. ದಾರಿಯಲ್ಲಿ ಘ
ಕಲ್ಯಾಣಕ್ಕೆ ಹೋದಂತಿಲ್ಲ ! ಅವರಿಬ್ಬರೂ ಇಸಳೂರಿನಲ್ಲಿಯೇ ನೆಲಸಿ
ಡಿಲ್ಲಿಗೆ ಮುರಿಗಿಸ್ವಾಮಿಗಳೊಬ್ಬರೇ ಹೋಗಿದ್ದರೆಂದು ಶ್ರೀ ಜಯದೇವಲೀಲೆ
ಹೇಳಿದೆ. ಶ್ರೀ ಮಲ್ಲಿಕಾರ್ಜುನಸ್ವಾಮಿಗಳು ಅವರ ಭಾಷಣದಲ್ಲಿ ಡಿಲ್ಲಿಗೆ ನೋ
ಸಿದ್ಧಲಿಂಗರೂ ಮುರಿಗಿಸ್ವಾಮಿಗಳೂ ಹೋದರೆಂದು ಹೇಳಿದ್ದಾರೆ ! ಯಾವ
ಸರಿಯೋ ? ಹೀಗಿರಲು ನೋಡಸಿದ್ಧಲಿಂಗ ಪಾಚ್ಛಾಸ್ವಾಮಿಗಳಿಗೆ ಅವಸಾ
ಕಾಲ ಪ್ರಾಪ್ತವಾಯಿತು. ಆಗ ಅವರು ಮುರಿಗಾಸ್ವಾಮಿಗಳ ಎದುರಿನಲ್ಲಿ ಸ
ಮಹಾ ಜನರ ಸಮಕ್ಷದಲ್ಲಿ "ಇದುವರೆಗೆ ಶಿವಾನುಭವ ಚರಂತಿಗೆ ಪಟ್ಟವೆಂತಲ
ಶಿಖಾ ಪಟ್ಟವೆಂತಲೂ ಎರಡು ರೀತಿ ಇತ್ತು. ಇನ್ನು ಮೇಲೆ ಎಲ್ಲ ಭಾ
ಈ ಇಮ್ಮಡಿ ಮುರಿಗಾರಾಜೇಂದ್ರ ಸ್ವಾಮಿಗಳನ್ನೇ ಕೂಡಿದೆ" ಎಂದು ಹೇ
ಲಿಂಗೈಕ್ಯರಾದರು. ಆಗ ಶಿವಾನುಭವ ಚರಂತಿಗೆ ಪಟ್ಟ ಶ್ರೀ ವಾಚ್ಯದ ಕುಮಾರ
ಕೇಂದ್ರರಿಗಾಯಿತು. ನೋಡಸಿದ್ಧಲಿಂಗ ಸ್ವಾಮಿಯ ಗದ್ದುಗೆ ಇಸಳೂರಿನಲ್ಲಿ
ಮುರಿಗಾಸ್ವಾಮಿಗಳು ಕಾರಣ ಗುರುವೆಂದೂ ಕುಮಾರದೇಶಿಕರು ಕಾರ್ಯಗು
ವೆಂದೂ ಗೊತ್ತಾಯಿತು. ಇದಿಷ್ಟು ನಿರಂಜನವಂಶರತ್ನಾಕರದ ಸಾರಸಂಸ್ಕೃ

ನಿರಂಜನ ವಂಶರತ್ನಾಕರದ ನಿರಂಜನ ಪಟ್ಟಾವಳಿಯನ್ನು ಅವಲೋ
ದರೆ, ಮುರುಘಾ ಮಠದವರು ಬಹು ಜಾಣ್ಮೆಯಿಂದ ಈ ಪುಸ್ತಕವನ್ನು ಬರೆ
ರುತ್ತಾರೆಂದು ಹೇಳಬಹುದು.

೫೭. "ಎತ್ತಣಮಾಮರ ನೆತ್ತಣಕೋಗಿಲೆ ? ಎತ್ತಣಿಂದೆತ್ತ ಸಂಬಂಧವಯ್ಯಾ? ಬೆಟ್ಟದ ನೆಲ್ಲಿಯಕಾಯಿ ಸಮುದ್ರದೊಳಗಣ ಉಪ್ಪು, ಎತ್ತಣಿಂದೆತ್ತ ಸಂಬಂಧವಯ್ಯಾ? ಗುಹೇಶ್ವರ ಲಿಂಗಕ್ಕೂ ಎನಗೆಯೂ ಎತ್ತಣಿಂದೆತ್ತ ಸಂಬಂಧವಯ್ಯಾ ?"

ಎಂಬ ಪ್ರಭುದೇವರ ವಚನವನ್ನು ಗಮನದಲ್ಲಿಟ್ಟುಕೊಂಡು ನಿರಂಜನ ವಂಶ ರತ್ನಾಕರ ಘಟನೆಗಳನ್ನು ಇತಿಹಾಸದ ಒರೆಗಲ್ಲಿನಲ್ಲಿ ಉಜ್ಜಿ ಅದರ ಬಣ್ಣ, ಬೆಲೆ, ನೆಲೆಗಳನ್ನು ನಿರ್ಣಯಿಸಿ, ಚಿತ್ರದುರ್ಗದ ವಿರಕ್ತ ಮಠಕ್ಕೂ ಶೂನ್ಯ ಸಿಂಹಾಸನಕ್ಕೂ ಏನು ಸಂಬಂಧವೆಂಬುದನ್ನು ನಿರ್ಧರಿಸಬಹುದು.

# ತರಂಗ ೯.

## ಶಿಖಾ ಪಟ್ಟ; ಶಿವಾನುಭವ ಪಟ್ಟ

೫೮. ಇಕ್ಷುದಂಡಕ್ಕೆ ಕೀಳುಮೇಲಲ್ಲದೆ ಸಕ್ಕರೆಯ ದಂಡಕ್ಕೆ ಕೀಳುಮೇಲುಂಟೆ? ಪರುಷ ಪಾಷಾಣಕ್ಕೆ ಕೀಳುಮೇಲಲ್ಲದೆ ಕಡೆಯಾಣಿಗುಂಟೆ ಒರೆಗಲ್ಲು ? ಉಂಟು, ಇಲ್ಲಾ ಎಂಬ ಸಂದೇಹ ನಿಂದಲ್ಲಿ ಗುಹೇಶ್ವರ ಲಿಂಗವು ತಾನೆ ಸಿದ್ಧರಾಮಯ್ಯಾ"

—ಅಲ್ಲಮಪ್ರಭು.

ನಿರಂಜನವಂಶರತ್ನಾಕರ ಕಾದಂಬರಿಯಂತಿದೆ. ಅದು ಇತಿಹಾಸ ದೃಷ್ಟಿಯಿಂದ ಪ್ರಮಾಣ ಗ್ರಂಥವೆಂದು ಅಂಗೀಕರಿಸಲು ಸಾಧ್ಯವಿಲ್ಲ. ಚಿತ್ರದುರ್ಗ ಮುರುಘಾ ಬೃಹನ್ಮಠದ ಲಿಂಗೈಕ್ಯ ಶ್ರೀ ಜಯದೇವ ಮುರುಘರಾಜ ಸ್ವಾಮಿಗಳ ಚರಿತ್ರೆಯನ್ನು ಶ್ರೀ ಜಯದೇವ ಲೀಲೆ—ಎಂಬ ಹೆಸರಿನಲ್ಲಿ ಧಾರವಾಡ ಶ್ರೀ ಮುರಘಾಮಠದವರು ಪಂಡಿತ ಏಳುಬೆಂಚೆ ಬಳ್ಳಾರಿ ಶ್ರೀ ನಾಗೇಶಶಾಸ್ತ್ರಿಗಳಿಂದ ಕಾವ್ಯ ರೂಪದಲ್ಲಿ ಬರೆಯಿಸಿ ಪ್ರಕಟಿಸಿರುತ್ತಾರೆ. ಅದರಲ್ಲಿ ಇಪ್ಪತ್ತನೆಯ ಸಂಧಿಯಲ್ಲಿ ಲಿಂಗೈಕ್ಯ ಶ್ರೀ ಜಯದೇವ ಸ್ವಾಮಿಗಳು ತಮ್ಮ ಶಿಷ್ಯರಿಗೆ ಶೂನ್ಯ ಪೀಠದ ಪಟ್ಟಭದ್ರರ ಪರಂಪರೆಯನ್ನು ತಿಳಿಸಿದಂತೆ ಉಕ್ತವಾಗಿರುತ್ತದೆ. ಅದನ್ನು ಅನು

ಸರಿಸಿ ಈ ನಿರಂಜನ ಜಂಗಮನಾಮಾವಳಿಯನ್ನು ನೋಡಿದರೆ, ಅಲ್ಲಮ ಪ್ರ
ದಾಯದಲ್ಲಿ ಮೊಟ್ಟಮೊದಲನೆಯ ಶೂನ್ಯ ಪೀಠಾಧಿಕಾರಿ ಎಂದರೆ, ಚನ್ನಬಸ
ನವರು. ಇದರಿಂದ ಅಲ್ಲಮರು ಮೊದಲನೆಯವರಲ್ಲವೆಂದು ಹೇಳಿದಂತಾಯಿ
"ಈ ಪೀಠಕ್ಕೆ ಬಂದ ಎರಡನೆಯ ಮಹಾ ಯತಿಗಳೇ ತೋಂಟದ ಸಿದ್ಧ
ಸ್ವಾಮಿಗಳು" ಎಂದೂ ಶ್ರೀ ಜಯದೇವ ಲೀಲೆಯಲ್ಲಿ ಹೇಳಿದೆ. ಅನಂತ
ವಾಯ್ತು, ಅನುಕ್ರಮವಾಗಿ, ೩. ನಿರಕ್ಷರ ಬೋಳಬಸವಸ್ವಾಮಿ, ೪. ಸ
ವೀರೇಂದ್ರ, ೫. ಸಿದ್ಧವೀರಣಾರ್ಯ ೬. ಗಗನದಾರ್ಯ ೭. ಕಟ್ಟಿಗೆಹಳ್ಳಿ ಸ್ವಾ
ಎಂಬುವರು ಶೂನ್ಯಪೀಠಾಧಿಕಾರಿಗಳಾದರೆಂದೂ ಅನಂತರ ಮುರುಗೇಂದ್ರ ಸ್ವಾ
ಗಳು ಎಂಟನೆಯ ನಿರಾಭಾರಿಗಳಾಗಿ ಈ ಪೀಠಕ್ಕೆ ಬಂದರೆಂದೂ ಅದೇ ಕಾವ್ಯ
ಹೇಳಿದೆ. ನಿರಂಜನವಂಶರತ್ನಾಕರದಲ್ಲಿ ಹೇಳಿರುವ ನಿರಾಭಾರಿ ಪರಂಪರೆ
ತೋಂಟದ ಸಿದ್ಧಲಿಂಗೇಶ್ವರರಿಂದ ಕಟ್ಟಿಗೆಹಳ್ಳಿ ಸ್ವಾಮಿಗಳವರೆಗಿನ ಆರು ಮ
ನಿರಂಜನರನ್ನು ಶ್ರೀ ಜಯದೇವಲೀಲೆ ಚಿತ್ರದುರ್ಗದ ಬೃಹನ್ಮಠದ ವಿರಕ್ತ ಪೀ
ಮೇಲೆ ಕೂಡಿಸಿ ತನ್ನ ಪರಂಪರೆಯನ್ನು ಪ್ರಾರಂಭ ಮಾಡಿರುತ್ತದೆ. ಹಾಗಾ
ಈಗಿರುವ ಚಿತ್ರದುರ್ಗದ ವಿರಕ್ತ ಮಠವನ್ನು ತೋಂಟದ ಸಿದ್ಧಲಿಂಗ ದೇಶಿ
ನಿರ್ಮಿಸಿದರೆಂದು ಹೇಳಬೇಕಾಯಿತು. ಅದು ಸರಿಯಲ್ಲ ಚಿತ್ರದುರ್ಗದ ಮ
ವನ್ನು ಹದಿನೆಂಟನೆಯ ಶತಮಾನದಲ್ಲಿ ಕಟ್ಟಿಸಿದರೆಂದು ಇತಿಹಾಸ ನಿರ್ಧ
ತ್ತದೆ. ಒಂದುವೇಳೆ ಈಗಿರುವ ಮುರಿಗಿ ವಿರಕ್ತ ಮಠ ತೋಂಟದ ಸಿದ್ಧಲಿಂಗೇ
ರರ ಕಾಲದಲ್ಲಿ ಹರದನಹಳ್ಳಿಯಲ್ಲಿಯೋ ಸ್ಥಾಪಿತವಾಗಿತ್ತೆಂದು ಹೇಳಬಹುದೇ
ಅದೂ ಸಾಧ್ಯವಿಲ್ಲ. 'ನಿರಂಜನ ವಂಶರತ್ನಾಕರ'ದಂತೆ ತೋಂಟದ ಸಿದ್ಧಲಿ
ದೇಶಿಕರಿಗೆ ಹರದನಹಳ್ಳಿಯ ಶೂನ್ಯ ಸಿಂಹಾಸನ ಮಠದಲ್ಲಿ ವಿರಕ್ತ ಪಟ್ಟ
ಯಿತು; ಅವರು ಎಡೆಯೂರು ಕ್ಷೇತ್ರದಲ್ಲಿ ಬಯಲಾದರು. ಅವರ ಪರಂ
ಮುಂದೆಯೂ ಪ್ರತ್ಯೇಕವಾಗಿಯೇ ಬೆಳೆಯಿತು. ಹನ್ನೆರಡನೆಯ ಶತಮಾನ
ಚನ್ನಬಸವಣ್ಣನವರು ಈ ಶೂನ್ಯ ಪೀಠದ ಮೊದಲನೆಯ ನಿರಾಭಾರಿಯಾದ
ಮೇಲೆ, ಮುಂದೆ ಹದಿನಾರನೆಯ ಶತಮಾನದ ತೋಂಟದ ಸಿದ್ಧಲಿಂಗ ದೇಶಿ
ವರೆಗೆ ಆ ಪರಂಪರೆಯೇ ಇರಲಿಲ್ಲವೆಂದಲ್ಲ, ಶೂನ್ಯ ಪೀಠವೇ ಕಣ್ಮರೆಯಾಗಿತ್ತೆಂದು
ಶ್ರೀ ಜಯದೇವ ಲೀಲೆ ದೃಢಪಡಿಸುತ್ತದೆ. ಮುರಘಸ್ವಾಮಿಗಳು ಡಿಳ್ಳಿ ಬಾ
ಷಹನಿಂದ ಶಿಖಾಶೈಲವನ್ನು ತಂದದ್ದರಿಂದ ಶಿಖಾಪಟ್ಟ ಇವರಿಗಾಯಿತೆಂ

ಭಾವಿಸಿದರೂ, ಶಿವಾನುಭವ ಪಟ್ಟದ ತೋಂಟದ ಸಿದ್ಧಲಿಂಗದೇಶಿಕರು ಮುರಘ ಸ್ವಾಮಿಗಳ ಶೂನ್ಯ ಪೀಠದ ಮೂಲ ಪುರುಷರಾಗಲಾರರು ! ಹಾಗೆ ನೋಡಿದರೆ ಶಿಖಾ ಪಟ್ಟದ ಚನ್ನಬಸವಣ್ಣನವರು ಚಿತ್ರದುರ್ಗದ ಶೂನ್ಯ ಪೀಠದ ಮೊದಲ ನೆಯ ವಿರಕ್ತರಾಗಬೇಕಾದೀತು ! ಇದನ್ನು ಒಪ್ಪಿದರೆ, ಮುರಘಸ್ವಾಮಿಗಳು ಮೂಲ ಶೂನ್ಯ ಸಿಂಹಾಸನವನ್ನು ಪುನರುತ್ಥಾನ ಮಾಡಿದರೆಂದು ಹೇಳಬೇಕಾಗು ತ್ತದೆ. ಇದು ಇತಿಹಾಸ ದೂರವಾದ ಸಂಗತಿ. ಆ ಮಠದ ಹೆಸರಾದರೂ ಶ್ರೀ ಮುರುಘಾ ಬೃಹನ್ಮಠ ಎಂದಿದೆಯೇ ಹೊರತು ಕಲ್ಯಾಣ ಚನ್ನಬಸವಣ್ಣನವರ ಶೂನ್ಯ ಸಿಂಹಾಸನ ಮಠವೆಂದಾಗಲಿ ಅಥವಾ ಶ್ರೀ ತೋಂಟದ ಸಿದ್ಧಲಿಂಗದೇಶಿಕ ಬೃಹನ್ಮಠವೆಂದಾಗಲಿ ರೂಢಿಯಲ್ಲಿಲ್ಲ ! ಮೂಲ ಶೂನ್ಯ ಸಿಂಹಾಸನ ಪರಂಪರೆಯ ತೋಂಟದ ಸಿದ್ಧಲಿಂಗದೇಶಿಕರ ಹೃದಯಪರಂಜ್ಯೋತಿಯಲ್ಲಿ ಹದಿನೆಂಟನೆಯ ಶತಮಾನದ ಮುರಘದೇಶಿಕರು ತಮ್ಮ ಹೃದಯ ದೀಪವನ್ನು ಹೊತ್ತಿಸಿಕೊಂಡ ರೆಂದು ಊಹಿಸಬಹುದು. ಎಂದರೆ ಮುರುಘದೇಶಿಕರು ಮೂಲ ಶೂನ್ಯ ಸಿಂಹಾ ಸನ ಪಟ್ಟಾವಳಿಯಲಿಲ್ಲ; ಇವರು ತಮ್ಮದೇ ಆದ ಒಂದು ವಿರಕ್ತ ಮಠವನ್ನು ಹದಿನೆಂಟನೆಯ ಶತಮಾನದಲ್ಲಿ ಸ್ಥಾಪಿಸಿದರೆಂದು ತಿಳಿದುಬರುತ್ತದೆ. ಚನ್ನಬಸ ವಣ್ಣನವರಿಗೂ ಮುರಘದೇಶಿಕರಿಗೂ ಆರುನೂರು ವರ್ಷ ಅಂತರವಿದೆ; ತೋಂಟದ ಸಿದ್ಧಲಿಂಗೇಶ್ವರರಿಗೂ ಮುರಘದೇಶಿಕರಿಗೂ ಸುಮಾರು ಮುನ್ನೂರು ವರ್ಷ ಅಂತರವಿದೆ. ಆದ್ದರಿಂದ ಚಿತ್ರದುಗದ ಮುರಿಗಿ ಮಠ ಇತರ ಅನೇಕ ವಿರಕ್ತ ಮಠಗಳಂತೆ ಮೂಲ ಶೂನ್ಯ ಪೀಠದ ಶಾಖೆಯಾಗಿರಬಹುದೇ ಹೊರತು, ಇದೇ ಮೂಲ ಪೀಠವಲ್ಲ. ಚನ್ನಬಸವಣ್ಣನವರ ಬಳಿವಿಡಿದು ಅಥವಾ ತೋಂಟದ ಸಿದ್ಧಲಿಂಗದೇಶಿಕರ ಬಳಿವಿಡಿದು ಸ್ಥಾಪನೆಯಾಗಿರಬಹುದಾದ ಶೂನ್ಯ ಪೀಠದ ಮಠಗಳು ಚಿತ್ರದುರ್ಗದ ಶೂನ್ಯಪೀಠದಂತೆ ನಾಡಿನಲ್ಲಿ ಅನೇಕವಾಗಿವೆ. ಚಿತ್ರ ದುರ್ಗದ ವಿರಕ್ತ ಮಠಕ್ಕಿಂತಲೂ ಪ್ರಾಚೀನವಾದ ಅನೇಕ ವಿರಕ್ತ ಮಠಗಳಿವೆ. ಅವೆಲ್ಲಾ ಶೂನ್ಯ ಸಿಂಹಾಸನ ಮಠಗಳೇ. ಚಿತ್ರದುರ್ಗದ ಬೃಹನ್ಮಠ ತನ್ನ ಪ್ರಾಚೀನತೆಯನ್ನು ತೋರಿಸಲು ತೋಂಟದ ಸಿದ್ಧಲಿಂಗದೇಶಿಕರನ್ನು ತನ್ನ ಮೂಲ ನಿರಾಭಾರಿ ಯತಿಯೆಂದು ಹೇಳಿಕೊಳ್ಳುತ್ತದೆ. ಹಾಗೆ ನೋಡಿದರೆ, ಯಾರು ಯಾರನ್ನುಬೇಕಾದರೂ ತನ್ನ ಮೂಲ ಪುರುಷರೆಂದು ಹೇಳಿಕೊಳ್ಳ ಬಹುದು !

ಮುರಿಗೀಸ್ವಾಮಿಗಳು ಚಿತ್ರದುರ್ಗದ ವಿರಕ್ತ ಮಠದ ಸ್ವಾಮಿಗಳೆ... ಹೇಳುವುದರಲ್ಲಿ ಯಾವ ಅನುಮಾನವೂ ಇಲ್ಲ. ಈ ಮಠದಲ್ಲಿ ಮೂಲ ಪುರು... ಕರ್ತೃಗದ್ದುಗೆಯಿದೆ. ಎಲ್ಲ ವಿರಕ್ತ ಮಠಗಳೂ ಪರಮ ವೈರಾಗ್ಯಮೂರ್ತಿಯಾ... ತೋಂಟದ ಸಿದ್ಧಲಿಂಗದೇಶಿಕರನ್ನು ತಮ್ಮ ಮೂಲ ಆರಾಧ್ಯ ದೈವವೆಂದು ... ಯಿಂದ ಈಗಲೂ ಗೌರವಿಸುತ್ತವೆ. ಮುರುಘಾಸ್ವಾಮಿಯವರ ತರುವಾ... ೧. ಗುರುಸಿದ್ಧಸ್ವಾಮಿ, ೨. ಸ್ವಾದಿಯ ಚನ್ನಬಸವಸ್ವಾಮಿ, ೩. ಸಿರಹಟ್ಟಿ... ಸಿದ್ಧಲಿಂಗಸ್ವಾಮಿ, ೪. ಗುರುಪಾದಸ್ವಾಮಿ, ೫. ಮೂರು ಸಾವಿರದ ಗುರುಪಾ... ಸ್ವಾಮಿ, ೬. ಮೂರು ಸಾವಿರದ ಶಿವಲಿಂಗಸ್ವಾಮಿ, ೭. ಚೆನ್ನವೀರಸ್ವಾ... ೮. ವ್ಯಾಕರಣದ ಸಿದ್ಧಲಿಂಗಸ್ವಾಮಿ, ೯. ನೈಘಂಟಿನ ಸಿದ್ಧವೃಷಭಸ್ವಾ... ೧೦. ಸಣ್ಣಬರೆಹದ ರಾಜೋಟಿಸ್ವಾಮಿ, ೧೧. ಸಾವಳಿಗೆಯ ಶಿವಲಿಂಗಸ್ವಾ... ೧೨. ಸಣ್ಣಪಾದದ ಚೆನ್ನವೀರಸ್ವಾಮಿ, ೧೩. ಸಿರಸಂಗಿ ಮಹಾಲಿಂಗಸ್ವಾ... ೧೪. ಹೆಬ್ಬಾಳು ರುದ್ರಸ್ವಾಮಿ, ೧೫. ಬ್ಯಾಡಗಿ ಮುಪ್ಪಿನಸ್ವಾಮಿ, ೧೬. ಜ... ದೇವಸ್ವಾಮಿ, ೧೭. ಜಯವಿಭವಸ್ವಾಮಿ–ಎಂದು ಶ್ರೀ ಜಯದೇವ ಲೀಲೆಯಿ... ಗೊತ್ತಾಗುತ್ತದೆ. ಈಗ ಚಿತ್ರದುರ್ಗ ವಿರಕ್ತ ಬೃಹನ್ಮಠಾಧಿಕಾರಿ ಶ್ರೀ ಮಲ್ಲಿಕಾರ್ಜುನ... ಸ್ವಾಮಿಗಳಿರುತ್ತಾರೆ. ಇವರು ಈ ಪೀಠವನ್ನು ತಾ|| ೧೫–೧೦–೧೯೬೪ರ... ಪಡೆದರು. ಆ ಸಮಯದಲ್ಲಿ ಅವರು ಮಾಡಿದ ಅನುಗ್ರಹ ಭಾಷಣವನ್ನು ... ಲೋಕಿಸಿದರೆ ಈ ಶೂನ್ಯ ಪೀಠದ ವಿಚಾರದಲ್ಲಿ ಕೆಲವು ಸಂಗತಿಗಳು ಗೊತ್ತಾ... ತ್ತವೆ. ಈ ಭಾಷಣ ಇತಿಹಾಸದಮೇಲೆ ಎಳ್ಳಷ್ಟೂ ಬೆಳಕನ್ನು ಬೀರುವುದಿ... ಆ ಭಾಷಣದಲ್ಲಿ:—

"ಶೂನ್ಯಪೀಠ ಪರಂಪರೆ–ಇನ್ನು ಶೂನ್ಯ ಪೀಠದ ಪವಿತ್ರ ಪರಂಪರೆ... ಮಂದಾಕಿನಿಯು ಹೇಗೆ ಸಾಗಿಬಂದಿದೆ–ಎಂಬುದನ್ನು ದೇಶ ಕಾಲ ವಿವರ... ವಾದೋಪವಾದಗಳಿಗೆ ಅವಕಾಶವಾಗದಂತೆ, ಕೇವಲ ದಿಗ್ದರ್ಶನ ದೃಷ್ಟಿಯಿ... ಪ್ರಸ್ತಾಪಿಸುವುದು ಪ್ರಕೃತವಾಗಿದೆ."

"ನಿರಂಜನವಂಶರತ್ನಾಕರ"ದ ರೀತಿಯಲ್ಲಿ ಅಲ್ಲಮ ಪ್ರಭುದೇವರು ಶೂನ್ಯ... ಪೀಠದ ಮೂಲ ಪುರುಷರು. ಅವರಿಂದಲೇ ಪೀಠದ ಪರಂಪರೆಯ ಪ್ರಾರಂಭ... ಅವರಿಂದ ಮುಂದೆ ಚನ್ನಬಸವ, ಸಿದ್ಧರಾಮ, ಅನಾದಿ ಗಣೇಶ್ವರ, ನಿರ್ಮಾಯ... ಗಣೇಶ್ವರ–ಈ ಕ್ರಮದಲ್ಲಿ ಪರಂಪರೆಯು ಮುಂದುವರಿಯುತ್ತಿದೆ. ತೋಂಟ...

ಸಿದ್ಧಲಿಂಗ ಯತೀಶ್ವರರು ಈ ಪರಂಪರೆಯಲ್ಲಿ ೧೯ನೆಯವರು. ನಂತರ (ಈ ಶಬ್ದ ಅಶುದ್ಧ ಪ್ರಯೋಗ) ಮುರಿಗೆಯ ಶಾಂತವೀರ ಇಲ್ಲವೆ ಮುರಿಗಿಸ್ವಾಮಿಗಳು ೨ನೆಯವರಾಗಿ ಬರುತ್ತಾರೆ. ಅವರು ಮುರಿಗಿ ಜೆತ್ತ, ಮುರಿಗಿ ಶಾಲು, ಮುರಿಗಿ ಮುಂಡಾಸ ಧರಿಸಿದ್ದ ಕಾರಣ, ಜನರು ಅವರನ್ನು ಮುರಿಗಿಸ್ವಾಮಿಗಳೆಂದು ಕರೆದರು. ಪ್ರಭುದೇವರಿಂದ ಅವರು ೨೬ನೆಯವರು. ಅವರ ಗುರುಗಳು ಕಟ್ಟಿಗೆಹಳ್ಳಿಯ ಸಿದ್ಧವೀರಸ್ವಾಮಿಗಳು."

"ಸಿದ್ಧವೀರಸ್ವಾಮಿಗಳಿಗೆ ಇಬ್ಬರು ಶಿಷ್ಯರು. ಒಬ್ಬರು ನೋಡಾ ಸಿದ್ಧಲಿಂಗ ಸ್ವಾಮಿಗಳು. ಅವರು ವಯಸ್ಸಿನಿಂದ ಹಿರಿಯರು. ಮತ್ತೊಬ್ಬರು ಮುರಿಗಿ ಸ್ವಾಮಿಗಳು. ಅವರು ವಯಸ್ಸಿನಿಂದ ಕಿರಿಯರು. ನೋಡಾ ಸಿದ್ಧಲಿಂಗಸ್ವಾಮಿ ಗಳಿಗೆ ಗುರುಗಳು ತಮ್ಮ ಶಿವಾನುಭವ ಪಟ್ಟವನ್ನು ಕರುಣಿಸಿ, ಮುರಿಗಿ ಸ್ವಾಮಿ ಗಳ ವಿಷಯವಾಗಿ–'ಇವರು ಮಹಾಮಹಿಮರು. ಇವರನ್ನು ಕರೆದುಕೊಂಡು ನೀವು ದಿಲ್ಲಿಗೆ ಹೋಗಬೇಕು. ನಮ್ಮ ಪರಮ ಗುರು ಚೆನ್ನಬಸವಣ್ಣನವರು, ಶಿಖಾಶೈಲ, ಸುವರ್ಣ ಸಿಂಹಾಸನ–ಈ ಮೂರು ವಸ್ತುಗಳನ್ನು ವಜೀರ ಮಲ್ಲೂ ಖಾನನ ಕೈಯಲ್ಲಿ ಕೊಟ್ಟಿರುವುದಾಗಿ ದಾಖಲೆಯಿದ್ದು ಅದನ್ನು ನೀವು ಬಾದಷಹ ನಿಗೆ ತೋರಿಸಿ, ಅವನಿಂದ ಆ ಮೂರನ್ನೂ ತಿರುಗಿ ತೆಗೆದುಕೊಳ್ಳಬೇಕು. ನಂತರ, ಇವರಿಗೆ ಶಿಖಾ ಪಟ್ಟವನ್ನು ಕಟ್ಟಿ, ಇವರ ವಶಕ್ಕೆ ಆ ಸೊತ್ತುಗಳನ್ನು ಕೊಡ ಬೇಕು. ನಿಮ್ಮ ಶಿವಾನುಭವ ಪಟ್ಟ, ಇವರ ಶಿಖಾಪಟ್ಟ ಎರಡೂ ಒಂದುಗೂಡಿ ನಡೆಯಬೇಕು–ಎಂದು ಅಪ್ಪಣೆ ಮಾಡಿದರು."

"ಗುರುಗಳ ಅಪ್ಪಣೆಯಂತೆ. ನೋಡಾ ಸಿದ್ಧಲಿಂಗಸ್ವಾಮಿಗಳು ಮುರಿಗಿ ಸ್ವಾಮಿಗಳೊಂದಿಗೆ ದಿಲ್ಲಿಗೆ ಬಂದರು. ಅಲ್ಲಿ ಅವರು ಅನೇಕ ಮಹಿಮೆಗಳನ್ನು ತೋರಿ, ಬಾದಶಹನಿಂದ ತಮ್ಮ ಸೊತ್ತುಗಳನ್ನು ತೆಗೆದುಕೊಂಡರು. ಬಳಿಕ, ಬಾದಶಹನ ಸಮ್ಮುಖದಲ್ಲಿ ತುಂಬ ಸಂಭ್ರಮದಿಂದ ನೋಡ ಸಿದ್ಧಲಿಂಗಸ್ವಾಮಿ ಗಳು ಮುರಿಗಿಸ್ವಾಮಿಗಳಿಗೆ ಶಿಖಾಪಟ್ಟವನ್ನು ಕಟ್ಟಿ, ೭೨ ಬಿರುದಾವಳಿ ಸಮೇತ ನಗರದಲ್ಲಿ ಮೆರವಣಿಗೆ ಮಾಡಿಸಿದರು. ಬಾದಶಹನು ಆಸ್ಥಾನದಿಂದ ಲಾಲಶಿಖಾ, ಹಸುರು ಜುಪ್ಪಿ, ನದರಗುಂಡು ಮುಂತಾದ ಮನ್ನಣೆಯ ಕಾಣಿಕೆಗಳನ್ನು ಮುರಿಗಿಸ್ವಾಮಿಗಳಿಗೆ ಸಮರ್ಪಿಸಿ, ರಾಜಮರ್ಯಾದೆಯಿಂದ ಅವರನ್ನು ಬೀಳ್ಕೊಟ್ಟನು."

"ಅಲ್ಲಿಂದ ಅವರೀರ್ವರೂ ಹೈದರಾಬಾದಿಗೆ ಬಂದು, ಅಲ್ಲಿಯ ನವಾಬ ನಿಂದ ಅನೇಕ ಮಾನ-ಸನ್ಮಾನಗಳನ್ನು ಪಡೆದು, ಹಾಗೆಯೇ ದೇಶಾಂತರಗಳನ್ನು ಸಂಚರಿಸುತ್ತ ಸ್ವಾದಿಯ ಸೀಮೆಯಲ್ಲಿರುವ ಇಸಳೂರಿಗೆ ದಯಮಾಡಿಸಿದರು. ಅಲ್ಲಿಯ ಪುರಜನರು ಅತ್ಯಂತ ಸಂತೋಷದಿಂದ ಸತ್ಕರಿಸಿ, ಉತ್ಸವದೊಡನೆ ಅವರನ್ನು ಬರಮಾಡಿಕೊಂಡರು. ಭಕ್ತರ ಭಕ್ತಿಯಲ್ಲಿ ಅವರು ಕೆಲದಿನ ಅಲ್ಲಿಯೇ ನೆಲಸಿದರು. ಮುಂದೆ ನೋಡ ಸಿದ್ಧಲಿಂಗಸ್ವಾಮಿಗಳಿಗೆ ಅವಸಾನ ಕಾಲ ಸನ್ನಿಹಿತವಾಯಿತು. ಆಗ, ಅವರು ಆ ಪ್ರದೇಶದ ಸಮಸ್ತ ಸದ್ಭಕ್ತರನ್ನು ಸೇರಿಸಿ, ಮುರಿಗಿಸ್ವಾಮಿಗಳನ್ನು ಮುಂದಿಟ್ಟುಕೊಂಡು ತಮ್ಮ ಕೊನೆಯ ಸಂದೇಶವನ್ನು ಅಪ್ಪಣೆ ಕೊಡಿಸುತ್ತ-'ಅಲ್ಲಮಪ್ರಭು, ಚನ್ನಬಸವಣ್ಣ ಇವರೀರ್ವರ ತರುವಾಯ ಶಿಖಾ ಪಟ್ಟವನ್ನು ಪಡೆದವರು ಮುರಿಗಿಸ್ವಾಮಿಗಳು. ನಮ್ಮದು ಶಿಖಾಶೈಲವಿಲ್ಲ; ಕೇವಲ ಶಿವಾನುಭವ ಪಟ್ಟ. ಅದು ಸಿದ್ಧರಾಮದೇವರ ಬಳಿವಿಡಿದು ಬಂದಿದೆ. ಶಿವಾನುಭವ ಪಟ್ಟದಲ್ಲಿ ನಾವು ೨೩ ನೆಯವರು. ಇದನ್ನರಿತು ನೀವುಗಳು ವರ್ತಿಸಬೇಕು-ಎಂದು ನೈಜ ವಿಚಾರವನ್ನು ಅವರಿಗೆ ಅರುಹಿದರು. ಆ ಬಳಿಕ ತಮ್ಮ ಶಿವಾನುಭವ ಪಟ್ಟದಲ್ಲಿ ಕುಮಾರಸ್ವಾಮಿಗಳನ್ನು ಕುಳ್ಳಿರಿಸಿ, ಶಿವನ ಅಪ್ಪಣೆಯ ಮೇರೆಗೆ ತಾವು ಶಿವಲೋಕಕ್ಕೆ ತೆರಳಿದರು."

ಎಂಥ ಸುಂದರ ಕಥಾಲಹರಿ ! ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳ ಭಾಷಣ ದಿಂದ ಶೂನ್ಯ ಪೀಠದ ಗೌರವ ಪ್ರತಿಷ್ಠೆಗಳು ಹೆಚ್ಚಿದಂತಾಗಲಿಲ್ಲ ! ಇತಿಹಾಸ ಅಪಹಾಸದಂತಿದೆ ಈ ಭಾಷಣ ! ಈ ಭಾಷಣದ ಅಂಶಗಳು ಯಥಾಕ್ರಮವಾಗಿ ಇತಿಹಾಸದ ಒರೆಗಲ್ಲಿನಲ್ಲಿ ಬಣ್ಣಗಾಣುತ್ತವೆ ! ಅದೇ ಭಾಷಣದಲ್ಲಿ—

"ಆ ಮಹಿಮರ ಗದ್ದುಗೆ ಶತ-ಶತಮಾನಗಳಿಂದ ಸದ್ಭಕ್ತರ ಹೃದಯದಲ್ಲಿ ತನ್ನ ದೀಪ್ತಿಯನ್ನು ಬೆಳಗಿದೆ, ಬೆಳಗುತ್ತಲಿದೆ. ಕಾಲಕ್ರಮದಿಂದ ಅವರ ಸಮಾಧಿ ಸ್ಥಾನವೇ ಮುರುಘ ಸಂಪ್ರದಾಯದ, ಶಿಖಾಶೈಲ ಪಟ್ಟದ ಮೂಲ ಪೀಠವೆನಿಸಿ ಬೃಹನ್ಮಠವಾಗಿ ವಿಸ್ತಾರಗೊಂಡಿದೆ. ಅದರ ಶಾಖೋಪಶಾಖೆಯ ಮಠಗಳು ಸಮಾಜದಲ್ಲಿ ಅಸಂಖ್ಯಾತವಾಗಿವೆ. ಇಂತಹ ಮಹತ್ತರವಾದ ಪೀಠವನ್ನು ೨. ಇಮ್ಮಡಿ ಗುರುಸಿದ್ಧಸ್ವಾಮಿಗಳು ಅಲಂಕರಿಸಿದರು. ತರುವಾಯ, ೩. ಸ್ವಾದಿಯ ಚನ್ನಬಸವ ಸ್ವಾಮಿಗಳು, ೪. ಶಿರಹಟ್ಟಿಯ ಸಿದ್ಧಲಿಂಗ ಸ್ವಾಮಿಗಳು, ೫. ಗುರುಪಾದ ಸ್ವಾಮಿಗಳು, ೬. ಮೂರು ಸಾವಿರದ ಗುರುಪಾದ ಸ್ವಾಮಿಗಳು,

೭. ಮೂರು ಸಾವಿರದ ಶಿವಲಿಂಗಸ್ವಾಮಿಗಳು, ೮. ಒಪ್ಪೊತ್ತಿನ ಚನ್ನವೀರ ಸ್ವಾಮಿಗಳು, ೯. ವ್ಯಾಕರಣದ ಸಿದ್ಧಲಿಂಗಸ್ವಾಮಿಗಳು, ೧೦. ನೈಘಂಟಿನ ಸಿದ್ಧ ವೃಷಭ ಸ್ವಾಮಿಗಳು, ೧೧. ರಾಜಕೋಟೆ ಸ್ವಾಮಿಗಳು, ೧೨. ಸಾವಳಗಿ ಗುರು ಶಾಂತ ಸ್ವಾಮಿಗಳು, ೧೩. ಗುರುಚನ್ನವೀರ ಸ್ವಾಮಿಗಳು, ೧೪. ಮಹಾಲಿಂಗ ಸ್ವಾಮಿಗಳು, ೧೫. ರುದ್ರಸ್ವಾಮಿಗಳು, ೧೬. ಬ್ಯಾಡಗಿ ಮುಪ್ಪಿನ ಸ್ವಾಮಿಗಳು ಈ ೧೪ ಜನ ತಪೋನಿಷ್ಠರೂ ವಿದ್ವಾಂಸರೂ ಆದ ಮಹಾನುಭಾವರು, ಕ್ರಮ ವಾಗಿ ಈ ಮಹಾ ಪೀಠದ ಅಧಿಪತಿಗಳಾಗಿ ತಮ್ಮ ಉಜ್ವಲ ಜೀವನದಿಂದ ಸಮಾಜವನ್ನು ಬೆಳಗಿದರು. ಅವರೆಲ್ಲರ ಚಾರಿತ್ರಿಕ ವಿಚಾರಗಳನ್ನು ವಿವರವಾಗಿ ಈ ಮಠದ ಪಟ್ಟವಲ್ಲರಿಯಿಂದ ಎಲ್ಲರೂ ತಿಳಿಯಬಹುದಾಗಿದೆ."

ಈ ಪರಂಪರೆಯಲ್ಲಿ ಜಯದೇವ ಸ್ವಾಮಿಗಳು ೧೬ ನೆಯವರಾಗುತ್ತಾ ರೆಂದು ಆ ಭಾಷಣದಲ್ಲಿ ಹೇಳಿದೆ. ಮುರಿಗಿಸ್ವಾಮಿಗಳು ಮೊದಲುಗೊಂಡು ಜಯದೇವ ಸ್ವಾಮಿಗಳು ೧೭ನೆಯವರಾಗುತ್ತಾರೆ. ಮುರಿಗಿ ಸ್ವಾಮಿಗಳನ್ನು ಬಿಟ್ಟು ಉಳಿದವರು ಜಯದೇವ ಸ್ವಾಮಿಗಳವರೆಗೆ ೧೪ ಜನರು ಎಂದು ಅನು ಗ್ರಹ ಭಾಷಣದಲ್ಲಿದೆ. ಬಹುಶಃ ಮುದ್ರಣ ಪ್ರಮಾದವಿರಬಹುದೇ! ಅಥವಾ ಸಂದೇಶವೇ ಸಂದೇಹಾಸ್ಪದವಾಗಿದೆಯೆ! ನೂತನ ವಿರಕ್ತ ಪಟ್ಟಭದ್ರರ ಭಾಷಣ ಮಠದ ಪಟ್ಟವಲ್ಲರಿಯನ್ನೇ ಅನುಸರಿಸಿರಬೇಕು! ಶ್ರೀ ಜಯದೇವ ಲೀಲೆಯಲ್ಲಿ ಸಾವಳಗಿ ಶಿವಲಿಂಗ ಸ್ವಾಮಿಗಳೆಂದು ೧೯ ನೆಯ ಸಿರಾಭಾರಿಗಳ ಹೆಸರಿದೆ. ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳ ಭಾಷಣದಲ್ಲಿ ಸಾವಳಗಿ ಗುರುಶಾಂತಸ್ವಾಮಿ ಗಳು ಎಂದಿದೆ. ಈ ಇಬ್ಬರೂ ಒಬ್ಬರೇ ಇರಬಹುದೆ? ಅಥವಾ ಕಾವ್ಯ ತಪ್ಪಿರ ಬಹುದೆ? ಇಲ್ಲವೆ, ಭಾಷಣ ತಪ್ಪಿರಬಹುದೆ?

ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳ ಭಾಷಣದಿಂದ ಶಿವಾನುಭವ ಪಟ್ಟ ಮತ್ತು ಶಿಖಾ ಪಟ್ಟವೆಂದು ಎರಡು ರೀತಿಯ ವಿರಕ್ತ ಪಟ್ಟಗಳಿವೆಯೆಂದು ಸ್ಪಷ್ಟ ವಾಗುತ್ತದೆ. ನಿರಂಜನವಂಶ ರತ್ನಾಕರದಂತೆ ಆ ಪರಂಪರೆ ಶಿವಾನುಭವ ಪಟ್ಟ ವೆಂದೂ ಅವರಲ್ಲಿ ಪ್ರಭುದೇವರು ಮತ್ತು ಚನ್ನಬಸವಣ್ಣನವರು—ಇಬ್ಬರು ಮಾತ್ರ ಶಿಖಾಪಟ್ಟದವರೆಂತಲೂ ಮೂರನೆಯ ಶಿಖಾಪಟ್ಟ ಮುರಿಗಿಸ್ವಾಮಿಗಳಿಗಾಯಿ ತೆಂದೂ ಶ್ರೀ ಮಲ್ಲಿಕಾರ್ಜುನಸ್ವಾಮಿಗಳು ಅನುಮಾನಕ್ಕೆ ಎಡೆಯಿಲ್ಲದಂತೆ ಅವರ ಭಾಷಣದಲ್ಲಿ ಹೇಳಿದ್ದಾರೆ. ಎಂಥ ಅದ್ಭುತ ಸಂಶೋಧನೆ! ಎಂಥ ತರ್ಕದೃಷ್ಟಿ!

ಶಿವಾನುಭವ ಪಟ್ಟದಲ್ಲಿ ಸಿದ್ಧರಾಮಯ್ಯನವರು ಮೊದಲುಗೊಂಡು ನೋಡಸಿ
ಲಿಂಗ ಸ್ವಾಮಿಗಳು ಇಪ್ಪತ್ತಮೂರನೆಯವರು. ಶಿವಾನುಭವ ಪಟ್ಟವೇ
ಶಿಖಾಶೈಲವಿಲ್ಲದ ಪಟ್ಟ ಎಂದು ಸ್ಪಷ್ಟವಾಗಿ ತಿಳಿಸಿರುತ್ತಾರೆ. ಶಿಖಾಪಟ್ಟ ಬಹು
ಶಿವಾನುಭವ ಪಟ್ಟದಿಂದ ಭಿನ್ನವಾದುದೆಂತಲೂ ಮತ್ತು ಶ್ರೇಷ್ಠವಾದುದೆಂತ
ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳ ಅಭಿಪ್ರಾಯವಿರುವಂತೆ ವ್ಯಕ್ತವಾಗುತ್ತ
ಮುರಿಗಿಸ್ವಾಮಿಗಳಿಂದ ಹಿಡಿದು ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳೂ ಸೇರಿ ಶಿ
ಪಟ್ಟದಲ್ಲಿ ನಿರಾಭಾರಿಗಳಾಗಿರುತ್ತಾರೆ. ನೋಡ ಸಿದ್ಧಲಿಂಗ ಸ್ವಾಮಿಗಳ
ವಾಯ ಶಿವಾನುಭವ ಪಟ್ಟ ಕುಮಾರಸ್ವಾಮಿಗಳಿಗಾಯಿತು. ಅವರೇ ಹುಬ್ಬಳ್ಳಿ
ಮೂರು ಸಾವಿರ ಮಠದ ಪಟ್ಟವಲ್ಲರಿಯಲ್ಲಿ ಬರುತ್ತಾರೆ. ಆದರೆ, ಅಲ್ಲಿ
ಹುಬ್ಬಳ್ಳಿ ಪಟ್ಟವಲ್ಲರಿ ಪ್ರಾರಂಭವಾಯಿತೆಂದಲ್ಲ. ಅದು ಸಿದ್ಧರಾಮಯ್ಯ
ರಿಂದಲೇ ಪ್ರಾರಂಭವಾಗಿ ನೋಡಸಿದ್ಧಲಿಂಗ ಸ್ವಾಮಿಯವರು ಇಪ್ಪತ್ತುಮೂ
ನೆಯ ಶಿವಾನುಭವ ಪಟ್ಟಭದ್ರರಾಗಿದ್ದರೆಂದೂ ಅನಂತರ ಕುಮಾರ ಸ್ವಾಮಿ
ಇಪ್ಪತ್ತನಾಲ್ಕನೆಯವರಾದರೆಂದು ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು
ಭಾಷಣದಲ್ಲಿ ಒಪ್ಪಿರುತ್ತಾರೆ. ಆದ್ದರಿಂದ ಚಿತ್ರದುರ್ಗದ ಬೃಹನ್ಮಠದ ಸಂಸ್ಥಾ
ಕರು ಮುರಘಾಸ್ವಾಮಿಗಳೆಂಬುದರಲ್ಲಿ ಅನುಮಾನವಿಲ್ಲ. ಇದು ಮು
ಸಮಯ ಮಠವೆಂದು ಅವರ ಭಾಷಣದಲ್ಲಿ ಉಕ್ತವಾಗಿದೆ. ಶಿವಾನುಭವ
ದಿಂದ ಶಿಖಾ ಪಟ್ಟ ಉದಯವಾಯಿತು. ಶಿಖಾ ಪಟ್ಟದ ಮುರಿಗೀಸ್ವಾಮಿಗ
ಶಿವಾನುಭವ ಪಟ್ಟದ ನೋಡಸಿದ್ಧಲಿಂಗ ಸ್ವಾಮಿಗಳೇ ಪ್ರತ್ಯಕ್ಷ ದೀಕ್ಷಾ ಗು
ವೆಂದು ನಿರ್ದುಷ್ಟವಾಗಿ ಹೇಳಬಹುದು. ಆದ್ದರಿಂದ ಶಿಖಾ ಪಟ್ಟ ಶಿವಾನು
ಪಟ್ಟದ ಶಿಷ್ಯ ಪರಂಪರೆಯೆಂದು ಒಪ್ಪಬೇಕಾಯಿತು. ಮುರಿಗಿಯ ಶಾಂತ
ನೆಂಬ ಚರಮೂರ್ತಿಯೇ ಮುರಿಗಿಸ್ವಾಮಿ ಎಂಬ ಹೆಸರಿನಿಂದ ಚಿತ್ರದು
ವಿರಕ್ತ ಮಠದ ಮೊದಲನೆಯ ವಿರಕ್ತರಾದರು. ನಿರಂಜನ ವಂಶರತ್ನಾ
ಅವರನ್ನು ಮುರಿಗೆರುದ್ರಸ್ವಾಮಿ ಎಂದು ಹೇಳಿದೆ. ಯಾವುದು ನಿಜವೋ
ತಿಳಿಯದು. ಅದಿರಲಿ. ಮುರಿಗಿ ಬೆತ್ತ, ಮುರಿಗಿ ಶಾಲು, ಮುರಿಗಿ ಮು
ಧರಿಸಿದ್ದ ಕಾರಣ ಜನರು ಅವರನ್ನು ಮುರಿಗಿಸ್ವಾಮಿಗಳೆಂದು ಕರೆದರು" ಎ
ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳ ಭಾಷಣದಲ್ಲಿದೆ. ಎಂಥ ಪದ ಮೀಮಾಂ
ಇದು ಸ್ವಕಪೋಲ ಕಲ್ಪನೆಯಂತಿದೆ. ಮುರಘರ್ ಎಂಬುವರು ಅರು

ಮೂವರು ಪುರಾತನರಲ್ಲಿ ಒಬ್ಬರು. ನಿಜಗುಣ ಶಿವಯೋಗಿಗಳು 'ಅರುವತ್ತು ಮೂವರ ತ್ರಿವಿಧಿ' ಎಂಬ ಗ್ರಂಥವನ್ನು ಬರೆದಿದ್ದಾರೆ. ಅದರಲ್ಲಿ ಮುರಘರ್ ಎಂಬುವರು ಹದಿನಾರನೆಯ ಪುರಾತನರೆಂದು ಹೇಳಿದೆ. ದ್ರಾವಿಡದ ಪೆರಿಯ ಪುರಾಣ, ಸಂಸ್ಕೃತದ ಭಕ್ತವಿಲಾಸ ಮತ್ತು ಕನ್ನಡದ ತ್ರಿಷಷ್ಟಿ ಪುರಾತನ ವಿಲಾಸ ಗಳಲ್ಲಿ ಮುರುಘರ್ ಹೆಸರು ಬಂದಿದೆ. ಈ ಅರುವತ್ತುಮೂವರಲ್ಲಿ ಇಬ್ಬರು ಸ್ತ್ರೀಯರು, ಹದಿನೈದು ಮಂದಿ ಬ್ರಾಹ್ಮಣರು, ಹನ್ನೆರಡು ಜನ ಕ್ಷತ್ರಿಯರು, ಐದು ಮಂದಿ ವೈಶ್ಯರು, ಒಬ್ಬರು ಪಂಚಮರು (ಹೊಲೆಯರು) ಉಳಿದ ಇಪ್ಪತ್ತು ನಾಲ್ಕು ಮಂದಿ ಶೂದ್ರರು ಎಂದು ತಿಳಿದುಬರುತ್ತದೆ. ಇವರೆಲ್ಲಾ ಅಚ್ಚ ಶಿವ ಭಕ್ತರು. ಅವರಲ್ಲಿ ಯಾವನೊಬ್ಬನೂ ವೀರಶೈವನಲ್ಲ. ಅವರೆಲ್ಲರೂ ಸ್ಥಾವರ ಲಿಂಗಪೂಜಕರೂ ಅಲಿಂಗಿಗಳೂ ಆಗಿದ್ದರು. ವೀರಶೈವರು ಇಂಥವರನ್ನು ಪೂಜಿಸುವಂತಿಲ್ಲ. ಆದರೆ ನೂತನ ವೀರಶೈವರಲ್ಲಿ ವರ್ಣಾಶ್ರಮ ಭೇದಗಳಾಗಲಿ, ಉಚ್ಚ, ನೀಚವೆಂಬ ತಾರತಮ್ಯವಾಗಲಿ ಇಲ್ಲದೆ, ಶಿವದೀಕ್ಷಾ ಸಂಪನ್ನರಾದವ ರೆಲ್ಲರೂ ಸಮಾನರು ಮತ್ತು ಮೋಕ್ಷಾಧಿಕಾರಿಗಳೆಂಬುದನ್ನು ಅಂಗೀಕರಿಸುತ್ತಾರೆ. ವೀರಶೈವದಲ್ಲಿ ಕರ್ಮ ಮತ್ತು ಜ್ಞಾನಗಳಿಗಿಂತ ಭಕ್ತಿಗೆ ಹೆಚ್ಚು ಪ್ರಾಶಸ್ತ್ಯವಿದೆ. ಭಕ್ತಿಯೋಗಿ ಜಾತಿ, ಮತ, ಪಂಥ, ಹೆಣ್ಣು, ಗಂಡು, ಕೀಳು, ಮೇಲು ಎಂಬ ಕ್ಷುಲ್ಲಕ ವಿಷಯಗಳನ್ನು ಮೆಟ್ಟಿ ನಿಲ್ಲುತ್ತಾನೆ. ಪರಮಾತ್ಮನಲ್ಲಿ ಭಕ್ತಿಯೇ ಮುಖ್ಯ ವೆಂದು ಈ ಜ್ಞಾನಿಗಳ ಅಭಿಮತ. ಈ ಭಕ್ತಿಯ ದೃಷ್ಟಿಯಿಂದ ಬಸವಣ್ಣನವರೂ ಶರಣರೂ ಹರಿಹರ ಮೊದಲಾದ ಕವಿಗಣವೂ ಅರುವತ್ತು ಮೂವರು ಪುರಾತನ ರನ್ನು ಗೌರವಿಸಿರುತ್ತಾರೆ. ವೀರಶೈವರೂ ಅವರಲ್ಲಿ ಪೂಜ್ಯಭಾವನೆಯನ್ನು ಹೊಂದಿರುತ್ತಾರೆ. ಅವರಲ್ಲಿ ಐದು ಮಂದಿ ಪುರಾತನರು ವೀರಶೈವರಾಗಿದ್ದರೆಂದೂ ಪಂಡಿತರು ಅಭಿಪ್ರಾಯ ಪಡುತ್ತಾರೆ. ಈ ಪುರಾತನರು ಪುಣ್ಯಶ್ಲೋಕರೂ, ಪರಮ ಪೂಜ್ಯರೂ, ವಿರಾಗಿಗಳೂ ಆಗಿರುತ್ತಾರೆ. ಹರಿಹರ ಕವಿ 'ಮುರುಘರ ಮಹಾತ್ಮೆ'-ಎಂಬ ರಗಳೆಯನ್ನು ಬರೆದಿರುತ್ತಾನೆ. ಮುರಘರು ಸದಾ 'ನಮಃ ಶಿವಾಯ' ಎಂದು ಧ್ಯಾನಪರವಶರಾಗುತ್ತಿದ್ದರು. ಅವರ ಸಂಪ್ರದಾಯದ 'ನಮಃ ಶಿವಾಯ' ಮಠಗಳು ತಮಿಳುನಾಡಿನಲ್ಲಿಯೂ ದಕ್ಷಿಣ ಕರ್ನಾಟಕದಲ್ಲಿಯೂ ಇವೆ. ಶ್ರೀ ಶಂ. ಬಾ. ಜೋಷಿಯವರು ಈ ಅರವತ್ತುಮೂವರ ಪ್ರಾಚೀನತೆ ಯನ್ನು ಕುರಿತು 'ಶಿವರಹಸ್ಯ' ಎಂಬ ಗ್ರಂಥದಲ್ಲಿ ವಿವರಿಸಿರುತ್ತಾರೆ. ನಿಜಗುಣ

ಶಿವಯೋಗಿಯ ಕಾಲ ಸುಮಾರು ಕ್ರಿ. ಶ. ೧೩೦೦. ಆತನು ತನ್ನ 'ಪ್ರ
ಸರ ತ್ರಿವಿಧಿ'ಯಲ್ಲಿ

"ವರಮೂಲ ಮಂತ್ರವನೆ ಹರಣವಾಗುಚ್ಚರಿಸಿ |
ಪರಮನೊಲವೆಯನು–ಪಡೆದ ಮುರಘರ ಚರಣ |
ವಿರಲೆನ್ನ ಮಾನಸದೊಳೊಂದಿ" ||

ಎಂದು ಮುರುಘರನ್ನು ಸ್ತೋತ್ರ ಮಾಡಿರುತ್ತಾನೆ. ಕ್ರಿ. ಶ. ೧೫೩೦ ರ ಮುರಿಗೆಯ ಶಾಂತವೀರ ಎಂಬ ವೀರಶೈವ ಕವಿ ಪ್ರಭುಲಿಂಗ ಕಂದ, ವೈರಾ ಷಟ್ಪದಿ, ಏಕೋನವಿಂಶತಿ ಪ್ರಬಂಧ ಎಂಬ ಕಾವ್ಯಗಳನ್ನು ಬರೆದಿರುತ್ತಾನೆ. ಕ್ರಿ. ಶ. ೧೫೬೦ ರಲ್ಲಿ ಮುರಿಗಿದೇಶಿಕೇಂದ್ರ ಎಂಬ ಇನ್ನೊಬ್ಬ ವೀರಶೈವ ಕ ರಾಜೇಂದ್ರ ವಿಜಯ ಎಂಬ ಗ್ರಂಥವನ್ನು ಬರೆದಿರುತ್ತಾನೆ. ಸಿದ್ಧನಂದೇಶ ಗುರುರಾಜ ಚಾರಿತ್ರದಲ್ಲಿ ಏಳನೆಯ ಸಂಧಿ ೭೦ ನೆಯ ಪದ್ಯದಲ್ಲಿ "ಮುರುಘ ತೊಳಲಲ್ಲಿ ಪಂಚಾಕ್ಷರಿಯನೋದಿ | ಹರನ ಕೃಪೆಯಂ ಪಡೆದ" ಎಂದು ಬ ತ್ತಾನೆ. ಇದನ್ನೆಲ್ಲಾ ನೋಡಿದರೆ ಮುರಘರ್ ಎಂಬ ಪುರಾತನರ ಹೆ ಎಷ್ಟೋ ಕಾಲದ ಹಿಂದೆಯೇ ತಮಿಳು ನಾಡಿನಲ್ಲಿಯೂ ಕರ್ಣಾಟಕಾಂಧ್ರ ಗಳಲ್ಲಿಯೂ ಪ್ರಸಿದ್ಧವಾಗಿತ್ತೆಂದು ಗೊತ್ತಾಗುತ್ತದೆ. ಸಂಸ್ಕೃತ ಕಾವ್ಯಗ ಮುರಘರನ್ನು ಕುಮಾರಸ್ವಾಮಿ ಎಂದು ಹೇಳಿರುತ್ತಾರೆ. ಭಕ್ತರು ಮುರುಘ ಎಂದು ಹೆಸರಿಟ್ಟುಕೊಳ್ಳುತ್ತಾರೆ. ತಮಿಳು ಶೈವ ಬಸವಣ್ಣನವರೇ ಮೊದಲಾ ಶರಣರಮೇಲೆ ಪ್ರಭಾವ ಬೀರಿತ್ತು. ಮುರಘರ್ ಒಬ್ಬ ಆಲಿಂಗಿ ಪುರಾತನರು. ಕಾಲ ಸುಮಾರು ಕ್ರಿ.ಶ. ೯ನೆಯ ಶತಮಾನವೆಂದು ಹೇಳಬಹುದು. ಈ ಮು ಘರ್ ಮಹಾತ್ಮರಾದ್ದರಿಂದ ಅನೇಕರು ಅವರ ಹೆಸರುಗಳನ್ನು ಇಟ್ಟುಕೊ ವುದು ಸ್ವಾಭಾವಿಕವಾಗಿದೆ. ಆದರಂತೆ ಚಿತ್ರದುರ್ಗದ ಮುರಘಾ ಸಂಪ್ರದಾಯ ಮೊದಲನೆಯ ವಿರಕ್ತರ ಹೆಸರು ಮುರಘಾಸ್ವಾಮಿ ಅಥವಾ ಮುರುಘೇ ಸ್ವಾಮಿ ಎಂದು ಇತ್ತು. ಇದರಲ್ಲಿ ವಿಶೇಷವೇನೂ ಇಲ್ಲ. ಇವರಿಗಿಂತ ಹಿಂದೆ ಈ ಹೆಸರಿನ ಅನೇಕ ಪ್ರಸಿದ್ಧ ವ್ಯಕ್ತಿಗಳಿದ್ದರೆಂಬುದು ನಿಜ. ಆದ್ದರಿಂದ 'ಮು ಪದದ ವಿಚಾರದಲ್ಲಿ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳ ವ್ಯಾಖ್ಯಾನ ಮನ ರಂಜಕವಾಗಿದೆ; ಅಷ್ಟೆ. ಅದರಲ್ಲಿ ವಿವೇಚನೆಯಿಲ್ಲ; ಇತಿಹಾಸದ ಪ್ರಜ್ಞೆಯಿ ಇವರ ಸಂದೇಶ ಹಾವೇರಿ ಪುರಾಣದಂತಿದೆ !

ಕಟ್ಟಿಗೆಹಳ್ಳಿ ಸಿದ್ಧವೀರ ಸ್ವಾಮಿಗಳು ನಿರಂಜನ ವಂಶರತ್ನಾಕರದಂತೆ ಬರೆಯುವರು. ಹಿಂದಿನವರು ಯಾರೂ ದೆಹಲಿಯಲ್ಲಿದ್ದ ಸುವರ್ಣ ಶೂನ್ಯ ಸಿಂಹಾಸನ, ಶಿಖಾಶ್ರೈಲಗಳ ವಿಚಾರವನ್ನೇ ಪ್ರಸ್ತಾಪಿಸಿದಂತೆ ಕಾಣುವುದಿಲ್ಲ. ಇವರು ಮಾತ್ರ ಅವುಗಳನ್ನು ತರಿಸಿಕೊಳ್ಳಲು ತಮ್ಮ ಶಿಷ್ಯರನ್ನು ದೆಹಲಿಗೆ ಕಳಿಸಿ ದುದೂ ಒಂದು ವಿಶೇಷವೇ ! ನೋಡಸಿದ್ಧಲಿಂಗ ಸ್ವಾಮಿಗಳು ದೆಹಲಿಯಲ್ಲಿ ಮುದಿಮಲ್ಲಪ್ಪನೆಂಬ ಶಿವಭಕ್ತನ ಮನೆಯಲ್ಲಿ ತಂಗಿದರು. ಅವರು ಬಾದಷಹನ ಸಮುಖದಲ್ಲಿಯೇ ಮುರಘಾ ಸ್ವಾಮಿಗಳಿಗೆ ಶಿಖಾ ಪಟ್ಟವನ್ನು ಕಟ್ಟಿದರಂತೆ ! ಯಾವ ಮಠಕ್ಕೆ ಎಂಬುದು ಗೊತ್ತಿಲ್ಲ ! ಆ ಮುಸಲ್ಮಾನರ ನೆರವಿನಲ್ಲಿ ಪಟ್ಟಾಧಿ ಕಾರದ ಕ್ರಿಯಾಕಟ್ಟಳೆಗಳೆಲ್ಲಾ ಸಾಂಗೋಪವಾಗಿ ನಡೆದಿರಲೇಬೇಕು ! ಶಿವಭಕ್ತ ಮುದಿಮಲ್ಲಪ್ಪ ಆ ಮೊದಲೇ ದೆಹಲಿಯಲ್ಲಿ ಅಂಗಡಿ ಇಟ್ಟಿದ್ದ ಹರದಶ್ರೇಷ್ಠ ! ಅಷ್ಟೊಂದು ಅವಸರವಾದರೂ ಏನಿತ್ತು ? ಕನ್ನಡ ನಾಡಿನ ವಿರಕ್ತ ಮಠದ ಸ್ವಾಮಿಯೊಬ್ಬರಿಗೆ ಬಾದಷಹನ ಸಮುಖದಲ್ಲಿ ಪಟ್ಟವೆಂದರೇನು ಸಾಮಾನ್ಯವೆ ? ದೆಹಲಿಯಲ್ಲಿಯೇ ಮುರಘಾ ಸ್ವಾಮಿಗಳಿಗೆ ಪಟ್ಟವಾಗಲಿ ಎಂದು ಕಟ್ಟಿಗೆಹಳ್ಳಿ ಸ್ವಾಮಿಗಳೂ ಹೇಳಿಕಳಿಸಿರಲಿಲ್ಲ! ಮುರಘಾಸ್ವಾಮಿಗಳಿಗೆ ವಿರಕ್ತಪಟ್ಟ ಅರ್ಥಾತ್ ಶಿಖಾ ಪಟ್ಟ ಮಾಡಲು ಕನ್ನಡ ರಾಜ್ಯದಲ್ಲಿ ಏನಾದರೂ ವಿರೋಧವಿತ್ತೇ ? ಈ ಇಬ್ಬರೂ ದೆಹಲಿಗೆ ಹೋಗುವಾಗ ಕಲ್ಯಾಣದಲ್ಲಿ ಪ್ರಭುದೇವರ ಮಠದಲ್ಲಿದ್ದು, ಆಮೇಲೆ ದೆಹಲಿಗೆ ಹೋದರೆಂದು ಹೇಳಿದೆ. ಹಿಂದಿರುಗಿ ಬಂದಾಗ ಆ ಮಠದಲ್ಲಿ ಯಾದರೂ ಶಿಖಾ ಪಟ್ಟವನ್ನು ನೆರವೇರಿಸಬಹುದಾಗಿತ್ತಲ್ಲವೆ ? ಬಾದಷಹರು 'ಜಂಗಮಜಿತಾ ಫಕೀರು ಮುರಿಗಾ ಸಿದ್ಧಲಿಂಗ ಪಾಚ್ಛಾ' ಎಂಬ ಕಿತಾಬನ್ನು ಕೊಟ್ಟಂತೆ ಹೇಳಿದೆ. ಅಲ್ಲದೆ, ಉಭಯ ಸ್ವಾಮಿಗಳಿಗೂ ನಾಲ್ಕು ಶ್ವೇತಛತ್ರ, ಎರಡು ಅಂದೋಳಿಕಾಗಳನ್ನು ಕಾಣಿಕೆಯಾಗಿ ಕೊಟ್ಟನು. ಇಬ್ಬರಿಗೂ ಒಂದೇ ರೀತಿಯ ರಾಜಮರ್ಯಾದೆ ಲಭಿಸಿತು ! ಆದರೆ, ಶ್ರೀ ಮಲ್ಲಿಕಾರ್ಜುನ ಸ್ವಾಮಿ ಗಳು "ಬಾದಷಹನು ತನ್ನ ಆಸ್ಥಾನದಿಂದ ಲಾಲಶಿಖಾ, ಹಸರುಜುಷ್ಟಿ, ಸದರ ಗುಂಡು-ಮುಂತಾದ ಮನ್ನಣೆಯ ಕಾಣಿಕೆಗಳನ್ನು ಮುರಿಗಿ ಸ್ವಾಮಿಗಳಿಗೆ ಸಮರ್ಪಿಸಿ, ರಾಜಮರ್ಯಾದೆಯಿಂದ ಅವರನ್ನು ಬೀಳ್ಕೊಟ್ಟನು" ಎಂದು ಹೇಳಿರು ವುದರ ಔಚಿತ್ಯವೇನು ? "ತಮ್ಮ ಶಿವಾನುಭವ ಚರಂತಿಗೆ ಪಟ್ಟವನ್ನು ಶ್ರೀ ವಾಚ್ಯದ ಕುಮಾರ ದೇಶಿಕೇಂದ್ರ ಸ್ವಾಮಿಗಳವರಿಗೆ ಮಾಡಿ" ನೋಡಾ ಸಿದ್ಧ

ಲಿಂಗ ಸ್ವಾಮಿಗಳು ಬಯಲಾದರು. ಶಿವಾನುಭವ ಪಟ್ಟ ಅವಿಚ್ಛಿನ್ನವಾಗಿ ನ ಯುತ್ತ ಹೋಯಿತು. ಶಿಖಾ ಪಟ್ಟದ ಮುರಘಾ ಸ್ವಾಮಿಗಳಿಗೆ ತೋಂ ಸಿದ್ಧಲಿಂಗ ಸ್ವಾಮಿಗಳೇ ಪ್ರತ್ಯಕ್ಷ ದೀಕ್ಷಾ ಗುರುಪಾದಂತಾಯಿತು ! ಮುರಘಾ ಸ್ವಾಮಿಗಳು ಶಿಖಾಪಟ್ಟದಲ್ಲಿ ಮೂರನೆಯವರೆಂಬುದನ್ನು ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಹೇಳಿರುತ್ತಾರೆ. ಶ್ರೀ ಜಯದೇವ ಲೀಲೆಯಲ್ಲಿ ಮುರಘಾ ಪ ಮೂಲ ಪುರುಷರು ಚನ್ನಬಸವಣ್ಣನವರೆಂದೂ ಆ ತರುವಾಯ ತೋಂಟ ಸಿದ್ಧಲಿಂಗ ಯತಿಗಳೆಂದೂ ಶ್ರೀ ಜಯದೇವ ಸ್ವಾಮಿಗಳು ಹೇಳಿರುತ್ತಾ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಅಲ್ಲಮಪ್ರಭು–ಚನ್ನಬಸವಣ್ಣನವರ ತ ವಾಯ ಮುರಿಗಿಸ್ವಾಮಿಗಳೆಂದು ಹೇಳಿರುತ್ತಾರೆ ! ಗುರುವಿಗೆ ತಿರುಮಂತ್ರ ಯಿತು ! ಅನುಗ್ರಹ ಭಾಷಣದಲ್ಲಿ ಇಂಥ ವಿರೋಧಾಭಾಸಗಳಿಗ ಕಾರಣವೇನು ? ಆ ಭಾಷಣ ಅವಸರದಲ್ಲಿ ಸಿದ್ಧವಾಯಿತೆಂದು ತೋರುತ್ತ ಶ್ರೀ ಜಯವಿಭವ ಸ್ವಾಮಿಗಳು ಲಿಂಗೈಕ್ಯರಾದಮೇಲೆ ಎಲ್ಲೆಲ್ಲಿಯೂ ಅವಸರ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಅವಸರದಲ್ಲಿಯೇ ಪಟ್ಟಗೊಂಡರು ! ಈ ಸಮಯದಲ್ಲಿ ಶ್ರೀ ಜಯದೇವಸ್ವಾಮಿಗಳ ಮಾತೊಂದು ನೆನಪಿಗೆ ಬರುತ್ತದೆ. ತಾ|| ೨೪–೨–೧೯೩೪ ರಲ್ಲಿ ವೀರಶೈವ ಮಹಾ ಜನಗಳು ಮೈಸೂರು ನಗರ ಶ್ರೀ ಜಯದೇವ ಮುರುಘರಾಜೇಂದ್ರ ಸ್ವಾಮಿಗಳಿಗೆ ಬಿನ್ನವತ್ತಳೆಯನ್ನು ಅರ್ಪಿಸಿದರು. ಆಗ ಸ್ವಾಮಿಗಳು ತಮ್ಮ ಭಾಷಣದಲ್ಲಿ "ನಾವೊಬ್ಬ ಚುನಾ ಯಿಸಲ್ಪಟ್ಟ ವ್ಯಕ್ತಿ. ನಾವೊಬ್ಬ ಅಧ್ಯಕ್ಷರು. ನಾವು ಸ್ವತಂತ್ರಿಸಿ ಮತ್ತೊ ಬ್ಬರಿಗೆ ಪಟ್ಟ ಕಟ್ಟುವಂತಿಲ್ಲ. ಸಮಾಜದವರು ಚುನಾಯಿಸಬೇಕು. ಇದೇ ಈ ಪೀಠದ ಪದ್ಧತಿ. ಹಾಗೆ ಚುನಾಯಿಸಲ್ಪಟ್ಟ ಸ್ವಾಮಿಯವರಿಗೆ ಬೇರೆ ಉದ್ಯೋಗವೇ ಇಲ್ಲ. ಸಮಾಜದ ಹಿತಸಾಧನೆಯೇ ಅವರ ಉದ್ಯೋಗ ಬಯಕೆ." ಎಂಬ ಆಣಿಮುತ್ತಿನಂಥ ಮಾತುಗಳನ್ನು ಹೇಳಿದ್ದಾರೆ. ಈ ಮಾತು ಗಳನ್ನು ಅವಲೋಕಿಸಿದರೆ, ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳನ್ನು ಸಮಾಜವೇ ಚುನಾಯಿಸಿತೆ ? ಅಥವಾ ಇತ್ತೀಚೆಗೆ ಈ ಚುನಾವಣೆಯ ರೀತಿ ಬದಲಾಯ

* ಶ್ರೀ ಜಿ. ಹೆಚ್. ಹೊಸೂರ, ಮುಳುಗುಂದ ಅವರು ಬರೆದಿರುವ ಶ್ರೀಮನ್ನೃಪ ರಾಜ ನಿರಂಜನ ಜಗದ್ಗುರು ಜಯದೇವ ಮುರಘರಾಜೇಂದ್ರ ವಿಜಯ ಅಥವಾ ವೀರ ಶೈವ ಮತಾಬ್ಧಿ ಚಂದ್ರೋದಯ–ಎಂಬ ಗ್ರಂಥವನ್ನು ನೋಡಿರಿ.

ಯಾಗಿದೆಯೆ ? ಹಿಂದಣ ಸ್ವಾಮಿಗಳ ಅನುಮತಿಯಿಂದ ಉತ್ತರಾಧಿಕಾರಿಯ ಚುನಾವಣೆ ನಡೆಯಬೇಕಾಗಿಲ್ಲವೆಂದು ಶ್ರೀ ಜಯದೇವ ಸ್ವಾಮಿಗಳು ಸ್ಪಷ್ಟವಾಗಿ ಅಪ್ಪಣೆ ಕೊಡಿಸಿರುತ್ತಾರೆ. ಸಮಾಜದವರೇ ಉತ್ತರಾಧಿಕಾರಿಯನ್ನು ಚುನಾಯಿಸಬೇಕೆಂದೂ ಸಂದೇಹಕ್ಕೆ ಆಸ್ಪದವಿಲ್ಲದಂತೆ ತಿಳಿಸಿರುತ್ತಾರೆ. ಶ್ರೀ ಜಯವಿಭವ ಸ್ವಾಮಿಗಳ ತರುವಾಯ ಅರ್ಹರಾದ ಉಮೇದುವಾರರನ್ನು ಸಮಾಜ ಸಾರ್ವಜನಿಕ ಪ್ರಕಟಣೆಯ ಮೂಲಕ ಆಹ್ವಾನಿಸಿದಂತಿಲ್ಲ. ಸಮಾಜ ಇದನ್ನು ತಿಳಿಯಲಿಲ್ಲ. ಅವಸರದಲ್ಲಿಯೇ ಚುನಾವಣೆ ನಡೆಯಿತು ! ಶ್ರೀ ಜಯದೇವ ಸ್ವಾಮಿಗಳ ಮತ್ತು ಶ್ರೀ ಜಯವಿಭವ ಸ್ವಾಮಿಗಳ ಚುನಾವಣೆಯನ್ನು ಹಿಂದೆ ಸಮಾಜ ಬಹಿರಂಗವಾಗಿ ನಡೆಸಿತು.

ಮೂಲ ಶಿವಾನುಭವ ಶೂನ್ಯ ಪೀಠದಿಂದ ಕವಲೊಡೆದು ಶಿಖಾ ಶೂನ್ಯ ಪೀಠ ಬಂದಂತಾಯಿತು ! ಹೀಗೆ ಕಾಲಕ್ರಮದಲ್ಲಿ ಅನೇಕ ಶಾಖಾ ಪೀಠಗಳಾಗಿರಬೇಕು ! ಶಿಖಾಪಟ್ಟ ಶಿವಾನುಭವದ ಅಭಿನ್ನ ಅಂಗವಾಯಿತಾದರೂ, ಮೊದಲನೆಯದು ಶಿವಾನುಭವ ಪಟ್ಟವೇ ಆಯಿತು ! ಶಿವಾನುಭವ ಪಟ್ಟ ಶಾಸ್ತ್ರೀಯವಾಗಿದೆ. ಶಿಖಾಪಟ್ಟ ಅಶಾಸ್ತ್ರೀಯಃವಾಗಿದೆ. ಶಿವಶರಣರ ವಾಙ್ಮಯದಲ್ಲಿ ಶಿಖಾಪಟ್ಟದ ಪ್ರಸ್ತಾಪವಿಲ್ಲ. ಎಡೆಯೂರು ಸಿದ್ಧಲಿಂಗದೇಶಿಕರಿಗೂ ಚಿತ್ರದುರ್ಗದ ಮುರಘಾ ಸಮಯದ ಮಠಕ್ಕೂ ಯಾವ ಸಂಬಂಧವೂ ಇರಲಾರದು !

ಕಲ್ಯಾಣದಲ್ಲಿ ಕ್ರಾಂತಿಯ ಜ್ವಾಲೆ ಆವರಿಸುತ್ತಿದ್ದ ಆ ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ ಶೂನ್ಯ ಸಿಂಹಾಸನ ಪಟ್ಟವನ್ನು ರುದ್ರಮುನಿದೇವರು ವಹಿಸಿಕೊಂಡಿರಬಹುದೆಂದು ರಾಘವಾಂಕ ಕಾವ್ಯದಿಂದ ಊಹಿಸಬಹುದು. ಆದರೆ, ನಿರಂಜನ ವಂಶ ರತ್ನಾಕರದಲ್ಲಿ ಸಿದ್ಧರಾಮದೇವರೇ ಮೂರನೆಯ ಶಿವಾನುಭವ ಪಟ್ಟವನ್ನು ಪಡೆದಂತೆ ಹೇಳಿದೆ. ಆ ಪಟ್ಟಾವಳಿಯಲ್ಲಿ ರುದ್ರಮುನಿದೇವರ ಹೆಸರಿಲ್ಲ. "ರುದ್ರಮುನೀಶ್ವರನಿಗೆ ನಿರಂಜನ ಪಟ್ಟವನ್ನು ಬಿಡಿಸಿ ಕಲ್ಯಾಣದಿಂದ ಶ್ರೀ ರೇಣುಕರು ಕರೆದುಕೊಂಡುಹೋದರೆಂದ 'ನಿರಂಜನವಂಶರತ್ನಾಕರ' ಗ್ರಂಥವು ಹೇಳುವುದನ್ನು ಜ್ಞಾಪಿಸಿಕೊಂಡರೂ, ಬಸವೇಶ್ವರನಿದ್ದಾಗಲೇ ಇದು ನಡೆದಿದೆಯೆಂದು ತಿಳಿಯಲು ಬರುತ್ತದೆ. ಬಸವೇಶ್ವರನು ಕಲ್ಯಾಣವನ್ನು ಬಿಟ್ಟುಹೊರಡುವುದಕ್ಕೆ ಒಂದೆರಡು ವರ್ಷಗಳ ಮುಂಚೆಯೇ ಬಿಜ್ಜಳ ಬಸವೇಶ್ವರರ ವೈಮನಸ್ಸುಂಟಾಗಿ ಆಗಲೇ ರುದ್ರಮುನಿಯನ್ನು ಶೂನ್ಯ ಸಿಂಹಾಸನದ ಅಧಿಕಾರಿಯನ್ನಾಗಿ ಮಾಡಿರ

ಬೇಕು" ಎಂದು ಶ್ರೀ ಚನ್ನಮಲ್ಲಿಕಾರ್ಜುನರು "ಶ್ರೀ ರೇವಣಸಿದ್ಧರು" ಎಂಬ ಅವರ ಗ್ರಂಥದ ೨೭೮ನೆಯ ಪುಟದಲ್ಲಿ ಹೇಳಿದ್ದಾರೆ. ಇದು ಅಸಂಭವ. 'ಸಿದ್ಧ ವಂಶರತ್ನಾಕರ'ದ ಪಟ್ಟಾವಳಿಯಲ್ಲಿ ರುದ್ರಮುನಿದೇವರ ಹೆಸರಿಲ್ಲ. ಪೂಜ್ಯ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳೂ ಅವರ ಭಾಷಣದಲ್ಲಿ ರುದ್ರಮುನಿಯ ಹೆಸರನ್ನು ಹೇಳಿಲ್ಲ. 'ಶ್ರೀ ಜಯದೇವ ಲೀಲೆ'ಯಲ್ಲಿಯೂ ರುದ್ರಮುನಿಯ ಹೆಸರು ಬಂದಿಲ್ಲ. ಸಿದ್ಧರಾಮರ ತರುವಾಯ ಶೂನ್ಯಪೀಠ ಶಿವಗಂಗೆಯ ಸ್ಥಾಪಿತವಾಯಿತು. ಅನಂತರ ಚಾಮರಾಜ ನಗರ ಪ್ರಾಂತದ ವಾಣಿಜ್ಯ ಎಂಬ ಹರದನಹಳ್ಳಿಯಲ್ಲಿ ಈ ಪೀಠ ಪ್ರತಿಷ್ಠಾಪಿತವಾಯಿತು. ಅನಾದಿಗಣ ಹರದನಹಳ್ಳಿಯಲ್ಲಿ ಶೂನ್ಯಪೀಠಾಧಿಕಾರವಾಯಿತು. ಆ ಶೂನ್ಯ ಪಟ್ಟವನ್ನು ವಿರಕ್ತ ಎಲ್ಲಿದ್ದರೆ ಅಲ್ಲಿಯೇ ಶೂನ್ಯಸಿಂಹಾಸನ ಸ್ಥಾಪನೆಯಾಗುತ್ತಿದ್ದಿತೆ ಕಂಡುಬರುತ್ತದೆ. ಹನ್ನೆರಡನೆಯ ಶತಮಾನದಲ್ಲಿಯೇ ಶರಣಸಂಗೋಷ್ಠಿ ಹೋಯಿತು. ಶಿವಾನುಭವ ಮಂಟಪವೂ ಕಣ್ಮರೆಯಾಯಿತು ! ಇನ್ನು ಸಿಂಹಾಸನದ ಮಾತೆಲ್ಲಿ ಬಂತು ! ಅದು ತತ್ತ್ವ ವಿಚಾರಮಥನ ಸಂಗೋಷ್ಠಿ ಅಧ್ಯಕ್ಷಪೀಠವಾಗಿತ್ತೇ ಹೊರತು, ಧಾರ್ಮಿಕ ಪೀಠವಾಗಿರಲಿಲ್ಲ. ಶಿವಾನು ಪಟ್ಟ ಶಿಖಾಪಟ್ಟ ಎಂಬ ಪದಪ್ರಯೋಗಗಳಿಂದ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳೂ ಈ ಅಭಿಪ್ರಾಯವನ್ನು ಸಮರ್ಥಿಸಿರುತ್ತಾರೆ. ಬಸವಣ್ಣನವರ ತರುವಾಯ ಎಷ್ಟೋ ಶತಮಾನಗಳಾದಮೇಲೆ, ಶೂನ್ಯ ಪೀಠವೆಂಬುದು ಒಂದು ಧಾರ್ಮಿಕ ಪೀಠವೆಂದು ಪರಿಗಣಿತವಾದಂತೆ ಕಂಡುಬರುತ್ತದೆ. ಇಷ್ಟಾದರೂ ಶೂನ್ಯ ಪೀಠದ ನೆಲೆ ಯಾವುದೆಂದು ಹೇಳಲು ಸಾಧ್ಯವಿಲ್ಲ. ವೀರಶೈವರಲ್ಲಿ ಆಗಮ ಸಂಪ್ರದಾಯ ಪಂಚ ಆಚಾರ್ಯ ಪೀಠಗಳಿಗೆ ಒಂದೊಂದು ನೆಲೆ ಮಠವಿರುವಂತೆ ಶೂನ್ಯ ಪೀಠದ ನೆಲೆ ಮಠವಿಲ್ಲ. ಚನ್ನಬಸವಣ್ಣನವರ ತರುವಾಯ ಮುರಘಾಸ್ವಾಮಿ ಯವರು ಶಿಖಾಪಟ್ಟ ಶೂನ್ಯ ಪೀಠಾಧಿಕಾರಿಗಳಾದರೆಂದು ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಹೇಳಿರುತ್ತಾರೆ. ಇದರಿಂದ ಅದು ಧಾರ್ಮಿಕ ಮಠವಾದಂತೆ ಅವರ ಅಭಿಪ್ರಾಯವಿರಬಹುದು. ಏಕೆಂದರೆ, ಮುರಘಾಸ್ವಾಮಿಗಳು ದೇಶ ದಯಮಾಡಿಸಿ ಬಾದಷಹರಿಂದ ಶಿಖಾಶೈಲ ಸುವರ್ಣ ಶೂನ್ಯ ಸಿಂಹಾಸನಗಳ ಪಡೆದುಕೊಂಡು ಬಂದು ಚಿತ್ರದುರ್ಗದಲ್ಲಿ ನಿರಾಭಾರಿ ಶೂನ್ಯ ಶಿಖಾಪಟ್ಟ ರಾದರೆಂದು 'ಮಹಾಸ್ವಾಮಿ'ಗಳು ತಮ್ಮ ಅನು-ಗ್ರಹ ಭಾಷಣದ ಮು

ಪಂಡಿತ ಪಾಮರ ಭಕ್ತಕೋಟಿಗೆ 'ಅಮೃತ ಸಂದೇಶ'ವನ್ನು ಕೃಪೆಯಿಟ್ಟು ಅಪ್ಪಣೆ ಕೊಡಿಸಿದ್ದಾರೆ! ಇವರ ಭಾಷಣದಂತೆ, ಮೂಲ ಶೂನ್ಯ ಸಿಂಹಾಸನ ಮತ್ತು ಶ್ರೀಶೈಲ ಈಗಲೂ ಮುರಘಮಠದಲ್ಲಿವೆಯೆಂದು ಹೇಳಿದಂತಾಯಿತು! ಆದರಿಂದ ಇದೇ ಶಿಖಾಪಟ್ಟ ಶೂನ್ಯ ಸಿಂಹಾಸನವೆಂದು ಅವರ ಅಭಿಪ್ರಾಯವಿರಬಹುದು! ಇದು ಸುತರಾಂ ಸರಿಯಲ್ಲ. ಇದು ಅಸಂಬದ್ಧ ಪ್ರಲಾಪವಾದೀತು! ಅಪ್ರಮಾಣದರ್ಶನವೆನಿಸೀತು! ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳ ಮಾತಿನಲ್ಲಿ ವಿವೇಚನೆಯೂ ಕಾಣುವುದಿಲ್ಲ; ವಿವೇಕವೂ ತೋರುವುದಿಲ್ಲ!



## ತರಂಗ ೧೦.

## ಮುರಘಾ ಮಠ; ಪಾಳೆಯಗಾರನ ಆಶ್ರಯ

"ನಾನು ಹಿರಿಯ ತಾನು ಹಿರಿಯರೆಂದವರೆಲ್ಲ ಹಿರಿಯರೇ? ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರದೊಳಗಿಪ್ಪರೆಲ್ಲಾ ಹಿರಿಯರೆ? ಆಟಮಾಟ ಕುಟಿಲ ಕುಹಕ ಪಿಸುಣತನದಲ್ಲಿಪ್ಪವರೆಲ್ಲಾ ಹಿರಿಯರೆ? ಸರ್ಪ ಸಾವಿರಕಾಲ ಇದ್ದರೇನು ವಿಷ ಬಿಡುವದೆ? ಹಾವು ಮೆಕ್ಕೆ ಹಣ್ಣಾದೊಡೇನು ಮಧುರವಪ್ಪುದೆ? ಅರಿಷಡ್ವರ್ಗದುರವಣೆಗೊಳಗಾದಡಾತ ಹಿರಿಯನೆ? ಸಮತೆ ಸಮಾಧಾನ ತುಂಬಿ ತುಳುಕದೆ ಸುಜ್ಞಾನಭರಿತವಾದಡಾತ ಹಿರಿಯನು. ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ ನಿಮ್ಮನರಿಯದ ಬರುಮಾತಿನಲ್ಲಿ ಹಿರಿಯನೆಂದಡೆ ನಾಚಿತ್ತೆನ್ನಮನವು"

—ಸ್ವತಂತ್ರ ಸಿದ್ಧಲಿಂಗೇಶ್ವರ.

ನಿರಂಜನವಂಶರತ್ನಾಕರದಲ್ಲಿ ಶ್ರೀಶೈಲ ಸುವರ್ಣ ಶೂನ್ಯ ಸಿಂಹಾಸನಗಳ ವಿಚಾರ ಉಕ್ತವಾಗಿದೆ. ಮುರಘಾಸಮುಯ ವಿರಕ್ತರೆಲ್ಲ ಈ ಪುಣ್ಯಗ್ರಂಥವನ್ನು ಭಕ್ತಿಯಿಂದ ಗೌರವಿಸುತ್ತಾರೆ. ಆ ವಿಚಾರಗಳನ್ನು ಚಾರಿತ್ರಿಕ ದೃಷ್ಟಿಯಿಂದ ಪರಿಶೀಲಿಸಬೇಕಾದುದು ಈ ವಿಜ್ಞಾನಯುಗದ ಲಕ್ಷಣ. ಪ್ರಾಗೈತಿಹಾಸಿಕ ಕಾಲದಲ್ಲಿ ನಡೆದ ಪೌರಾಣಿಕ ಸಂಗತಿಗಳನ್ನಂತೂ ಚರಿತ್ರೆ ಮುಟ್ಟಲಾರದು.

ಆದರೆ, ಚರಿತ್ರೆಯೇ ಜೀವಂತವಾಗಿರುವ ಕಾಲದಲ್ಲಿ ಅದು ಯಾವ ಸಂಗತಿಯನ್ನೇ ಆಗಲಿ ಪರಿಶೀಲಿಸದೆ ಗ್ರಹಿಸುವಂತಿಲ್ಲ ! ಮುಟ್ಟುವಂತಿಲ್ಲ ! ಸಂಶೋಧನವು ಯಾವಾಗಲೂ ಹಿತಕರ ಅದರಿಂದ ಮೂಢ ನಂಬುಗೆ ದೂರವಾಗುತ್ತದೆ; ಕತ್ತಲು ಹರಿದುಹೋಗುತ್ತದೆ. ಬೆಳಕು ಗೋಚರಿಸುತ್ತದೆ. ಸಂಶೋಧಕ ಸದಾ ಸತ್ಯಾನ್ವೇಷಿ. ಅವನು ಯಾವ ಪ್ರಭಾವಕ್ಕೂ ಮಣಿಯುವುದಿಲ್ಲ.

ಕಲ್ಯಾಣದಲ್ಲಿ ಕ್ರಿ. ಶ. ೧೧೬೭ ರಲ್ಲಿ ಕ್ರಾಂತಿ ನಡೆಯಿತು. ಅದು ಹನ್ನೆರಡನೆಯ ಶತಮಾನದ ಮೂರನೆಯ ಪಾದ. ಆಗಿನ ಉತ್ತರ ಭಾರತದ ಚರಿತ್ರೆಯನ್ನು ಅವಲೋಕಿಸಿದರೆ, ಕ್ರಿ. ಶ. ೭೧೨ ರಲ್ಲಿ ಮುಸಲ್ಮಾನರು ಭರತಖಂಡವನ್ನು ಮೊಟ್ಟಮೊದಲು ಪ್ರವೇಶಿಸಿದರೆಂದು ಗೊತ್ತಾಗುತ್ತದೆ. ಆ ಬಳಿಕ ಮೂರುನೂರುವರ್ಷಕಾಲ ಮುಸಲ್ಮಾನರು ಇಂಡಿಯಾ ದೇಶವನ್ನು ಜಯಿಸಲು ಪ್ರಯತ್ನ ಮಾಡಲಿಲ್ಲ. ಕ್ರಿ. ಶ. ಹತ್ತನೆಯ ಶತಮಾನದಲ್ಲಿ ಘಜನಿ ಮಹಮ್ಮದನ ದಂಡಯಾತ್ರೆಗಳಿಂದ ಉತ್ತರ ಭಾರತವೇ ತತ್ತರಿಸಿಹೋಯಿತು. ಆತನ ಹಾವಳಿಯಿಂದ ಸೋಮನಾಥಲಿಂಗ ನುಚ್ಚು ನೂರಾಯಿತು ! ಹಿಂದೂ ದೇವಾಲಯಗಳು ನೆಲಸಮವಾದುವು. ಮುಸಲ್ಮಾನರು ಅಪಾರ ಐಶ್ವರ್ಯವನ್ನು ಕೊಳ್ಳೆ ಹೊಡೆದುಕೊಂಡು ಹೋದರು ! ಅವನ ತರುವಾಯ, ಮಹಮ್ಮದ್ ಘೋರಿ ಕ್ರಿ. ಶ. ೧೧೯೦ ರಲ್ಲಿ ಇಂಡಿಯಾ ದೇಶವನ್ನು ಮುತ್ತಿದನು. ಆಗ ದೆಹಲಿಯಲ್ಲಿ ಪೃಥ್ವೀ ರಾಜನು ಆಳುತ್ತಿದ್ದನು. ಕ್ರಿ. ಶ. ೧೧೬೭ ರ ಸುಮಾರಿನಲ್ಲಿ ಮುಸಲ್ಮಾನರು ದೆಹಲಿಯಲ್ಲಿ ರಾಜ್ಯವಾಳುತ್ತಿರಲಿಲ್ಲ. ಮುಸಲ್ಮಾನರು ಹಿಂದೂ ರಾಜರನ್ನು ಸೋಲಿಸಿ, ದೆಹಲಿಯಲ್ಲಿ ನೆಲಸಿದರು. ಗುಲಾಮಿ ಸಂತತಿಯವರು ಕ್ರಿ. ಶ. ೧೨೦೬ ರಲ್ಲಿ ಮೊಟ್ಟಮೊದಲನೆಯ ಸುಲ್ತಾನರಾಗಿ ರಾಜ್ಯವಾಳಿದರು. ಅವರ ತರುವಾಯ, ಖಿಲ್ಜಿ ಸಂತತಿಯವರೂ, ತೊಗಲಕ್ ಸುಲ್ತಾನಗಳೂ, ಸೈಯದ್ ವಂಶದವರೂ, ಲೂದಿ ಮನೆತನದವರೂ, ಮೊಗಲರೂ ಕ್ರಮವಾಗಿ ದೆಹಲಿಯಲ್ಲಿ ದೌಲತ್ ಮಾಡಿದರು. ಮುಸಲ್ಮಾನರು ವಿಂಧ್ಯಾದ್ರಿಯನ್ನು ದಾಟಿ ಕ್ರಿ. ಶ. ೧೨೯೬ ರಲ್ಲಿ ದಕ್ಷಿಣಾಪಥಕ್ಕೆ ಕಾಲಿಟ್ಟರು. ಮಲ್ಲಿಕಾಫರನು ಕರ್ಣಾಟಕದಲ್ಲಿ ನುಗ್ಗಿ ಹಾವಳಿ ಮಾಡಿದನು. ಆದ್ದರಿಂದ ಬಿಜ್ಜಳನ ಸೈನ್ಯದಲ್ಲಿ ಕ್ರಿ.ಶ. ೧೧೬೭ ರ ಸುಮಾರಿನಲ್ಲಿ ಮುಸಲ್ಮಾನರು ಇರಲು ಸಾಧ್ಯವಿಲ್ಲ. ದೆಹಲಿ ಬಾದಷಹನ ರಾಯಭಾರಿಯೇನಾದರೂ, ಆಗ ಕಲ್ಯಾಣದಲ್ಲಿದ್ದನೆ

ಎಂದರೆ, ಆಗ ಸುವ್ಯವಸ್ಥಿತವಾದ ಮುಸಲ್ಮಾನರ ಆಳಿಕೆಯೇ ದೆಹಲಿಯಲ್ಲಿರಲಿಲ್ಲ! ಎಂದಮೇಲೆ, ಆಗ ವಜೀರ್ ಮಲ್ಲೂಖಾನ್ ಎಂಬುವನು ಕಲ್ಯಾಣದಲ್ಲಿದ್ದನೆಂಬುದು ಅಸಂಭವ! ಐತಿಹಾಸಿಕ ದೃಷ್ಟಿಯಿಂದ, ಚನ್ನಬಸವಣ್ಣನವರು ವಿರಕ್ತಪೀಠದ ಪವಿತ್ರ ಶಿಖಾಶೈಲ ಸುವರ್ಣ ಸಿಂಹಾಸನಗಳನ್ನು ಮುಸಲ್ಮಾನರ ವಶದಲ್ಲಿಟ್ಟರೆಂಬುದನ್ನು ನಂಬಲು ಸಾಧ್ಯವೇ ಇಲ್ಲ. ಆ ಶಿಖಾಶೈಲ ಸುವರ್ಣ ಸಿಂಹಾಸನಗಳಿದ್ದುದೇ ನಿಜವಾಗಿದ್ದರೆ, ಅವುಗಳನ್ನು ಜೋಪಾನವಾಗಿ ರಕ್ಷಿಸಲು ಒಂದು ಲಕ್ಷದ ತೊಂಬತ್ತಾರುಸಾವಿರ ಜಂಗಮರಿಂದ ಸಾಧ್ಯವಿರಲಿಲ್ಲವೆ? ಆ ಮುಸಲ್ಮಾನ್ ಸರದಾರನು ಆ ಪವಿತ್ರ ವಸ್ತುಗಳನ್ನು ರಕ್ಷಿಸುತ್ತಾನೆಂಬ ಭರವಸೆಯಾದರೂ ಏನಿತ್ತು? ಅದೂ, ಒಂದೆರಡುವರ್ಷ ಕಾಲವಲ್ಲ! ಆರುನೂರು ವರ್ಷಗಳ ಕಾಲ ದೆಹಲಿಯ ಮುಸಲ್ಮಾನರ ಆಡಳಿತದಲ್ಲಿ ಅವು ನಿರಾತಂಕವಾಗಿರಲು ಸಾಧ್ಯವೆ? ಅಲ್ಲದೆ, ಎಷ್ಟೋ ರಾಜಮನೆತನಗಳು ಆ ಅವಧಿಯಲ್ಲಿ ದೆಹಲಿಯಲ್ಲಿ ಆಳಿದುವು. ಒಂದು ರಾಜವಂಶ ಇನ್ನೊಂದು ರಾಜಮನೆತನದಿಂದ ದೆಹಲಿ ಸಿಂಹಾಸನವನ್ನು ಬಳುವಳಿಯಾಗಿ ಪಡೆಯುತ್ತಿರಲಿಲ್ಲ! ಯುದ್ಧಮುಖದಿಂದ ರಾಜಸಿಂಹಾಸನವನ್ನು ಆಕ್ರಮಿಸಿಕೊಳ್ಳುತ್ತಿತ್ತು. ಅಂಥದರಲ್ಲಿ ಈ ಕಲ್ಯಾಣದ ಶೂನ್ಯ ಸುವರ್ಣ ಸಿಂಹಾಸನ, ಶಿಖಾಶೈಲಗಳನ್ನು ಮುಸಲ್ಮಾನರು ಉಳಿಸಿಕೊಂಡುಬರುವ ಅಗತ್ಯವಾದರೂ ಏನಿತ್ತು? ಇದೇ ವಿಚಾರವನ್ನು ತಾರೀಖು ೫-೨-೧೯೬೬ ರಂದು ಶ್ರೀ ತರಳಬಾಳು ಸಿರಿಗೆರೆ ಸದ್ಧರ್ಮ ಸಿಂಹಾಸನಾಧೀಶ್ವರ ಶ್ರೀ ಶ್ರೀ ಶಿವಕುಮಾರ ಶಿವಾಚಾರ್ಯರು ಧಾರವಾಡ ಜಿಲ್ಲಾ ಗುಡಿಗೇರಿಯಲ್ಲಿ ನಡೆದ ತರಳಬಾಳು ಹುಣ್ಣಿಮೆಯ ಮಹೋತ್ಸವ ಸಂದರ್ಭದಲ್ಲಿ ಮಾಡಿದ ಭಾಷಣದಲ್ಲಿ—"ಕಲ್ಯಾಣದ ಅನುಭವ ಮಂಟಪ-ಇದರ ಹೊಣೆ ಹೊತ್ತವನು ಪ್ರಭು ಅಲ್ಲಮನು. ಈತನಾದರೂ, ತಾನು ಅನುಭವಿಸಿದ ಶೂನ್ಯ ತತ್ತ್ವವನ್ನೂ ತಾನು ಕಂಡ ನಿರ್ವಲಯ ಸ್ಥಾನವನ್ನೂ ಮಾನವಕೋಟಿಗೆಲ್ಲಾ ಒದಗಿಸಬೇಕೆಂಬ ಸಂಕಲ್ಪವುಳ್ಳವನಾಗಿ ಶ್ರಮಿಸಿದನಷ್ಟೆ! ಈಗ ಇದು ಯಾವುದಾದರೊಂದು ಮತಕ್ಕಾಗಲಿ, ವಂಶಕ್ಕಾಗಲಿ ಬರುವುದೆಂದರೆ ಅರ್ಥವುಂಟೆ? ಇದೇ ಹೊಣೆಯನ್ನು ನಿರ್ವಹಿಸಿದ ಚನ್ನಬಸವಣ್ಣನಾಗಲಿ, ಸಿದ್ಧರಾಮನಾಗಲಿ ವಂಶ ಜಾತಿಗಳ ಬಳಿಹಿಡಿದು ಬಂದವರಲ್ಲ; ತತ್ತ್ವದ ಬಳಿವಿಡಿದು ಬಂದವರು. ಕ್ರಾಂತಿಯನಂತರ ಇವರು ತಮ್ಮದೆಲ್ಲವನ್ನೂ ಬಚ್ಚಿಟ್ಟು ಎಷ್ಟೋ ದಿನಗಳನಂತರ, ಯಾರೋ ಒಬ

ರಿಗೆ ಕೊಟ್ಟರೆಂದರೆ ಅಳಬೇಕೆ ? ನಗಬೇಕೆ ? ಇಲ್ಲಿ ಒಂದು ಕಥೆಯಿದೆ:- ಜ
ಬಸವಣ್ಣನವರು ತಾವು ಕಲ್ಯಾಣವನ್ನು ಬಿಡುವಾಗ ತಮ್ಮ ಅಧಿಕಾರ ಪ
(ಶಿಖಾಪಟ್ಟ) ಯನ್ನು ಡೆಲ್ಲಿಯ ಉಲ್ಲೂಖಾನನಿಗೆ ಕೊಟ್ಟು ಮುಂದೆ ತಮ್ಮ
ಬರುವವರೆಗೆ ಅದನ್ನು ಜೋಪಾನವಾಗಿಟ್ಟಿರಲು ಹೇಳಿದರೆಂತಲೂ, ನೂರು
ವರ್ಷ ಕಳೆದಮೇಲೆ, ತಮ್ಮವರು ಹೋಗಿ ಅದನ್ನು ತಂದರೆಂತಲೂ ಇದು ಕಾ
ಪ್ರಭುವಿನ ಪಟ್ಟ ತಮ್ಮದೆಂತಲೂ ಹೇಳಿಕೊಳ್ಳುತ್ತಿದ್ದಾರೆ. ಇದು ಇತಿಹಾಸ
ತತ್ತ್ವಕ್ಕೆ ಎಷ್ಟು ವಿರೋಧ ಮತ್ತು ಅಸಂಬದ್ಧವಾದುದೆಂಬುದನ್ನು ಹೇ
ಬೇಕಾಗಿಲ್ಲ. ಅನೇಕ ಜಿಜ್ಞಾಸುಗಳೂ ಈ ಬಗ್ಗೆ ನೀವೇನು ಹೇಳುತ್ತೀರಿ? ಎ
ಪತ್ರ ಮುಖೇನ ಹಾಗೂ ಪ್ರತ್ಯಕ್ಷವಾಗಿ ನಮ್ಮನ್ನು ಕೇಳುತ್ತಲೇ ಇದ್ದಾರೆ.
ಹೇಳಿಕೊಳ್ಳುವವರನ್ನೇ ಕೇಳಿರಿ’ ಎಂದು ನಾವು ಉತ್ತರಿಸಿರುವೆವಾದು
ನಮಗೂ ಈ ಬಗ್ಗೆ ಒಂದು ವಿಧವಾದ ಕುತೂಹಲವಿರುವ ಕಾರಣ, ನಮ್ಮ
ಪ್ರಾಯವನ್ನಿಲ್ಲಿ ವ್ಯಕ್ತಪಡಿಸಬೇಕಾಗಿರುವುದು ಅನಿವಾರ್ಯ. ಯಾರಾದು
ಐತಿಹಾಸಿಕ ತಾತ್ತ್ವಿಕ ಆಧಾರಗಳನ್ನು ಕೊಟ್ಟಲ್ಲಿ ನಮ್ಮ ವಾದವೇ ಸಿದ್ಧಾಂತವ
ಸಾಧಿಸುವ ಹುಚ್ಚು ನಮಗಿಲ್ಲ.”

“ಕಲ್ಯಾಣದ ಕ್ರಾಂತಿ ನಡೆದುದು ಕ್ರಿ. ಶ. ೧೧೬೭ ರಲ್ಲಿ. ಮುಸಲ್ಮಾನ
ನಮ್ಮ ರಾಷ್ಟ್ರದ ಮೇಲೆ ದಾಳಿ ಮಾಡುತ್ತಿದ್ದರೇ ವಿನಾ, ರಾಜ್ಯ ಸ್ಥಾಪನೆ ಮಾಡಿ
ಲಿಲ್ಲ. ಶಾಶ್ವತನಿವಾಸಿಗಳಾಗಿರಲಿಲ್ಲ. ಆಗ ಡೆಲ್ಲಿಯ ಬಾದಷಹನೆಲ್ಲಿಂದ ಬಂದ
ಬಾದಷಹನೇ ಇಲ್ಲದಿರುವಾಗ ಅವನ ಪ್ರತಿನಿಧಿ ಉಲ್ಲೂಖಾನನೆಲ್ಲಿಂದ ಬಂದ
ಗುರುವು ತನ್ನ ಉತ್ತರಾಧಿಕಾರಿಗೆ ಕೊಡುವ ಧಾರ್ಮಿಕ ಮುದ್ರೆಗಳನ್ನು
ವಂತರಾಗಿದ್ದಾಗ್ಯೂ ಇತರರು ನೋಡಲು ಅವಕಾಶವಿಲ್ಲದಿರುವಾಗ ಚನ್ನಬಸವ
ನಿಂದ ಈ ಮುದ್ರೆಗಳು ಉಲ್ಲೂಖಾನನ ಕೈಗೆ ಹೋದವೆಂದರೆ ಅರ್ಥವೇನು
ಉಲ್ಲೂಖಾನನು ಇವರ ವಂಶದವರು ಡೆಲ್ಲಿಗೆ ಹೋಗುವ ಕಾಲದವರೆಗೆ ಎಂ
೧೮ನೆಯ ಶತಮಾನದವರೆಗೂ ಜೋಪಾನವಾಗಿಡಲು ಜೀವಂತನಾಗಿದ್ದನೆಂ
ಅರ್ಥವೇನು ? ಹೀಗೆ ಜೋಪಾನವಾಗಿ ಇಟ್ಟುಕೊಟ್ಟ ಫಲವಾಗಿ ಚನ್ನ
ವಣ್ಣನ ಅನುಗ್ರಹದಂತೆ ಅವನೇ ಡೆಲ್ಲಿಯ ಬಾದಷಹನಾದನೆಂಬುದಕ್ಕೆ
ಹಾಸಿಕ ಆಧಾರಗಳುಂಟೆ? ನಿಜಸ್ಥಿತಿಯನ್ನೇ ಕಂಡುಕೊಳ್ಳುವುದಾದರೆ ಡೆಲ್ಲಿಯ
ಮೊಟ್ಟಮೊದಲು ದೊರೆತನ ಪ್ರಾರಂಭವಾದುದು ಗುಲಾಮಿ ವಂಶದವರಿಂ

ಇದು ೧೩ನೆಯ ಶತಮಾನದ ಆದಿಯಲ್ಲಿ, ಅನಂತರ ಅನೇಕ ವಂಶಗಳ ಬದಲಾವಣೆಗಳಾಗಿವೆ. ಒಂದು ವಂಶದಿಂದ ಮತ್ತೊಂದು ವಂಶಕ್ಕೆ ಬಾದಶಹಿಯು ಹಸ್ತಾಂತರವಾಗಿರುವುದು ಪ್ರಬಲ ಹೋರಾಟದ ಮೂಲಕ. ಇಂತಹ ಸ್ಥಿತಿಯಲ್ಲಿ ಈ ಗುರುಮುದ್ರೆಯು ಎಷ್ಟರಮಟ್ಟಿಗೆ ಸುರಕ್ಷಿತವಾಗಿದ್ದಿತೆಂದು ಹೇಳಬೇಕು ? ಇವೆಲ್ಲವೂ ಅಸಂಗತವೆಂದು ಹೇಳಿದಲ್ಲಿ ಅನೇಕರ ವಿಕೋಪಕ್ಕೆ ಗುರಿಯಾಗಬೇಕಾದೀತು ? ಈ ಒಂದು ಕಾರಣಕ್ಕಾಗಿಯೇ ನಾವು ಬಲ್ಲವರಲ್ಲವೆನಿಸಿಕೊಂಡರೂ ಚಿಂತೆಯಿಲ್ಲ; 'ಇದನ್ನು ಯಾರು ಹೇಳುತ್ತಾರೋ ಅವರನ್ನೇ ಕೇಳಿ' ಎಂದು ತಿಳಿಸಿ ಮೌನವಾಗಿದ್ದೇವೆ." ಎಂದು ಹೇಳಿರುತ್ತಾರೆ.

ಜಗದ್ಗುರು ಶ್ರೀ ಶಿವಕುಮಾರ ಶಿವಾಚಾರ್ಯರ ಮಾತಿನಲ್ಲಿ ಚಾರಿತ್ರಿಕ ದೃಷ್ಟಿಯಿದೆ; ಸತ್ಯನಿರ್ಣಯ ನಿಷ್ಠೆಯಿದೆ. ಇತಿಹಾಸದ ಮೌಲ್ಯವಿಲ್ಲದ ಸಂಗತಿ ನಿರರ್ಥಕ; ವೃಥಾಲಾಪ ! ಸತ್ಯವನ್ನು ವ್ಯಕ್ತಪಡಿಸಿದರೆ ಯಾರ ಕೋಪಕ್ಕೂ ಗುರಿಯಾಗಬೇಕಾಗಿಲ್ಲ. ಸತ್ಯನಿಷ್ಠರಾದ ಜನ ಯಾವಾಗಲೂ ಸತ್ಯವನ್ನು ಅರಸುತ್ತಾರೆ; ಸತ್ಯವನ್ನು ಮೆಚ್ಚುತ್ತಾರೆ. ಅವರು ಸತ್ಯಚ್ಯುತರಾಗುವುದಿಲ್ಲ. ಅಂಥ ಶ್ರದ್ಧೆಯ ಪಾಮರಕೋಟಿ ಮುನಿದೀತೆಂದು ಹೆದರಲೇಕೆ ? ಬೆದರಲೇಕೆ ? ಸತ್ಯವನ್ನು ಮುಚ್ಚಿಟ್ಟು ಎಷ್ಟುದಿನ ಕಣ್ಣುಮುಚ್ಚಾಲೆಯಾಡಲಾದೀತು ! 'ಸತ್ಯಮೇವ ಜಯತೆ' ಎಂಬುದು ನಿಜ. ಸತ್ಯಾನ್ವೇಷಿಗೆ ಯಾರ ದಾಕ್ಷಿಣ್ಯವೂ ಇಲ್ಲ. ಇದೇ ಅರ್ಥವನ್ನು ಮಹಾತ್ಮಾ ಬಸವಣ್ಣನವರು—

೬೦. "ಆರು ಮುನಿದು ನಮ್ಮನೇನುಮಾಡುವರು ? ಊರು ಮುನಿದು ನಮ್ಮನೆಂತುಮಾಡುವರು ? ನಮ್ಮ ಕುನ್ನಿಗೆ ಕೂಸ ಕೊಡಬೇಡ; ನಮ್ಮ ಸೊಣಗಂಗೆ ತಳಿಗೆಯನಿಕ್ಕಬೇಡ ! ಆನೆಯ ಮೇಲೆ ಹೋಹನ ಶ್ವಾನ ಕಚ್ಚಲುಬಲ್ಲುದೆ. ನಮಗೆ ನಮ್ಮ ಕೂಡಲಸಂಗಯ್ಯನುಳ್ಳನ್ನಕ್ಕ"

—ಎಂಬ ವಚನದಲ್ಲಿ ಹೇಳಿದ್ದಾರೆ. ಆ ಬಸವಣ್ಣನವರ ಧೀರವಾಣಿಯೇ ಸತ್ಯಸಂಶೋಧಕನ ಆತ್ಮವಾಣಿಯಾಗಿರಲಿ.

"ಸಂಶೋಧಕನಲ್ಲಿ ಇರಬೇಕಾದ ಎರಡು ಮುಖ್ಯ ಗುಣಗಳೆಂದರೆ ಒಂದು ಐತಿಹಾಸಿಕ ಪ್ರಾಮಾಣಿಕತೆ, ಇನ್ನೊಂದು ಸಮಗ್ರದೃಷ್ಟಿ. ಮರೆತುಬಿಟ್ಟ ಕೊಡೆಯನ್ನು ಹುಡುಕುವುದು ಸಂಶೋಧನೆಯಲ್ಲ; ಕಸದಲ್ಲಿ ಕಳೆದ ಸೂಜಿಯನ್ನು

ಹುಡುಕುವುದು ಸಂಶೋಧನೆಯಲ್ಲ; ನಿಜವಾದ ಸಂಶೋಧಕನಿಗೆ ಹುಡು ಬುದ್ಧಿಯೇ ಇರುವುದಿಲ್ಲ. ಇದ್ದಲ್ಲಿ ಎಲ್ಲವನ್ನೂ ಕಾಣಬೇಕೆನ್ನುವ ಸ್ವೇ ಕುತೂಹಲ ಅವನದು. ಇಲ್ಲದ್ದನ್ನು ಹುಡುಕಿ ಹೊರಗೆಳೆಯಬೇಕೆಂಬ ಕಲ್ಪ ತ್ಮಕ ಹಂಬಲ ಅವನದಲ್ಲ. ಅದಕಾಗಿಯೇ ಅವನಲ್ಲಿ ಸಮಗ್ರ ದೃಷ್ಟಿ ಇ ದೆಂದು ಹೇಳಿದ್ದು. ಅಲ್ಲೊಂದು ಇಲ್ಲೊಂದು ವಸ್ತುವನ್ನು ಕಂಡುಹಿಡಿವ ಮಾತ್ರ ಅವನಿಗೆ ಸಮಾಧಾನವಿಲ್ಲ. ಆ ವಸ್ತುವಿಗೆ ಸಂಬಂಧಿಸಿದ ಇಡಿಯ ವಿಷಯವನ್ನು ತಿಳಿದುಕೊಳ್ಳುವ ಚಪಲ ಅವನಿಗೆ. ಎಲ್ಲಿಯೋ ಒಂದೆರಡು ಮಾತು ಹೊ ಡಿದ್ದರೆ ಅವುಗಳನ್ನು ಅವನು ಕಲ್ಪಿಸುವುದಿಲ್ಲ. ಹೊಂದಿಕೆಯಾದಮೇಲೆ ತನಗೆ ಸರಿಬೀಳದ್ದೆನಿಸಿದರೆ ಅದನ್ನು ಬಚ್ಚಿಡುವುದಿಲ್ಲ. ಇದೇ ಐತಿಹಾ ಪ್ರಾಮಾಣಿಕತೆ; ಈ ಪ್ರಾಮಾಣಿಕತೆಯಿಂದ ಸಿದ್ಧಿಗೊಂಡುದೇ ಸಂಶೋಧ ಎಂಬ ಅಭಿಪ್ರಾಯವನ್ನು ಶ್ರೀ ಬೆಟಗೇರಿ ಕೃಷ್ಣ ಶರ್ಮರು ಬರೆದಿರುವ "ಕರ್ನಾಟಕ ಜನಜೀವನ" ಎಂಬ ಪುಸ್ತಕದಲ್ಲಿ 'ಮೊದಲ ಮಾತು' ಹೇಳಿರುವ ಆರ್. ವಿ. ಜಹಗೀರದಾರರು ಸೂಚಿಸಿರುತ್ತಾರೆ. ಆದ್ದರಿಂದ ಕೆಲವು ಬುದ್ಧಮತಿಗಳು ಭಾವಿಸಿರುವಂತೆ ಸಂಶೋಧನೆಯು ಬುದ್ಧಿಜೀವಿಗಳ ಕುಚೇ ಯಲ್ಲ; ಅದು ನಿರುದ್ಯೋಗಿ ಸುಖಜೀವಿಯ ಕುಚೇಷ್ಟೆಯಾದೀತು ! ಬುದ್ಧಿಜೀ ಸದಾ ಲೋಕೋಪಕಾರ ಸಂಶೋಧನೆಯಲ್ಲಿಯೇ ನಿರತನಾಗುತ್ತಾನೆ. ಆದ ಪರಾನ್ನಜೀವಿ ಯಾವಾಗಲೂ ಲೋಕಕಂಟಕ ಜೀವನದಲ್ಲಿ ಸಂಶೋಧಕನಾ ತ್ತಾನೆ. ಪರಾನ್ನಜೀವಿ ಭೂಮಿಗೆ ಹೊರೆಯಾಗಿರುತ್ತಾನೆ. ಕಾವಿಯನ್ನು ಧ ಸಂನ್ಯಾಸಿಯಾಗಲಿ, ವಿರಕ್ತನಾಗಲಿ ಸತ್ಯಶುದ್ಧ ಕಾಯಕದಿಂದ ದುಡಿಯ ಕೆಂದು ಶರಣಧರ್ಮ ಸಾರುತ್ತಿದೆ. ಇಂಥ ಪರಾನ್ನಜೀವಿ ಸತ್ಯಸಂಶೋ ಯನ್ನು ಸಹಿಸಲಾರ! ಸಹೃದಯ ವಿದ್ವಾಂಸರು ಎಂದೆಂದೂ ಇತಿಹಾಸದ ಸಂಶೋಧನೆಯನ್ನು ಪ್ರಶಂಸಿಸುತ್ತಾರೆ.

ಶೂನ್ಯ ಸಿಂಹಾಸನದ ಪಟ್ಟವಲ್ಲರಿ ಅಮೋಘವಾದುದು. ಆ ವಿ ಪರಂಪರೆಯಲ್ಲಿ ಒಬ್ಬೊಬ್ಬರೂ ಅಪ್ರತಿಮ ಮಹಿಮಾವಂತರು. ಪರಮ ನಿ ನರು. ಈ ಪರಂಪರೆಯ ಸಂಬಂಧವನ್ನು ಕಲ್ಪಿಸಿಕೊಂಡಿರುವ ಮುರುಘಾ ಈಗ ಚಿತ್ರದುರ್ಗದಲ್ಲಿದೆ. ಇದನ್ನು ಮುರುಘಾ ಮಠವೆಂದು ಕರೆಯುತ್ತಾ ಹೊರತು ಅಲ್ಲಮಪ್ರಭು ಮಠವೆಂದು ಕರೆಯುವುದಿಲ್ಲ. ಶ್ರೀ ಜಯದೇವ

ಯಲ್ಲಿ ಈ ಮಠದ ಮೂಲ ಪುರುಷರು ಚನ್ನಬಸವಣ್ಣನವರೆಂದೂ ಅವರ ತರುವಾಯ ಈ ಪೀಠದ ವಿರಕ್ತಮೂರ್ತಿ ತೋಂಟದ ಸಿದ್ಧಲಿಂಗೇಶ್ವರರೆಂದೂ ಹೇಳಿದೆ. ಅನಂತರ ನಿರಕ್ಷರ ಬೋಳಬಸವರು, ಸಿದ್ಧವೀರೇಂದ್ರರು, ಸಿದ್ಧವೀರಣಾರ್ಯರು ಗುರುಸಿದ್ಧ ದೇಶಿಕರು, ಗಗನದಾರ್ಯರು, ಕಟ್ಟಿಗೆಹಳ್ಳಿ ಸಿದ್ಧವೀರರು ಅನಂತರ ಮುರುಘಾಸ್ವಾಮಿಗಳು-ಎಂದು ಹೇಳಿದೆ. ಈ ಮುರುಘಾ ಮಠದ ಪರಂಪರೆ ತೋಂಟದ ಸಿದ್ಧಲಿಂಗದೇಶಿಕರಿಂದ ಪ್ರಾರಂಭವಾಯಿತೆಂದು ಹೇಳಿ, ನಿರಂಜನ ವಂಶರತ್ನಾಕರದ ವಿರಕ್ತ ಪಟ್ಟಾವಳಿಯಲ್ಲಿ ತೋಂಟದ ಸಿದ್ಧಲಿಂಗದೇಶಿಕರಿಂದ ಹಿಡಿದು ಕಟ್ಟಿಗೆಹಳ್ಳಿ ಸಿದ್ಧವೀರಸ್ವಾಮಿಗಳವರೆಗೆ ಆರು ಜನ ವಿರಕ್ತರನ್ನು ಮುರಘಾಮಠದ ವಿರಕ್ತರ ಸಾಲಿನಲ್ಲಿ ತಂದು ಕೂಡಿಸಿರುತ್ತಾರೆ. ಇದು ಸಮಂಜಸವಾಗಿಲ್ಲ. ಈ ಮಠ ಮುರಘಾ ಸಮಯವೇ ಹೊರತು ತೋಂಟದ ಸಿದ್ಧಲಿಂಗ ಸಂಪ್ರದಾಯವಲ್ಲ. ಈಗಲೂ ಈ ಮುರಘಾ ಮಠದ ವಿರಕ್ತರ ಹೃದಯದಲ್ಲಿ ಮುರಘೇಶನೇ ನುಡಿಯುತ್ತಾನೆ ! ಅಲ್ಲಮರು ನುಡಿಯುವುದಿಲ್ಲ ! ಈ ಪೀಠದ ವಿರಕ್ತರು ಎಲ್ಲಿಯಾದರೂ ಉಪದೇಶ ಭಾಷಣ ಮಾಡುವಾಗ "ಮುರುಘೇಶನ ಚಿತ್ತ ! ಮುರುಘೇಶನ ಅಪ್ಪಣೆ" ಎಂದು ಎಲ್ಲವನ್ನೂ, ತಮ್ಮನ್ನೂ ಮುರಘೇಶನಿಗೆ ಅರ್ಪಣೆ ಮಾಡಿಕೊಳ್ಳುತ್ತಾರೆ ! ಈ ವಿರಕ್ತರ ಹೃದಯದಲ್ಲಿ ಅಲ್ಲಮರು ಮೂಡುವುದಿಲ್ಲ; ಅಲ್ಲಮರು ನುಡಿಯುವುದಿಲ್ಲ ! ಆದ್ದರಿಂದ ಮುರಘಾ ಮಠ ಮೂಲ ಶೂನ್ಯ ಪೀಠವಲ್ಲ; ಆ ಪರಂಪರೆಯ ಒಂದು ಮಠ ! ಎಂಬುದನ್ನು ಮುರುಘೇಶನೇ ಒಪ್ಪಿಕೊಳ್ಳುತ್ತಾನೆ ! ಅನಂತಪುರದ ಮುರಘ ಸಮಯದ ಮಠದವರು ತಾವೇ ಮೂಲ ಮತ್ತು ಆರ್ಷೇಯ ಮುರಘಮಠಾಧೀಶ್ವರರೆಂದು ಹೇಳುತ್ತಾರೆ. ಆ ವಿರಕ್ತ ಪರಂಪರೆಯ ಹೃದಯವಾಣಿಯಲ್ಲಿಯೂ ಈ ಮಾತನ್ನು ಮುರಘೇಶನೇ ಆಡುತ್ತಾನೆ. ಅನಂತಪುರ ಮಠ ಮೂಲ ಮುರಘಾಮಠವೆಂದು ಆ ಮಠದವರು ಸಾಕಾದಷ್ಟು ಪ್ರಮಾಣಗಳನ್ನು ತೋರಿಸುತ್ತಾರೆ. ನಮಗೆ ಖಚಿತವಾಗಿ ತಿಳಿದುಬಂದಿರುವಂತೆ ಅನಂತಪುರ ಮುರಘಾಮಠವೇ ಆರ್ಷೇಯ ಪೀಠವೆಂದು ಹೇಳಬಹುದು. ಚಿತ್ರದುರ್ಗದ ಮಠ ಮುರಘಾ ಸಮಯದ ಒಂದು ಶಾಖೆಯಾಯಿತು; ಅಷ್ಟೆ ! ಮುರಘಾಸ್ವಾಮಿಗಳೇ ಈ ಮಠದ ಸಂಸ್ಥಾಪಕರು; ತೋಂಟದ ಸಿದ್ಧಲಿಂಗರಲ್ಲ ! ಅಲ್ಲದೆ, ತೋಂಟದ ಸಿದ್ಧಲಿಂಗರು ಶಿವಾನುಭವ ಪಟ್ಟದವರು; ಮುರುಘರು ಶಿಖಾಪಟ್ಟದವರು ! ಆದ್ದರಿಂದಲೇ ಶ್ರೀ ಮಲ್ಲಿಕಾ

ರ್ಜುನ ಸ್ವಾಮಿಗಳು ಶಿಖಾ ಪಟ್ಟದಲ್ಲಿ ಮುರಘರು ಎರಡನೆಯವರೆಂದು ಕ್ಷೇ
ತೋಂಟದ ಸಿದ್ಧಲಿಂಗರನ್ನು ಈ ಮಠದ ವಿರಕ್ತರ ಪಙ್ತ್ತಿಯಲ್ಲಿ ಕೂಡಿಸಿಲ್ಲ
ಶಿವಾನುಭವಪಟ್ಟದವರಾದರೂ ಕಟ್ಟಿಗೆಹಳ್ಳಿ ಸಿದ್ಧವೀರದೇ ಮುರಘೇಗೆ ಶಿ
ಪಟ್ಟವನ್ನು ಅನುಗ್ರಹಿಸಿದ ಪ್ರಥಮ ಗುರುವೆಂಬುದು ಸಂಶಯಾತೀತವಾಗಿ ಹೇ
ತ್ತಾರೆ. ಆದ್ದರಿಂದ ಈ ನೂತನ ವಿರಕ್ತ ಪಟ್ಟಭದ್ರರು ಶ್ರೀ ಜಯದೇವ
ಯಲ್ಲಿ ಅವರ ಪರಮ ಗುರು ಜಯದೇವರು ಹೇಳಿರುವುದನ್ನು ಸುತರಾಂ
ಮೋದಿಸಿರುವುದಿಲ್ಲ. ಇದು ಗುರುವಿಗೆ ತಿರುಗುಬಾಣದಂತಿದೆ ! ನಿರಂಜನ
ರತ್ನಾಕರದ ಪಟ್ಟಾವಳಿಯನ್ನು ಕತ್ತರಿಸಿ ಮುರಘಾಸನುಯ ವಿರಕ್ತ ಪಟ್ಟಾವ
ಅಂಟಿಸಲು ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಒಪ್ಪುವುದಿಲ್ಲ. ಇದೇ
ಏಕೆಂದರೆ, 'ನಿರಂಜನ ಜಂಗಮವಂಶದರ್ಪಣ'ದಲ್ಲಿ ಎಡೆಯೂರು ಸಿದ್ಧ
ದೇಶಿಕರ ತರುವಾಯ ೧. ಬೋಳ ಬಸವಾರ್ಯರು, ೨. ಗೂಳೂರು ಸಿದ್ಧ
ಸ್ವಾಮಿ, ೩. ಉದ್ದಾನಾರ್ಯ, ೪. ಹರಿಹರಸ್ವಾಮಿ, ೫. ಭಿಕ್ಷದ ಬಸವ
ಸ್ವಾಮಿ, ೬. ಕಟ್ಟಿಗೆಹಳ್ಳಿ ರಾಚೋಟಿಸ್ವಾಮಿ, ೭. ಕೌದಿಹಳ್ಳಿ ಮಹಾಂತಸ್ವಾ
೮. ಅರ್ಧನಾರೀಶ್ವರ ಸ್ವಾಮಿ, ೯. ಈಸೂರು ನಂದೀಶ್ವರ ಸ್ವಾಮಿ, ೧೦. ಉ
ತೋಂಟದಾರ್ಯ, ೧೧. ಸದಾಶಿವದೇಶಿಕ, ೧೨. ಮಹಂತಸ್ವಾಮಿ, ೧
ತೋಂಟದ ಮಹಾಸ್ವಾಮಿ. ೧೪. ಮೃತ್ಯುಂಜಯಸ್ವಾಮಿ, ೧೫. ಸಿದ್ಧೇಶ್ವ
ಸ್ವಾಮಿ-ಎಂಬುದಾಗಿ ಗದಗ ಶ್ರೀ ವಿರಕ್ತ ತೋಂಟದಾರ್ಯ ಮಠದ ಪಟ್ಟಾವ
ಯನ್ನು ನಿರೂಪಿಸಿರುತ್ತದೆ. ಶ್ರೀ ತೋಂಟದ ಸಿದ್ಧಲಿಂಗರು ಗದಗ ಶ್ರೀಮ
ಮೂಲಪುರುಷರೆಂದಾಗುತ್ತದೆ. ಈ ಪಟ್ಟಾವಳಿಯಲ್ಲಿ ಪ್ರತಿಯೊಬ್ಬ ವಿ
ಮೂರ್ತಿಯ ಕಾಲವನ್ನೂ ಸೂಚಿಸಿರುತ್ತದೆ. ಇದು ಇತಿಹಾಸದ ಒರೆಗ
ನಿಲ್ಲುತ್ತದೆ. ಈ ದೃಷ್ಟಿಯಿಂದ ಪರಿಗಣಿಸಿದರೆ, ಎಡೆಯೂರು ಸಿದ್ಧಲಿಂಗ
ಚಿತ್ರದುರ್ಗದ ಮುರುಘಾ ಮಠದ ಮೂಲ ಪುರುಷರೆಂದು ಹೇಳಲು ಸಾಧ್ಯವಿಲ್ಲ
ಮುರಘಾಸ್ವಾಮಿಗಳೇ ಚಿತ್ರದುರ್ಗ ವಿರಕ್ತ ಮಠದ ಸಂಸ್ಥಾಪಕರು ಮತ್ತು
ಪರಂಪರೆಯ ಮೂಲ ಪುರುಷರೆಂಬುದು ಸ್ಪಷ್ಟವಾಗಿದೆ. ಈ ಮುರಘರ ದೀಕ್ಷ
ಗುರು ನೋಡಸಿದ್ಧಲಿಂಗ ಸ್ವಾಮಿಗಳು. ಅವರು ಮೂಲ ಶೂನ್ಯ ಸಿಂಹಾಸ
ವಿರಕ್ತ ಪರಂಪರೆಯಲ್ಲಿ ಇಪ್ಪತ್ತೈದನೆಯವರು. ಶೂನ್ಯ ತತ್ತ್ವಬೋಧಿ ವೃಕ್ಷ
ರೆಂಬೆಯನ್ನು ಮುರಘರು ಚಿತ್ರದುರ್ಗದಲ್ಲಿ ನೆಟ್ಟಂತಾಯಿತು ! ಈ ರೆಂಬೆಯನ್ನು

ನಿಟ್ಟಿದಾದರೂ ಶಾಸ್ತ್ರವತ್ತಾಗಿದೆಯೇ ಎಂಬುದನ್ನೂ ಪರಿಶೀಲಿಸಬಹುದು! ಶ್ರೀ ಜಯದೇವ ಲೀಲೆಯಲ್ಲಿ ಹೇಳಿರುವಂತೆ ತೋಂಟದ ಸಿದ್ಧಲಿಂಗ ಸ್ವಾಮಿಗಳು ಚಿತ್ರದುರ್ಗ ಮಠದ ವಿರಕ್ತ ಪರಂಪರೆಯಲ್ಲಿ ಎರಡನೆಯವರೆಂಬುದು ಸರಿಯಲ್ಲ!

೬. "ಅನಾದಿ ಗಣೇಶ್ವರನ ಶಿಷ್ಯ ಆದಿಗಣೇಶ್ವರ, ಆದಿಗಣೇಶ್ವರನ ಶಿಷ್ಯ ನಿರ್ಮಾಯನೆಂಬ ಗಣೇಶ್ವರ, ನಿರ್ಮಾಯನೆಂಬ ಗಣೇಶ್ವರನ ಶಿಷ್ಯ ನಿರಂಜನನೆಂಬ ಗಣೇಶ್ವರ. ನಿರಂಜನನೆಂಬ ಗಣೇಶ್ವರನ ಶಿಷ್ಯ ಜ್ಞಾನಾನಂದ ಗಣೇಶ್ವರ, ಜ್ಞಾನಾನಂದನೆಂಬ ಗಣೇಶ್ವರನ ಶಿಷ್ಯ ಆತ್ಮಗಣೇಶ್ವರ, ಆತ್ಮ ಗಣೇಶ್ವರನ ಶಿಷ್ಯ ಅಧ್ಯಾತ್ಮ ಗಣೇಶ್ವರ, ಅಧ್ಯಾತ್ಮ ಗಣೇಶ್ವರನ ಶಿಷ್ಯ ರುದ್ರನೆಂಬ ಗಣೇಶ್ವರ, ರುದ್ರನೆಂಬ ಗಣೇಶ್ವರನ ಶಿಷ್ಯ ಬಸವಪ್ರಭುದೇವರು, ಬಸವಪ್ರಭುದೇವರ ಶಿಷ್ಯ ಆದಿಲಿಂಗದೇವರು, ಆದಿಲಿಂಗದೇವರ ಶಿಷ್ಯ ಚನ್ನವೀರೇಶ್ವರದೇವರು, ಚನ್ನವೀರೇಶ್ವರದೇವರ ಶಿಷ್ಯ ಹರದನಹಳ್ಳಿಯ ಗೋಸಲದೇವರು. ಹರದನಹಳ್ಳಿಯ ಗೋಸಲದೇವರ ಶಿಷ್ಯ ಶಂಕರ ದೇವರು, ಶಂಕರದೇವರ ಶಿಷ್ಯ ದಿವ್ಯಲಿಂಗದೇವರು, ದಿವ್ಯಲಿಂಗದೇವರ ಶಿಷ್ಯರು ಚನ್ನಬಸವೇಶ್ವರದೇವರು, ಈ ಚನ್ನಬಸವೇಶ್ವರದೇವರ ಕರ ಕಮಲದಲ್ಲಿ ಉತ್ಪತ್ತಿಯಾದ ಶಿಶು ಸಿದ್ಧಲಿಂಗನಾನೈಯ. ಹೀಂಗೆ ಅನಾದಿ ವಿಡಿದು ಬಂದ ಗುರು, ಅನಾದಿವಿಡಿದುಬಂದ ಲಿಂಗ, ಅನಾದಿವಿಡಿದು ಬಂದ ಜಂಗಮ, ಅನಾದಿವಿಡಿದು ಬಂದ ಗುರುಶಿಷ್ಯ ಸಂಬಂಧ, ಅನಾದಿ ವಿಡಿದು ಬಂದ ಪಾದೋದಕ ಪ್ರಸಾದ, ಅನಾದಿವಿಡಿದು ಬಂದ ಭಕ್ತಿ ಜ್ಞಾನ ವೈರಾಗ್ಯ, ಅನಾದಿವಿಡಿದು ಬಂದ ಪ್ರಸಿದ್ಧವಾದ ವೀರಶೈವಾಚಾರ ಸಂಪತ್ತು. ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ"

—ಎಂದು ಎಡೆಯೂರು ಸಿದ್ಧಲಿಂಗೇಶ್ವರರು ತಮ್ಮ ಒಂದು ವಚನದಲ್ಲಿ ತಮ್ಮ ಗುರುಪರಂಪರೆಯನ್ನು ಹೇಳಿರುತ್ತಾರೆ. ಸಿದ್ಧಲಿಂಗರು ಇದರಲ್ಲಿ ಅಲ್ಲಮರನ್ನೂ ಚನ್ನಬಸವಣ್ಣನವರನ್ನೂ ಸಿದ್ಧರಾಮರನ್ನೂ ಹೇಳಿಲ್ಲ. ಅಲ್ಲಮರಂತೆಯೇ ಸಿದ್ಧ ಲಿಂಗರೂ ಅನಾದಿ ಹಿಡಿದು ಬಂದವರೆಂದು ಇದು ಸೂಚಿಸುತ್ತದೆ. ಅಲ್ಲಮರಿಗೂ ಸಿದ್ಧಲಿಂಗರಿಗೂ ಯಾವ ಸಂಬಂಧವೂ ಇಲ್ಲ. ಇಬ್ಬರೂ ಅನಾದಿ ತತ್ತ್ವದಿಂದ ಉದಯಿಸಿದ ನಿರಂಜನರೂಪರು! ಇಬ್ಬರೂ ಒಂದೇ ಧರ್ಮ ಬಂಧುಗಳು;

ಒಂದೇ ಧರ್ಮದ ವಿರಕ್ತರು ! ಹನ್ನೆರಡನೆಯ ಶತಮಾನದಲ್ಲಿ ಅಲ್ಲಮರು, ಹ-
ನೈದನೆಯ ಶತಮಾನದಲ್ಲಿ ಸಿದ್ಧಲಿಂಗರು ! ಇಬ್ಬರೂ "ಹೀಂಗೆ, ಅನಾದಿವಿಡಿ-
ಬಂದ ಗುರು, ಅನಾದಿವಿಡಿದುಬಂದ ಲಿಂಗ, ಅನಾದಿವಿಡಿದು ಬಂದ ಜಂಗಮ,
ಅನಾದಿವಿಡಿದು ಬಂದ ಗುರುಶಿಷ್ಯ ಸಂಬಂಧ, ಅನಾದಿವಿಡಿದುಬಂದ ಪಾದೋದ-
ಪ್ರಸಾದ, ಅನಾದಿವಿಡಿದುಬಂದ ಭಕ್ತಿಜ್ಞಾನ ವೈರಾಗ್ಯ, ಅನಾದಿವಿಡಿದು ಬ-
ಪ್ರಸಿದ್ಧವಾದ ವೀರಶೈವಾಚಾರ ಸಂಪತ್ತು" ಉಳ್ಳವರಾಗಿದ್ದಾರೆ! ಅಲ್ಲಮ-
ತಮ್ಮ ಪರಂಪರೆಯನ್ನು ಇದೇ ರೀತಿಯಲ್ಲಿ ಹೇಳಿಕೊಂಡಿರುತ್ತಾರೆ (ತರಂಗ-
ವಚನ ೫-ನೋಡಿರಿ) ಸಿದ್ಧಲಿಂಗದೇಶಿಕರು ಹೇಳಿರುವ ತಮ್ಮ ಗುರುಪರಂ-
ಯಲ್ಲಿ ಅನಾದಿ ಗಣೇಶ್ವರನಿಂದ ಪ್ರಾರಂಭಿಸಿ, ರುದ್ರನೆಂಬ ಗಣೇಶ್ವರರವರೆಗೆ ವೀ-
ಶೈವ ಶೂನ್ಯಲಿಂಗ ವಿಕಾಸವನ್ನು ಸೂಚಿಸಿದ್ದಾರೆಂದು ಭಾಸವಾಗುತ್ತದೆ. ಇ-
ರೆಲ್ಲರೂ ಕೈಲಾಸದ ಪ್ರಮಥರು ! ರುದ್ರಸ್ವಾಮಿಗಳು ಮೊದಲುಗೊಂಡು ಸಿ-
ಲಿಂಗರೂ ಸೇರಿದವರೆಲ್ಲ ಇಹಲೋಕದ ಪ್ರಮಥರು ! ಅಲ್ಲಮರ ವಚನದಿಂದ
ಇದೇ ಅರ್ಥ ನಿರ್ಣಯವಾಗುತ್ತದೆ. ತೋಂಟದ ಸಿದ್ಧಲಿಂಗೇಶ್ವರರ ಈ ವ-
ವನ್ನೇ ಮುಖ್ಯ ಆಧಾರವಾಗಿಟ್ಟುಕೊಂಡು 'ನಿರಂಜನ ವಂಶರತ್ನಾಕರ' ಸೃ-
ಯಾಗಿದೆಯೆಂಬುದರಲ್ಲಿ ಅನುಮಾನವಿಲ್ಲ. ತೋಂಟದ ಸಿದ್ಧಲಿಂಗರಾದ-
ಕೇವಲ ಆರು ಮಂದಿ ವಿರಕ್ತರ ತರುವಾಯ ಮುರಘಾ ಸಮಯ ಪ್ರಾರಂಭವಾ-
ತ್ತದೆ. * ಹುಬ್ಬಳ್ಳಿ ಮತ್ತು ಗದಗ ವಿರಕ್ತ ಪೀಠಗಳಿಗಿಂತಲೂ ಪ್ರಾಚೀನ-
ದನ್ನು ಸ್ಥಾಪಿಸಲು ಮುರಘಾ ಮಠ ಸಾಹಸ ಮಾಡಿರುತ್ತದೆ; ಕಲ್ಪನಾ ಲೋ-
ದಲ್ಲಿ ವಿಹರಿಸಿರುತ್ತದೆ ! ಸಿದ್ಧರಾಮದೇವರ ತರುವಾಯ ರುದ್ರಸ್ವಾಮಿಗಳ-
ಶಿವಾನುಭವ ಪ್ರಚಾರವೇ ಕರ್ಣಾಟಕದಲ್ಲಿ ನಡೆಯಲಿಲ್ಲವೆಂದು ಹೇಳಬಹು-
ಇಪ್ಪತ್ತನೆಯ ಶತಮಾನದಲ್ಲಿ ಹುಟ್ಟಿದ 'ನಿರಂಜನವಂಶರತ್ನಾಕರ' ಕಾಲಕ-
ಪ್ರಮುಖ ವ್ಯಕ್ತಿಗಳೆಂಬಂತೆ ಪ್ರಸಿದ್ಧ ನಿರಾಭಾರಿಗಳ ಮೂಲೆಯೊಂದನ್ನು ಪ್ರೋ-
ದಂತೆ ಊಹಿಸಬಹುದು ! ಇದೊಂದು ಇತಿಹಾಸ ಗ್ರಂಥವಲ್ಲ; ಶೂನ್ಯ ಪುರಾಣ
ಆದರೆ, ಇದನ್ನು ರಚಿಸಿದ ಮಹಾನುಭಾವರು ವೀರಶೈವವಾಙ್ಮಯದಲ್ಲಿ ವಿದ್ವಾ-
ರೆಂಬುವುದರಲ್ಲಿ ಅನುಮಾನವಿಲ್ಲ.

* ಮುಂದೆ ಬರಲಿರುವ "ನಿರಂಜನ ಪ್ರಭಾ" ಎಂಬ ನಮ್ಮ ಗ್ರಂಥವನ್ನು ನೋಡಿ

"ನಿರಂಜನವಂಶರತ್ನಾಕರ'ದ ನಿರಾಭಾರಿ ಪರಂಪರೆಯು ಸೂತ್ರವಿಡಿದು ಚಿತ್ರದುರ್ಗ ವಿರಕ್ತ ಮಠ ಸ್ಥಾಪನೆಯಾಯಿತು. ಮುರಘಾಸ್ವಾಮಿಗಳು ಚಿತ್ರದುರ್ಗ ಮಠವನ್ನು ಸ್ಥಾಪಿಸಿದರೆಂದು ಗೊತ್ತಾಗುತ್ತದೆ. ಇವರು ಜೀವಿಸಿದ್ದ ಕಾಲ ಅವರ ಊರು, ತಾಯಿತಂದೆ-ಈ ವಿಚಾರಗಳು ಯಾವುವೂ ನಮಗೆ ಶ್ರೀ ಜಯದೇವ ಲೀಲೆಯಿಂದ ತಿಳಿದುಬರುವುದಿಲ್ಲ. ನಿರಂಜನ ವಂಶರತ್ನಾಕರವೂ ತಿಳಿಸುವುದಿಲ್ಲ. ವಿರಕ್ತರ ಪೂರ್ವಾಶ್ರಮದ ಸಂಗತಿಗಳನ್ನು ಅವರು ಹೇಳಿಕೊಳ್ಳು ವುದಿಲ್ಲ. ಶ್ರೀ ಜಯದೇವ ಲೀಲೆಯಲ್ಲಿ ಮುರಘಾ ಸ್ವಾಮಿಗಳ ವಿಚಾರವನ್ನು ಯಥೋಚಿತವಾಗಿ ಸೂಚಿಸಿರುತ್ತದೆ. "ಇವರ ಕಾಲವು ಈ ಪೀಠದ ಚರಿತ್ರೆಯಲ್ಲಿ ಐತಿಹಾಸಿಕ ಮಹತ್ವವುಳ್ಳದಾಗಿದೆ." "ಒಮ್ಮೆ ಇವರು ಚಿತ್ರಕಲ್‌ದುರ್ಗದ ಬೆಟ್ಟದಡಿಯ ಬಯಲಿನಲ್ಲಿ ಸಂಚರಿಸುತ್ತಿರುವಾಗ ದನ ಕಾಯುವ ಬಾಲಕ ನೊಬ್ಬನು ಗಿಡದಡಿಯಲ್ಲಿ ಮಲಗಿದ್ದುದನ್ನೂ ಸರ್ಪವೊಂದು ಅವನ ಮುಖಕ್ಕೆ ಹಾಯುತ್ತಲಿದ್ದ ರವಿಕಿರಣಗಳನ್ನು ತಡೆದು ನೆಳಲನ್ನು ಕೊಡುತ್ತಿರುವುದನ್ನೂ ಕಂಡರು. ಇವರ ಆ ಸುಳಿವು ಕಂಡೊಡನೆ ಸರ್ಪವು ಹರಿದು ಹುತ್ತವೊಂದನ್ನು ಸೇರಿತು. 'ಜಗದ್ಗುರುಗಳವರು' ಬಾಲಕನಲ್ಲಿ ಕೃಪೆದೋರಿ ಅವನ ತಲೆಗೆ ತಮ್ಮ ಹಸ್ತದಲ್ಲಿನ ಬೆತ್ತವನ್ನು ಮುಟ್ಟಿಸಿದರು. ಕೂಡಲೇ ಆತನೆದ್ದು ಪಾದಕ್ಕೆ ಸಾಷ್ಟಾಂಗವಿಕ್ಕಿದನು. "ಮಗುವೇ, ನೀನು ಅರಸನಾಗಿ ಬಾಳು" ಎಂದು ಆಶೀರ್ವದಿಸಿದೊಡನೆ ಆ ಬಾಲಕನು ಕೈಜೋಡಿಸಿ "ಸ್ವಾಮಿ, ನಾನು ಅರಸನಾದರೆ ಗದ್ದುಗೆ ತಮ್ಮದು. ನಾನು ನಿಮ್ಮ ಸೇವಕನಾಗಿ ನಿಂತು ರಾಜ್ಯಭಾರ ನಡೆಸು ತ್ತೇನೆ" ಎಂದು ಅಭಿವಚನವಿತ್ತನು.

"ನಂತರ ಮುರುಗೇಂದ್ರ ಸ್ವಾಮಿಗಳವರು ಮೈಸೂರಿನ ಮಹಾರಾಜರವ ರಿಂದ ಸೇವೆ ಸನ್ಮಾನಗಳನ್ನು ಹೊಂದಿ ಸಂಚರಿಸುತ್ತ ದಿಲ್ಲಿ ಪಟ್ಟಣಕ್ಕೆ ದಯ ಮಾಡಿಸಿದರು; ಅಲ್ಲಿ ಬಾದಷಹನ ಪಟ್ಟದಾನೆಯು ಮರಣಹೊಂದಿತ್ತು. ಆದಕ್ಕೆ ಜೀವದಾನ ಮಾಡಿ ಬಾದಷಹನಿಗೆ ಸಂತೋಷವನ್ನೂ ಸಕಲ ಜನರಿಗೆ ಆಶ್ಚರ್ಯ ವನ್ನೂ ಉಂಟುಮಾಡಿದರು." ಆಮೇಲೆ ಅವರು "ಬಾದಷಹನಿಂದ ಶಿಖಾಶೈಲ ಗಳನ್ನು ಸ್ವೀಕಾರ ಮಾಡಿಕೊಂಡು ಹೈದರಾಬಾದ್ ಸಂಸ್ಥಾನಕ್ಕೆ ದಯಮಾಡಿಸಿ ದರು." ಅಲ್ಲಿಯೂ ಹೈದರಾಬಾದಿನ ಬಾದಷಹರವರ ಪಟ್ಟದಾನೆಯ ರೋಗವನ್ನು ಕಳೆದು ಅವರಿಂದ ಬಹು ವಿಧವಾದ ಸೇವೆಯನ್ನು ಕೈಕೊಂಡವರಾದರು." ಮುರು

ಗೇಂದ್ರಸ್ವಾಮಿಗಳ ಅನುಗ್ರಹದಿಂದ ಆ ತುರುಗಾಹಿ ಆ ವೇಳೆಗೆ ಚಿತ್ರದುರ್ಗ ಪಾಳೆಯಗಾರನಾಗಿದ್ದನು. ಅವನು ಮುರುಗೇಂದ್ರ ಸ್ವಾಮಿಗಳ ಆಗಮನವನ್ನು ನಿರೀಕ್ಷಿಸುತ್ತಿದ್ದನು. "ಮಹಾಸ್ವಾಮಿಗಳವರು ಕನ್ನಡ ಭೂಮಿಗೆ ಬಂದ ಸುದ್ದಿ ಯನ್ನು ಕೇಳಿ ಚಿತ್ರದುರ್ಗದ ನಾಯಕನು ಅವರ ಸನ್ನಿಧಿಗೆ ಧಾವಿಸಿದನು. ಪಾ ಅವರನ್ನು ಪಾಲಿಕೆಯಲ್ಲಿ ತನ್ನ ರಾಜಧಾನಿಗೆ ಕರೆತಂದನು." ನಾಯಕ ಚಿತ್ರದುರ್ಗದಲ್ಲಿ ಮುರುಗೇಂದ್ರರಿಗೆ ೩೬೦ ಅಂಕಣಗಳ ಭವ್ಯ ಶಿಲಾ ಮಠ ಕಟ್ಟಿಸಿಕೊಟ್ಟನು. "ಈ ಮಹಿಮರ ಪ್ರಭಾವದಿಂದಾಗಿ ದೇಶದಾದ್ಯಂತ ಸ್ಥಾ ವಾಗಿದ್ದ ಮಠಗಳೆಲ್ಲಕ್ಕೂ ಶ್ರೀ ಬೃಹನ್ಮಠವೇ ಮೂಲವೆಂದು ಸಮ್ಮತವಾಯಿತು. "ಮುಂದೆ ಶ್ರೀ ಗುರುಸಿದ್ಧರೆಂಬ ತಮ್ಮ ಶಿಷ್ಯೋತ್ತಮರಿಗೆ ಪೀಠಾಧಿಕಾರವನ್ನಿ ತಾವು ಲಿಂಗದೊಳಗಾದರು." ಇದು ಶ್ರೀ ಜಯದೇವಲೀಲೆಯಲ್ಲಿರುವ ಕ ಸಾರಾಂಶ.

ಶ್ರೀ ಜಯದೇವಲೀಲೆಯ ಮೇರೆಗೆ, ದೆಹಲಿ ಬಾದಷಹನ ಬಳಿಗೆ ಮು ಗೇಂದ್ರರು ಮಾತ್ರ ಹೋಗಿಬಂದರು; ಶಿಖಾಶೈಲಗಳನ್ನು ತಂದರು. 'ಸಿದ್ಧ ವಂಶರತ್ನಾಕರ'ದಂತೆ ಇಬ್ಬರು ವಿರಕ್ತರು ಹೋಗಿಬಂದರು ಮತ್ತು ಶ್ರೀ ಮಲ್ಲಿ ರ್ಜುನಸ್ವಾಮಿಗಳ ಭಾಷಣದಂತೆ ಮುರುಗೇಂದ್ರರಿಗೆ ದೆಹಲಿಯಲ್ಲಿಯೇ ಪಟ್ಟವಾಯಿತು. ಅಲ್ಲಿಗೆ ಇಬ್ಬರು ಸ್ವಾಮಿಗಳೂ ಹೋಗಿಬರುತ್ತಾರೆ; ಆದ್ದ ಶ್ರೀ ಮಲ್ಲಿಕಾರ್ಜುನಸ್ವಾಮಿಗಳು ಧಾರವಾಡ ಮುರುಘಾ ಮಠದ ಸದಾಶ್ರಯ ಶ್ರೀ ಜಯದೇವಸ್ವಾಮಿಗಳ ಸಮ್ಮತಿಯಿಂದ ರಚಿತವಾದ ಶ್ರೀ ಜಯದೇವ ಲೀ ಯನ್ನು ಅಂಗೀಕರಿಸಿಲ್ಲವೆಂಬುದು ಸ್ಪಷ್ಟವಾಗಿದೆ. ಅವರ ಮಠದ ಪಟ್ಟ ಯನ್ನೇ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಅನುಸರಿಸಿರಬಹುದೇನೋ! "ಐ ತ್ರಿಕ ವಿಚಾರಗಳನ್ನು ವಿವರವಾಗಿ ಈ ಮಠದ ಪಟ್ಟವಲ್ಲರಿಯಿಂದ ಎಲ್ಲ ತಿಳಿಯಬಹುದಾಗಿದೆ' ಎಂದು ನೂತನ ನಿರಾಭಾರಿಗಳು ಹೇಳಿರುತ್ತಾರೆ. ನ ಪುನಃಪುನಃ ಅವರ ಮಠದ ಪಟ್ಟವಲ್ಲರಿಯನ್ನು ನೋಡಿದರೆ ಒಳ್ಳೆಯ ನಮಗೆ ತೋಚುತ್ತದೆ ! ಏಕೆಂದರೆ ಶ್ರೀ ಜಯದೇವ ಸ್ವಾಮಿಗಳು ಸಾಮಾ ರಲ್ಲ ! ಪೂರ್ಣ ವಿದ್ವಾಂಸರು; ಬಹು ಸೂಕ್ಷ್ಮ ಮತಿವಂತರು ! ಅವರು ದನ್ನೂ ಅವಸರದಲ್ಲಿ ನಿರ್ಣಯಿಸುತ್ತಿರಲಿಲ್ಲ ! ಪೀಠದ ಗೌರವವನ್ನು ಎಲ್ಲ ಯಿಂದ ರಕ್ಷಿಸಿದರು. ದನ ಕಾಯುತ್ತಿದ್ದ ಬಾಲಕನನ್ನು ಕಂಡು ಶ್ರೀನ

ಸನ ಮೊದಲೇ ಮುರಘರಿಗೆ ವಿರಕ್ತ ಪಟ್ಟವಾಗಿತ್ತೆಂದು ಶ್ರೀ ಜಯದೇವಲೀಲೆ ತಿಳಿಸುತ್ತದೆ. ಯಾವ ಊರಿನಲ್ಲಿ, ಯಾವ ಮಠದಲ್ಲಿ ಅವರಿಗೆ ಚರಪಟ್ಟವಾಗಿತ್ತೆಂಬುದನ್ನು ಆ ಕಾವ್ಯ ತಿಳಿಸುವುದಿಲ್ಲ. "ಇವರ ಕಾಲವು ಈ ಪೀಠದ ಚರಿತ್ರೆಯಲ್ಲಿ ಐತಿಹಾಸಿಕ ಮಹತ್ವವುಳ್ಳದ್ದಾಗಿದೆ" ಎಂದು ಈ ಪುರಾಣ ಗ್ರಂಥದಲ್ಲಿ ಹೇಳಿದೆ, ಇದು ನಿಜ. ಆದರೆ, ಆಗ ಚಿತ್ರದುರ್ಗದ ರಾಜ್ಯದಲ್ಲಿ ಯಾರು ಆಳುತ್ತಿದ್ದರೆಂಬುವನ್ನು ಅದು ತಿಳಿಸುವುದಿಲ್ಲ. "ಚಿತ್ರದುರ್ಗದ ಗಜಕೇಸರಿ" ಎಂಬ ಗ್ರಂಥವೊಂದಿದೆ. ಅದನ್ನು ಚಿತ್ರದುರ್ಗದ ಪಾಳೆಯಗಾರರ ವಂಶಜರೇ ಆಗಿರುವ ಶ್ರೀ ರಾಜಾ ಬಿಚ್ಚುಕತ್ತಿ ಪರಶುರಾಮಪ್ಪನಾಯಕರು ಎಂಬುವರು ಬರೆದಿರುತ್ತಾರೆ. ಅದರಲ್ಲಿ ಮುರಘರ ವಿಚಾರವನ್ನು ಗ್ರಂಥಕರ್ತರು ಯಥೋಚಿತವಾಗಿ ತಿಳಿಸಿರುತ್ತಾರೆ. ಆ ಗ್ರಂಥದಂತೆ ಮುರಘಾಸ್ವಾಮಿಗಳು ಒಬ್ಬರೇ ದೆಹಲಿಗೆ ಹೋಗಿದ್ದರು; ಬಾದಷಹನು ಅವರನ್ನು "ಕಲೇವ್ರರ ಬಾದಷಹ ಅಲ್ಲಾಖುದಾ" ಎಂದರೆ ಶ್ರೀ ಮುರಘರಾಜೇಂದ್ರ ಜಗದ್ಗುರು ಎಂದು ಕೊಂಡಾಡಿದನು-ಎಂದೂ ಹೇಳಿದೆ. ದೆಹಲಿಯಿಂದ ಮುರಘಸ್ವಾಮಿಗಳು ಶಿಖಾ, ಶೈಲ ಮತ್ತು ಸುವರ್ಣ ಸಿಂಹಾಸನ ಈ ಮೂರು ವಸ್ತುಗಳನ್ನೂ ತಂದರೆಂದೂ, ಅವರು ಅಲ್ಲಿ ಮುದಿಮಲ್ಲಪ್ಪನೆಂಬ ಶಿವಭಕ್ತನ ಮನೆಯಲ್ಲಿದ್ದರೆಂದೂ ಗಜಕೇಸರಿ ಪುಸ್ತಕದಲ್ಲಿ ಬರೆದಿರುತ್ತದೆ. ದೆಹಲಿಗೆ ಹೋಗುವುದಕ್ಕಿಂತ ಮುಂಚೆಯೇ ಮುರಘಸ್ವಾಮಿಗಳು ಚಿತ್ರದುರ್ಗದ ಸಮೀಪದ ಕಾಡಿನಲ್ಲಿ ದನ ಕಾಯುತ್ತಿದ್ದ ಭರಮಪ್ಪನಾಯಕನೆಂಬ ಬಾಲಕನನ್ನು ಕಂಡು ಆಶೀರ್ವಾದ ಮಾಡಿದ ಘಟನೆಯೂ ನಡೆದು, ಅವರು ಮೈಸೂರು ರಾಜರ ಆಸ್ಥಾನಕ್ಕೆ ಹೋಗಿದ್ದು, ಅಲ್ಲಿಂದ ದೆಹಲಿಗೆ ಹೋದರು ಎಂದು ಆ ಗ್ರಂಥದಿಂದ ತಿಳಿದುಬರುತ್ತದೆ. ಅವರು ಪಾಳೆಯಗಾರನ ಆಶ್ರಯದಲ್ಲಿ ಕೆಲವು ಕಾಲ ದುರ್ಗದಲ್ಲಿದ್ದರು. ಅನಂತರ ಲಿಂಗೈಕ್ಯರಾದರು. ಮುರಘಸ್ವಾಮಿಗಳಿಗೆ ಆಶ್ರಯದಾತನಾದ ಪಾಳೆಯಗಾರನ ಹೆಸರು ಬಿಚ್ಚುಕತ್ತಿ ಭರಮಪ್ಪನಾಯಕನೆಂದು ಗೊತ್ತಾಗುತ್ತದೆ. ಚಿತ್ರದುರ್ಗದ ಪಾಳೆಯಗಾರರು ಎಂಬ ಐತಿಹಾಸಿಕ ಗ್ರಂಥವನ್ನು ದಿವಂಗತ ಶ್ರೀ ಎಂ. ಎಸ್. ಪುಟ್ಟಣ್ಣ, ಬಿ.ಎ., ಅವರು ಬರೆದಿರುತ್ತಾರೆ. ಅದು ೧೯೨೪ ರಲ್ಲಿ ಅಚ್ಚಾಗಿದೆ.

ಆ ಪುಸ್ತಕದಲ್ಲಿ "ಭರಮಪ್ಪನಾಯಕನು ದುರ್ಗದ ಪಾಳೆಯಗಾರತನಕ್ಕೆ ಹಕ್ಕುದಾರನಾಗಿದ್ದನು. ಇವನ ತಂದೆ ಕಸ್ತೂರಿ ರಂಗಪ್ಪನು ಕೇವಲ ಬಡವನಾಗಿ

ಬಿಳಿಚೋಡಲ್ಲಿ ಜೀವನ ಮಾಡಿಕೊಂಡಿದ್ದನು. ಇವನ ಮಗ ಭರಮನು ಪ...
ಕಾಯುವುದಕ್ಕೆ ಅಡವಿಗೆ ಹೋಗಿ ಒಂದು ದಿನ ಆಯಾಸದಿಂದ ಒಂದು ಮ...
ಕೆಳಗೆ ಮಲಗಿಕೊಂಡು ನಿದ್ರೆ ಮಾಡುತ್ತಿರುವಾಗ ಇವನ ತಲೆಯ...
ಒಂದು ನಾಗರ ಹಾವು ಬಂದು ಹೆಡೆ ಎತ್ತಿ ಆಡುತ್ತಿತ್ತಂತೆ. ಉತ್ತರ ದೇ...
ಮುರಗೇಂದ್ರಯ್ಯನವರು ಪರದೇಶಿಗಳಾಗಿ ದಕ್ಷಿಣ ದೇಶಕ್ಕೆ ಸಂಚಾರ ...
ಬರುತ್ತಾ ಮಾರ್ಗದಲ್ಲಿ ಈ ಭರಮನ ತಲೆಯ ಬಳಿಯಲ್ಲಿ ನಾಗಸರ್ಪ ...
ಯಾಡುವುದನ್ನು ಕಂಡು ಇವನ ಬಳಿಗೆ ಬಂದರು. ಸರ್ಪವು ಮರದ ...
ಹತ್ತಿಹೋಯಿತು. ಆಗ ಅಯ್ಯನವರು ಈ ಹುಡುಗನನ್ನು ಎಬ್ಬಿಸಿ-ನೀ...
ಯಾರು? ನಿನ್ನ ಹೆಸರೇನು? ನಿನ್ನ ಜಾತಿ ಯಾವುದು ಎಂದು ಕೇಳಿ...
ಭರಮನು ಅಯ್ಯನವರನ್ನು ನೋಡಿ ಭಯಪಟ್ಟು ಎದ್ದು ಅವರಿಗೆ ನಮ...
ನನ್ನು ಮಾಡಿ ನಾನು ವಾಲ್ಮೀಕಿ ಕುಲದವ, ನನ್ನ ಹೆಸರು ಭರಮ, ಎಂ...
ಆಗ ಆ ವಿರಕ್ತರು, ಈ ದೇಶದ ದೊರೆತನವು ಮೂರು ತಿಂಗಳಲ್ಲಿ ...
ಆಗುವುದು, ಎಂದು ಹೇಳಿ ಹೊರಟುಹೋದರು. ಈ ಭರಮನು ...
ಯಲ್ಲಿ ಕೇವಲ ಬಡತನದಿಂದ ಕಾಲ ಕಳೆಯುತ್ತಾ ಇದ್ದನು" ಎಂದು ...
ಪುಟ್ಟಣ್ಣನವರು ಬರೆದಿರುತ್ತಾರೆ. ಭರಮಪ್ಪನಾಯಕನಿಗೆ ಶಕ ೧೬೧೧ ...
ಶುಕ್ಲ ಸಂವತ್ಸರ ಅಶ್ವೀಜ ಶುದ್ಧ ೧೦ ರಲ್ಲಿ ಸಂಪಿಗೆ ಸಿದ್ದೇಶ್ವರನ ಗುಡಿಯ...
ಪಟ್ಟಾಭಿಷೇಕವಾಯಿತೆಂದು 'ಪಾಳೆಯಗಾರರ ಚರಿತ್ರೆ'ಯಿಂದ ಗೊತ್ತಾಗುತ್ತ...
ಅದು ಸುಮಾರು ಕ್ರಿ.ಶ. ೧೬೮೯ ಎಂದು ಹೇಳಿದಂತಾಯಿತು. ಶಕ ೧೬೪...
ಪ್ಲವ ಸಂವತ್ಸರ ಜ್ಯೇಷ್ಠ ಶುದ್ಧ ೫ ಸ್ಥಿರವಾರ ಕ್ರಿ. ಶ. ೧೭೨೧ ರಲ್ಲಿ ...
ಭರಮಪ್ಪನಾಯಕನು ಸ್ವರ್ಗಸ್ಥನಾದನು ಎಂದೂ ಶ್ರೀ ಪುಟ್ಟಣ್ಣನವರು ತಿಳಿ...
ತ್ತಾರೆ. ಮೇಲುದುರ್ಗದ ಮುರಗಿ ಮಠವನ್ನು ಶಕ ೧೬೪೦ ನೆಯ ಹೇವಿ...
ಸಂವತ್ಸರದಲ್ಲಿ ಎಂದರೆ, ಕ್ರಿ. ಶ. ೧೭೧೮ ನೆಯ ಇಸವಿಯಲ್ಲಿ ಕಟ್ಟಿ ಮುಗಿಸಿ...
ಭರಮಪ್ಪನಾಯಕನು ಕಾಲವಾಗುವುದಕ್ಕೆ ಮುಂಚಿತವಾಗಿಯೇ ಮುರಿಗಿಸ್ವಾ...
ಗಳು ಮೇಲುದುರ್ಗದ ಮಠವನ್ನು ಬಿಟ್ಟು ಈಗಿರುವ ಬೃಹನ್ಮಠಕ್ಕೆ ಬ...
ರೆಂದು 'ಗಜಕೇಸರಿ' ಗ್ರಂಥದಿಂದ ತಿಳಿದುಬರುತ್ತದೆ. ಕೆಳಗಡೆ ಇರುವ ಮ...
ಬಂದಮೇಲೆ ಕೆಲವು ಕಾಲದಲ್ಲಿಯೇ ಅವರು ಲಿಂಗೈಕ್ಯರಾಗಿರಬೇಕು. ...
ಸ್ವಾಮಿಗಳವರು, ಯೋಗಸಮಾಧಿಯಾಗಲು ಪ್ರಯತ್ನಪಟ್ಟದ್ದರಿಂದ ...

ಭರಮಪ್ಪನಾಯಕರು ನನಗೂ ನನ್ನ ವಂಶೀಕರಿಗೂ ಗುರುಗಳನ್ನು ನೇಮಕ ಮಾಡಬೇಕೆಂದು ಬೇಡಿಕೊಂಡರು. ಆಗ ಮಹಾಸ್ವಾಮಿಗಳು, ತಮ್ಮ ಸೇವೆಯಲ್ಲಿರುವ ಶ್ರೀ ಗುರುಸಿದ್ಧಸ್ವಾಮಿಗಳಿಗೆ ಇಮ್ಮಡಿ ಮುರುಘರಾಜೇಂದ್ರಸ್ವಾಮಿಗಳೆಂದು ನಾಮಕರಣ ಮಾಡಿ, ಆ ಕ್ಷಣವೇ ತಮ್ಮಲ್ಲಿದ್ದ ಸಿಂಹಾಸನದ ಮೇಲೆ ಅವರನ್ನು ಕೂಡಿಸಿ, ಶಿಖಾಶೈಲ ಇವುಗಳನ್ನು ಅವರಿಗೆ ಒಪ್ಪಿಸಿ ಇವರೇ ಜಗದ್ಗುರುಗಳೆಂದು ಅಪ್ಪಣೆ ಮಾಡಿ ಭರಮಪ್ಪನಾಯಕರು ಮತ್ತು ಸಕಲರೂ ನೋಡುವಂತೆ ಚಿನ್ಮೂಲಾದ್ರಿಯ ಬೃಹನ್ಮಠದಲ್ಲಿ ತಯಾರಾಗಿದ್ದ ಯೋಗಸಮಾಧಿಯೊಳಕ್ಕೆ ಸಕಾಯ ಹೊಕ್ಕು ಶಿವಯೋಗಾನಂದಯುತರಾಗಿ ಮಂಡಿಸಿದರು" ಎಂದು ಅದೇ ಗ್ರಂಥದಲ್ಲಿ ಹೇಳಿದೆ. ಮೇಲುದುರ್ಗದ ಮಠ ಕ್ರಿ. ಶ. ೧೭೧೮ ರಲ್ಲಿ ಕಟ್ಟಿ ಮುಗಿಸಿದ್ದರಿಂದ ಮುರಘಾಸ್ವಾಮಿಗಳು ದೆಹಲಿಯಿಂದ ಒಂದೆರಡು ವರ್ಷ ಮುಂಚಿತವಾಗಿಯೇ ಬಂದಿದ್ದರೆಂದು ತರ್ಕಿಸಿದರೆ, ಅವರು ಕ್ರಿ. ಶ. ೧೭೧೫ ರಲ್ಲಿ ಚಿತ್ರದುರ್ಗಕ್ಕೆ ಬಂದಿರಬಹುದು. ಆದ್ದರಿಂದ ಕ್ರಿ. ಶ. ೧೭೧೫ರ ಸುಮಾರಿನಲ್ಲಿ ದೆಹಲಿಯ ಬಾದಷಹರಾಗಿದ್ದವರು ಯಾರು ? ಹೈದರಾಬಾದ್‌ನಲ್ಲಿ ಯಾರು ಆಳುತ್ತಿದ್ದರು? ಮತ್ತು ಅದೇ ಕಾಲದಲ್ಲಿ ಮೈಸೂರು ದೇಶದ ಅರಸರು ಯಾರಾಗಿದ್ದರು ?–ಎಂಬ ಅಂಶಗಳನ್ನು ಚರಿತ್ರೆ ನಮಗೆ ತಿಳಿಸುತ್ತದೆ. ಆ ವಿಚಾರಗಳನ್ನು ತಿಳಿಯುವ ಮೊದಲು ಮುರಘಸ್ವಾಮಿಗಳನ್ನು ವೀರಶೈವರು ಧಾರ್ಮಿಕ ವಿರಕ್ತರೆಂದು ಗೌರವಿಸುತ್ತಿದ್ದರೇ ಎಂಬುದನ್ನು ವಿಚಾರ ಮಾಡಿದರೆ ಅನುಕೂಲ ! ಕ್ರಿ. ಶ. ೧೬೭೭ ರಲ್ಲಿ ಚಿತ್ರದುರ್ಗದ ಪಾಳೆಯಗಾರರ ಅರಮನೆಯವರೆಲ್ಲಾ ಜಂಗಮರಿಂದ ಶಿವದೀಕ್ಷೆಯನ್ನು ತೆಗೆದುಕೊಂಡರು. ಪಾಳೆಯಗಾರ ಚಿಕ್ಕಣ್ಣನಾಯಕನೂ ಅವನ ನಾಗತಿಯರೂ ಲಿಂಗಧಾರಿಗಳಾದರು. ಅರಮನೆಗೆ ಪಾದಾ ಪಾಲಿಸುವುದಕ್ಕೆ ಉಗ್ರ ಚನ್ನವೀರದೇವರೆಂಬ ವಿರಕ್ತ ಜಂಗಮರನ್ನು ನೇಮಕ ಮಾಡಿಕೊಂಡರು. ಅವರಿಗೆ ಲಾಳಕೋಟೆ ಬಾಗಿಲಲ್ಲಿ ಒಂದು ಕಲ್ಲುಮಠ ಕಟ್ಟಿಸಿಕೊಟ್ಟರು. ಆದರೆ, ಕೆಲವು ಕಾಲದಲ್ಲಿಯೇ ಅರಮನೆಯವರೆಲ್ಲರೂ ಲಿಂಗವಂತ ಮತವನ್ನು ತ್ಯಜಿಸಿದರು. ನಾಯಕನಹಟ್ಟಿ ಮಲ್ಲಪ್ಪನಾಗತಿ ಮಾತ್ರ ಲಿಂಗಧಾರಿಣಿಯಾಗಿಯೇ ಉಳಿದುಕೊಂಡು, ಪ್ರತ್ಯೇಕವಾಗಿ ವಾಸ ಮಾಡುತ್ತಿದ್ದಳು. ಇದನ್ನು ನೋಡಿದರೆ ಮುರಘಸ್ವಾಮಿಗಳು ಚಿತ್ರದುರ್ಗದಲ್ಲಿ ನೆಲಸುವುದಕ್ಕಿಂತ ೪೦ ವರ್ಷ ಮುಂಚೆಯೇ ಪಾಳೆಯಗಾರರು ಲಿಂಗವಂತರಾಗಿದ್ದರು. ಅವರಿಗೆ ಜಂಗಮ

ಒಬ್ಬರು ಅರಮನೆಯ 'ಅಯ್ಯ'ನವರಾಗಿದ್ದರು. ಈ 'ಅಯ್ಯ'ನವರ ವಂಶದವರು ಈಗಲೂ ಚಿತ್ರದುರ್ಗದಲ್ಲಿದ್ದಾರೆ. ನಿವೃತ್ತ ಉಪಾಧ್ಯಾಯರಾದ ಕಳ್ಳಹಳ್ಳಿ (ಈಗ ಲಕ್ಷ್ಮೀಸಾಗರ) ಗ್ರಾಮದ ಶ್ರೀ ಈಶ್ವರಯ್ಯನವರೂ ಅವರ ಮಕ್ಕಳು ಶ್ರೀ ಎಂ. ಗುರುಸಿದ್ದಯ್ಯ, ಬಿ. ಎ., (ಆನರ್ಸ್) ಎಲ್‌ಎಲ್.ಬಿ., ಅವರು ಈ ವಿಚಾರದಲ್ಲಿ ವಿವರಗಳನ್ನು ತಿಳಿಸಿರುತ್ತಾರೆ. ಚಿತ್ರದುರ್ಗದ ಮೇಲುದುರ್ಗದ ಮಠದವರು ಶ್ರೀ ಈಶ್ವರಯ್ಯನವರ ಹಿರಿಯರು. ಪಾಳೆಯಗಾರರು ಅವರ ಹಿರಿಯರಿಗೆ ಕೊಟ್ಟ ಸನ್ನದುಗಳೂ ತಾಮ್ರ ಶಾಸನವೂ ಅವರಲ್ಲಿವೆ. ಇವರೇ ಮೇಲುದುರ್ಗದ ಮಠದ ಜಂಗಮ ಮನೆತನದವರು. ಈಶ್ವರಯ್ಯನವರಿಗೆ ಈಗ ೮೫ ವರ್ಷ ವಯಸ್ಸು. ಪಾಳೆಯಗಾರರು ಮೇಲುದುರ್ಗದ ಮಠವನ್ನು ಇವರ ಹಿರಿಯರಿಗೆಕಟ್ಟಿಸಿಕೊಟ್ಟರೆಂದೂ, ಅದು ಈಗ ಮುರಿಗಿ ಮಠದವರ ವಶದಲ್ಲಿದೆಯೆಂದು ತಿಳಿಸುತ್ತಾರೆ. ಪುನಃ ಭರಮಪ್ಪನಾಯಕನ ಕಾಲದಲ್ಲಿ ಮುರಘಸ್ವಾಮಿಗಳು ಅರಮನೆಯ ಆಶ್ರಯದಲ್ಲಿ ಕೇವಲ ಕೆಲವು ವರ್ಷ ಮಾತ್ರ ಇದ್ದರು. ಅನಂತರ ಗುರುಸಿದ್ಧಸ್ವಾಮಿ ಪಾಳೆಯಗಾರರ ಅರಮನೆಯ ಆಶ್ರಯದಲ್ಲಿ ಇದ್ದರು. ಭರಮಪ್ಪನಾಯಕನ ಕಾಲಾನಂತರ ಅವನ ಮಗ ಹಿರಿಯ ಮದಕರಿನಾಯಕ ಪಾಳೆಯಗಾರನಾದನು. ಕ್ರಿ. ಶ. ೧೭೩೫ ನೆಯ ಇಸವಿಯಲ್ಲಿ ಹಿರಿಯ ಮದಕರಿನಾಯಕ ಲಿಂಗವಂತ ಮತವನ್ನು ಬಿಟ್ಟು, ಬ್ರಾಹ್ಮಣ ಗುರುಮುಖದಿಂದ ಮಂತ್ರೋಪದೇಶವನ್ನು ಪಡೆದು, ಬ್ರಾಹ್ಮಣ ಪರಿಚಾರಕರಿಂದ ಅಡುಗೆ ಮಾಡಿಸಿ ಭೋಜನ ಮಾಡಲು ಪ್ರಾರಂಭಿಸಿದನು. ಬ್ರಾಹ್ಮಣರೇ ಅರಮನೆಯ ಪುರೋಹಿತರಾದರು. ಭರಮಪ್ಪನಾಯಕನು ಕ್ರಿ. ಶ. ೧೬೮೯ ರಲ್ಲಿ ರಾಜವಂಶದ ಮೂಲ ಗುರುಗಳಾದ ಶೃಂಗೇರಿ ಸ್ವಾಮಿಗಳ ಪಾದ ಪೂಜೆಯನ್ನು ಮಾಡಿ ಆ ಮಠಕ್ಕೆ ಅಮೌಲ್ಯ ಆಭರಣಗಳನ್ನು ಒಪ್ಪಿಸಿ, ಹನುಮನಹಳ್ಳಿ ಗ್ರಾಮವನ್ನು ದಾನ ಮಾಡಿದನು. ಶೃಂಗೇರಿಯ ಗುರುಗಳೇ ರಾಜಗುರುಗಳಾಗಿದ್ದರು. ಮುರಘಮಠದವರು ಕೇವಲ ಅರಮನೆಯ ಆಶ್ರಯದಲ್ಲಿದ್ದರು! ಪಾಳೆಯಗಾರನ ಅರಮನೆಯ ಮಠ ಆಗ ವೀರಶೈವ ಸಮಾಜದಲ್ಲಿ ಧಾರ್ಮಿಕ ಮಠವಾಗಿರಲಿಲ್ಲವೆಂದು ಸಿದ್ಧವಾಗುತ್ತದೆ. ಆಗ ಮಠಸ್ಥರು ಜಗದ್ಗುರುಗಳೆಂದು ಹೇಳಿಕೊಳ್ಳುತ್ತಿರಲಿಲ್ಲ. ೧೭೭೯ ರಲ್ಲಿ ಚಿತ್ರದುರ್ಗದ ಪಾಳೆಯಪಟ್ಟು ಹಾಳಾಯಿತು.

ಮೇಲುದುರ್ಗದ ಮಠವನ್ನು ಭರಮಪ್ಪನಾಯಕ ಮುರಘಸ್ವಾಮಿಗಳಿಗೆ

ಕಟ್ಟಿಸಿಕೊಡಲಿಲ್ಲವೆಂಬುದು ಸ್ಪಷ್ಟವಾಗಿದೆ. ಅನೇಕ ಹಿರಿಯರು ಇವನ್ನು ತಿಳಿಸುತ್ತಾರೆ. 'ಗಜಕೇಸರಿ' ಪುಸ್ತಕದಲ್ಲಿಯೂ 'ಚಿತ್ರದುರ್ಗದ ಪಾಳೆಯಗಾರರು' ಪುಸ್ತಕದಲ್ಲಿಯೂ ಹೇಳಿರುವಂತೆ ಈ ಮಠವನ್ನು ಪಾಳೆಯಗಾರರು ಮುರಘ ಸ್ವಾಮಿಗಳಿಗೆ ಕಟ್ಟಿಸಿಕೊಟ್ಟರೆಂಬುದು ವಿಶ್ವಾಸಾರ್ಹವಲ್ಲ. ಈ ಉಭಯ ಗ್ರಂಥ ಕರ್ತರೂ ಈ ವಿಚಾರವನ್ನು ಮುರಘಮಠದ ಕಡತಗಳಿಂದ ಅರಿತಿರಬಹುದು. ಆ ಮಠದ ಕಡತಗಳನ್ನು ಆ ಮಠದವರೇ ಬರೆಯಿಸಿಡುವುದರಿಂದ ಅದು ಏಕ ಪಕ್ಷೀಯವಾಗಿರುತ್ತದೆ. ಇತಿಹಾಸದ ಸಾಕ್ಷ್ಯ ಅದನ್ನು ದೃಢಪಡಿಸುವುದಿಲ್ಲ. ಮುರಘಮಠ ಸಂಬಂಧವಾದ ಅನೇಕ ಪತ್ರವ್ಯವಹಾರಗಳ ದಾಖಲಾತಿಗಳನ್ನು ಆ ಮಠದವರು ಶ್ರೀ ಜಯದೇವಸ್ವಾಮಿಗಳ ಕಾಲದಲ್ಲಿ ಸಂಪಾದಿಸಿ ಗ್ರಂಥರೂಪದಲ್ಲಿ ಪ್ರಕಟಿಸಿರುತ್ತಾರೆ. ಈ ಮಠದ ಅನೇಕ ಪ್ರಿಯಶಿಷ್ಯ-ವಿರಕ್ತರು ಇಂಥ ದಾಖಲಾತಿಗಳನ್ನು ರೂಪಿಸಲು ನೆರವಾದರೆಂದು ತಿಳಿದುಬರುತ್ತದೆ. ಶ್ರೀ ಜಯದೇವಸ್ವಾಮಿಗಳು ದಸರಾ ಕಾಲದಲ್ಲಿ ಮೇಲುದುರ್ಗದ ಮಠಕ್ಕೆ ಜಂಬೂ ಸವಾರಿ ಹೋಗಿಬರುವ ಪದ್ಧತಿಯನ್ನು ಪ್ರಾರಂಭಿಸಿದರು. ಇದರಿಂದ ಮೇಲುದುರ್ಗದ ಮಠಕ್ಕೂ ಮುರಘ ಮಠಕ್ಕೂ ಸಂಬಂಧವನ್ನು ಕಲ್ಪಿಸಿಕೊಂಡರು. "ಮೇಲು ದುರ್ಗದ ಮಠ ನಮ್ಮದಲ್ಲ; ಅದನ್ನು ಪಾಳೆಯಗಾರರು ಅರಮನೆಯ ಗುರುಗಳಿಗೆ ಕಟ್ಟಿಸಿಕೊಟ್ಟದ್ದು" ಎಂದು ಶ್ರೀ ಜಯದೇವಸ್ವಾಮಿಗಳು ಸಂದರ್ಭೋಚಿತವಾಗಿ ಹೇಳುತ್ತಿದ್ದರೆಂದು ಚಿತ್ರದುರ್ಗದಲ್ಲಿ ಹಿರಿಯರು ತಿಳಿಸುತ್ತಾರೆ. ಈ ವಿಚಾರ ಪರಿಶೋಧನಾರ್ಹವಾಗಿದೆ. ಚಿತ್ರದುರ್ಗದ ಪಶ್ಚಿಮಾಗ್ರದಲ್ಲಿ ಅಂಕಲೆಸ್ವಾಮಿ ಮಠವೆಂಬ ಪರದೇಶಪ್ಪನ ಮಠವೊಂದಿದೆ. ಇದು ಮುರಘಮಠಕ್ಕಿಂತ ಪ್ರಾಚೀನವಾದುದು. ಈ ಮಠವೂ ಈಗ ಮುರಘ ಮಠದ ಕಡತದಲ್ಲಿ ಸೇರಿಕೊಂಡಿದೆ.

ಚಿತ್ರದುರ್ಗದ ಶ್ರೀಮನ್ಮಹಾನಾಯಕಾಚಾರ್ಯ ಕಾಮಗೇತಿ ಕಸ್ತೂರಿ ರಂಗಪ್ಪನವರ ಪುತ್ರ ರಾಜಾ ಮದಕರಿನಾಯಕ ಶಾಲಿವಾಹನ ಶಕ ೧೬೭೯ ನೆಯ ಈಶ್ವರನಾಮ ಸಂವತ್ಸರ ಜ್ಯೇಷ್ಠ ಶುದ್ಧ ದಶಮಿಯ ದಿನ (ಕ್ರಿ. ಶ. ೧೭೫೮) ಚಿತ್ರದುರ್ಗದ ಮೇಲುದುರ್ಗದ ಹಿರಿಯ ಮಠದ ಓಂಕಾರದೇವರ ಮೊಮ್ಮಗ ಪಟ್ಟದದೇವರಿಗೆ ಚಿತ್ರಹಳ್ಳಿ ಸೀಮೆಯ ಬಸವಾಪುರವನ್ನು ದಾನವಾಗಿ ಕೊಟ್ಟಂತೆ ತಾಮ್ರಶಾಸನವೊಂದಿದೆ. ಆದ್ದರಿಂದ ಕ್ರಿ. ಶ. ೧೭೫೮ ರಲ್ಲಿಯೂ ಮೇಲು ದುರ್ಗದ ಹಿರಿಯ ಮಠದವರು ಚಿತ್ರದುರ್ಗದ ಪಾಳೆಯಗಾರರ ಗುರುಗಳಾಗಿದ್ದ

ರೆಂದು ನಿರ್ಧರವಾಗುತ್ತದೆ. ಮೇಲುದುರ್ಗದ ಮಠ ಶ್ರೀಶೈಲ ಪೀಠದ ಶಾ
ಮಠ. ಇದು ಪುತ್ರವರ್ಗದ ಮಠ. ಈ ಮಠಸ್ಥರ ವಂಶಜರೇ ಶ್ರೀ ಎಂ. ಈ
ಯ್ಯನವರು.ಹೈದರ್ ಆಲಿ ಚಿತ್ರದುರ್ಗವನ್ನು ಜಯಿಸುವವರೆಗೂ ಮೇಲುದು
ಶ್ರೀಶೈಲ ಪೀಠದವರೇ ಪಾಳೆಯಗಾರರ ಧರ್ಮಗುರುಗಳಾಗಿದ್ದರು. ಅನಂ
ಈ ಗುರುಪೀಠದವರು ಮುಸಲ್ಮಾನರ ಆಳ್ವಿಕೆಯಲ್ಲಿರಬಾರದೆಂದು ಚಿತ್ರದು
ವನ್ನು ಬಿಟ್ಟು ಇಲ್ಲಿಗೆ ಸುಮಾರು ಒಂದು ಗಾವುದ ದೂರದಲ್ಲಿರುವ ಕಳ್ಳಹ
(ಈಗ ಲಕ್ಷ್ಮೀಸಾಗರ) ಎಂಬ ಗ್ರಾಮದಲ್ಲಿ ನೆಲಸಿದರು. ಅಲ್ಲಿ ಈಗಲೂ
ಮಠದ ಮಾನ್ಯಗಳಿವೆ. ಶ್ರೀ ಈಶ್ವರಯ್ಯನವರು ಆ ಮಾನ್ಯಗಳನ್ನು ಅನುಭ
ತ್ತಿದ್ದಾರೆ. ಈ ಊರಿನಲ್ಲಿ ಅವರ ಹೊಸ ಮಠವೂ ಇದೆ. ಈ ಮಠದಲ್ಲಿ ಹಿ
ಸ್ವಾಮಿಗಳ ಎರಡು ಗದ್ದುಗೆಗಳಿವೆ. ಮೇಲುದುರ್ಗದ ಮಠ ಆಗಲೇ ಹಿ
ಮಠವೆಂದು ಪ್ರಸಿದ್ಧವಾಗಿತ್ತು. ಇದರಂತೆಯೇ ಚಿತ್ರದುರ್ಗದಲ್ಲಿ ಪಾಳೆಯ
ಆಶ್ರಯದಲ್ಲಿ ಸತ್ಯಬೋಧಾಚಾರ್ಯರ ಮಠ, ರಾಘವೇಂದ್ರಸ್ವಾಮಿ ಮ
ತಾತಾಚಾರ್ಯರ ಮಠ, ಮುಂಡಿಮಠ, ಉಜ್ಜಯಿನಿ ಮಠ, ಕೇದಾರ ಮ
ಕಾಶಿ ಮಠ, ಬಾಳೆಹಳ್ಳಿ ಮಠ ಮೊದಲಾದ ಅನೇಕ ಮಠಗಳು ನೆಲೆಗೊ
ದ್ದುವು. ವೀರಶೈವ ಪಂಚ ಆಚಾರ್ಯರ ಮಠಗಳೂ ಇಲ್ಲಿದ್ದುವೆಂಬು
ಗಮನಿಸಬಹುದು. ಚಿತ್ರದುರ್ಗದ ವಿರಕ್ತ ಮಠವೂ ಇಂಥ ಮಠಗಳಲ್ಲಿ ಒಂ
ಯಿತು. ಶ್ರೀಶೈಲ ಪೀಠದ ಮೇಲುದುರ್ಗದ ಮಠದವರು ಚಿತ್ರದುರ್ಗದ ಪಾ
ಗಾರರಿಗೆ ಧರ್ಮಗುರುವಾಗಿದ್ದರು. ಶೃಂಗೇರಿ ಮಠದವರು ರಾಜಗುರು
ದ್ದರು. ಈಗಲೂ ದುರ್ಗದ ತಪ್ಪಲಿನಲ್ಲಿ ಶೃಂಗೇರಿ–ಕೂಡಲಿ ಜಗದ್ಗು
ಮಠವಿದೆ. ಕವಿ ಇಮ್ಮಡಿ ಮುರಿಗೆಯಸ್ವಾಮಿ ಕ್ರಿ. ಶ. ೧೭೦೦ ರಲ್ಲಿ ಹಾ
ಪುರಾಣವನ್ನು ಬರೆದು ಮುಗಿಸಿದನೆಂದು ಕರ್ಣಾಟಕ ಕವಿಚರಿತೆಯ ಮ
ನೆಯ ಭಾಗದಲ್ಲಿ ಹೇಳಿದೆ. ಈತನೇ ಚಿತ್ರದುರ್ಗದ ಮುರಿಗಿ ಮಠದ ಮೊ
ನೆಯ ನಿರಾಭಾರಿಯೆಂದು ಹೇಳಬಹುದು. ಈತನು ದೇವೀ ಸ್ತೋತ್ರ ಎ
ಗ್ರಂಥವನ್ನೂ ಬರೆದಿದ್ದಾನೆ. ಇವನ ಕಾಲ ಸುಮಾರು ಕ್ರಿ. ಶ. ೧
ಭರಮಪ್ಪನಾಯಕ ಕ್ರಿ. ಶ. ೧೭೨೦ರಲ್ಲಿ ಕಾಲವಾದನೆಂದು ಚರಿತ್ರೆ ತಿಳಿಸುತ್ತ
ಈ ನಾಯಕನಿಗಿಂತ ಮುಂಚೆಯೇ ಇಮ್ಮಡಿ ಮುರಿಗಿಸ್ವಾಮಿ ಲಿಂಗೈಕ್ಯ
ರೆಂದು 'ಗಜಕೇಸರಿ' ಪುಸ್ತಕದಲ್ಲಿ ಉಕ್ತವಾಗಿದೆ.

ಶ್ರೀ ಜಯದೇವಲೀಲೆಯಲ್ಲಿ ಉಕ್ತವಾಗಿರುವ ಪವಾಡಗಳೊಂದನ್ನೂ ತಾವೇ ಬರೆದ ಹಾಲಾಸ್ಯ ಪುರಾಣದಲ್ಲಿ ಇಮ್ಮಡಿ ಮುರಿಗಿಸ್ವಾಮಿಗಳು ಹೇಳಿಲ್ಲ. ಇವರು ಚಿತ್ರದುರ್ಗದ ಪಾಳೆಯಗಾರರನ್ನು ಸರ್ಪಯೋಗ ಘಟನೆಯಿಂದ ಅನು ಗ್ರಹ ಮಾಡಿದ ಪ್ರಸಂಗವನ್ನಾಗಲಿ, ತಾವು ಮೈಸೂರು ರಾಜರ ಆಸ್ಥಾನದಲ್ಲಿ ಪುರಸ್ಕಾರ ಹೊಂದಿದ ವಿಚಾರವನ್ನಾಗಲಿ, ದೆಹಲಿ ಮತ್ತು ಹೈದರಾಬಾದ್ ಗಳಲ್ಲಿ ನಡಸಿದ ಪವಾಡಗಳನ್ನಾಗಲಿ ಆ ಪುರಾಣದಲ್ಲಿ ಹೇಳಬಹುದಾಗಿತ್ತು. ಆ ಪುರಾಣವನ್ನು ಮುಗಿಸಿದ ಕಾಲದಲ್ಲಿ ಅವರಿಗೆ ತುಂಬ ವೃದ್ಧಾಪ್ಯವೆಂದೇ ಕಾಣುತ್ತದೆ. ಅವರ ತರುವಾಯ, ಮುರಘಮಠದವರು ಬರೆಯಿಸಿದ ನಿರಂಜನ ವಂಶರತ್ನಾಕರದಲ್ಲಿಯೂ ಅನಂತರ ಶ್ರೀ ಜಯದೇವಲೀಲೆಯಲ್ಲಿಯೂ ಈ ಪವಾಡ ಗಳು ಮೈದೋರಿ ಬೆಳೆದಿವೆಯೆಂಬುದು ನಿಜ. ಮುರಿಗೆಯ ಸಂಪ್ರದಾಯ ಈ ಇಮ್ಮಡಿ ಮುರಿಗೀಸ್ವಾಮಿಗಳ ಕಾಲದಲ್ಲಿ ಪಾಳೆಯಗಾರನ ಆಶ್ರಯವನ್ನು ಪಡೆಯಿತೆಂದು ಹೇಳಬಹುದೇ ಹೊರತು ಇದೇ ಮೂಲ ಶೂನ್ಯ ಸಿಂಹಾಸನ ಮಠ ವೆಂದು ಹೇಳಲು ಸಾಧ್ಯವಿಲ್ಲ. ನೋಡಾ ಸಿದ್ಧಲಿಂಗೇಶ್ವರರು ಮುರಿಗೆಯ ಶಾಂತ ವೀರೇಶ್ವರನ ಸಮಕಾಲೀನರೆಂದು ಹೇಳಬಹುದು. ಏಕೆಂದರೆ, ಇವರಿಬ್ಬರೂ ಕಟ್ಟಿಗೆಹಳ್ಳಿ ಸ್ವಾಮಿಗಳ ಶಿಷ್ಯರಾಗಿದ್ದಾರೆ. ಆದ್ದರಿಂದ ಮುರಿಗೆಯ ಶಾಂತವೀರನ ಶಿಷ್ಯ ಒಂದನೆಯ ಮುರಿಗೀಸ್ವಾಮಿ, ಅವನ ಶಿಷ್ಯ ಇಮ್ಮಡಿ ಮುರಿಗೆಯಸ್ವಾಮಿ. ಈ ಇಮ್ಮಡಿ ಮುರಿಗೆಯಸ್ವಾಮಿಗಿಂತ ನೋಡಾ ಸಿದ್ಧಲಿಂಗ ಸ್ವಾಮಿಗಳು ತುಂಬ ಹಿರಿಯರು. ಆ ವೃದ್ಧ್ಯಾಪ್ಯದಲ್ಲಿ ಅವರು ದೆಹಲಿಗೆ ಹೋಗಿಬಂದರೆಂದು ಊಹಿಸಲೂ ಸಾಧ್ಯವಿಲ್ಲ. ಆದ್ದರಿಂದ ಮುರಿಗಿಸ್ವಾಮಿಗಳಿಗೆ ದೆಹಲಿಯಲ್ಲಿ ಶಿಖಾಪಟ್ಟವಾಯಿ ತೆಂಬ ಕಥೆಯನ್ನು ಇತಿಹಾಸ ಒಪ್ಪುವುದಿಲ್ಲ. ಶ್ರೀ ಜಯದೇವಲೀಲೆ ಅದರಿಂ ದಲೇ ನೋಡಾ ಸಿದ್ಧಲಿಂಗರನ್ನು ದೆಹಲಿಗೆ ಕಳಿಸಲಿಲ್ಲವೇನೋ ! ನೂತನ ವಿರಕ್ತ ಪಟ್ಟಾಂಕಿತರಾದ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಅವರ ಅನುಗ್ರಹ ಭಾಷಣ ದಲ್ಲಿ ಹೇಳಿರುವ ಯಾವುದೊಂದು ಅಂಶವೂ ಚಾರಿತ್ರಿಕದೃಷ್ಟಿಯ ಒರೆಗಲ್ಲಿಗೆ ಬರುವುದಿಲ್ಲ; ಅದರ ಯಾವುದೊಂದು ವಿಚಾರವೂ ಇತಿಹಾಸ ಮಾನ್ಯವಲ್ಲ !

ಚಿತ್ರದುರ್ಗದಲ್ಲಿ ಮುರಘಮಠ ರೂಪುಗೊಂಡು ಸುಮಾರು ೨೫೦ ವರ್ಷ ಗಳಾದುವೆಂದು ನಿರ್ಧರಿಸಬಹುದು. ಈ ಮಠಕ್ಕಿಂತಲೂ ಎಷ್ಟೋ ಹಿಂದೆಯೇ ದಕ್ಷಿಣ ಕರ್ನಾಟಕದಲ್ಲಿ ಅನೇಕ ಮಠಗಳು ಸ್ಥಾಪನೆಯಾಗಿದ್ದುವು. ಬಳ್ಳಿಗಾ

ವೆಯ ಪಂಚಮಠಗಳು, ಸಿದ್ಧಗಂಗಾ ಮಠ, ಎಡೆಯೂರು ಮಠ, ಹರದನಹಳ್ಳಿ ಮಠ, ಶಿವಗಂಗೆಯ ಮಠ ಮೊದಲಾದ ವಿರಕ್ತ ಮಠಗಳೂ, ಸುತ್ತೂರು ಮಠ, ಎಳನಡು-ಅರಸೀಕೆರೆ ಮಠ, ಸಿರಿಗೆರೆ ತರಳಬಾಳು ಮಠ, ಸರ್ಪಭೂಷಣ ಮಠ, ಗೂಳೂರು ನಿಡುಮಾಮಿಡಿ ಮಠ ಮೊದಲಾದ ಗುರುಮಠಗಳೂ ಮುಢ ಮಠಕ್ಕಿಂತ ಪ್ರಾಚೀನವಾದುವುಗಳೆಂಬುದರಲ್ಲಿ ಸಂಶಯವಿಲ್ಲ. ಇವೆಲ್ಲಕ್ಕಿಂತ ಹಿಂದೆಯೇ ವೀರಶೈವ ಪಂಚ ಆಚಾರ್ಯ ಪೀಠಗಳು ಸ್ಥಾಪನೆಯಾಗಿದ್ದುವು.



## ತರಂಗ ೧೧.

### ಇತಿಹಾಸ ದರ್ಪಣ; ಕಲ್ಪನಾ ವಿಕಾಸ

೬೨. ಸತ್ತು ಹುಟ್ಟುವವನಲ್ಲ, ಸಂದೇಹಿ ಸೂತಕಿಯಲ್ಲ
ಆಕಾರ ನಿರಾಕಾರನಲ್ಲ, ನೋಡಯ್ಯಾ !
ಕಾಯವಂಚಕನಲ್ಲ, ಜೀವ ವಂಚಕನಲ್ಲ,
ನಿರಂತರ ಸಹಜ, ನೋಡಯ್ಯಾ !
ಶಂಕೆಯಿಲ್ಲದ ಮಹಾಮಹಿಮನು, ನೋಡಯ್ಯಾ
ಕೂಡಲ ಸಂಗನ ಶರಣನುಪಮಾತೀತ ನೋಡಯ್ಯಾ !

—ಬಸವಣ್ಣನವರು

ಮುರಘಸ್ವಾಮಿಗಳು ದೆಹಲಿಗೆ ಹೋಗಿಬಂದ ವಿಚಾರವನ್ನು 'ನಿರಂಜನ ವಂಶ ರತ್ನಾಕರ' ತಿಳಿಸುತ್ತದೆಯಾದರೂ, ಅವರು ಭರಮಪ್ಪನಾಯಕನನ್ನು ಹರಸಿದ ಸಂದರ್ಭದಲ್ಲಿ ನಡೆದ ಸರ್ಪಯೋಗ ಘಟನೆಯನ್ನಾಗಲಿ, ಮೈಸೂರು ರಾಜರ ಆಸ್ಥಾನಕ್ಕೆ ಹೋದ ವಿಚಾರವನ್ನಾಗಲಿ ಭರಮಪ್ಪ ನಾಯಕನನ್ನು ಪಟ್ಟಕ್ಕೆ ಆರಿಸಲು ಅರಮನೆಯ ಪಟ್ಟದ ಆನೆ ತನ್ನ ಸೊಂಡಲಿನಿಂದ ಅವನ ಕೊರಳಿಗೆ ಜನರ ಮಧ್ಯದಲ್ಲಿ ಹೂವಿನ ಹಾರವನ್ನು ಹಾಕಿದ ಸಂಗತಿಯನ್ನಾಗಲಿ ಅದು ಹೇಳುವುದಿಲ್ಲ. ಶ್ರೀ ಜಯದೇವಲೀಲೆಯಲ್ಲಿ ಈ ಎಲ್ಲ ಘಟನೆಗಳನ್ನು ಸಂದರ್ಭೋಚಿತವಾಗಿ ಹೇಳಿದೆ. ಆದ್ದರಿಂದ, ನಿರಂಜನವಂಶ ರತ್ನಾಕರ

ಹೇಳಿರುವ ಮುರಘಾಸ್ವಾಮಿಗಳ ಕಥೆ ಶ್ರೀ ಜಯದೇವಲೀಲೆಯಲ್ಲಿ ಇನ್ನೂ ಬೆಳೆದಿ ರುತ್ತದೆ. ನೋಡಾ ಸಿದ್ಧಲಿಂಗರೂ ಮುರಘರೂ ಜೊತೆಯಲ್ಲಿ ಡಿಳ್ಳಿಗೆ ಹೋಗಿ, ಬಾದಷಹನ ಸತ್ತ ಆನೆಯನ್ನೂ, ಹೈದರಾಬಾದು ನವಾಬನ ಸತ್ತ ಆನೆಯನ್ನೂ ಬದುಕಿಸಿ ರಾಜೋಚಿತ ಮರ್ಯಾದೆಗಳನ್ನು ಪಡೆದರೆಂದು 'ನಿರಂಜನ ವಂಶ ರತ್ನಾಕರ'ದಲ್ಲಿ ಉಕ್ತವಾಗಿದೆ. 'ಚಿತ್ರದುರ್ಗದ ಪಾಳೆಯಗಾರರು' ಮತ್ತು 'ಗಜಕೇಸರಿ' ಪುಸ್ತಕಗಳಲ್ಲಿ ಸರ್ಪಯೋಗ ಘಟನೆಯೇನೋ ಬಂದಿರುತ್ತದೆ. ಇವರಲ್ಲಿ ಸ್ವಲ್ಪ ವ್ಯತ್ಯಾಸವಿದೆ. 'ಗಜಕೇಸರಿ'ಯಲ್ಲಿ ಹೇಳಿರುವಂತೆ "ಭರಮಪ್ಪ ನಾಯಕ ದನ ಕಾಯುವವನಂತೆ ಚಿನ್ಮೂಲಾದ್ರಿಯ ಸಮೀಪದ ಕಾಡಿನಲ್ಲಿ ಸಂಚರಿಸುತ್ತ ಒಂದು ದಿನ ಅವನು ಒಂದು ಮರದ ನೆರಳಿನಲ್ಲಿ ಮಲಗಿ ನಿದ್ರಿಸು ತ್ತಿದ್ದನು; ಆಗ ಮಧ್ಯಾಹ್ನ: ಉರಿಬಿಸಿಲು; ದೊಡ್ಡ ಕಾಳಿಂಗ ಸರ್ಪವೊಂದು ತನ್ನ ಹೆಡೆಯನ್ನು ಬಿಚ್ಚಿ ಭರಮಪ್ಪನಾಯಕನ ಮುಖದ ಮೇಲೆ ಬಿಸಿಲು ಬೀಳ ದಂತೆ ಹೆಡೆಯಾಡಿಸುತ್ತಿತ್ತು; ಆ ಸಮಯದಲ್ಲಿ ಮುರಘಸ್ವಾಮಿಗಳು ಆ ಮಾರ್ಗ ವಾಗಿ ಬರುತ್ತ, ಈ ದೃಶ್ಯವನ್ನು ನೋಡಿದರು; ಅವರು ನಾಯಕನ ಬಳಿಗೆ ಬರು ವಷ್ಟರಲ್ಲಿಯೇ ಆ ಘಟಸರ್ಪ ಅಲ್ಲಿಯೇ ಮರದ ಬಳಿಯಿದ್ದ ಹುತ್ತದೊಳಕ್ಕೆ ಹೋಯಿತು." 'ಚಿತ್ರದುರ್ಗದ ಪಾಳೆಯಗಾರರು' ಪುಸ್ತಕದಲ್ಲಿ, "ಉತ್ತರ ದೇಶ ದಿಂದ ಮುರಗೇಂದ್ರಯ್ಯನವರು ಬರುತ್ತಾ ದಾರಿಯಲ್ಲಿ ಮರದ ಕೆಳಗೆ ಮಲಗಿದ್ದ ಭರಮಪ್ಪನಾಯಕನ ತಲೆಯ ಮೇಲೆ 'ನಾಗಸರ್ಪ ಹೆಡೆಯಾಡುವುದನ್ನು ಕಂಡು ಅವನ ಬಳಿಗೆ ಬಂದರು; ಸರ್ಪವು ಮರದ ಮೇಲಕ್ಕೆ ಹತ್ತಿಹೋಯಿತು. 'ಗಜ ಕೇಸರಿ'ಯಲ್ಲಿ ಹೇಳಿರುವಂತೆ ಅದು ಹುತ್ತದೊಳಕ್ಕೆ ಹೋಗಲಿಲ್ಲ. 'ಶ್ರೀ ಜಯ ದೇವ ಲೀಲೆ'ಯಲ್ಲಿ 'ಸರ್ಪವು ಹರಿದು ಹುತ್ತವೊಂದನ್ನು ಸೇರಿತು' ಎಂದಿದೆ. 'ಗಜಕೇಸರಿ' ಮುರಘ ಮಠದವರ 'ದಾಖಲೆ'ಗಳನ್ನು ಅವಲಂಬಿಸಿದೆ. 'ಚಿತ್ರ ದುರ್ಗದ ಪಾಳೆಯಗಾರರು' ಪುಸ್ತಕದಲ್ಲಿ ಈ ಸರ್ಪಯೋಗ ಘಟನೆಯನ್ನು 'ಒಂದು ನಾಗರಹಾವು ಬಂದು ಹೆಡೆ ಎತ್ತಿ ಆಡುತ್ತಿತ್ತಂತೆ'–ಎಂದು ಹೇಳಿ ರುವುದೊಂದು ದಂತಕಥೆಯೆಂಬುದನ್ನು ಸೂಚಿಸುತ್ತದೆ. ಇಂಥ ಸರ್ಪಯೋಗ ಘಟನೆ ಕವಿಸಮಯವೆಂಬಂತೆ ನಮ್ಮ ಸಾಹಿತ್ಯದಲ್ಲಿ ಬರುತ್ತದೆ. ಹಕ್ಕಬುಕ್ಕರ ಪ್ರಸಂಗದಲ್ಲಿ ವಿದ್ಯಾರಣ್ಯರು ಇಂಥ ಘಟನೆಯನ್ನು ಕಂಡರೆಂದು ವಿಜಯ ನಗರ ರಾಜ್ಯ ನಿರ್ಮಾಣ ಕಾಲದ ಕಥೆಗಳಲ್ಲಿ ಬಂದಿದೆ. ಹೈದರ್ ಅಲಿ ದನ ಕಾಯು

ತ್ತಿಪ್ಪ ಕಾಲದಲ್ಲಿ, ಅವನು ಮರದ ನೆರಳಿನಲ್ಲಿ ಮಲಗಿದ್ದನೆಂದೂ, ಆಗ ಸ... ವೊಂದು ಹೆಡೆಯನ್ನು ಬಿಚ್ಚಿ ಅವನ ಮುಖದಮೇಲೆ ಆಡಿಸುತ್ತಿತ್ತೆಂದೂ ದೇ... ಹಳ್ಳಿಯ ಜೋಯಿಸರೊಬ್ಬರು ಅದನ್ನು ಕಂಡು, ಹೈದರನನ್ನು ಹರಸಿ, ಈ... ರಾಜ್ಯ ಪದವಿಯನ್ನು ಪಡೆಯುತ್ತಾನೆಂದು ಹೇಳಿದರೆಂದೂ ದಂತಕಥೆಯೊಂದಿ... ಇಂಥ ಸರ್ಪಯೋಗದ ಫಲವನ್ನು ಸಾಮಾನ್ಯರೂ ಹೇಳಬಹುದು ! ಇದು ಜ... ಜೀವನದಲ್ಲಿ ಹಬ್ಬಿರುವ ಹಳೆಯ ನಂಬುಗೆ ! ಇಂಥ ದೃಶ್ಯವನ್ನು ಕಂಡ ಮು... ಸ್ವಾಮಿಗಳೂ ಭರಮಪ್ಪನಾಯಕ ಮುಂದೆ ರಾಜನಾಗುತ್ತಾನೆಂದು ಹೇ... ಬಹುದು. ಈ ಘಟನೆ ನಾಯಕನ ಪುಣ್ಯೋದಯ ಸೂಚನೆಯೇ ಹೊ... ಮುರಿಗಿಸ್ವಾಮಿಗಳ ಮಹಾತ್ಮ್ಯೆಯ ದ್ಯೋತಕವಲ್ಲ ! ಈ ಕಥೆ ಮುರಿಗಿ ಕ... ನವರ ಜೀವನದಲ್ಲಿ ಒಂದು ಸ್ವಾರಸ್ಯಕರ ಪ್ರಸಂಗವಾಗಿದೆಯೇ ವಿನಾ ವಿ... ಸ್ಥಿತಿಯ ಮೇಲ್ಮೆಯನ್ನೇನೂ ಸಾರುವುದಿಲ್ಲ. ಇದು ಕಲ್ಪನಾವಿಲಾಸ! ಇ... ಹಾಸದ ಪುಟಗಳಲ್ಲಿ ಈ ಘಟನೆಗೆ ಬೆಲೆಯಿಲ್ಲ ! ಇದು ಮುರಿಗಿಸ್ವಾಮಿಗಳು ನ... ಸಿದ ಪವಾಡವಂತೂ ಅಲ್ಲವೇ ಅಲ್ಲ ! ಈ ಕಥೆಯಿಂದ ಮುರಿಗಿಸ್ವಾಮಿಗಳ ಆ... ಶಕ್ತಿಯ ಪ್ರಭಾವವೇನೂ ಸ್ಥಾಪನೆಯಾಗುವುದಿಲ್ಲ. ಶ್ರೀ ಜಯದೇವ ಲೀಲೆಯ... ಈ ಕಥೆ ಎಲ್ಲಿಂದಲೋ ಬಂದು ಸೇರಿಕೊಂಡಂತಿದೆ ! 'ನಿರಂಜನವಂಶರತ್ನಾ... ದಲ್ಲಿ ಈ ಪ್ರಸಂಗ ಬಂದಿಲ್ಲ. ಎಡೆಯೂರು ಸಿದ್ಧಲಿಂಗೇಶ್ವರರ ಜೀವನದ ಘ... ಗಳನ್ನು ಚಿತ್ರಿಸಿದ 'ನಿರಂಜನವಂಶರತ್ನಾಕರ' ಇಂಥ ಘಟನೆಯನ್ನು ಮು... ಸ್ವಾಮಿಗಳ ಜೀವನದಲ್ಲಿ ಚಿತ್ರಿಸದಿರಲು ಕಾರಣವೇನು ? ಅವರು ಸಾಮಾ... ವಿರಕ್ತರಾಗಿದ್ದರು; ಸಿದ್ಧಪುರುಷರಲ್ಲ. ಈ ಕಥೆಗೂ ಮುರಿಗಿಸ್ವಾಮಿಗಳ ಆ... ಶಕ್ತಿಗೂ ಯಾವ ಸಂಬಂಧವನ್ನೂ ಕಲ್ಪಿಸುವಂತಿಲ್ಲ.

ಇನ್ನು ಮೈಸೂರು ರಾಜರ ಆಸ್ಥಾನದಲ್ಲಿ, ಮುರಿಗಿಸ್ವಾಮಿಗಳು ಪ... ಗೌರವವನ್ನು ಪಡೆದರೆಂಬುದನ್ನು ನಂಬಲೂ ಅವಕಾಶವಿಲ್ಲ. ಮೈಸೂರು ದೇ... ಚರಿತ್ರೆಯನ್ನು ಅವಲೋಕಿಸಿದರೆ, ಆ ಕಾಲದಲ್ಲಿ ಚಿಕ್ಕದೇವರಾಜ ಒಡೆಯ... ಮೈಸೂರು ನಾಡಿನ ಪ್ರಭುಗಳಾಗಿದ್ದರೆಂದು ಗೊತ್ತಾಗುತ್ತದೆ. ಭರಮ... ನಾಯಕ ಕ್ರಿ. ಶ. ೧೬೮೯ ರಿಂದ ಕ್ರಿ. ಶ. ೧೭೨೧ ರ ವರೆಗೆ ಚಿತ್ರದುರ್ಗ... ಪಾಳೆಯಗಾರನಾಗಿದ್ದನು. ಮುರಿಗಿಸ್ವಾಮಿಗಳು ಚಿತ್ರದುರ್ಗದ ಸಮೀಪ... ಕಾಡಿನಲ್ಲಿ ಭರಮಪ್ಪನಾಯಕನನ್ನು ಕಂಡು, ಅವನನ್ನು ಆಶೀರ್ವದಿಸಿದವ...

ಶಿವರು ಮೈಸೂರು ರಾಜರ ಆಸ್ಥಾನಕ್ಕೆ ಹೋದರೆಂದು ಶ್ರೀ ಜಯದೇವಲೀಲೆ ಯಲ್ಲಿ ಹೇಳಿದೆ ಈ ಸರ್ಪಯೋಗ ಘಟನೆ ನಡೆದಮೇಲೆ ಮೂರು ತಿಂಗಳಲ್ಲಿಯೇ ಭರಮಪ್ಪನಾಯಕ ದುರ್ಗದ ಪಾಳೆಯಗಾರನಾದನೆಂದು 'ಚಿತ್ರದುರ್ಗದ ಪಾಳೆಯಗಾರರು'-ಪುಸ್ತಕದಲ್ಲಿ ಹೇಳಿದೆ. ಆದ್ದರಿಂದ ಮುರಿಗಿಸ್ವಾಮಿಗಳು ಕ್ರಿ. ಶ. ೧೬೮೯ ರಲ್ಲಿ ಮೈಸೂರು ರಾಜರ ಆಸ್ಥಾನಕ್ಕೆ ಹೋದರೆಂದು ಹೇಳ ಬಹುದು. ಚಿಕ್ಕದೇವರಾಜ ಒಡೆಯರು ಕ್ರಿ. ಶ. ೧೬೭೩ ರಿಂದ ಕ್ರಿ. ಶ. ೧೭೦೪ರ ವರೆಗೆ ರಾಜ್ಯವಾಳಿದರು. ಮುರಿಗಿಸ್ವಾಮಿಗಳು ಮೈಸೂರು ರಾಜರ ಆಸ್ಥಾನಕ್ಕೆ ಹೋದರೆಂಬುದು ನಿಜವಾದರೆ, ಆ ವೇಳೆಗೆ ಚಿಕ್ಕದೇವರಾಜ ಒಡೆಯರಿಗೆ ರಾಜ್ಯಾಭಿಷೇಕವಾಗಿ ಸುಮಾರು ೧೬ ವರ್ಷವಾಗಿತ್ತು. ಆ ರಾಜರ ಆಳಿಕೆಯ ಪೂರ್ವೋತ್ತರ ವಿದ್ಯಮಾನಗಳನ್ನು ಪರಿಗಣಿಸಿ, ಆಗಿನ ಆಸ್ಥಾನದಲ್ಲಿ ವಿರಕ್ತ ರೊಬ್ಬರಿಗೆ ಪುರಸ್ಕಾರ ಲಭಿಸಿರಬಹುದೇ ಎಂಬುದನ್ನು ಅರಿಯಬೇಕು. ಚಿಕ್ಕದೇವ ರಾಜ ಒಡೆಯರು ಸಮರ್ಥರು; ವಿದ್ವಾಂಸರು; ಸಾಹಸ ಸಂಪನ್ನರು. ಅವರ ಕಾಲದಲ್ಲಿ ಕನ್ನಡ ಸಾಹಿತ್ಯ ಅಪಾರವಾಗಿ ಬೆಳೆಯಿತು, ಅದೊಂದು ಸುವರ್ಣ ಯುಗ. ಆಗ ಚಿಕ್ಕದೇವರಾಜ ಒಡೆಯರು ಶ್ರೀ ವೈಷ್ಣವ ಧರ್ಮವನ್ನು ಅಂಗೀ ಕರಿಸಿದ್ದರು. ಅದುವರೆಗೆ ಲಿಂಗವಂತ ಧರ್ಮವನ್ನು ಅನುಸರಿಸುತ್ತ ಲಿಂಗಧಾರಿ ಗಳಾಗಿದ್ದ ರಾಜಮನೆತನದವರು ಆ ಮತವನ್ನು ಪರಿತ್ಯಜಿಸಿ ರಾಮಾನುಜ ಸಂಪ್ರ ದಾಯವನ್ನು ಅವಲಂಬಿಸಿದ್ದರು. ಚಿಕ್ಕದೇವರಾಜ ಒಡೆಯರ ಹಿರಿಯ ರಾಣಿ ಎಳಂದೂರಿನ ದೇವರಾಜಮ್ಮಣ್ಣಿಯವರು ಮಾತ್ರ ಲಿಂಗವಂತೆಯಾಗಿಯೇ ಉಳಿ ದರು. ಆಸ್ಥಾನದಲ್ಲಿ ಸಿಂಗರಾರ್ಯ, ತಿರುಮಲರಾಯ, ಚಿಕ್ಕುಪಾಧ್ಯಾಯ ಮೊದಲಾದ ಶ್ರೀ ವೈಷ್ಣವ ಧರ್ಮನಿಷ್ಠರು ಪ್ರಬಲರಾಗಿದ್ದರು. ಅರಮನೆಯ ಆಚಾರವಿಚಾರಗಳಲ್ಲಿ ಶ್ರೀ ವೈಷ್ಣವ ಧರ್ಮವೇ ತುಂಬಿಬಂತು. ಆಗ ಶ್ರೀ ವೈಷ್ಣವ ಸಾಹಿತ್ಯವೇ ಪ್ರಮುಖವಾಗಿ ಸೃಷ್ಟಿಯಾಯಿತು. ಮೇಲುಕೋಟೆಯ ಚೆಲುವ ನಾರಾಯಣ ಸ್ವಾಮಿಯೇ ರಾಜರ ಆರಾಧ್ಯ ದೈವವಾಗಿತ್ತು. ಅಲ್ಲಿ ವೀರಶೈವಕ್ಕೆ ಪ್ರಾಶಸ್ತ್ಯವಿರಲಿಲ್ಲ. ಚಿಕ್ಕದೇವರಾಜ ಒಡೆಯರ ಪ್ರಧಾನಿಗಳಲ್ಲಿ ಜೈನಮತದ ವಿಶಾಲಾಕ್ಷ ಪಂಡಿತನೇ ಅತ್ಯಂತ ಪ್ರಭಾವಶಾಲಿಯೂ ರಾಜರ ಪರಮಾಪ್ತ ಮಿತ್ರನೂ ಆಗಿದ್ದನು. ಅವರಿಬ್ಬರೂ ಬಾಲ್ಯ ಸ್ನೇಹಿತರಷ್ಟೇ ಅಲ್ಲದೆ, ಹಂಗಳ ಎಂಬ ಊರಿನಲ್ಲಿ ಹುಟ್ಟಿಬೆಳೆದವರು ! ಆದ್ದರಿಂದ ಅವರಿಬ್ಬರ ಬಾಂಧವ್ಯವೆಂದರೆ

ಅಚಲ! ಆಗ ಷಡಕ್ಷರಿಯೆಂಬ ಲಿಂಗವಂತ ಮಂತ್ರಿಯೇನೋ ಆಸ್ಥಾನದಲ್ಲಿದ್ದ ನಾದರೂ ಅವನು ನಿಸ್ಸಹಾಯಕನಾಗಿದ್ದನು. ಶ್ರೀ ವೈಷ್ಣವ ದೀಕ್ಷಾಮುದ್ರೆ ಒಡೆಯರ ಮನಸ್ಸಿನಮೇಲೆ ಅಚ್ಚಳಿಯದೆ ನಿಂತಿತ್ತು! ಮೇಲುಕೋಟೆಯ ಚೆಲುವ ನಾರಾಯಣಸ್ವಾಮಿ ಶ್ರೀ ವತ್ಸಾಂಕಿತವಕ್ಷನಾದರೆ, ಚಿಕ್ಕದೇವರಾಜ ಒಡೆಯರು ಶ್ರೀ ನಾರಾಯಣಾಂಕಿತ ವಕ್ಷರಾಗಿದ್ದರು! ಒಡೆಯರು 'ನವಕೋಟಿ ನಾರಾಯಣ' ಎಂಬ ಬಿರುದು ಹೊತ್ತರು! ವಿಶಾಲಾಕ್ಷ ಪಂಡಿತ ವೀರಶೈವ ಬದ್ಧ ದ್ವೇಷಿಯಾಗಿದ್ದನು. ಅವನು ಅರಮನೆಯಲ್ಲಿ ಶಿವಾಚಾರದವರ ಪ್ರಾಬಲ್ಯ ವನ್ನು ತಪ್ಪಿಸಿದವನು. ಆದುದರಿಂದ ಜಂಗಮರು ರೈತರೊಡನೆ ಸೇರಿ ಸರ್ಕಾರದ ಭಯವನ್ನು ಬಿಟ್ಟು ನಡೆಯುವಂತೆ ಅವರಿಗೆ ಹೇಳಿಕೊಟ್ಟರು. ಒಡೆಯರು ಸಿಂಹಾಸನಾರೋಹಣ ಮಾಡಿದ ಕೆಲವು ಕಾಲದಲ್ಲಿಯೇ ವೀರಶೈವರ ತೇಜೋ ವಧೆಯಾಯಿತು! ವಿಶಾಲಾಕ್ಷ ಪಂಡಿತನೇ ಈ ದುರಂತದ ಪ್ರಧಾನ ನಾಯಕ! ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಹೊಸದಾಗಿ ಕೆಲವು ತೆರಿಗೆಗಳು ಏರ್ಪಟ್ಟವು. ಇದರಿಂದ ರೈತರಿಗೆ ಅಸಮಾಧಾನವುಂಟಾಯಿತು. ಆಗ ಮೈಸೂರು ಪ್ರಾಂತದಲ್ಲಿ ಸಾಕಾದಷ್ಟು ಮಳೆಬೆಳೆಗಳಿಲ್ಲದೆ ಜನರಲ್ಲಿ ಹಾಹಾಕಾರವುಂಟಾಯಿತು. ಜನರು ರಾಜ್ಯಾಡಳಿತದ ಮೇಲೆ ತಿರುಗಿಬಿದ್ದರು. * ಕಾಡುಭೂಮಿಯನ್ನು ಬಸವಣ್ಣ ಉಳುತ್ತಾನೆ, ದೇವೇಂದ್ರ ಮಳೆಯನ್ನು ಕರೆಯುತ್ತಾನೆ. ನಾವು ಕಷ್ಟಪಟ್ಟು ಬೆಳೆ ಮಾಡಿ ಇವರಿಗೇಕೆ ತೆರಿಗೆ ಕೊಡಬೇಕು" ಎಂದು ಪುಂಡ ಜನಗಳು ಹೇಳತೊಡಗಿ ದರು. ಇದಕ್ಕೆಲ್ಲಾ ಲಿಂಗವಂತ ಜಂಗಮರೇ ಕಾರಣರೆಂದು ವಿಶಾಲಾಕ್ಷ ಪಂಡಿತ ನಿರ್ಣಯಿಸಿದ. ರಾಜರೂ ಒಪ್ಪಿದರು. ಈ ಪುಂಡಾಟವನ್ನು ಅಡಗಿಸಲು ರಹಸ್ಯಾ ಲೋಚನೆ ನಡೆಯಿತು. ನಂಜನಗೂಡಿನಲ್ಲಿ ಜಂಗಮ ದಾಸೋಹ ಏರ್ಪಾಟಾ ಯಿತು. ಜಂಗಮತಿಂಥಿಣಿ ನೆರೆಯಿತು. ಆರೋಗಣೆಯಾಯಿತು! ರಾಜ ಭೋಜನ! ಮೊದಲೇ ಏರ್ಪಡಿಸಿದ್ದಂತೆ ಈ ಜಂಗಮರಿಗೆಲ್ಲಾ ವಿಶಾಲವಾದ

* (1) History of Mysore–Volume I PP. 220–221 by Lt Col. Mark Wilks.

(2) ಮೈಸೂರು ಸಂಸ್ಥಾನದ ವಿದ್ಯಾಭ್ಯಾಸದ ಇಲಾಖೆಯ ನಿವೃತ್ತ ಇನ್ಸ್‌ಪೆಕ್ಟರ್ ಜನರಲ್, ರಾವ್‌ಬಹದ್ದೂರ್, ರಾಜಕಾರ್ಯಪ್ರಸಕ್ತ ದಿವಂಗತ ಎಂ. ಶಾಮ ರಾಯರು, M.A., ಅವರು ಬರೆದಿರುವ 'ಮೈಸೂರು ಸಂಸ್ಥಾನದ ಚರಿತ್ರಸಾರ'

ಭವನದಲ್ಲಿ ಭೂರಿ ದಕ್ಷಿಣೆ ವಿನಿಯೋಗ ನಡೆಯಿತು. ಒಬ್ಬೊಬ್ಬರೂ ದಕ್ಷಿಣೆ ಯನ್ನು ಪಡೆದು ಹಿಂಭಾಗದ ಪ್ರತ್ಯೇಕ ಬಾಗಿಲಿನಿಂದ ಹೊರಗೆ ಹೋಗಬೇಕಾ ಗಿತ್ತು ! ಅಲ್ಲಿದ್ದ ಕಟುಕ ಜಟ್ಟಿಗಳು ಒಬ್ಬೊಬ್ಬ ಜಂಗಮನನ್ನೂ ಹಿಡಿದು ತಲೆ ಯನ್ನು ಕತ್ತರಿಸಿ ಅಲ್ಲಿ ತೋಡಿದ್ದ ಆಳವಾದ ಹಳ್ಳಕ್ಕೆ ಎಸೆಯುತ್ತಿದ್ದರು. ಹೀಗೆ, ಸುಮಾರು ೪೦೦ ಜನ ಜಂಗಮರ ಕಗ್ಗೊಲೆಯಾಯಿತೆಂದು ಚರಿತ್ರೆ ತಿಳಿಸುತ್ತದೆ. ಅಲ್ಲದೆ, ದೇಶದಲ್ಲಿದ್ದ ೭೦೦ ಜಂಗಮ ಮಠಗಳನ್ನು ಒಡೆಯರು ನೆಲಸಮ ಮಾಡಿಸಿದರು. ವಿಶಾಲಾಕ್ಷ ಪಂಡಿತನೇ ಈ ಎಲ್ಲ ದುರಂತಕ್ಕೂ ಕಾರಣನೆಂದು ಜನಗಳು ನಂಬಿದರು. ಲಿಂಗವಂತರ ಮನಸ್ಸಿನಲ್ಲಿ ದ್ವೇಷವಿದ್ದೇ ಇತ್ತು. ಕೆಲವು ಕಾಲ ಕಳೆಯಿತು. ನೊಂದ ಜನರು ತಮ್ಮ ದ್ವೇಷವನ್ನು ತೀರಿಸಿಕೊಳ್ಳಲು ಸಮಯ ಸಾಧಿಸುತ್ತಿದ್ದರು. ಒಂದು ದಿನ ವಿಶಾಲಾಕ್ಷ ಪಂಡಿತನು ಅರಮನೆ ಯಿಂದ ತನ್ನ ಮನೆಗೆ ಹೋಗುತ್ತಿದ್ದಾಗ ನಡುಬೀದಿಯಲ್ಲಿಯೇ ಜಂಗಮ ಪಕ್ಷ ದವರು ಅವನನ್ನು ಕತ್ತರಿಸಿ ಹಾಕಿದರು. ಚಿಕ್ಕದೇವರಾಜ ಒಡೆಯರು ಆ ಕಾಲ ದಲ್ಲಿ ಹರದನಹಳ್ಳಿಯಲ್ಲಿದ್ದ ಶೂನ್ಯ ಸಿಂಹಾಸನ ಮಠವನ್ನು ಹಾಳುಗೆಡವಿಸಿ, ಆ ಮಠದ ಕಲ್ಲುಗಳಿಂದ ಅಲ್ಲಿಯೇ ಗೋಪಾಲಕೃಷ್ಣಸ್ವಾಮಿಯ ದೇವಾಲಯ ವನ್ನು ಕಟ್ಟಿಸಿದರು. ಚಿಕ್ಕದೇವರಾಜ ಒಡೆಯರ ಆಳಿಕೆಯ ಸುಮಾರು ಹತ್ತ ನೆಯ ವರ್ಷದಲ್ಲಿ ಎಂದರೆ ಕ್ರಿ. ಶ. ೧೬೮೩ ನೆಯ ಇಸವಿಯಲ್ಲಿ ಈ ದಾರುಣ ಪ್ರಸಂಗ ನಡೆಯಿತು. ಇಂಥ ವಿದ್ವೇಷ ಪರಿಸ್ಥಿತಿಯು ಆಗ ನಾಡಿನಲ್ಲಿ ಜನರ ಮನಸ್ಸಿನಲ್ಲಿ ಇನ್ನೂ ಹಸಿರಾಗಿಯೇ ಇತ್ತು ! ಹೀಗಿರುವಾಗ ಮುರಘಸ್ವಾಮಿಗ ಳಂಥ ಒಬ್ಬ ವಿರಕ್ತ ಮೂರ್ತಿ ಮೈಸೂರು ರಾಜರ ಆಸ್ಥಾನದಲ್ಲಿ ಬ್ರಾಹ್ಮಣ ಮತ್ತು ಜೈನ ಪಂಡಿತರನ್ನು ಶಾಸ್ತ್ರಮುಖದಲ್ಲಿ ಜಯಿಸಿ, ರಾಜಮರ್ಯಾದೆಯನ್ನು ಪಡೆಯಲು ಸಾಧ್ಯವೆ? ಎಂಬುದನ್ನು ಪರ್ಯಾಲೋಚಿಸಿದರೆ ಅವರು ಮೈಸೂರು ರಾಜರ ಆಸ್ಥಾನಕ್ಕೆ ಹೋಗಿರಲಿಲ್ಲವೆಂದೇ ಹೇಳಬಹುದು. ಅಲ್ಲದೆ, ಮುರಘರು ಮೈಸೂರು ರಾಜರ ಆಸ್ಥಾನಕ್ಕೆ ಹೋಗಿದ್ದರೆಂಬುದನ್ನು ಇತರ ಯೋಗ್ಯ ಪ್ರಮಾಣ ಗಳಿಂದ ನಿಶ್ಚಯಿಸುವವರೆಗೂ ಈ ರಾಜ ವಿರಕ್ತ ಸಮಾಗಮವನ್ನು ಒಪ್ಪಲು ಸಾಧ್ಯವಿಲ್ಲ. ಇದು ಅಸಂಭವ ! ಅಪ್ರಮಾಣ !

ಇದೇ ಕಾಲದಲ್ಲಿ ಔರಂಗಜೇಬನು ದೆಹಲಿಯ ಬಾದಷಹನಾಗಿದ್ದನೆಂದು ಇತಿಹಾಸದಿಂದ ದೃಢಪಡುತ್ತದೆ. ಅವನು ಕ್ರಿ.ಶ. ೧೬೫೮ ರಿಂದ ಕ್ರಿ. ಶ. ೧೭೦೭ರ

ವರೆಗೆ ರಾಜ್ಯವಾಳಿದನು. ಅವನು ಪೂರ್ಣ ಇಸ್ಲಾಂ ಧರ್ಮಾಂಧ! ಅವನು ಹಿಂದೂ ಧರ್ಮದ ಸಾಧುಸಂತರನ್ನು ಪುರಸ್ಕರಿಸುವಷ್ಟು ಉದಾರಿಯಾಗಿರಲಿಲ್ಲ. ಮುರಘಸ್ವಾಮಿಗಳು ಆ ಬಾದಷಹನ ಸತ್ತ ಪಟ್ಟದಾನೆಯನ್ನು ಬದುಕಿಸಿದ ರೆಂಬುದು ಪವಾಡವಾದೀತೇ ಹೊರತು, ಅವರು ದೆಹಲಿಗೆ ಹೋಗಿದ್ದ ವಿಚಾರ ಐತಿಹಾಸಿಕ ಪ್ರಮಾಣದಿಂದ ನಿರ್ಣಯವಾಗತಕ್ಕದ್ದಲ್ಲ. ಹನ್ನೆರಡನೆಯ ಶತ ಮಾನದಲ್ಲಿ ಚನ್ನಬಸವಣ್ಣನವರು ವಜೀರ್ ಮಲ್ಲೂಖಾ೯ ಎಂಬುವನ ವಶಕ್ಕೆ ಕೊಟ್ಟಿದ್ದ ಸುವರ್ಣ ಶೂನ್ಯ ಸಿಂಹಾಸನ, ಶಿಖಾ, ಶೈಲಗಳನ್ನು ಹದಿನೆಂಟನೆಯ ಶತಮಾನದಲ್ಲಿ ಔರಂಗಜೇಬ್ ಚಕ್ರವರ್ತಿ ತನ್ನ ದಫ್ತರ ಕಛೇರಿಯಿಂದ ತರಿಸಿ ಮುರಘಸ್ವಾಮಿಗಳಿಗೆ ಒಪ್ಪಿಸಿದನೆಂಬುದು ಅತ್ಯಂತ ಸೋಜಿಗದ ಸಂಗತಿಯೇ ಅಲ್ಲ; ಊಹಾತೀತವಾದುದೂ ಆಗಿದೆ! ಅದುವರೆಗೆ ಆರುನೂರು ವರ್ಷ ಕಾಲ ದೆಹಲಿಯಲ್ಲಿ ಆಳಿದ ರಾಜಮನೆತನಗಳವರು ಅಷ್ಟೊಂದು ಜೋಪಾನವಾಗಿ ಈ ಸುವರ್ಣ ಶೂನ್ಯ ಸಿಂಹಾಸನ, ಶಿಖಾ, ಶೈಲಗಳನ್ನು ಕಾಪಾಡಿಕೊಂಡು ಬಂದರೆಂಬುದನ್ನು ನಂಬಲು ಸಾಧ್ಯವಿಲ್ಲ. ಅವರೆಲ್ಲಾ ಚನ್ನಬಸವಣ್ಣನವರ ಸಾಮಂತ ರಾಜರಾಗಿದ್ದರೇನು! ಮುರಘಸ್ವಾಮಿಗಳ ಉತ್ಸವ ಅಂದು ದೆಹಲಿ ನಗರದಲ್ಲಿ ನಡೆಯಿತಂತೆ! ಆ ಅಚ್ಚ ಇಸ್ಲಾಂ ಧರ್ಮಿ–ಮೊಗಲಾಯ್ ಸಾರ್ವ ಭೌಮ ತನ್ನ ಅರಮನೆಯ ಉಪ್ಪರಿಗೆಯ ಮೇಲೆ ನಿಂತು, ಜನಾನಾ ಸ್ತ್ರೀಯ ರೊಂದಿಗೆ ಆ ವಿರಕ್ತೋತ್ಸವವನ್ನು ಕಣ್ಣಾರೆ ಕಂಡು ಆನಂದಿಸಿರಬೇಕು! ದೆಹಲಿ ನಗರದ ರಾಜಬೀದಿಗಳಲ್ಲಿ ಆ ಮೆರವಣಿಗೆ ಬಂದಾಗ ಮೌಲ್ವಿಗಳೂ ಖಾಜಿಗಳೂ ವಿರಕ್ತವರ್ಯರಿಗೆ ನಜರು ಒಪ್ಪಿಸಿ 'ಕುರ್ನಿಸಾತ್' ಮಾಡಿದರೇನೋ! 'ನಿರಂಜನವಂಶರತ್ನಾಕರ' ಸಾರ್ಥಕವಾಯಿತು!

* ಔರಂಗಜೇಬನ ಕಾಲದಲ್ಲಿ ಕಾಶೀ ನಗರವೇ ಮುಂತಾದ ಸ್ಥಳಗಳಲ್ಲಿದ್ದ ದೇವಸ್ಥಾನಗಳನ್ನು ನೆಲಸಮ ಮಾಡಿ ಅವುಗಳ ಸಾಮಾನುಗಳಿಂದಲೇ ಅದೇ ಸ್ಥಳಗಳಲ್ಲೇ ಮುಸಲ್ಮಾನರು ಮಸೀದಿಗಳನ್ನು ಕಟ್ಟಿದರು. ಕಾಶಿಯ ದೇವಾ ಲಯದ ಅರ್ಚಕರಿಗೆ ಸರ್ಕಾರದಿಂದ ಸಲ್ಲುತ್ತಿದ್ದ ವೇತನಗಳನ್ನು ನಿಲ್ಲಿಸಬೇಕೆಂಬು ದಾಗಿ ಔರಂಗಜೇಬನು ಅಪ್ಪಣೆ ಮಾಡಿದನು. ಅವನು ಮುಸಲ್ಮಾನರ ಪಕ್ಷಪಾತಿ

* ಆಧಾರ : ಇಂಡಿಯಾ ದೇಶದ ಚರಿತ್ರೆ : ಶ್ರೀ ಕೆ. ಎ. ವೀರರಾಘವಾಚಾರ್ಯರು, ಬಿ.ಎ., ಅವರಿಂದ.

ಯಾಗಿ ವರ್ತಿಸುತ್ತಿದ್ದನು. ಸರ್ಕಾರದ ಅನುಮತಿಯನ್ನು ಪಡೆಯದೆ ಹಿಂದುಗಳು ಪಲ್ಲಕ್ಕಿಯಲ್ಲಾಗಲಿ, ಅರಬ್ಬಿಯ ಕುದುರೆಯ ಮೇಲಾಗಲಿ ಹೋಗಕೂಡದೆಂದು ಚಕ್ರವರ್ತಿಯು ವಿಧಾಯಕ ಮಾಡಿದ್ದನು. ಹಿಂದುಗಳ ಮೇಲೆ ಜೆಸ್ಸಿಯಾ ಎಂಬ ತಲೆಗಂದಾಯವನ್ನು ವಿಧಿಸಿದ್ದನು. ಅವನು ಹಿಂದೂಗಳ ಮೇಲೆ ಯುದ್ಧ ಮಾಡಿ, ಅವರ ಮನೆಗಳನ್ನು ಸುಟ್ಟು, ಬೆಳೆಗಳನ್ನು ನಾಶಮಾಡಿ, ದೇವಾಲಯಗಳನ್ನು ಹಾಳುಮಾಡಿ. ವಿಗ್ರಹಗಳನ್ನು ಮಸೀದಿಯ ಮೆಟ್ಟಲುಗಳಿಗೆ ಹಾಕಿಸಿ, ಮುಸಲ್ಮಾನರು ಅವುಗಳನ್ನು ತುಳಿದುಕೊಂಡು ಓಡಾಡುವಂತೆ ಮಾಡಿದ್ದನು. ಅವನು ಪೂರ್ಣ ಹಿಂದೂ ಮತದ್ವೇಷಿ. ಅವನು ಷಿಯಾ ಪಂಗಡದ ಮುಸಲ್ಮಾನರನ್ನೂ ವಿರೋಧಿಸುತ್ತಿದ್ದನು. ಅವನು ಕ್ರಿ. ಶ. ೧೬೮೬ ರಲ್ಲಿ ಬಿಜಾಪುರವನ್ನು ಜಯಿಸಿದನು; ಅನಂತರ ಗೊಲ್ಕೊಂಡವನ್ನು ಮುತ್ತಿ ಯುದ್ಧ ಮಾಡಿದನು. ಅದೂ ಅವನ ವಶವಾಯಿತು. ದಖನ್ನಿನ ಷಿಯಾ ರಾಜ್ಯಗಳೆಲ್ಲಾ ಅಲ್ಲಿಗೆ ಅವನ ಕೈಸೇರಿದುವು. ಕ್ರಿ. ಶ. ೧೭೦೭ ರಲ್ಲಿ ಅವನು ಕಾಲವಾದನು. ಅವನ ಕಾಲಾನಂತರವೇ ಗೋಲ್ಕೊಂಡದ ಹತ್ತಿರ ಹೈದರಾಬಾದ್ ರಾಜ್ಯ ಉದಯವಾಯಿತು. ಆದ್ದರಿಂದ ೧೬೪೫ ರ ಸುಮಾರಿನಲ್ಲಿ ಮುರಿಗಿಸ್ವಾಮಿಗಳು ಒಬ್ಬರೇ ಆಗಲಿ, ಅಥವಾ ಕೂಡಾ ಸಿದ್ಧಲಿಂಗಸ್ವಾಮಿಗಳೂ ಮುರಿಗಿಸ್ವಾಮಿಗಳೂ ಜೊತೆಯಲ್ಲಿಯೇ ಆಗಲಿ ಹೈದರಾಬಾದ್ ನಗರಕ್ಕೆ ಹೋಗಿದ್ದರೆಂಬುದು ಸುತರಾಂ ಸರಿಯಲ್ಲ. ಮುರುಘ ವಿರಕ್ತ ಮಠದ ಸಾಹಿತ್ಯವೆಲ್ಲ ಕಟ್ಟುಕಥೆಯಾಯಿತೇ ಹೊರತು ಚರಿತ್ರೆಯ ಸುಭದ್ರ ಆಧಾರದ ಮೇಲೆ ನಿಂತಿಲ್ಲ. ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳ ಅನುಗ್ರಹ ಶಾಸನ ಒರೆಗಲ್ಲಿನಲ್ಲಿ ಬಣ್ಣ ಗಾಣುವುದಿಲ್ಲ ! ಅದು ಕುರುಡ ಕುರುಡನ ಕೈಹಿಡಿದು ನಡೆದಂತಾಗಿದೆ ! ಹೈದರಾಬಾದ್ ನವಾಬನ ಪಟ್ಟದ ಸತ್ತ ಆನೆಯನ್ನು ಬದುಕಿಸಿದುದೂ ಶಶವಿಷಾಣನ್ಯಾಯದಂತಿದೆ ! ಇದು ಕಟ್ಟುಕಥೆಯಾದರೂ ಒಂದು ಸುಖವಾಗಿದೆಯೇ ! ಅದೂ ಇಲ್ಲ ! ನಿರಂಜನವಂಶರತ್ನಾಕರ-ಆ ನವಾಬನ ಪಟ್ಟದ ಆನೆ ಸತ್ತುಹೋಗಿತ್ತೆಂದು ಹೇಳಿದರೆ, ಶ್ರೀ ಜಯದೇವ ಲೀಲೆ ಆ ಆನೆ ರೋಗಗ್ರಸ್ತವಾಗಿತ್ತೆಂದು ತಿಳಿಸುತ್ತದೆ. ಕಥೆಗೆ ಕಾಲಿಲ್ಲ ! 'ಗಜಕೇಸರಿ'-ಶ್ರೀ ಜಯದೇವಲೀಲೆಯ ಕಥಾಪಂಕದಲ್ಲಿ ಸಿಕ್ಕಿ ಬಿದ್ದಿದೆ ! ಇಲ್ಲಿ ಪಟ್ಟದ ಆನೆ ಎಂದು ಹೇಳಿರುವುದರಿಂದ ಆ ವಿರಕ್ತರೊಬ್ಬರಾಗಲಿ ಇಬ್ಬರಾಗಲಿ ಹೈದರಾಬಾದಿಗೆ ಹೋದ ಕಾಲದಲ್ಲಿ ಆ ರಾಜ್ಯ ಒಂದು ಸ್ವತಂತ್ರ ಸಂಸ್ಥಾನವಾಗಿತ್ತೆಂದು

ಅರ್ಥವಾಗುತ್ತದೆ. ಔರಂಗಜೇಬನ ಕಾಲವಲ್ಲಿ ಹೈದರಾಬಾದ್ ರಾಜ್ಯವಿರಲಿಲ್ಲ. ಆಗ ಬಾದಷಹನ ಪ್ರತಿನಿಧಿಯಾಗಿ ದಕ್ಷಿಣದಲ್ಲಿ ಸುಭೇದಾರನೊಬ್ಬನಿದ್ದಿ ಇರಬಹುದು! ಅವನು ದಖ್ಖ ಪ್ರಾಂತದ ಆಡಳಿತಾಧಿಕಾರಿಯಾಗಿದ್ದಿರಬಹುದು. ಅಂಥ ಅಧಿಕಾರಿಗೆ ಪಟ್ಟದ ಆನೆಯಿತ್ತೆಂಬುದು ಸರಿಯಲ್ಲ. ಅವನು ಆ ವಿರಕ್ತರಿಗೆ ಬಿರುದುಬಾವಲಿಗಳನ್ನು ಕೊಟ್ಟನೆಂಬುದೂ ಅಸಂಬದ್ಧ. ಅವನು ಮಠ ಮಾನ್ಯ ಗಳನ್ನು ಕೊಡಲಾರ! ಹೈದರಾಬಾದ್ ರಾಜ್ಯದ ನಿಜಾಮರು ಇತ್ತೀಚಿಗೆ ಕಾಲ ವಾದರು. ಅವರು ಆ ರಾಜ್ಯದ ೭ ನೆಯ ಪಟ್ಟಪ್ರಭು. ಅವರಿಗಿಂತ ಹಿಂದೆ ಆರು ಜನ ನಿಜಾಮರು ರಾಜ್ಯವಾಳಿದರು. ಆದ್ದರಿಂದ ಮೊದಲನೆಯ ನಿಜಾಮರು ೨೧೦ ವರ್ಷಗಳ ಹಿಂದೆ ಎಂದರೆ, ಕ್ರಿ. ಶ. ೧೭೪೭ ರಲ್ಲಿ ಪಟ್ಟಾಭಿಷಿಕ್ತರಾಗಿ ಬೇಕು. ಆ ವೇಳೆಗಾಗಲೇ ಔರಂಗಜೇಬ್ ಕಾಲವಾಗಿದ್ದನು. ನಿರಂಜನವಂ ರತ್ನಾಕರ ಆಕಾಶ ಪುರಾಣವಾಯಿತು; ಶ್ರೀ ಜಯದೇವ ಲೀಲೆ ಶಿಶುಗೀತೆ ಯಾಯಿತು; ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳ ಭಾಷಣ ಕುರುಡನು ಹೊಸೆ ಹಗ್ಗವಾಯಿತು!

ಶ್ರೀ ಜಯದೇವ ಲೀಲೆಯಲ್ಲಿ ಚಿತ್ರದುರ್ಗದ ಅರಸನಿಗೆ ಮಕ್ಕಳಿರಲಿಲ್ಲ; ಪಟ್ಟದಾನೆಯ ಸೊಂಡಿಲಲ್ಲಿ ಹೂಮಾಲೆಯನ್ನಿಟ್ಟು ಅದು ಆ ಮಾಲೆಯನ್ನು ಯಾರ ಕೊರಳಲ್ಲಿ ತೊಡರಿಸುವುದೋ ಅವರನ್ನೇ ಪಟ್ಟದೊಡೆಯರನ್ನು ಮಾಡು ವುದೆಂದು ಮಂತ್ರಿಗಳು ಡಂಗುರು ಹೊಡೆಯಿಸಿ ನಗರ ಮಧ್ಯದಲ್ಲಿ ಆನೆಯನ್ನು ನಡಸಿಕೊಂಡು ಬಂದರು; ಅದು ಮುರಘರಾಜೇಂದ್ರ ಸ್ವಾಮಿಗಳಿಂದ ಆಶೀರ್ವಾದ ಹೊಂದಿದ್ದ ದನ ಕಾಯುವ ಬಾಲಕನ ಕೊರಳಿಗೆ ಹೂಮಾಲೆಯನ್ನು ಹಾಕಿತು ಎಂದು ಹೇಳಿದೆ. ಈ ಪ್ರಸಂಗ ಮುರಘಸ್ವಾಮಿಗಳ ದಿವ್ಯ ಶಕ್ತಿಯನ್ನು ಸೂಚಿ ಸಲು ಕವಿ ಈ ಪುರಾಣದಲ್ಲಿ ಅಳವಡಿಸಿದ್ದಾನೆಂಬುದರಲ್ಲಿ ಸಂಶಯವಿಲ್ಲ. ಸರ್ಪ ಯೋಗ ಘಟನೆಯೇ ದಂತಕಥೆ ಎಂದಮೇಲೆ, ಆನೆ ತನ್ನ ಸೊಂಡಿಲಿಂದ ಹೂಮಾಲೆಯನ್ನು ದನ ಕಾಯುವ ಬಾಲಕನ ಕೊರಳಿಗೆ ಹಾಕುವುದೂ ಅಷ್ಟೇ ಕಟ್ಟುಕಥೆ! ಈ ಪ್ರಸಂಗ ಆ ವಿರಕ್ತ ಸ್ವಾಮಿಯ ಮಹಾತ್ಮ್ಯವನ್ನೇನೂ ಸ್ಥಾಪಿ ಸುವುದಿಲ್ಲ. ಮುಪ್ಪಿನ ಷಡಕ್ಷರಿ ಕವಿ ಕ್ರಿ.ಶ. ೧೫೦೦ ರಲ್ಲಿ ತಿರುಕನ ಕನಸು ಎಂಬ ಕಾವ್ಯಕಥೆಯನ್ನು ಬರೆದಿದ್ದಾನೆ. ಆ ಕಥಾಲಹರಿಯನ್ನೇ ಶ್ರೀ ಜಯದೇವಲೀಲೆ ಯಲ್ಲಿ ಹೊಂದಿಸಿ, ಮುರಿಗಿ ಮಠದ ದಿವ್ಯವನ್ನು ಮೆರೆಸಿದಂತಿದೆ!

ಕ್ರಿ. ಶ. ೧೬೫೦ ರಲ್ಲಿದ್ದ ಶಾಂತವೀರದೇಶಿಕನೆಂಬ ಕವಿಯು ತಂದೆ ಚಿನ್ನ ಬಸವೇಶ್ವರನೆಂಬುವನು ಕ್ರಿ.ಶ. ೧೬೧೭ ರಿಂದ ೧೬೩೭ ರ ವರೆಗೆ ಆಳಿದ ಮೈಸೂರು ಚಾಮರಾಜನ ಆಸ್ಥಾನದಲ್ಲಿ ರಾಮದೀಕ್ಷಿತನನ್ನು ವಾದದಲ್ಲಿ ಜಯಿಸಿದಂತೆ ಕವಿ ಚರಿತೆಯ ಎರಡನೆಯ ಭಾಗದಲ್ಲಿ ಹೇಳಿದೆ. ಈ ಸಂದರ್ಭವನ್ನೇ ಬಹುಶಃ ಶ್ರೀ ಜಯದೇವ ಲೀಲೆ ಇಮ್ಮಡಿ ಮುರಿಗಿಸ್ವಾಮಿಗಳಿಗೆ ಅನ್ವಯಿಸಿಕೊಂಡು (ಕ್ರಿ. ಶ. ೧೬೮೯) ಕಾವ್ಯಾರಾಮದಲ್ಲಿ ಲೀಲೆಯಾಡಿದಂತಿದೆ. ಇದು ಅಸಂಗತ. ಏಕೆಂದರೆ ಮುರಿಗಿಸ್ವಾಮಿಗಳು ಯಾವ ರಾಜನ ಆಸ್ಥಾನವನ್ನೂ ನೋಡಿದವರಲ್ಲ. ವಿರಕ್ತ ಮುರಿಗಿಯವರು ಹೈದರಾಬಾದ್‌ನಿಂದ ಚಿತ್ರದುರ್ಗ ಪ್ರಾಂತಕ್ಕೆ ಬಂದರೆಂದು ಶ್ರೀ ಜಯದೇವ ಲೀಲೆಯಲ್ಲಿ ಹೇಳಿದೆ. ದೆಹಲಿಗೆ ಹೋಗಿದ್ದ ಇಬ್ಬರು ವಿರಕ್ತರೂ ಹೈದರಾಬಾದ್‌ನಿಂದ ಸ್ವಾದೆ ಸೀಮೆಯಲ್ಲಿರುವ ಇಸಳೂರಿಗೆ ಬಂದರೆಂದು ನಿರಂಜನವಂಶರತ್ನಾಕರ ತಿಳಿಸುತ್ತದೆ. ಯಾವುದು ನಿಜ? ಯಾವುದು ಸುಳ್ಳು? ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳ ಅನುಗ್ರಹ ಭಾಷಣ ನಿರಂಜನವಂಶರತ್ನಾಕರವನ್ನೇ ಅನುಸರಿಸಿ, ಶ್ರೀ ಜಯದೇವ ಲೀಲೆಯನ್ನು ನಿರಾಕರಿಸುತ್ತದೆ. ಶ್ರೀ ಜಯದೇವ ಲೀಲೆ ತನ್ನ ಪರಂಪರೆಯ ಮಠವನ್ನು ಚಿತ್ರದುರ್ಗದಲ್ಲಿ ಸ್ಥಾಪಿಸಿಕೊಳ್ಳಲು ಅನುಕೂಲವಾಗುವಂತೆ ಮುರಿಗಿಸ್ವಾಮಿಗಳನ್ನು ಚಿತ್ರದುರ್ಗಕ್ಕೆ ಕರೆದುಕೊಂಡು ಬಂದು ಪಾಳೆಯಗಾರನ ಆಶ್ರಯವನ್ನು ಒದಗಿಸಿಕೊಟ್ಟಿದೆ. ಈ ಗ್ರಂಥಕ್ಕಿಂತಲೂ ಪ್ರಾಚೀನವಾದ ನಿರಂಜನವಂಶ ರತ್ನಾಕರ ಚಿತ್ರದುರ್ಗದ ವಿಷಯವನ್ನೇ ಪ್ರಸ್ತಾಪಿಸುವುದಿಲ್ಲ. ಇಸಳೂರಲ್ಲಿ ನೋಡಾ ಸಿದ್ಧಲಿಂಗಸ್ವಾಮಿಗಳು ತಮ್ಮ ಅವಸಾನ ಕಾಲದಲ್ಲಿ "ಆ ಊರಲ್ಲಿ ಇರುವ ಭಕ್ತ ಗಣಂಗಳು ಹಾಗು ಆ ಸೀಮೆ ಸೋದೆ ರಾಜರು ಮುಂತಾದ ಆ ಸೀಮೆ ದೇವ ಕ್ಷೇತ್ರುಗಳನ್ನು ಕರೆತರಿಸಿ ಮುರಿಗಾಸ್ವಾಮಿಗಳವರ ಮುಂತಿಟ್ಟುಕೊಂಡು ಅವರಿಗೆ ಅಪ್ಪಣೆ ಕೊಟ್ಟಿದ್ದೇನೆಂದರೆ......(ಪುಟ ೭೫) "ಇನ್ನು ಮೇಲೆ ಎಲ್ಲ ಭಾರವು ಈ ಇಮ್ಮಡಿ ಮುರಿಗಾರಾಜೇಂದ್ರ ಸ್ವಾಮಿಗಳವರನ್ನೇ ಕೂಡಿದೆ. ನಮಗೆ ಶಾಂಬನ ಅಪ್ಪಣೆ ಆದ್ದರಿಂದ ಇವೊತ್ತಿಗೆ ಎಂಟು ದಿವಸದಲ್ಲಿ ಸೋಮವಾರ ಉದಯದಲ್ಲಿ ಕೈಲಾಸವಾಸಿಗಳಾಗುವೆವೆಂದು ಅಪ್ಪಣೆಯನ್ನು ಕೊಟ್ಟು........ (ಪುಟ ೭೭)........ತಮ್ಮ ಶಿವಾನುಭವ ಚರಂತಿಗೆ ಪಟ್ಟವನ್ನು ಶ್ರೀ ವಾಙ್ಮಯದ ಕುಮಾರದೇಶಿಕೇಂದ್ರ ಸ್ವಾಮಿಗಳವರಿಗೆ ಮಾಡಿ ಅದೇ ಗ್ರಾಮದಲ್ಲಿ ನಿರ್ವಯ

ಲಾದರು. 'ಇವರ ತೋರ ಗದ್ದುಗೆ ಇಸಳೂರಲ್ಲಿ ಇರುತ್ತದೆ.' ಎಂದು ನಿರಂಜನ ವಂಶರತ್ನಾಕರದಲ್ಲಿ ಉಕ್ತವಾಗಿದೆ. ಈ ಅಂಶಗಳನ್ನು ಗಮನಿಸಿದರೆ ಮುರಿಗಾ ಸ್ವಾಮಿಗಳಿಗೆ ಶೂನ್ಯ ಪಟ್ಟ ದೆಹಲಿಯಲ್ಲಿ ಆಯಿತಾದರೂ ಅವರು ಇಸಳೂರಲ್ಲಿಯೇ ನಿಂತರೆಂದು ಅರ್ಥವಾಗುತ್ತದೆ. ಚಿತ್ರದುರ್ಗದಲ್ಲಿ ಅವರು ಮಠ ಕಟ್ಟಿಸಲು ಕಾರಣವೇನು ? ಚಿತ್ರದುರ್ಗದ ಪಾಳೆಯಗಾರನ ಆಶ್ರಯದಲ್ಲಿ ನಿಲ್ಲಲು ಕಾರಣವೇನು ? ಅವರು ಇಸಳೂರು ಮಠದಿಂದ ಬಂದು ಚಿತ್ರದುರ್ಗದಲ್ಲಿ ಶಿಖಾಪಟ್ಟದ ವಿರಕ್ತ ಪರಂಪರೆಯನ್ನು ಬೆಳೆಸಿರಬಹುದೇ? ಹಾಗಾದರೆ, ಇದು ಹೊಸ ಮಠವೇ ಆಯಿತು. ಅವರು ಇಸಳೂರನ್ನು ತ್ಯಜಿಸಲು ಪ್ರಬಲವಾದ ಕಾರಣಗಳಿರಬೇಕು. ಚಿತ್ರದುರ್ಗದ ಮಠವನ್ನು ಇಸಳೂರು ಮಠವೆಂದು ಅವರು ಕರೆಯಲಿಲ್ಲ.

ನೋಡಾ ಸಿದ್ಧಲಿಂಗಸ್ವಾಮಿಗಳ ತರುವಾಯ ಮುರಘಾಸ್ವಾಮಿ ಕಾರಣ ಗುರುವಾಗಿಯೂ ವಾಚ್ಯದ ಕುಮಾರಸ್ವಾಮಿಗಳು ಕಾರ್ಯಗುರುವಾಗಿಯೂ ಇದ್ದರೆಂದು ತಿಳಿಸಿ, ನಿರಂಜನವಂಶರತ್ನಾಕರ ಇದ್ದಕ್ಕಿದ್ದಂತೆಯೇ ನಿಂತುಬಿಟ್ಟಿದೆ. ಮುಂದೆ ನಿರಂಜನವಂಶ ಗತಿಯನ್ನು ತಿಳಿಯಲು ಚಿತ್ರದುರ್ಗದ ಮುರಘ ವಿರಕ್ತ ಮಠದ ಪಟ್ಟವಲ್ಲರಿಯನ್ನು ಅವಲಂಬಿಸಬೇಕಾಗಿದೆ. ಈ ಪಟ್ಟವಲ್ಲರಿಯನ್ನು ಅನುಸರಿಸಿಯೇ ಶ್ರೀ ಜಯದೇವಲೀಲೆ ರೂಪುಗೊಂಡಿದೆಯೆಂಬುದರಲ್ಲಿ ಅನು ಮಾನವಿಲ್ಲ. ಮುಂದಿನ ಕಥೆಯನ್ನು ತೆರೆಯಮೇಲೆ ನೋಡೋಣ ! ಶ್ರೀ ಜಯದೇವಲೀಲೆಯಲ್ಲಿ "ಶ್ರೀ ಮುರುಗೇಂದ್ರರು ಹೈದರಾಬಾದಿನ ಬಾದಷಹರ ಪಟ್ಟದಾನೆಯ ರೋಗವನ್ನು ಕಳೆದು ಅವರಿಂದ ಬಹು ವಿಧವಾದ ಸೇವೆಯನ್ನು ಕೈಕೊಂಡವರಾದರು. ಮಹಾಸ್ವಾಮಿಗಳವರು ಕನ್ನಡ ಭೂಮಿಗೆ ಬಂದ ವಾರ್ತೆಯನ್ನು .ಕೇಳಿ ಚಿತ್ರದುರ್ಗದ ನಾಯಕನು ಅವರ ಸನ್ನಿಧಿಗೆ ಧಾವಿಸಿ ದನು. ಹಾಗೂ ಅವರನ್ನು ಪಾಲಿಕೆಯಲ್ಲಿ ತನ್ನ ರಾಜಧಾನಿಗೆ ಕರೆದು ತಂದನು. ರಾಜ್ಯವನ್ನೆಲ್ಲವನ್ನೂ ಅವರ ಶ್ರೀಪಾದಕ್ಕೆ ಅರ್ಪಿಸಿ ಅವರ ಅಪ್ಪಣೆ ಯಲ್ಲಿ ರಾಜ್ಯಭಾರವನ್ನು ನಡೆಯಿಸತೊಡಗಿದನು." ಎಂದು ಮುಂದಿನ ಕಥಾ ಸೂಚನೆಯಿದೆ. ಮುರಘಾಸ್ವಾಮಿಗಳು ಇಸಳೂರಿಗೆ ಹೋದರೆಂಬ ವಿಚಾರವನ್ನೇ ಶ್ರೀ ಜಯದೇವ ಲೀಲೆ ತಿಳಿಸುವುದಿಲ್ಲ. ಹೈದರಾಬಾದಿನಿಂದ ಮುರಘಾಸ್ವಾಮಿ ಗಳು ಕನ್ನಡ ನಾಡಿನ ಗಡಿಯನ್ನು ಎಲ್ಲಿ ಪ್ರವೇಶಿಸಿದರೆಂಬುದನ್ನು ನಿರ್ಧರವಾಗಿ ಹೇಳಿಲ್ಲ. ಬಹುಶಃ ಪಾಳೆಯಗಾರನು ಅವರನ್ನು ತನ್ನ ರಾಜ್ಯದ ಗಡಿಯಲ್ಲಿ

ಏಪಟುಗೊಂಡಿರಬೇಕು. ಆಗ ಚಿತ್ರದುರ್ಗದ ರಾಜ್ಯದ ಉತ್ತರದ ಗಡಿಯಲ್ಲಿ ಗುಡಿಕೋಟೆ ಪಾಳೆಯಗಾರರೂ, ರಾಯದುರ್ಗದ ಪಾಳೆಯಗಾರರೂ ಭರಮಪ್ಪ ನಾಯಕನಿಗೆ ಪ್ರಬಲ ವೈರಿಗಳಾಗಿದ್ದರು. ಆದ್ದರಿಂದ ಪಾಳೆಯಗಾರನು ಮುರಘಾ ಸ್ವಾಮಿಗಳನ್ನು ಬಹುಶಃ ಈಗಿನ ಚಳ್ಳಕೆರೆಯ ಸಮೀಪದಲ್ಲಿ ಸ್ವಾಗತಿಸಿರಬಹುದು. ಇವರ ಅನುಗ್ರಹದಿಂದ ರಾಜ್ಯಲಾಭವಾಯಿತೆಂದು ಪಾಳೆಯಗಾರನು ತನ್ನ ರಾಜ್ಯವನ್ನೆಲ್ಲ ಸ್ವಾಮಿಗಳಿಗೆ ಅರ್ಪಿಸಿದನಂತೆ ! 'ಕುಳಿತ ಪಟ್ಟ ನಮ್ಮದು ನಿಂತ ಪಟ್ಟ ನಿನ್ನದು' ಎಂದು ಸ್ವಾಮಿಗಳು ಆಶೀರ್ವದಿಸಿ, ರಾಜ್ಯವನ್ನು ನಾಯಕನಿಗೇ ಒಪ್ಪಿಸಿದರಂತೆ! ಇದು ಕೇವಲ ಔಪಚಾರಿಕವಾಗಿರಬೇಕು! ಏಕೆಂದರೆ, ಪಾಳೆಯ ಗಾರನ ರಾಜ್ಯ ಒಂದು ದಿನ ಇದ್ದಷ್ಟು ಇನ್ನೊಂದು ದಿನ ಇರುತ್ತಿರಲಿಲ್ಲ ! ಕೆಲವು ದಿನ ವಿಸ್ತಾರವಾಗಬಹುದು; ಮತ್ತೆ ಕೆಲವು ದಿನ ತೀರಾ ಕಡಿಮೆಯಾಗಬಹುದು! ಹೆಚ್ಚಾದಾಗ ಪುನಃ ಒಪ್ಪಿಸಬೇಕಾದೀತು ! ಕಡಿಮೆಯಾದಾಗ ಪುನಃ ಕಡಮೆ ಮಾಡಬೇಕಾದೀತು ! ಇಂಥ ಅನಿಶ್ಚಿತ ರಾಜ್ಯವನ್ನು ನೀಡಿದ ಪಾಳೆಯಗಾರನು ಜಾಣನಲ್ಲ ! ಅವನ್ನು ಪರಿಗ್ರಹಿಸಿದ ವಿರಕ್ತರೂ ತೃಪ್ತರಲ್ಲ ! ಆದರಿಂದಲೇ ಇವರು ಆ ರಾಜ್ಯವನ್ನು ಸ್ವೀಕರಿಸಲಿಲ್ಲವೇನೋ ! ಭರಮಪ್ಪನಾಯಕನ ಆಳಿಕೆ ಮುಗಿದಮೇಲೆ, ಹಿರಿಯ ಮದಕರಿನಾಯಕ ಮುರಗೀಸ್ವಾಮಿಗಳ ಅನುಗ್ರಹ ದಿಂದ ದೂರವಾದನು. ಅವನು ಶೃಂಗೇರಿ ಸ್ವಾಮಿಗಳ ಪರಮ ಭಕ್ತನಾದನು. ಹಿಂದಿನಿಂದಲೂ ಶೃಂಗೇರಿ ಜಗದ್ಗುರುಗಳೇ ಪಾಳೆಯಗಾರರ ರಾಜಗುರುಗಳಾಗಿ ದ್ದರು. ಚರಿತ್ರೆ ಇದನ್ನು ದೃಢಪಡಿಸುತ್ತದೆ. "ಶ್ರೀ ಮುರಘರಾಜೇಂದ್ರ ಸ್ವಾಮಿ ಗಳ ಶಾಪದ ಫಲವಾಗಿಯೂ ಜನರು ಮಾಡಿದ ದ್ರೋಹದಿಂದಲೂ, ಪಿತೂರಿ ಯಿಂದಲೂ ಚಿತ್ರದುರ್ಗ ಸಂಸ್ಥಾನವು ಹೈದರಾಲಿಯ ವಶವಾಯಿತೇ ವಿನಾ ನವಾಬನ ಪರಾಕ್ರಮದಿಂದಾಗಲಿ ಮದಕರಿನಾಯಕನ ಹೇಡಿತನದಿಂದಾಗಲಿ ಖಂಡಿತವಾಗಿಯೂ ಅಲ್ಲವೆಂದು ಸ್ಪಷ್ಟವಾಗಿ ಕಂಡುಬರುತ್ತದೆ" ಎಂದು "ಗಜ ಕೇಸರಿ" ಪುಸ್ತಕದ ೧೭ ನೆಯ ಪುಟದಲ್ಲಿ ಹೇಳಿದೆ. ಇದರ ಮಥಿತಾರ್ಥವೇ ನೆಂದರೆ, ಮುರಘಾಸ್ವಾಮಿಗಳು ಚಿತ್ರದುರ್ಗದ ನಾಯಕರಲ್ಲಿ ವಿದ್ವೇಷ ಮನೋ ಭಾವದಿಂದ ವರ್ತಿಸಿದರೆಂದು ವ್ಯಕ್ತವಾಗುತ್ತದೆ. ಅವರಲ್ಲಿ ಗುರುಶಿಷ್ಯ ಸಂಬಂಧ ವಿರಲಿಲ್ಲ. ಆ ಪರಿಚಯ ಸಂಬಂಧ ಭರಮಪ್ಪನಾಯಕನ ಆಳಿಕೆಯಲ್ಲಿಯೇ ಮುರಿದುಬಿತ್ತೆಂದು ಸ್ಪಷ್ಟವಾಗಿ ಹೇಳಬಹುದು.

"ಗಜಕೇಸರಿ"ಯಲ್ಲಿ ಹೇಳಿರುವಂತೆ ಮೇಲುದುರ್ಗದಲ್ಲಿ ಮುರಿಗೀಸ್ವಾಮಿಗಳಿಗಾಗಿ ಮಠವೊಂದು ಮೊದಲೇ ನಿರ್ಮಾಣವಾಗಿತ್ತು.:(ಪುಟ ೧೫೮). ಹಾಗೆ ಮಠ ಕಟ್ಟಿಸಿರಬೇಕೆಂದು ಮುರಿಗೀಸ್ವಾಮಿಗಳೇನೂ ಪಾಳೆಯಗಾರನಿಗೆ ಹೇಳಿರಲಿಲ್ಲ. (ಪುಟ ೧೧೫) ಎಂದಮೇಲೆ, ಮೇಲುದುರ್ಗದ ಮಠ ಮುರಿಗೀಸ್ವಾಮಿಗಳಿಗಾಗಿಯೇ ನಿರ್ಮಾಣವಾಯಿತೆಂದು ಹೇಳುವುದು ಸರಿಯಲ್ಲ. ಪಾಳೆಯಗಾರನು ಊರ ಹೊರಗಿನ ಮರಡಿಯಮೇಲೆ ಒಂದು ಶಿಲಾ ಮಠವನ್ನು ಕಟ್ಟಿಸಿಕೊಟ್ಟನೆಂದು ಶ್ರೀಮದನಾದಿ ಅಲ್ಲಮ ಪ್ರಭು-ಗ್ರಂಥದಲ್ಲಿ ಹೇಳಿದೆ. (ಪುಟ ೧೬೫) ಇದು ಮೇಲುದುರ್ಗದ ಮಠವಲ್ಲ. ಇತ್ತೀಚೆಗೆ ಪ್ರಕಟವಾದ "ಶ್ರೀ ಜಗದ್ಗುರು ಜಯದೇವ ದಿಗ್ವಿಜಯ" ಎಂಬ ಪುಸ್ತಕದಲ್ಲಿಯೂ ಈ ವಿಷಯವನ್ನು ಯುಕ್ತ ರೀತಿಯಲ್ಲಿ ಪರಿಶೀಲಿಸಿಲ್ಲ. ಶ್ರೀ ಜಯದೇವಲೀಲೆ ಯಾವ ಸಂಶಯಕ್ಕೂ ಎಡೆಯಿಲ್ಲದಂತೆ ''ಚಿನ್ಮೂಲಶೈಲದ । ಬಳಿಯೊಳೆಸೆಯುವ ಪರಮ ಪುಣ್ಯ। ಸ್ಥಲದೆ ಮುನ್ನೂರಿಂದೆ ಮೇಲರುವತ್ತರಂಕಣದೆ ॥'' ಎಂದೂ,

''ಕಂಗೊಳಿಸುವಭಿನವ ಬೃಹನ್ಮಠ
ಮಂಗುರೂತ್ತಮಗಾಗಿ ಕಟ್ಟಿಪ
ಲಿಂಗಭವಹರನಾ ಮುರಿಗಿ ಶಿವಯೋಗಿಯಾ ಮಠದೊಳ್''

ಎಂದೂ, ಆ ಮಠ ಚಿನ್ಮೂಲಾದ್ರಿಯ ಬಳಿಯಲ್ಲಿ ನಿರ್ಮಿತವಾಯಿತೆಂದೂ ಮುರಘಾಸ್ವಾಮಿಗಳು ಆ ಮಠದಲ್ಲಿ ನೆಲಸಿದರೆಂದೂ, ಅದು ೩೬೦ ಅಂಕಣಗಳಷ್ಟು ವಿಸ್ತಾರವಾದ ಮಠವೆಂದೂ ಅನುಮಾನವಿಲ್ಲದಂತೆ ಘೋಷಿಸುತ್ತಿದೆ. ಮೇಲುದುರ್ಗದ ಮಠವೂ ಮುರಿಗಿಯವರದೆಂದು ಶ್ರೀ ಜಯದೇವಲೀಲೆಯಲ್ಲಿ ಹೇಳಿಲ್ಲ. ಚಿತ್ರದುರ್ಗದ ಇತಿಹಾಸದ ಹಿನ್ನೆಲೆಯಲ್ಲಿ ಶ್ರೀ ತ. ರಾ. ಸು. ಅವರು ಬರೆದಿರುವ ಕಾದಂಬರಿಗಳಲ್ಲಿಯೂ ಮುರಿಗಿ ಮಠದ ವಿಚಾರಗಳ ತೂಕ, ಬಣ್ಣ, ಬೆಲೆ ಸರಿಯಾಗಿ ಬಂದಿಲ್ಲ; ಅವು ನಿಖರವಾಗಿಲ್ಲ.

ಮುರಘಾಸ್ವಾಮಿಗಳೂ ನೋಡಾ ಸಿದ್ಧಲಿಂಗಸ್ವಾಮಿಗಳೂ ಇಸಳೂರಿನಲ್ಲಿಯೇ ನೆಲಸಿದರೆಂಬುದೂ ಅವರು ನೇರವಾಗಿ ಚಿತ್ರದುರ್ಗಕ್ಕೆ ಬರಲಿಲ್ಲವೆಂಬುದೂ ನಿರಂಜನವಂಶರತ್ನಾಕರದ ಅಭಿಪ್ರಾಯ. ಇದೇ ಅಭಿಪ್ರಾಯವನ್ನೇ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಅವರ ಆಶ್ರಮಸ್ವೀಕಾರ ಭಾಷಣದಲ್ಲಿ ಸೂಚಿ

ಸುತ್ತಾರೆ. ಹಾಗಾದರೆ, ಅವರು ಇಸಳೂರಿನಿಂದ ಚಿತ್ರದುರ್ಗಕ್ಕೆ ಬರಬೇಕಾ ದ್ದಕ್ಕೆ ಏನೋ ಮಹತ್ತರವಾದ ಕಾರಣವಿರಬೇಕು. ಮುರಘಾಸ್ವಾಮಿಗಳು ಬ್ಬರೇ ದೆಹಲಿಗೆ ಹೋಗಿಬಂದರೆಂದು ಶ್ರೀ ಜಯದೇವಲೀಲೆಯಲ್ಲಿ ಹೇಳಿರುವುದ ಂದ ಅವರಿಗೆ ಬಾದಷಹನ ದರ್ಬಾರಿನಲ್ಲಿಯೇ ವಿರಕ್ತಾಶ್ರಮ ಸ್ವೀಕಾರವಾಯಿ ತೆಂಬುದನ್ನಾಗಲಿ, ಶಿವಭಕ್ತ ಮುಡಿಮಲ್ಲಪ್ಪನ ಸಹಕಾರ ಲಭಿಸಿತೆಂಬುದನ್ನಾಗಲಿ ಅದು ಹೇಳಿಲ್ಲ. ಆದ್ದರಿಂದ ದೆಹಲಿಯಲ್ಲಿ ಅವರಿಗೆ ವಿರಕ್ತಾಶ್ರಮ ದೀಕ್ಷೆಯಾಗ ಲಿಲ್ಲವೆಂಬುದನ್ನು ಶ್ರೀ ಜಯದೇವಲೀಲೆ ಸಮರ್ಥಿಸುತ್ತದೆ. *ಕ್ರಿ. ಶ. ೧೬೫೦ ರ ಸುಮಾರಿನಲ್ಲಿ ಕಟ್ಟಿಗೆಹಳ್ಳಿ ಸ್ವಾಮಿಗಳ ಶಿಷ್ಯವೃಂದದಲ್ಲಿದ್ದ ಇಮ್ಮಡಿ ಮುರಘಾ ಸ್ವಾಮಿ ಎಂಬುವರಿಗೆ ಶಿವಾನುಭವ ಚರಂತಿಕೆಯ ಪಟ್ಟವನ್ನು ಕೊಡಬೇಕೆಂದು ನಿಶ್ಚಯಿಸಿದ್ದರು. ಆ ಶಿಷ್ಯ ಶೀಘ್ರಕೋಪಿಯಾಗಿದ್ದುದರಿಂದ ಅವನನ್ನು ಪಟ್ಟಕ್ಕೆ ತರಬಾರದೆಂದು ಆಲೋಚಿಸಿ, ದೆಹಲಿ ಬಾದಷಹನಿಂದ ಶಿಖಾಶೈಲ ಶೂನ್ಯ ಸಿಂಹಾಸನಗಳನ್ನು ತರಲು ಆ ಶಿಷ್ಯನನ್ನು ಕಳಿಸಿದರು. ಅವರು ದೆಹಲಿಯತ್ತ ಹೋದಮೇಲೆ, ಕಟ್ಟಿಗೆಹಳ್ಳಿ ಸ್ವಾಮಿಗಳು ಮಹಾಂತಸ್ವಾಮಿ ಎಂಬ ಇನ್ನೊಬ್ಬ ಶಿಷ್ಯನಿಗೆ ಶಿವಾನುಭವ ಚರಪಟ್ಟವನ್ನು ಅನುಗ್ರಹಿಸಿದರು. ಅನಂತರ ಅವರು ಮಹಾಂತಸ್ವಾಮಿಯೊಂದಿಗೆ ಹೊರಟು, ಹೂವಿನ ಹಡಗಲಿ ಹತ್ತಿರ ಹಗರೀ ನದಿಯ ತೀರಪ್ರದೇಶದ ಅರಣ್ಯದಲ್ಲಿ ತಪೋನುಷ್ಠಾನಪರರಾದರು. ಶಿಷ್ಯ ಮುರಘಾಸ್ವಾಮಿ ದೆಹಲಿಯಿಂದ ಹಿಂದಿರುಗಿ ಸ್ವಾದಿ ರಾಜ್ಯದ ಇಸಳೂರಿಗೆ ಬಂದಾಗ ಅವನಿಗೆ ತಮ್ಮ ಗುರುಗಳ ವಿಚಾರ ಗೊತ್ತಾಗಲಿಲ್ಲ. ಆಗ ಅವನಿಗೆ ಚರಂತಿಕೆಯ ಪಟ್ಟವಾಗಿರಲಿಲ್ಲವಾದ್ದರಿಂದ, ಅವನು ತನ್ನ ಗುರುವನ್ನು ಅರಸುತ್ತ ದೇಶಮಧ್ಯದಲ್ಲಿ ಸಂಚರಿಸಿದನು. ಹಿಂದೆ, ಅವನು ದೆಹಲಿಗೆ ಹೋಗುವ ದಾರಿಯಲ್ಲಿ ಚಿತ್ರದುರ್ಗದ ಪಾಳೆಯಗಾರನಿಗೆ ಒದಗಿದ್ದ ಸರ್ಪಯೋಗ ಘಟನೆ ಯನ್ನು ನೆನೆದು, ಆ ವೇಳೆಗೆ ಪಾಳೆಯಗಾರನಾಗಿದ್ದ ಭರಮಪ್ಪನಾಯಕನ ಆಶ್ರಯವನ್ನು ಕೋರಿ ಅಲ್ಲಿಗೆ ಬಂದು ನೆಲಸಿದನೆಂದು ಹೇಳಬಹುದು. ಮುರಘಾ ಸ್ವಾಮಿಗಳಿಗೆ ಚಿತ್ರದುರ್ಗದಲ್ಲಿ ಆಶ್ರಯವನ್ನು ಕಲ್ಪಿಸಬೇಕೆಂಬ ಉದ್ದೇಶದಿಂದಲೇ 'ರಂಜನವಂಶರತ್ನಾಕರ' ಈ ಮೊದಲೇ ಸರ್ಪಯೋಗ ಘಟನೆಯನ್ನು ಚಿತ್ರಿಸಿ

* ಶ್ರೀ ಬುದ್ಧಯ್ಯ ಮಗೆಯ್ಯಸ್ವಾಮಿ, ಪುರಾಣೀಕರು ಬರೆದಿರುವ "ಶ್ರೀಮಬನಾದಿ ಅಲ್ಲಮಪ್ರಭು" ಎಂಬ ಗ್ರಂಥದಿಂದ ಸಂಗ್ರಹಿಸಿದೆ. (ಪುಟ ೧೨೩-೧೨೬)

ಚಾರಿತ್ರಿಕ ಹಿನ್ನೆಲೆಯಲ್ಲಿ ಪಾಳೆಯಗಾರನಿಗೆ ಮುರಿಗೀಸ್ವಾಮಿಗಳಿಂದ ಆಶೀರ್ವಾದ ಮಾಡಿಸಿದೆಯೆಂಬುದನ್ನು ಮನಗಾಣಬಹುದು. ಅವರಿಗಿನ್ನೂ ಶಾಸ್ತ್ರೋಕ್ತವಾಗಿ ಚರಂತಿಕೆಯ ಪಟ್ಟವಾಗಿರಲಿಲ್ಲವಾದ್ದರಿಂದ, ಅವರು ಪಾಳೆಯಗಾರನ ಸಹಾಯದಿಂದ ತಮ್ಮ ಗುರುವಿನ ನೆಲೆಯನ್ನು ತಿಳಿದು, ತಾವೇ ಅಲ್ಲಿಗೆ ಹೋಗಿ, ರಾತ್ರಿ ರಾತ್ರಿಯೇ ಆ ಗುರು ಮಲ್ಲಗಿದ್ದ ಮಂಚವನ್ನೇ ಆಳುಗಳಿಂದ ಎತ್ತಿಸಿಕೊಂಡು ಬೆಳಗಾಗುವುದರೊಳಗಾಗಿ ಹಾನಗಲ್ಲು ಪ್ರಾಂತದ ತಿಳುವಳ್ಳಿಗೆ ಬಂದರು. ಇದರಿಂದ ಗುರುಗಳ ಅನುಗ್ರಹ ಲಭಿಸಲಿಲ್ಲ; ಅವರ ಆಗ್ರಹ ಲಭಿಸಿತು. ಮುರಘಾ ಸ್ವಾಮಿಯ ಘಾತುಕತನ ಗುರುವಿಗೆ ಸಮ್ಮತವಾಗಲಿಲ್ಲ. ಶಿಷ್ಯನ ಪ್ರಾರ್ಥನೆಯೆಲ್ಲವು ವ್ಯರ್ಥವಾಯಿತು. ಅವರೆಗಾಗಲೆ, ಶಿವಾನುಭವ ಚರಂತಿಕೆಯ ಪಟ್ಟವನ್ನು ಇನ್ನೊಬ್ಬ ಶಿಷ್ಯ ಮಹಾಂತಸ್ವಾಮಿಗೆ ಕೊಟ್ಟಿದ್ದುದರಿಂದ, ಗುರುಗಳು ಪುನಃ ಚರಂತಿಕೆಯ ಪಟ್ಟವನ್ನು ಶಿಷ್ಯ ಮುರಘಾಸ್ವಾಮಿಗೆ ಕೊಡಲು ನಿರಾಕರಿಸಿದರು. ಆಗ ಮುರಘಾಸ್ವಾಮಿ ಸಿಟ್ಟಿನಿಂದ ಗುರುಗಳನ್ನು ಧಿಃಕರಿಸಿ ತಿಳುವಳ್ಳಿಯಿಂದ ಹೊರಟುಬಂದು ಚಿತ್ರದುರ್ಗದಲ್ಲಿ ಪಾಳೆಯಗಾರನ ಆಶ್ರಯದಲ್ಲಿ ನಿಂತರು. ಅನಂತರ ಅವನು ತಾವೇ ಮುಖ್ಯ ಗುರುವೆಂದು ಘೋಷಿಸಿಕೊಂಡನು. ಶ್ರೀ ಜಯದೇವಲೀಲೆಯಂತೆ ಮುರಿಗೀಸ್ವಾಮಿಗಳೊಬ್ಬರೇ ದೆಹಲಿಗೆ ಹೋಗಿದ್ದರೆ, ಅವರಿಗೆ ದೆಹಲಿಯಲ್ಲಿ ಶಿಖಾಪಟ್ಟವಾಯಿತೆಂಬ ಅಂಶ ನಿಜವಲ್ಲ; ಅವರು ನೋಡಾ ಸಿದ್ಧಲಿಂಗಸ್ವಾಮಿಗಳ ಜೊತೆಯಲ್ಲಿ ಹೋಗಿದ್ದರೆಂದು ನಿರಂಜನ ವಂಶರತ್ನಾಕರದಲ್ಲಿ ಹೇಳಿರುವುದನ್ನು ನಂಬಿದರೆ, ಮುರಿಗೀಸ್ವಾಮಿಗಳು ಪುನಃ ಕಟ್ಟಿಗೆಹಳ್ಳಿ ಸ್ವಾಮಿಗಳಿಂದ ಚರಂತಿಕೆಯ ಪಟ್ಟವನ್ನು ಪಡೆಯಲು ಪ್ರಯತ್ನ ಪಡಬೇಕಾಗಿರಲಿಲ್ಲ. ಮುರಘಾಸ್ವಾಮಿಗಳು ದೆಹಲಿಗೆ ಹೋದ ಪ್ರಸಂಗವೇ ಕಲ್ಪನೆಯೆಂದಮೇಲೆ ಅವರಿಗೆ ಅಲ್ಲಿ ಮುಸಲ್ಮಾನರ ವಾತಾವರಣದಲ್ಲಿ ಶಿಖಾ ಪಟ್ಟವಾಯಿತೆಂಬುದು ಸಮಂಜಸವಲ್ಲ. ಇಸಳೂರಿನಲ್ಲಿ ಆಗ ಇವರಿಗೆ ಅನುಕೂಲ ಸನ್ನಿವೇಶವಿರಲಿಲ್ಲವಾದ್ದರಿಂದ, ದೆಹಲಿಯಲ್ಲಿಯೇ ಅವರಿಗೆ ಆಶ್ರಮದಾನವಾಯಿತೆಂದು 'ನಿರಂಜನವಂಶರತ್ನಾಕರ' ಕಥೆ ಕಟ್ಟಿದೆ. ಗುರುವಿನ ಅನುಗ್ರಹವನ್ನೇ ಪಡೆಯದ ಮುರಘಾಸ್ವಾಮಿ ಧಾರ್ಷ್ಟ್ಯದಿಂದ ಬಂದು ಚಿತ್ರದುರ್ಗದಲ್ಲಿ ನಿಂತರೂ, ಕೊನೆಗೆ ಆ ಪಾಳೆಯಗಾರನಲ್ಲಿಯೂ ದ್ವೇಷ ಕಟ್ಟಿಕೊಂಡರೆಂಬುದು ಸ್ಪಷ್ಟವಾಗಿದೆ. ಸಮಾಜವಂತೂ ಅವರನ್ನು ಚಿತ್ರದುರ್ಗಕ್ಕೆ ಬಿಜಯಮಾಡಿಸಿಕೊಂಡು ಬರಲಿಲ್ಲ;

ಸಿದ ಮುರುಘಾ ಸಮಯ ಸಂಸ್ಥಾಪಕರಾದರು. ಇದು ಪ್ರಾಚೀನ ಪರಂಪರೆಯ ಶೂನ್ಯ ಸಿಂಹಾಸನ ಮಠವಲ್ಲವೆಂದು ವ್ಯಕ್ತವಾಗುತ್ತದೆ. ಮುರುಘಾಸ್ವಾಮಿಗಳು ಪಾಳೆಯಗಾರರ ಆಶ್ರಯದಿಂದ ಶಿಲಾಮಠವನ್ನು ಕಟ್ಟಿಸಿಕೊಂಡು, ಆ ಪಾಳೆಯ ಪಟ್ಟು ಹಾಳಾದಮೇಲೆ, ಅದನ್ನು ಸಮಾಜದ ನಿರಾಧಾರಿ ಪೀಠವೆಂದು ಸ್ಥಾಪಿಸಿ ಕೊಳ್ಳಲು ತುಂಬ ಸಾಹಸ ಮಾಡಿದಂತೆ ವಿದಿತವಾಗುತ್ತದೆ. ಇದು ಕ್ರಮೇಣ ಎಲ್ಲ ವಿರಕ್ತ ಮಠಗಳಿಗೂ ಪ್ರಧಾನ ಮಠವೆಂದು ಹೇಳಿಕೊಂಡಂತಿದೆ. ಈ ಮಠ ಕ್ಕಿಂತಲೂ ನೂರಾರು ವರ್ಷಗಳ ಹಿಂದೆಯೇ ಸ್ಥಾಪಿತವಾದ ಅನೇಕ ಜಂಗಮ ಮಠಗಳಿಗಿಂತಲೂ ತಾನು ಹಿರಿಯದೆಂದು ಹೇಳಿಕೊಳ್ಳಲು ಕಾರಣವೇನೋ ತಿಳಿ ಯದು. ಮೂಲತಃ ಈ ಮಠ ವೀರಶೈವ ಸಮಾಜದ ಧಾರ್ಮಿಕ ಮಠವಾಗಿ ಸ್ಥಾಪನೆಯಾಗಲಿಲ್ಲ. ರಾಜಾಶ್ರಯ ತಪ್ಪಿದಮೇಲೆ ಈ ಮಠ ಸಮಾಜದತ್ತ ದೃಷ್ಟಿ ಹರಿಸಿತು !



## ತರಂಗ ೧೨.



### ನಿರಂಜನ; ಜಗದ್ಗುರು

"ಬಿದಿರಿನೋರೆಯನೊಂದು ಮೂಸಿನೋಡಿ, ಮತ್ತೊಬ್ಬ ಹೊತ್ತಿಂಗೆ ಕಚ್ಚಿಯಾಡಿ ಹೋದಂತಾಯಿತ್ತು ನೋಡಿರೇ ಕಲಿಯುಗದೊಳಗಣ ಮೇಳಾಪವ । ಗುರು ವೆಂಬಾತ ಶಿಷ್ಯನಂತುವನರಿಯ, ಶಿಷ್ಯನೆಂಬಾತ ಗುರುವಿನಂತುವನರಿಯ, ಭಕ್ತನೆಂಬಾತ ಜಂಗಮದಂತುವನರಿಯ, ಗುರು ಗುರುವಿನಲ್ಲಿ ಸಮವಿಲ್ಲ; ಶಿಷ್ಯಶಿಷ್ಯರಲ್ಲಿ ಸಮವಿಲ್ಲ; ಭಕ್ತಭಕ್ತರಲ್ಲಿ ಸಮವಿಲ್ಲ; ಜಂಗಮ ಜಂಗಮದಲ್ಲಿ ಸಮವಿಲ್ಲ ಇದು ಕಾರಣ ಕಲಿಯುಗದೊಳಗೆ ಉಪದೇಶ ಮಾಡುವ ಕಾಳುಗುರಿಕೆ ಮಕ್ಕಳೇನೆಂಬೆ ಗುಹೇಶ್ವರಾ ?"

—ಅಲ್ಲಮಪ್ರಭು.

ವಿರಕ್ತರನ್ನು ನಿರಂಜನ, ಜಗದ್ಗುರು ಎಂಬ ಉಪಾಧಿಗಳಿಂದ ಕರೆಯ ಬಹುದೇ ? ಎಂಬ ವಿಚಾರ ಪರಿಶೀಲನಾರ್ಹವಾಗಿದೆ.

ನಿರಂಜನವಂಶರತ್ನಾಕರದಲ್ಲಿ ಹೇಳಿರುವಂತೆ ಮುರಿಗಿಸ್ವಾಮಿಗಳಿಗೂ ನೋಡಾ ಸಿದ್ಧಲಿಂಗಸ್ವಾಮಿಗಳಿಗೂ 'ಜಂಗಮಜಿತಾ ಫಕೀರು' ಎಂಬ ಬಿರುದನ್ನು ದೆಹಲಿಯ ಬಾದಷಹರು ಕೊಟ್ಟಿದ್ದುದೇ ಆದರೆ, ಮುರಿಗಿ ಮಠದವರು ಆ ಬಿರುದನ್ನೇಕೆ ಉಪಯೋಗಿಸುತ್ತಿಲ್ಲವೋ ತಿಳಿಯದು; ಅಥವಾ ಅದೇ ಅರ್ಥದ ಜಗದ್ಗುರು-ಉಪಾಧಿಯನ್ನು ಉಪಯೋಗಿಸುತ್ತಿರಬಹುದೆಂದು ತಿಳಿಯಬಹುದೇನೋ ! ಅನೇಕ ವಿರಕ್ತ ಮಠಾಧೀಶ್ವರರೂ ಶ್ರೀಮನ್ಮಹಾರಾಜ, ನಿರಂಜನ, ಮತ್ತು ಜಗದ್ಗುರು-ಪ್ರಶಸ್ತಿಗಳನ್ನು ತಮ್ಮ ನಾಮಾವಳಿಯಲ್ಲಿ ಧಾರಾಳವಾಗಿ ಬಳಸಿಕೊಳ್ಳುತ್ತಿದ್ದಾರೆ. ಆದರಂತೆಯೇ ಮುರಿಗಿ ಮಠದವರೂ ಈ ವಿಶೇಷಣಗಳನ್ನು ಹೇಳಿಕೊಳ್ಳುತ್ತಾರೆ ! ಈ ಉಪಾಧಿಗಳ ಬಳಕೆಯನ್ನು ವಿರಕ್ತ ಪಂಥದವರು ನಾಥಪಂಥದಿಂದ ಅರಿತಿರಬಹುದೆಂದು ಊಹಿಸಲು ಅವಕಾಶವುಂಟು. ಮಹಾರಾಜ್-ಎಂದರೆ, ಹಿಂದಿ ಭಾಷೆಯಲ್ಲಿ ದೊಡ್ಡ ಮನುಷ್ಯ ಎಂದು ಅರ್ಥ. ಉರ್ದು ಭಾಷೆಯಲ್ಲಿಯೂ ಈ ಪದ ಇದೇ ಅರ್ಥದಲ್ಲಿ ಬಳಕೆಯಲ್ಲಿದೆ. ಉರ್ದು ಭಾಷೆಯ ಪ್ರಭಾವದಿಂದ ಈ ಪದ ಅನೇಕ ದೇಶಭಾಷೆಗಳಲ್ಲಿಯೂ ಬಳಕೆಗೆ ಬಂದಂತೆ ಗೊತ್ತಾಗುತ್ತದೆ. ನಾಥಪಂಥದ ಸಿದ್ಧರನ್ನು ಜನರು 'ಮಹಾರಾಜ್' ಎಂದು ಗೌರವದಿಂದ ಸಂಬೋಧಿಸುತ್ತಿದ್ದರು. ಈಗಲೂ ಈ ಪದವನ್ನು ಸಾಮಾನ್ಯವಾಗಿ ಉತ್ತರ ಭಾರತದಲ್ಲಿ ಆಢ್ಯರ ವಿಚಾರದಲ್ಲಿ ಉಪಯೋಗಿಸುತ್ತಾರೆ. ಸಂಸ್ಕೃತ ಭಾಷೆಯ-ಮಹಾರಾಜಾ-ಶಬ್ದವೇ ಹಿಂದಿ ಅಥವಾ ಉರ್ದು ಭಾಷೆಗಳಲ್ಲಿ ಗಣ್ಯವ್ಯಕ್ತಿಗಳನ್ನು ಸಂಬೋಧಿಸಲು ರೂಢಿಯಲ್ಲಿ ಬಂದಿರಬೇಕು. ಈ ಪದ ಸಂಸ್ಕೃತದಲ್ಲಿ ಸಂನ್ಯಾಸಿಗಳನ್ನಾಗಲಿ, ಸಂತರನ್ನಾಗಲಿ ಸೂಚಿಸಲು ವಿಶೇಷಣವಾಗಿ ಎಲ್ಲಿಯೂ ಪ್ರಯೋಗವಾದಂತಿಲ್ಲ. ಇದು ಕೇವಲ ರಾಜ್ಯಾಧೀಶ್ವರ ಎಂಬ ಅರ್ಥದಲ್ಲಿ ಬಂದಿದೆ. ರಾಜಾಧಿರಾಜರನ್ನು ಶ್ರೀಮನ್ಮಹಾರಾಜ-ಎಂದು ಸಂಬೋಧಿಸುತ್ತಿರುವುದನ್ನು ಅನುಸರಿಸಿ, ಬಹುಶಃ ವಿರಕ್ತರೂ ಈ ಪದವನ್ನು ಬಳಸುತ್ತ ಬಂದಿರಬೇಕು. ಪ್ರಜಾರಂಜನೆಯನ್ನು ಮಾಡುವ ರಾಜರಂತೆಯೇ ವಿರಕ್ತರೂ ಪ್ರಜಾರಂಜನೆಯನ್ನು ಮಾಡುವವರೇ ಎಂಬ ಅರ್ಥದಲ್ಲಿ ಬಂದಿದೆಯೇನೋ ! ಗುರುವರ್ಗದವರು ಈ ವಿಶೇಷಣವನ್ನು ಬಳಸುವುದಿಲ್ಲ.

ವಿರಕ್ತ ಪಂಥ 'ನಿರಂಜನ' 'ಜಗದ್ಗುರು' ಎಂದು ಹೇಳಿಕೊಳ್ಳುವುದೂ ನಾಥಸಂಪ್ರದಾಯದ ಪ್ರಭಾವವೇ. ಶೈವ ಮಠೀಯರಲ್ಲದವರು ಈ ಉಪಾಧಿ

ನನ್ನು ಬಳಸುತ್ತಿರುವಂತೆ ಕಂಡುಬರುವುದಿಲ್ಲ. ಸಿದ್ಧರ ಯೋಗಮಾರ್ಗವೇ ಶಿವಯೋಗವಾಯಿತು. ಆದರಿಂದಲೇ ವಿರಕ್ತರನ್ನು ಶಿವಯೋಗಿ ಎಂದು ಕರೆಯುತ್ತಾರೆ. 'ಸಿದ್ಧಸಿದ್ಧಾಂತ ಪದ್ಧತಿ' ಎಂಬ ಗ್ರಂಥದಲ್ಲಿ 'ನಿರಂಜನ' ಎಂದರೆ, ನಿರ್ದೋಷ ಎಂಬ ಅರ್ಥವನ್ನು ಹೇಳಿದೆ. ರಾಗ, ದ್ವೇಷ, ಕಾಮ, ಕ್ರೋಧ, ಲೋಭ, ಮೋಹ ಮುಂತಾದ ದೋಷಗಳಿಗೆ 'ಅಂಜನ' ಎಂದು ಹೆಸರು. ಈ 'ಅಂಜನ' ಇಲ್ಲದಿರುವವನೇ ನಿರಂಜನ ಎಂದು ಆ ಗ್ರಂಥದಲ್ಲಿ ಹೇಳಿದೆ. "ನಿತ್ಯತ್ವಂ, ಸಹಜತ್ವಂ, ಸಮರಸತ್ವಂ, ಸಾವಧಾನತ್ವಂ, ಸರ್ವಗತತ್ವಮಿತಿ ಪಂಚಗುಣಂ ನಿರಂಜನಂ" ಎಂದು ನಿರಂಜನ ಗುಣಗಳನ್ನು ತಿಳಿಸಿರುತ್ತಾರೆ. ನಾಥಪಂಥದ ಪ್ರಭಾವ ವಿರಕ್ತ ಪಂಥದಲ್ಲಿ ಕಂಡುಬರುತ್ತದೆ. ಆದರಿಂದಲೇ ವಿರಕ್ತರನ್ನು ನಿರಂಜನರೆಂದು ಕರೆಯುತ್ತಾರೆ. ಸಿದ್ಧ, ನಿರಂಜನ-ಶಬ್ದಗಳು ನಾಥ ಪಂಥಕ್ಕಿಂತಲೂ ಬಹಳ ಹಿಂದೆಯೇ ಜೈನಧರ್ಮದಲ್ಲಿ ಬಹಳ ಮಟ್ಟಿಗೆ ಇದೇ ಅರ್ಥದಲ್ಲಿ ಬಂದಿವೆ. ಶೂನ್ಯ, ಶರಣ ಶಬ್ದಗಳು ಬೌದ್ಧ ಧರ್ಮದಲ್ಲಿ ಗೋಚರಿಸುತ್ತವೆ. ಜೈನರ 'ಸಮವಸರಣ' ಸಭೆಯೇ ಶರಣಯುಗದ ಅನುಭವ ಮಂಟಪ ಸ್ವರೂಪವನ್ನು ಪಡೆಯಿತೆಂದು ಪಂಡಿತರು ಹೇಳುತ್ತಾರೆ. ಜೈನರ ಸಾಧು ವೀರಶೈವದ ವಿರಕ್ತನಾಗಿ ಮೂಡಿರುತ್ತಾನೆಂಬುದನ್ನು ಅಲ್ಲಗಳೆಯುವಂತಿಲ್ಲ. ನಾಥಪಂಥದಲ್ಲಿ ಶೂನ್ಯವನ್ನು ಹೇಳಿದೆ. "ಅಪರಂಪರಂ ಪರಮಪದಂ ಶೂನ್ಯಂ ನಿರಂಜನಂ ಪರಮಾತ್ಮೇತಿ" ಎಂಬ ಪಂಚ ಶಕ್ತಿಗಳಲ್ಲಿ ಒಂದೊಂದು ಶಕ್ತಿಯು ಅಭಿಮಾನದೇವತೆಯೂ ಬೇರೆ ಬೇರೆ ಎಂದು ಹೇಳಿದೆ. ಅಪರಂಪರಶಕ್ತಿಯ ಅಭಿಮಾನ ದೇವನೇ ಸದಾಶಿವ; ಪರಮಪದಶಕ್ತಿಯ ವಿಭುವೇ ಈಶ್ವರ; ಶೂನ್ಯ ಶಕ್ತಿಯ ಪ್ರಭುವೇ ರುದ್ರ; ನಿರಂಜನಶಕ್ತಿಯ ಅಧಿದೇವನೇ ವಿಷ್ಣು; ಪರಮಾತ್ಮ ಶಕ್ತಿಯ ಪತಿಯೇ ಬ್ರಹ್ಮ !

ಹೀಗೆ, ಈ ಶೂನ್ಯ ತತ್ತ್ವವನ್ನು ಪ್ರತಿಪಾದಿಸುವುದರಿಂದ ಆಗಮ ವೀರಶೈವದ ಪ್ರಾಚೀನ ಶೂನ್ಯ ತತ್ತ್ವವನ್ನು ಸರ್ವಾಂಗ ಪರಿಪೂರ್ಣವಾಗಿ ಸಾಧಿಸಿದಂತಾಗುತ್ತದೆ. ಶೂನ್ಯ ಸಂಪ್ರದಾಯ ಎಲ್ಲ ಸಮಕಾಲೀನ ಧರ್ಮಗಳ ಸಾರ ತತ್ತ್ವವನ್ನು ತನ್ನಲ್ಲಿ ಅಳವಡಿಸಿಕೊಂಡು, ಉದಾರ ವೀರಶೈವ ಧರ್ಮವನ್ನು ಸಾರಿತು. ಈ ದೃಷ್ಟಿಯಿಂದಲೇ ಶೂನ್ಯಸಿಂಹಾಸನ ಸ್ಥಾಪನೆಯಾಯಿತು; ಕಾಲ ಕ್ರಮದಲ್ಲಿ ಅದು ಧಾರ್ಮಿಕ ಪೀಠವಾಗಿ ರೂಪುಗೊಂಡಿತು. ಪಂಚ ಆಚಾರ್ಯ

ಪೀಠಗಳು ಈ ಪರಿವೇಷದಿಂದ ಬಹಳ ದೂರದಲ್ಲಿಯೇ ನಿಂತವು! ಇನ್ನಾದರೂ ವಿರಕ್ತಪಂಥ ಬಸವಣ್ಣನವರ ವೀರಶೈವವನ್ನು ಇನ್ನೂ ಜೀರ್ಣಿಸಿಕೊಂಡಿಲ್ಲ! ತಾವು ಪ್ರಾಚೀನ ವೀರಶೈವದ ಶೃಂಖಲೆಗಳನ್ನು ಕಿತ್ತೊಗೆಯಲಾರದೆ, ಒಂದು ವಿಶಿಷ್ಟವರ್ಗದ ಜನ ಪ್ರಚ್ಛನ್ನ ವಿರಕ್ತರಂತೆ ವರ್ತಿಸುತ್ತಿರುವುದೇ ಬಸವಧರ್ಮದ ಪೂರ್ಣ ದರ್ಶನವನ್ನು ಸಮಾಜ ಪಡೆಯಲು ಅಶಕ್ತವಾಗಿದೆ. ಎಂಟುನೂರು ವರ್ಷ ಕಳೆಯಿತು! ಬಸವಣ್ಣನವರ ಉದಾರ ಧರ್ಮ ಸಮಾಜದಲ್ಲಿ ಮೂಡಿ ಬಂದಿಲ್ಲ! ಈ ಭವರೋಗವನ್ನು ನಿವಾರಿಸಲು ಪರಿಶುದ್ಧ ಶೂನ್ಯಸಿಂಹಾಸನ ಪುನರುತ್ಥಾನವಾಗಬೇಕು.

ನಾಥಪಂಥದ ಛಾಯೆಯಲ್ಲಿ ನಡೆದುಬಂದು ನಾಥಪಂಥವನ್ನೇ ಬಸವ ಧರ್ಮದಲ್ಲಿ ಐಕ್ಯಗೊಳಿಸಿದ ವಿರಕ್ತಪಂಥ ಶ್ರೀಮನ್ಮಹಾರಾಜ, ನಿರಂಜನ, ಜಗದ್ಗುರು–ಇವೇ ಮೊದಲಾದ ಉಪಾಧಿಗಳನ್ನು ಹೊಗಳಿಸಿಕೊಳ್ಳುವುದು ನಾಥ ತತ್ತ್ವ ಸಮ್ಮತವಾಗಿಯೇ ಇದೆ. ಅಪಾರ ಭಕ್ತಜನ ಆದರದಿಂದ, ಭಕ್ತಿಯಿಂದ ಯಾವ ಮಠಾಧೀಶ್ವರರನ್ನಾದರೂ 'ಜಗದ್ಗುರು' ಎಂದು ಗೌರವಿಸಲು ಅವಕಾಶ ವುಂಟು. ಇದು ಉನ್ನತ ಮಟ್ಟದ ಗೌರವ. ಇದು ಪ್ರಜಾಭಕ್ತಿ ಪ್ರೀತಿಯ ಸಂಕೇತ! ಇದು ಸರ್ಕಾರದ ಬಿರುದಾವಳಿಯಲ್ಲಿ ಸೇರಿಲ್ಲ! ಶೂನ್ಯ ಸಿಂಹಾಸನದ ಮೂಲ ನಾಥ ಗುರುಪರಂಪರೆಯವರು 'ಜಗದ್ಗುರು' ಪ್ರಶಸ್ತಿಯನ್ನು ಪಡೆಯಬೇಕಾದುದು ಸಹಜವಾಗಿಯೇ ಇದೆ! ಈ ದೃಷ್ಟಿಯಿಂದಲೇ ನಿರಂಜನರತ್ನಾಕರ-ಅಲ್ಲಮರನ್ನು ಜಗದ್ಗುರು ಎಂದು ಉಗ್ಗಡಿಸಿದೆ. ಆ ಪರಂಪರೆಯವರು ಜಗದ್ಗುರುಗಳೆಂದು ಲೋಕವಂದ್ಯರಾಗಿರುತ್ತಾರೆ. * ಹಿಂದೆ ಮುರಿಗಿಮಠದವರು 'ಜಗದ್ಗುರು' ಎಂದು ಬರೆದುಕೊಂಡು ಅವರ ಉತ್ಸವ ಕಾಲದಲ್ಲಿ ಪ್ರದರ್ಶಿಸಲು ಬ್ರಾಹ್ಮಣ ಮತದವರು ಮತ್ತು ಇತರರು ಆಕ್ಷೇಪಣೆ ಮಾಡಿದರು. ಮುರಿಗಿ ಸ್ವಾಮಿಗಳು ಜಗದ್ಗುರು ಎಂದು ಹೇಳಿಕೊಳ್ಳಲು ಮತ್ತು ಅವರ ಶಿಷ್ಯರು ಅವರನ್ನು ಜಗದ್ಗುರು ಎಂದು ಹೊಗಳಲು ತಮ್ಮ ಆಕ್ಷೇಪಣೆಯೇನೂ ಇಲ್ಲವೆಂದು ಸರ್ಕಾರದವರು ತಿಳಿಸಿದರು. ಶರಣಯುಗದಲ್ಲಿ ವಿರಕ್ತರನ್ನು 'ಜಗದ್ಗುರು' ಎಂದು ಹೊಗಳಿದಂತಿಲ್ಲ. ವಚನಸಾಹಿತ್ಯದಲ್ಲಿ ಅಲ್ಲಮರು, ಬಸವಣ್ಣನವರು,

* No. 450-9-Muz 65-08-9 dated 12th December 190[illegible] Muzrai Manual Page 548.

ಷ್ಣ ಬಸವಣ್ಣನವರು ಮತ್ತು ಸಿದ್ಧರಾಮರು ಮೊದಲಾದ ಮಹಾ ಶರಣರನ್ನು ಜಗದ್ಗುರು' ಎಂದು ಸಂಬೋಧಿಸಿದಂತೆ ನಮ್ಮ ಗಮನಕ್ಕೆ ಬಂದಿಲ್ಲ. ಸರ್ವಸಂಗ ಪರಿತ್ಯಾಗಿಗಳಾದ ಶರಣರು ಈ ಉಪಾಧಿಯನ್ನು ಒಪ್ಪಿದಂತಿಲ್ಲ. ಇಪ್ಪತ್ತನೆಯ ಶತಮಾನದಲ್ಲಿ ಹುಟ್ಟಿದ್ದ 'ನಿರಂಜನವಂಶರತ್ನಾಕರ'ದಲ್ಲಿ ಈ ಜಗದ್ಗುರು ಮೈನಾಕ ಪರ್ವತ ತಲೆ ಎತ್ತಿದಂತಿದೆ ! ಆಜನ್ಮ ಬ್ರಹ್ಮಚಾರಿ ವಿರಕ್ತ-ಆಂಜನೇಯ ಈ ಮೈನಾಕ ಗಿರಿಯಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದಾನೆ ! ಆದ್ದರಿಂದಲೇ ನಿರಂಜನವಂಶ ರತ್ನಾಕರದಲ್ಲಿ ಈ ಜಗದ್ಗುರು ಗಿರಿಧಾಮದಲ್ಲಿ ಮೂಲ ನಾಥ ಶೂನ್ಯ ಸಿಂಹಾಸನ ಪರಂಪರೆಯ ವಿರಕ್ತರು ಪ್ರಶಾಂತಚಿತ್ತದಿಂದ ವಿಹರಿಸಲು ಯಾವ ಆಕ್ಷೇಪಣೆಯೂ ಇರಲಾರದು ! ಈ ನವನಾಗರಿಕ ಕಾಲದಲ್ಲಿ ವಿರಕ್ತರು 'ತರುತಲವಾಸ, ಕರತಲ ಭಿಕ್ಷಾ' ಪದ್ಧತಿಯನ್ನು ಬಿಟ್ಟಾಯಿತು ! ಆಧುನಿಕ ಜಗತ್ತಿನ ಜೀವನದಲ್ಲಿ ವಿರಕ್ತರು ಜನಸಂಪರ್ಕದಿಂದ ದೂರವಿರಲು ಸಾಧ್ಯವಿಲ್ಲ. ಹಾಗೆ, ಇರಲೂ ಬಾರದು ! ಆದ್ದರಿಂದ ವಿರಕ್ತರು ಪದ್ಮಪತ್ರಾಂಬುವಿನಂತೆ ಲೋಕಜೀವನದಲ್ಲಿ ಬೆರೆಯಬೇಕು! ಬೆರೆಯಬೇಕು. ಇದು ಪ್ರಗತಿಯ ಲಕ್ಷಣ. ಮೂಲ ಧರ್ಮ ಎಂದಾಗಲೂ ಅಚಲ; ಕಟ್ಟುಕಟ್ಟಳೆಗಳು ಮಾತ್ರ ಕಾಲಧರ್ಮದಿಂದ ಬದಲಾಗುತ್ತವೆ. ಈ ಕಾರಣದಿಂದಲೇ ಲೋಕ ವಿರಕ್ತರನ್ನು 'ಜಗದ್ಗುರು ಎಂದು ಗೌರವಿಸುತ್ತದೆ. ಇದು ಲೋಕಾಭಿಪ್ರಾಯ. ಇದನ್ನು ವಿರಕ್ತರು ಮನ್ನಿಸಬೇಕು; ಒಪ್ಪಬೇಕು ! ಜನತೆಯೇ ಜನಾರ್ದನ ! ಲೋಕವೇ ಪರಮೇಶ್ವರ! ಈ ಪರಮೇಶ್ವರ ಸಂಪ್ರೀತಿಯೇ ಎಲ್ಲ ವಿರಕ್ತರ ತಪಃಫಲ ! ಆದರೆ, ಕೆಲವು ವಿರಕ್ತ ಮಠಾಧೀಶ್ವರರು ಧಾರ್ಷ್ಟ್ಯದಿಂದ ತಮಗೆ ತಾವೇ 'ಜಗದ್ಗುರು'ಗಳೆಂದು ಮೆರೆಯುತ್ತಾರೆ ! ಇದು ಪರಮಾಶ್ಚರ್ಯ !

ಎಲ್ಲ ವಿರಕ್ತರೂ ಸಮಾನರು! ಯಾವ ವಿರಕ್ತ ಮಠವೂ ಇನ್ನೊಂದು ವಿರಕ್ತ ಮಠಕ್ಕೆ ಅಧೀನ ಮಠವಲ್ಲ. ಒಂದು ಮಠ ಚಿಕ್ಕದಿರಬಹುದು; ಇನ್ನೊಂದು ಮಠ ದೊಡ್ಡದಿರಬಹುದು. ಅದೃಷ್ಟಬಲದಿಂದ ಒಬ್ಬರಿಗೆ ದೊಡ್ಡ ಮಠ ಸಿಕ್ಕಿದರೆ ಅವರು ದೊಡ್ಡವರಲ್ಲ; ಚಿಕ್ಕಮಠಗಳವರು ಎಷ್ಟೋ ಜನ ದೊಡ್ಡವರಿರುತ್ತಾರೆ ! ಆತ್ಮಶಕ್ತಿ ದೊಡ್ಡದಿರಬೇಕು; ಆಸ್ತಿ ಶಕ್ತಿಯಲ್ಲ ! ಸಂಸ್ಕೃತಿ ದೊಡ್ಡದಿರಬೇಕು; ಮನುಷ್ಯಶಕ್ತಿಯಲ್ಲ ! ನಿರಾಭಾರಿ ಜಂಗಮ ಲಕ್ಷಣವನ್ನು ನಾವಿಲ್ಲಿ ಬರೆಯುತ್ತಿಲ್ಲ ! ಅದನ್ನು ತಿಳಿಸಲು ಅನೇಕ ಶಾಸ್ತ್ರಗ್ರಂಥಗಳಿವೆ. ಆದರೆ, ನಿರಾಭಾರಿಗಳೆನಿಸಿದವರು

ಬಸವಣ್ಣನವರ ತತ್ತ್ವಪರಿಪಾಲನೆ ಮಾಡಬೇಕೆಂಬುದೇ ಎಲ್ಲರ ಇಷ್ಟ ! ಒಂದು ಪ್ರಮುಖ ಮಠವೆಂದರೆ ಆ ಸಂಪ್ರದಾಯದ ಕೇಂದ್ರ ಸಂಸ್ಥೆ ಇದ್ದಂತೆ ! ಪಾರಮಾರ್ಥಿಕ ಜೀವನದಲ್ಲಿ ಇವರೆಲ್ಲರೂ ಸರ್ವಸಮಾನರು. ಇದು ಶರಣಧರ್ಮ. ಆದರೆ, ಆದೇಕೋ ಇಂಥ ಕೆಲವು ಕೇಂದ್ರ ಮಠದವರು ಕೇವಲ ಲೌಕಿಕರಂತೆ ತಾವು ಮೇಲು ಇತರರು ಕೀಳು ಎಂಬಂತೆ ವರ್ತಿಸುತ್ತಾರೆ. ಶರಣ ಸಮಾಜದಲ್ಲಿ ತಾವು ಮೇಲು ಅನ್ಯರು ಕೀಳು ಎಂಬ ಭಾವನೆಯನ್ನು ಅಶಾಸ್ತ್ರೀಯ ಪಂಚ ಸಮಯ ಮಠಗಳವರೇ ಮೊಟ್ಟಮೊದಲು ಬೆಳಸಿದವರು. ಅವರ ಕಹಿ ಫಲವನ್ನು ಅವರೂ ಉಂಡು, ಶರಣ ಸಮಾಜದಲ್ಲಿಯೂ ಆ ಕಹಿ ಪ್ರಸಾದವನ್ನು ನೀಡಿದರು. ಶರಣ ಸಮಾಜದ ಮೂಲ ಶೂನ್ಯ ಪೀಠಗಳಲ್ಲಿ ಈ ಉಚ್ಚ ನೀಚ ಮನೋಭಾವವೇ ಕಂಡುಬರುವುದಿಲ್ಲ. ಕೆಲವು ಸಮಾರಂಭಗಳಲ್ಲಿ ಈ ಪಂಚ ಸಮಯದ ದೊಡ್ಡಮಠದವರು ಉನ್ನತಾಸನದಲ್ಲಿ ಕುಳಿತು ಅದೇ ಸಮಯಾನುವರ್ತಿಗಳಾದ ಪ್ರಾಚೀನ ವಿರಕ್ತ ಮಠಾಧೀಶ್ವರರನ್ನು ಅವರಿಗಿಂತ ಕೆಳಗಡೆ ಆಸನಗಳಲ್ಲಿ ಕೂಡಿಸುತ್ತಾರೆ. ಇದು ಶರಣಧರ್ಮದ ಅಪಹಾಸ್ಯದಂತಿದೆ. ಎಲ್ಲ ವಿರಕ್ತರನ್ನೂ ತಮ್ಮ ಮಟ್ಟದಲ್ಲಿಯೇ ಸುತ್ತಲೂ ಕೂಡಿಸಿಕೊಂಡು ಗೌರವಿಸಬೇಕಾದುದು ವಿಹಿತ. ಇದರಿಂದ ಕೇಂದ್ರ ಸಂಸ್ಥೆಯ ಮಟ್ಟ ತಗ್ಗುವುದಿಲ್ಲ; ಇನ್ನೂ ಉನ್ನತವಾಗುತ್ತದೆ. ವಿದ್ವಾಂಸರಿಗಾಗಲಿ, ಆಢ್ಯರಿಗಾಗಲಿ ಉಚಿತ ಮರ್ಯಾದೆ ಎಲ್ಲೆಲ್ಲಿಯೂ ಸಲ್ಲಬೇಕಾದಾಗ ಕೆಲವು ವಿರಕ್ತರೂ ಗುರುಗಳೂ ತಾವೇ ಸರ್ವೋತ್ತಮರಂತೆ ನಡೆದುಕೊಳ್ಳುತ್ತಾರೆ. ಸಂಪನ್ನರು ತಮ್ಮ ಮಠಗಳಿಗೆ ಬಂದಾಗ ಈ ಪುರುಷೋತ್ತಮರು ಕೂಡಲೇ ತಮ್ಮ ಹತ್ತಿರ ಯಾವ ಪೀಠಸೌಕರ್ಯಗಳೂ ಇಲ್ಲದಂತೆ ತೆಗೆಯಿಸಿಬಿಡುತ್ತಾರೆ. ಈ ಮನೋಧರ್ಮ ಆ ಸಂನ್ಯಾಸಿಯ ಜೀವನ ಮಟ್ಟವನ್ನು ತೋರಿಸುತ್ತದೆ ! ಇದು ಆ ಯತಿಯ ಅಜ್ಞಾನದ ಪರಮಾವಧಿ! ಗುಣವಂತರು ಎಂದೂ ನಿಜಪೂಜ್ಯರ ಸಮಕ್ಷದಲ್ಲಿ ಭಕ್ತಿಯಿಂದಲೇ ನಡೆದುಕೊಳ್ಳುತ್ತಾರೆ ! ಜ್ಞಾನಧನರಾದ ವಿರಕ್ತರೂ ಗುರುಗಳೂ ವಿದ್ವಾಂಸರಿಗೂ, ಆಢ್ಯರಿಗೂ ಯೋಗ್ಯಾಸನಗಳನ್ನಿತ್ತು ಗೌರವಿಸುತ್ತಾರೆ. ಈ ಪದ್ಧತಿಯನ್ನು ಅನೇಕ ಮಠಗಳಲ್ಲಿ ಕಾಣಬಹುದು. ಈ ಪ್ರಜಾಪ್ರಭುತ್ವ ಯುಗದಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ಸರ್ವತಂತ್ರ ಸ್ವತಂತ್ರ ! ಸರ್ವರೂ ಸಮಾನರು ! ಯಾವ ಸಿರಾಭಾರಿಯೇ ಆಗಲಿ, ಜಗದ್ಗುರುವೇ ಆಗಲಿ ಕಾನೂನಿನ ದೃಷ್ಟಿಯಲ್ಲಿ

ಧ್ರುವಿ ಆಗಿರುತ್ತಾನೆ. ಇದುವರೆಗೆ ನ್ಯಾಯಾಲಯಗಳಲ್ಲಿ ಕೆಲವು ಮಠಾಧೀಶ್ವರ ರಿಗೆ ವಿಶೇಷ ಸೌಲಭ್ಯಗಳಿದ್ದುವು. ಈ ಸ್ವಾತಂತ್ರ್ಯ ಯುಗದಲ್ಲಿ ಮಠಾಧಿ ಪತಿಯೂ ನ್ಯಾಯಪೀಠದ ಮುಂದೆ ತಲೆಬಾಗಬೇಕು ! ಆಧುನಿಕ ಜನಜೀವನ ವನ್ನು ಸಮನ್ವಯ ಮಾಡಿಕೊಳ್ಳಲಾರದ ಎಲ್ಲ ಮಠಗಳೂ ಸಾರ್ವಜನಿಕ ಸಂಸ್ಥೆ ಗಳಾಗಲು ರಾಷ್ಟ್ರೀಕರಣದತ್ತ ಧಾವಿಸುತ್ತಿವೆಯೆಂಬುದನ್ನು ಗಮನಿಸಬಹುದು ! ಅಂಥ ಕಾಲ ಬಹಳ ದೂರವಿಲ್ಲ ! ಅನೇಕ ದೊಡ್ಡ ದೊಡ್ಡ ಮಠಗಳಲ್ಲಿ 'ಸ್ವಾಮಿ' ಯಾಗಿರುವವರಿಗೆ ಆಧುನಿಕ ವಿದ್ಯಾಭ್ಯಾಸ ಶಿಕ್ಷಣವಿಲ್ಲದಿರುವುದೊಂದು ಕೊರತೆ. ಕೇವಲ ಶುಷ್ಕ ವ್ಯಾಕರಣ ಪಾಂಡಿತ್ಯವಾಗಲಿ ತರ್ಕಶಾಸ್ತ್ರನೈಪುಣ್ಯವಾಗಲಿ 'ಸ್ಥಿತ ಪ್ರಜ್ಞಾ' ಸಂಪತ್ತನ್ನು ತರುವುದಿಲ್ಲ; ಅದು ವಿಶೇಷ ಸಂಯಮದಿಂದ ಲಭಿಸುವ ಭಾಗ್ಯ ! ಪೂರ್ವಜನ್ಮ ಸಂಸ್ಕಾರದ ಫಲ ! ಇಂಥ ಶಿಕ್ಷಣ ಭಾಗ್ಯ ಅವರಿಗೆ ಗುರುಕುಲದಲ್ಲಿಯೇ ಮೂಡಿ, ಮುಂದೆ ಜನಜೀವನದಲ್ಲಿ ಬೆಳೆದು ನಿರಾಭಾರಿ ಜೀವನದಲ್ಲಿ ಸಿದ್ಧಿಸಿರಬೇಕು! ಕೆಲವು ಮಠಗಳ ಅಧಿಕಾರಸ್ಥಾನಗಳು ಐ.ಎ.ಎಸ್. ಪ್ರವೇಶನೆರಿ ಸ್ಥಾನಗಳಂತೆ ಆಕರ್ಷಣೀಯವಾಗಿವೆ. ಆ ಲೌಕಿಕ ಐ.ಎ.ಎಸ್. ಸ್ಥಾನಗಳಂತೆ ಈ ಪಾರಮಾರ್ಥಿಕ ಮಠಾಧಿಕಾರದ ಸ್ಥಾನಗಳು ಸ್ಪರ್ಧಾ ಪರೀಕ್ಷೆ ಯಿಂದ ಲಭಿಸುವುದಿಲ್ಲ. ಈ ಪೀಠಾಧಿಕಾರ ಸ್ಥಾನದ ಅಭ್ಯರ್ಥಿಯ ಆಯ್ಕೆ ತೆರೆ ಮರೆಯ ನಾಟಕದಲ್ಲಿ ನಡೆಯುತ್ತಿದೆ. ಮೊನ್ನೆ ಯಾವುದೋ ಮಠದ ಶಿವ ಪೂಜೆಯ ಮರಿ ನಿನ್ನೆ ಇನ್ನೊಂದು ಮಠದ ಮರಿದೇವರು; ಇಂದು ಮತ್ತೊಂದು ಮಠದ ವಿರಕ್ತ ಮೂರ್ತಿ; ನಾಳೆ, ಬೇರೊಂದು ಬೃಹನ್ಮಠಾಧೀಶ್ವರ ! ಆಗಲೇ 'ಜಗದ್ಗುರು ! ಹೀಗಾಗಿದೆ ಅನೇಕ ಮಠಗಳ ಸ್ಥಿತಿ ! ಇದು ಸಮಾಜದ ದುರ್ದೈವ ! ಯಾವುದೇ ಬೃಹನ್ಮಠದ ವಿರಕ್ತನಾಗಲು ಯೋಗ್ಯ ವಟು ಅರ್ಹ ನಾಗಿರುತ್ತಾನೆ. ಅವನ ವಿದ್ಯೆ, ವಂಶ, ನಡತೆ ಇವು ಮುಖ್ಯ. ಅವನು ಆ ಮೊದಲು ಯಾವುದೇ ಮಠದ ಚರಮೂರ್ತಿಯಾಗಿಯೇ ಆಗಲಿ, ವಿರಕ್ತಾ ಶ್ರಮದ ಸ್ವಾಮಿಯಾಗಿಯೇ ಆಗಲಿ ಇರಬಾರದು. ಅಂಥವರು ವಯೋಧರ್ಮ ದಿಂದ ಅನರ್ಹರಾಗಿರುತ್ತಾರೆ. ಸಮಾಜಧರ್ಮ ಕನ್ಯಾರತ್ನ ಇಂಥ ಎರಡನೆಯ ಸಂಬಂಧದಿಂದ ಕೊರಗುತ್ತಾಳೆ ! ಇಂಥ ಅಪರ ವಯಸ್ಸಿನವರು ಯಾವುದೇ ಕೇಂದ್ರ ಪೀಠದ ಅಧಿಕಾರಿಯಾದರೆ, ಅವರು ಸ್ವತಂತ್ರ ಮನೋಭಾವದಿಂದ ವರ್ತಿಸಲಾರರು ! ದುಸ್ಸಂಗ ವಲಯದಿಂದ ದೂರವಿರಲಾರರು. ! "ಯತಿ

ಕೆಡಗು ದುಸ್ಸಂಗದಲಿ, ಭೂಪತಿ ಕೆಡಗು ದುರ್ಮಂತ್ರದಲಿ" ಎಂಬಂತಾಗುತ್ತದೆ. ಸರ್ವಲಕ್ಷಣ ಸಂಪನ್ನನಾದ ಸದ್ವಂಶ ಸಂಜಾತನೇ ಯಾವಾಗಲೂ ವಿರಕ್ತ ಪೀಠಾಧಿಕಾರಿಯಾಗಬೇಕೆಂಬುದನ್ನು ಸಮಾಜ ಮರೆಯಬಾರದು !

ಅರುವತ್ತು ವರ್ಷಗಳ ಹಿಂದೆ ಶರಣ ಸಮಾಜದಲ್ಲಿ ಸಮಯಭೇದದ ವಾತಾವರಣ ತೀವ್ರತರವಾಗಿತ್ತು. ಯಾವ ವಿರಕ್ತನನ್ನೇ ಆಗಲಿ ಕಂಡರೆ ಸಮಾಜ ಆ ವಿರಕ್ತನ ಸಮಯ ಪರೀಕ್ಷೆ ಮಾಡಿ ಮನ್ನಿಸುತ್ತಿತ್ತು. ಅದರಿಂದಲೇ ಮುಳುಗುಂದದ ಬಾಲಲೀಲಾ ಮಹಾಂತಶಿವಯೋಗೀಶ್ವರರು "ಎಲ್ಲ ಸಮಯ ಗಳೊಳಗೆ ತಾವು ಶಿವಸಮಯದವರು" ಎಂದು ಹೇಳಿ ಈ ವಿಷಮ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದಾರೆ. ವಿರಕ್ತರಲ್ಲಿ ಸಮಯಭೇದ ಬಸವಣ್ಣನವರ ಸಮಾಜದಲ್ಲಿ ಇರಲಿಲ್ಲ. ಹದಿನೆಂಟನೆಯ ಶತಮಾನದಲ್ಲಿ ತಮಿಳು ಶೈವ ಮಾರ್ಗ ವೀರಶೈವ ದಲ್ಲಿ ಈ ಸಮಯಪ್ರಭೇದವನ್ನು ಸ್ಥಾಪಿಸಿತು; ಪರಿಪೋಷಿಸಿತು. ಪರಿಶುದ್ಧ ಶಿವಾನುಭವ ಕಲ್ಪವಲ್ಲರಿಯಲ್ಲಿ ಪಂಚ ಸಮಯ ಶಾಖೆಗಳು ಮೂಡಿದುವು. ಇವು ಮೂಲ ಶೂನ್ಯ ಸಿಂಹಾಸನದ ವರ್ಚಸ್ಸನ್ನು ಕಳೆಗುಂದಿಸಿ, ತಾವೇ ಶೂನ್ಯ ಸಿಂಹಾಸನಾಧೀಶ್ವರರೆಂದು ದೇವದುಂದುಭಿಯನ್ನು ಮೊಳಗಿಸಿದುವು. ಆ ಮೂಲ ಶೂನ್ಯ ಪಟ್ಟವಲ್ಲರಿಯನ್ನು ಒಂದೊಂದು ಸಮಯಭೇದವೂ ತನ್ನದೆಂದು ಸಾರಿತು; ತಾನೇ ಆದಿ ಶೂನ್ಯ ಪೀಠಾಧೀಶ್ವರನೆಂದು ಘೋಷಿಸಿತು ! ಇವರ ಭೇದಬುದ್ಧಿಯೇ ಇವರು ಮೂಲ ಶೂನ್ಯ ಪೀಠಾಧಿಕಾರಿಗಳಲ್ಲವೆಂಬುದನ್ನು ವ್ಯಕ್ತ ಪಡಿಸುತ್ತದೆ. ಈ ಸ್ವಯೂಥ ಯುದ್ಧದಲ್ಲಿ ಮುರಘಾಸಮಯ ಅಗ್ರಪಾತ್ರವನ್ನು ವಹಿಸಿತೆಂಬುದನ್ನು ಮರೆಯುವಂತಿಲ್ಲ. ಚಿತ್ರದುರ್ಗದ ವಿರಕ್ತ ಮಠ ಹುಟ್ಟಿದ ಕಾಲದಿಂದಲೂ ಮುರಘ ಸಮಯದವರೇ ಆ ಪೀಠದ ವಿರಕ್ತರಾಗುತ್ತ ಬಂದಿ ದ್ದಾರೆ. ಜಯದೇವ ಸ್ವಾಮಿಗಳು ಬಾಲ್ಯದಲ್ಲಿ ಚೀಲಾಳ ಸಮಯದ ಗದಗ ತೋಂಟದಾರ್ಯ ಮಠದಲ್ಲಿ ಅಭ್ಯಾಸ ಮಾಡುತ್ತಿದ್ದರು. ಅಂಥವರನ್ನು ಮುದ್ದೆ ಮಠಕ್ಕೆ ಸ್ವಾಮಿಯಾಗಿ ನೇಮಿಸಿಕೊಳ್ಳಲು ಪ್ರಮುಖರು ಹಿಂದುಮುಂದೆ ನೋಡಿದರಂತೆ ! ನವಲುಗುಂದ ತಾಲ್ಲೂಕು ಶಲವಡಿ ಹುಚ್ಚಪ್ಪಸ್ವಾಮಿಗಳು ಗದಗಿನ ಮಠದ ಪಾಠಶಾಲೆಗೆ ಸೇರಿದ್ದರು. ನಾಲ್ಕಾರು ದಿನಗಳಾದಮೇಲೆ ಅವರು ಮುರಘಸಮಯದವರೆಂದು ತಿಳಿದು ಗದಗ ಮಠದ ಸ್ವಾಮಿಗಳು ಅವರನ್ನು ಪಾಠಶಾಲೆಯಿಂದ ಓಡಿಸಿಬಿಟ್ಟರಂತೆ ! ಅಷ್ಟೇಕೆ ! ಒಂದು ಸಮಯದ

ಚಿಷ್ಯವರ್ಗದವರು ಇನ್ನೊಂದು ಸಮುಯದ ಮಠಗಳಲ್ಲಿ ಪ್ರಸಾದವನ್ನು ಸ್ವೀಕರಿಸುತ್ತಿರಲಿಲ್ಲ ! ಮುರಘ ಮಠದ ಎರಡನೆಯ ವಿರಕ್ತ ಪಟ್ಟ ಇಮ್ಮಡಿ ಗುರುಸಿದ್ಧಸ್ವಾಮಿಗಳೆಂಬುವರಿಗೆ ಆಯಿತು. ಹುಬ್ಬಳ್ಳಿಯ ಬಸಪ್ಪಶೆಟ್ಟಿ ಎಂಬ ಶ್ರೀಮಂತನಗ ಕುಮಾರಸಮುಯ ಮಠದ ಶಿಷ್ಯನಾಗಿದ್ದುದರಿಂದ ಚಿತ್ರದುರ್ಗದ ಮುರಘಸಮುಯದ ಮಠದಲ್ಲಿ ಪ್ರಸಾದವನ್ನು ಸ್ವೀಕರಿಸಲಿಲ್ಲವೆಂಬ ಉಲ್ಲೇಖನವಿದೆ. ಈ ಇಮ್ಮಡಿ ಗುರುಸಿದ್ಧಸ್ವಾಮಿಗಳು ಕೆಂಪಿನ ಸಮುಯದ ಸಿದ್ಧಬಸವ ಸ್ವಾಮಿಗಳನ್ನು ತಮ್ಮ ಸಹಪಂಕ್ತಿ ಪ್ರಸಾದಕ್ಕೆ ಆಹ್ವಾನಿಸಿದರು. ಅವರು ಸಮುಯಭೇದಬುದ್ಧಿಯಿಂದ ಮುರಘಸಮುಯದವರಲ್ಲಿ ಸಹಪಂಕ್ತಿ ಭೋಜನ ಮಾಡಲು ತಿರಸ್ಕರಿಸಿದರೆಂದು ಗೊತ್ತಾಗುತ್ತದೆ. ಮುರಘಸಮುಯದವರಿಗೂ ಕುಮಾರ ಸಮುಯದವರಿಗೂ ಪರಸ್ಪರ ಹೋರಾಟವೇ ನಡೆಯಿತೆಂದು ಇತಿಹಾಸದಿಂದ ತಿಳಿದುಬರುತ್ತದೆ. ಇಮ್ಮಡಿ ಗುರುಸಿದ್ಧಸ್ವಾಮಿಗಳ ಕಡೆಯ ಚರವಿರಕ್ತರಿಗೂ ಹುಬ್ಬಳ್ಳಿ ಕುಮಾರಸ್ವಾಮಿಗಳ ಪಕ್ಷದ ಚರವಿರಕ್ತರಿಗೂ ಒಮ್ಮೆ ಈ ಸಮುಯಾಸಮುಯಭೇದದಿಂದ ನಡೆದ ಹೋರಾಟದಲ್ಲಿ ಮೂವರು ವಿರಕ್ತರು ಮಡಿದರು. 'ಈ ವಿರಕ್ತರೊಳಗಿನ ಕಲಹದ್ಯೋತಕವೇ ಸಿರಸಿಯಿಂದ ಆರು ಮೈಲಿ ದೂರದಲ್ಲಿರುವ ಇಸಳೂರಿನಲ್ಲಿರುವ ಮೂವರು ವಿರಕ್ತರ ಸಮಾಧಿಗಳು' ಎಂದು ಈಗಲೂ ಜನರು ಹೇಳುತ್ತಾರೆ. ಮುರಘ ಮಠದ ಇಮ್ಮಡಿ ಗುರುಸಿದ್ಧಸ್ವಾಮಿಗಳು ಮೇನಾದಲ್ಲಿ ಕುಳಿತು ಪ್ರವಾಸ ಮಾಡುತ್ತಿದ್ದಾಗ ಶಿವಮೊಗ್ಗ ಜಿಲ್ಲೆಯ ಅನಂತಪುರ ಪ್ರಾಂತದಲ್ಲಿ ಪುಂಡರು ಅವರನ್ನು ಕೊಲೆ ಮಾಡಿದರೆಂದು 'ಶ್ರೀಮದನಾದಿ ಅಲ್ಲಮಪ್ರಭು' ಪುಸ್ತಕದಲ್ಲಿ ಉಕ್ತವಾಗಿದೆ. ನಿರಂಜನವಂಶರತ್ನಾಕರದ ನಿರಾಭಾರಿ ಪರಂಪರೆ ಕಟ್ಟಿಗೆಹಳ್ಳಿ ಸ್ವಾಮಿಗಳವರೆಗೆ ಮೂಲ ಶೂನ್ಯ ಸಿಂಹಾಸನ ಪಟ್ಟವಲ್ಲರಿಯೆಂದು ಹೇಳಬಹುದು. ಹದಿನೆಂಟನೆಯ ಶತಮಾನದಲ್ಲಿ ಸಂಪಾದನೆಯ ಸಮುಯ ಮುರಘ ಸಮುಯ, ಕುಮಾರ ಸಮುಯ, ಕೆಂಪಿನ ಸಮುಯ, ಚೀಳಾಳ ಸಮುಯಗಳು ತಮಿಳು ಶೈವದ ಪರಿಪಾಠವನ್ನು ಬೆಳಸುವುದರಲ್ಲಿ ಅನೇಕ ಮಠಗಳನ್ನು ಸ್ಥಾಪನೆ ಮಾಡಿದುವು. ಈ ಮೊದಲೇ ಇದ್ದ ಶುದ್ಧ ಶಿವಾನುಭವ ಸಂಪ್ರದಾಯದ ವಿರಕ್ತ ಜಂಗಮ ಮಠಗಳು ಈ ಅಶಾಸ್ತ್ರೀಯ ಸಮುಯಭೇದಗಳು ಪ್ರಬಲವಾದಾಗ ತಿಳಿದಾಗಲಿ, ತಿಳಿಯದೇ ಆಗಲಿ ತಮ್ಮ ಇಷ್ಟಬಂದಂತೆ ಬೇರೆ ಬೇರೆ ಸಮುಯದ ಮಠಗಳ ಪಕ್ಷವನ್ನು ವಹಿಸಿದುವು. ಚುನಾವಣೆಯ ಕಾಲದಲ್ಲಿ

ಒಬ್ಬ ಉತ್ಸಾಹೀ ಅಭ್ಯರ್ಥಿಯನ್ನು ನಿಲ್ಲಿಸಿ, ಅವನಿಗಿಂತಲೂ ಹಿರಿಯರಾದವರೂ ಸಹ ಅವನ ಪಂಥವನ್ನು ಪ್ರೋತ್ಸಾಹಿಸಿ ಅವನಿಗೆ ಬೆಂಬಲ ಕೊಡುತ್ತಾರೆ. ಇದು ಲೋಕರೂಢಿ. ಅದರಂತೆ ಎಲ್ಲ ಪ್ರಾಚೀನ ಶುದ್ಧ ಸಂಪ್ರದಾಯದ ವಿರಕ್ತ ಮಠಗಳೂ ತಮ್ಮ ತಮ್ಮ ಅಭೀಷ್ಟದಂತೆ ಬೇರೆ ಬೇರೆ ಸಮಯದ ಮಠಗಳ ವಿರಕ್ತವನ್ನು ತಮ್ಮ ಮುಖಂಡರಂತೆ ಭಾವಿಸಿದುವು. ಮುರಘ ಮಠ ಸಮಯ ಸಂಘಟನ ಚಾತುರ್ಯದಿಂದ ತನ್ನ ಸಮಯದ ಕೇಂದ್ರ ಪೀಠವಾಗಿ ಬೆಳೆಯಿತು. ಅದು ಅದುವರೆಗೆ ನಾಡಿನಲ್ಲಿದ್ದ ಮೂಲ ಶೂನ್ಯ ಪೀಠದ ಮಠಗಳಿಗೂ, ಜಂಗಮ ಮಠಗಳಿಗೂ ಹೊಸದಾಗಿ ಸ್ಥಾಪಿತವಾದ ಆ ಸಮಯದ ಮಠಗಳಿಗೂ ಹಿರಿಯ ಮಠವಾಯಿತು. * ಈ ಅವಸರದಲ್ಲಿ ಸರ್ಪಭೂಷಣಸ್ವಾಮಿ ಮಠ, ಕುಂಭಕೋಣ ಸಾರಂಗಮಠ ಮೊದಲಾದ ಅನೇಕ ಪ್ರಾಚೀನ ಗುರುಮಠಗಳೂ ವಿರಕ್ತ ಮಠಗಳೆಂಬಂತೆ ಮುರಘ ಸಮಯದ ಅಧೀನ ಮಠಗಳಾದುವು. ಇದು ಪರಸ್ಪರ ಅನುಮತಿಯಿಂದ ಆ ಮಠಗಳು ಮಾಡಿಕೊಂಡ ಒಂದು ವ್ಯವಸ್ಥೆ. ಎಲ್ಲ ಮಠಗಳೂ ಅಂಗಸಂಸ್ಥೆಗಳು. ಇದಕ್ಕೆ ಕಾನೂನಿನ ಬಲವಿಲ್ಲ. ಇವರೆಲ್ಲರೂ ಸಮಾನರು. ಮುಖ್ಯ ಮಠದಿಂದ ಇವರಿಗೆ ಯಾವ ಆರ್ಥಿಕ ನೆರವೂ ಇಲ್ಲ. ಮುರಘಮಠ ವೀರಶೈವ ಧಾರ್ಮಿಕ ಮಠವಾಗಿ ಸ್ಥಾಪನೆಯಾಗಲಿಲ್ಲ. ಆ ಮಠದ ಮೂಲ ಮುರಘಾ ಸ್ವಾಮಿಗಳಿಗೆ ವಿರಕ್ತ ಪಟ್ಟಾಧಿಕಾರ ಯಾವ ಗುರುವಿನಿಂದಲೂ ನಡೆದಂತೆ ಕಂಡು ಬರುವುದಿಲ್ಲ. ಅವರ ತರುವಾಯ, ಆ ಪೀಠದ ಎರಡನೆಯ ನಿರಾಭಾರಿ ಗುರು ಸಿದ್ಧಸ್ವಾಮಿಗಳು ಅನಂತಪುರದಲ್ಲಿ ಕಾಲವಾದರು. ಅವರ ಪರಂಪರೆ ಅಲ್ಲಿ ಮುಂದುವರಿಯಿತು. ಈಗಲೂ ಅಲ್ಲಿ ಮೂಲ ಮುರಘಾ ಮಠ ಉಚ್ಛ್ರಾಯ ಸ್ಥಿತಿಯಲ್ಲಿದೆ. ಇಮ್ಮಡಿ ಮುರಘಾಸ್ವಾಮಿಗಳು ಕ್ರಾಂತಿಪುರುಷರು. ಸ್ವಾಭಿಮಾನಿಗಳು. ಅವರು ತಮ್ಮ ಅಭೀಷ್ಟವನ್ನು ನೆರವೇರಿಸಿಕೊಳ್ಳಲು ಎಂದೂ ಹಿಂಜರಿದವರಲ್ಲ. ಪ್ರತಿಸ್ವರ್ಗವನ್ನು ಸೃಷ್ಟಿಸಿದ ವಿಶ್ವಾಮಿತ್ರನಂತೆ, ಮುರಘಾ ಸ್ವಾಮಿಗಳು ಪ್ರತಿ ಶೂನ್ಯ ಸಿಂಹಾಸನವನ್ನು ಸೃಷ್ಟಿಸಿದರು ! ಮೂಲ ಶೂನ್ಯ ಸಿಂಹಾಸನದ ನಿರಾಭಾರಿ ಪರಂಪರೆಯು ಮಠದ ಹಣತೆಯಿಂದ ತಮ್ಮ ಮಠದ ದೀವಿಗೆಯನ್ನು ಹೊತ್ತಿಸಿಕೊಂಡರು. ಇದೊಂದು ಸಮಯಪೀಠ; ವಿಶಿಷ್ಟ ಪಂಥ. ಹದಿನೆಂಟನೆಯ ಶತಮಾನದಲ್ಲಿ ಪಂಚ ಸಮಯಭೇದ ಸಮಾಜದಲ್ಲಿ ಅಲ್ಲೋಲ

* "ನಿರಂಜನ" ಎಂಬ ನಮ್ಮ ಪುಸ್ತಕವನ್ನು ನಿರೀಕ್ಷಿಸಿರಿ.

ಕೋಲಾಹಲವನ್ನುಂಟುಮಾಡಿತು. ಈಗಲೂ ಆ ವಿಷವಾಹಿನಿ ಗುಪ್ತಗಾಮಿನಿಯಾಗಿ ಪ್ರವಹಿಸುತ್ತಲೇ ಇದೆ. ಇದು ಸಮಾಜದ ದುರ್ದೈವ! ಈ ಪಂಚ ಸಮಯ ಪೀಠಗಳು ಅರ್ವಾಚೀನ. ಇವುಗಳೆಲ್ಲಕ್ಕಿಂತಲೂ ಪ್ರಾಚೀನ ಶೂನ್ಯಸಿಂಹಾಸನ ವಿದೆ. ಇವರೆಲ್ಲರೂ ಆ ಪ್ರಾಚೀನ ಶೂನ್ಯ ಸಿಂಹಾಸನದಿಂದ ಬೇರೆಯಾಗಿರುತ್ತಾರೆ. ಹೊರತು ಇವರು ಪ್ರಾಚೀನ ಶೂನ್ಯಸಿಂಹಾಸನಾಧೀಶ್ವರರಲ್ಲ. ಆ ಶೂನ್ಯ ಸಿಂಹಾಸನ ಎಲ್ಲಿದೆ? ಅದರ ಮೂಲಸ್ಥಾನ ಮಠ ಯಾವುದು? ಎಂಬುದನ್ನು ಈಗಾಗಲೇ ಹೇಳಿರುತ್ತೇವೆ.

ಈ ಸಮಯಪೀಠಗಳಿಗೆ ಅರ್ಹರಾದ ಅಭ್ಯರ್ಥಿಗಳನ್ನು ಸಮಾಜ ಆರಿಸಬೇಕು. ಈ ಅಶಾಸ್ತ್ರೀಯ ಸಮಯಭೇದ ನಿರ್ಮೂಲವಾಗಿ ಶುದ್ಧ ಶಿವಾನುಭವ ಮಾರ್ಗ ಬೆಳೆದು ಮೂಲ ಶೂನ್ಯ ಸಿಂಹಾಸನ ಪುನರುತ್ಥಾನವಾಗಬೇಕು. ಈ ಸಮಯ ಪೀಠಗಳಲ್ಲಿ ಎಂದೂ ಮಧುರ ಬಾಂಧವ್ಯವೇ ಕಂಡುಬಂದಂತಿಲ್ಲ ಕ್ರಿ.ಶ. ೧೯೦೩ನೆಯ ಇಸವಿಯಲ್ಲಿ ಚಿತ್ರದುರ್ಗದ ಮುರಘ ವಿರಕ್ತ ಮಠಕ್ಕೆ ಉತ್ತರಾಧಿಕಾರಿಯನ್ನು ನೇಮಿಸಲು ಸಮಾಜ ಪ್ರಯತ್ನಿಸಿತು. ಹಾನಗಲ್ಲು ಕುಮಾರ ಸ್ವಾಮಿಗಳೆಂಬುವರೂ ಆ ಪೀಠದ ಅಭ್ಯರ್ಥಿಗಳಾಗಿದ್ದರು. ಒಬ್ಬರು ಕುಮಾರ ಸಮಯದವರು; ಇನ್ನೊಬ್ಬರು ಮುರಘಸಮಯದವರು. * "ಸಮಯಭೇದ ಪ್ರಾರಂಭವಾದ ಲಾಗಾಯಿತು ಈ ಪೀಠಕ್ಕೆ ಬ್ರಹ್ಮಚಾರಿಗಳಾಗಲೀ ಮುರಘಾ ಸಮಯದ ಮೂರ್ತಿಗಳಾಗಲೀ ಅಧಿಕಾರಕ್ಕೆ ಬಂದಿರುತ್ತಾರೆ. ಇದು ಅನೂಚಾನವಾಗಿ ನಡೆದುಕೊಂಡು ಬಂದಿರುವ ಒಂದು ಸಂಪ್ರದಾಯ. ಇದಕ್ಕೆ ವ್ಯತಿರಿಕ್ತವಾಗಿ ನಡೆದುಕೊಳ್ಳುವುದು ಸೂಕ್ತವಾಗಲಾರದು" ಎಂಬ ವಾದವೊಂದು ಆಗ ಪ್ರಚಾರವಾಯಿತು. "ಇಂತಹ ಪ್ರಸಂಗದಲ್ಲಿ ಮನುಷ್ಯಪ್ರಯತ್ನ ಮೀರಿದಾಗ ಅದೃಷ್ಟ ಪರೀಕ್ಷೆಗಾಗಿ ಚೀಟಿಯನ್ನು ಎತ್ತಬೇಕು ಇಲ್ಲವೆ ಚುನಾವಣೆ ನಡೆಯಬೇಕು." "ಚಿತ್ರದುರ್ಗ ಜಿಲ್ಲಾಧಿಕಾರಿಗಳ ಮೇಲ್ವಿಚಾರಣೆಯಲ್ಲಿ ಚುನಾವಣೆ ನಡೆಯಿತು." "ಈ ಸಮಯದಲ್ಲಿ ಮೊದಲನೆಯವರು ಹಾಜರಿದ್ದರು. ಎರಡನೆಯವರ ಪರವಾಗಿ ಸೊಲ್ಲಾಪುರದ ವಾರದ ಮಲ್ಲಪ್ಪನವರೇ ಅವರ ಹೆಸರನ್ನು ಸೂಚಿಸಿದರು." ಜಯದೇವಶಾಸ್ತ್ರಿ ಜಯಶೀಲರಾದರು. ಇವರೇ

* ಆಧಾರ: ಚಿತ್ರದುರ್ಗ ವಿರಕ್ತಮಠದ ಕೃಪಾಶ್ರಯದಲ್ಲಿ ಪ್ರಕಟವಾಗಿರುವ "ಶ್ರೀ ಜಗದ್ಗುರು ಜಯದೇವ ದಿಗ್ವಿಜಯ" ಎಂಬ ಗ್ರಂಥದಿಂದ ಸಂಗ್ರಹಿಸಿದೆ.

ಶ್ರೀ ಜಯದೇವಸ್ವಾಮಿಗಳೆಂಬ ಹೆಸರಿನಿಂದ ಚಿತ್ರದುರ್ಗ ವಿರಕ್ತ ಮಠದ ಸಿರಿ ಭಾರಿಯಾದರು. "ಈ ಈರ್ವರಲ್ಲಿ ಮುಖ್ಯ ವ್ಯತ್ಯಾಸವೆಂದರೆ: ಮೊದಲನೆಯವರು ಆಗಲೇ ವಿರಕ್ತಾಶ್ರಮ ಸ್ವೀಕಾರ ಮಾಡಿದವರು. ಸ್ವಲ್ಪ ಮಟ್ಟಿಗೆ ವಯಸ್ಸು ಕಳೆದವರು. ಎರಡನೆಯವರು ಬ್ರಹ್ಮಚಾರಿಗಳು ಮತ್ತು ಯುವಕರು. ಈರ್ವರೂ ಗುರುಪೀಠಕ್ಕೆ ಅರ್ಹತೆ, ಯೋಗ್ಯತೆ, ಇವರಲ್ಲಿ ಎಳ್ಳಷ್ಟೂ ಯಾರಿಗೂ ಸಂದೇಹ ವಿರಲಿಲ್ಲ. ಶಾಸ್ತ್ರಿಗಳು ಚೊಕ್ಕ ಬಂಗಾರ. -ಶ್ರೀಗಳು ಬಂಗಾರ ಕರಗಿಸಿ ಮಾಡಿದ ಒಂದು ಒಡವೆ. ಮಾಡಿದ ಒಡವೆಗಿಂತ ತಮಗೆ ಬೇಕಾದ ಒಡವೆ ಮಾಡಿಸಿ ಕೊಳ್ಳಲು ಬರುವಂತೆ ಬಂಗಾರವೇ ಬೇಕೆಂದು ಬಹು ಜನರ ಬಯಕೆಯಂತೆ ಶಾಸ್ತ್ರಿಗಳು ಚುನಾಯಿತರಾದರು."

*"ಶ್ರೀ ರಾಮಕೃಷ್ಣ ಪರಮಹಂಸರು ಒಂದು ಉದಾಹರಣೆಯ ಮೂಲಕ ಈ ಅರ್ಹತಾಲಕ್ಷಣಗಳನ್ನು ವ್ಯಕ್ತಪಡಿಸುತ್ತಾರೆ. ರೈತರು ಎತ್ತು ಕೊಳ್ಳುವಾಗ ಅನುಸರಿಸುವ ವಿಧಾನದ ಉಪಮಾನ ಇವರು ಕೊಡುತ್ತಾರೆ. ಮಲಗಿದ ಹೋರಿಯ ಬಾಲವನ್ನು ಮರೆಮೋಸದಿಂದ ಕೊಳ್ಳುವ ರೈತನು ಮುರಿಯುತ್ತಾನೆ. ಚುರುಕಾಗಿದ್ದರೆ ಅದು ಎದ್ದು ನಿಂತುಕೊಳ್ಳುತ್ತದೆ. ಸಾದಾ ಇದ್ದರೆ ಮೇಲಕ್ಕೆ ಏಳುವುದೇ ಇಲ್ಲ." ಇಂಥ ಪರೀಕ್ಷೆಯೇ ಇಲ್ಲದೆ ಬಡ ಎತ್ತನ್ನು, ಹಲ್ಲು ಬಿದ್ದ ಎತ್ತನ್ನು, ಸಿಡಿಗಾಲು ಎತ್ತನ್ನು, ಸಿಡುಕಿನ ಎತ್ತನ್ನು, ಬಣ್ಣಗೆಟ್ಟ ಎತ್ತನ್ನು, ಕಣ್ಣು ಕಾಣದ ಎತ್ತನ್ನು, ಉಂಡು ಮಲಗುವ ಎತ್ತನ್ನು, ಹಸುರು ಕಂಡರೆ ಹಾತೊರೆಯುವ ಎತ್ತನ್ನು, ಮೋಸದಿಂದ ತಿವಿಯುವ ಎತ್ತನ್ನು, ಹಸುವನ್ನು ಕಂಡು ಮುದಿಗುಟುರು ಹಾಕುವ ಎತ್ತನ್ನು, ಹೀನ ಸುಳಿಯ ಎತ್ತನ್ನು, ಇಷ್ಟ ಮೇವನ್ನು ಕಬಳಿಸುವ ಮೈಗಳ್ಳ ಎತ್ತನ್ನು ಸಮಾಜ ಎಂದೂ ಆದರಿಸಲಾರದು. ಅದು ಕಾಶಿಯಿಂದ ಬಂದಿರಲಿ, ಕೈಲಾಸದಿಂದ ಬಂದಿರಲಿ ಅದರಿಂದ ಉಪಯೋಗ ವೇನು ? ಅದು ಕೋಲೇ ಬಸವನಾದೀತು ! ಅದು ವಂದಿಮಾಗಧರ ಚಾಟಿಯ ಮಾತಿಗೆ ತಲೆಯಾಡಿಸೀತು ! ಅರೆಯ ಸದ್ದಿಗೆ ಹಣೆಯ ಕಿರುಗೆಜ್ಜೆ ಕುಣಿಸೀತು ! ಮೆರವಣಿಗೆಯ ಬಸವನಾದೀತು !

ಶ್ರೀ ಜಯವಿಭವ ಸ್ವಾಮಿಗಳ ತರುವಾಯ ಹಾವೇರಿ ಹೊಸ ಮಠಾಧ್ಯಕ್ಷ ಶ್ರೀ ಮಲ್ಲಿಕಾರ್ಜುನದೇವರು ಚಿತ್ರದುರ್ಗ ಮಠದ ವಿರಕ್ತ ಸ್ವಾಮಿಗಳಾದರು.

*1. "ವಿಗ್ನಜಯ"ದಲ್ಲಿ ಹೇಳಿದೆ.

ಕೆಲವರು ದೊಡ್ಡವರಾಗಿ ಹುಟ್ಟುತ್ತಾರೆ. ಕೆಲವರುದೊಡ್ಡತನವನ್ನು ಸಂಪಾದಿಸು ತ್ತಾರೆ. ಇನ್ನು ಕೆಲವರಮೇಲೆ ದೊಡ್ಡತನವು ತಾನಾಗಿ ಮೈಮೇಲೆ ಬೀಳುತ್ತದೆ ಎಂದು ಷೇಕ್ಸ್‌ಪಿಯರ್ ಕವಿ ಹೇಳುವಂತೆ" ಶ್ರೀ ಮಲ್ಲಿಕಾರ್ಜುನ ದೇವರು ಮೂರನೆಯ ವರ್ಗಕ್ಕೆ ಸೇರಿದವರಾಗಿದ್ದಾರೆ. ಇವರು ಚುನಾಯಿತರಾದ ರೀತಿಯೇ ಬೇರೆ. ಅನುಗ್ರಹ ಭಾಷಣದಲ್ಲಿ ಅವರೇ ಹೇಳಿರುವಂತೆ ಶ್ರೀ ಜಯ ವಿಭವ ಸ್ವಾಮಿಗಳು "ನಮ್ಮಿಂದಲೇ ಅನುಗ್ರಹ ಹೊಂದಿದವರೂ ಅಥಣಿ ಸಂಪ್ರ ದಾಯದವರೂ ಆಗಿರುವ ಮಲ್ಲಿಕಾರ್ಜುನದೇವರನ್ನು ನಮ್ಮ ಉತ್ತರಾಧಿಕಾರಿಗಳ ನ್ನಾಗಿ ನಾವು ಚುನಾಯಿಸಿದ್ದೇವೆ ಎಂದು ಮಹಾಜನಗಳ ಸಮ್ಮುಖದಲ್ಲಿ ನಮ್ಮ ಅಪ್ಪಣೆ ಮಾಡಿದಾಗ, ಅನೇಕರು ಅರ್ಥ ಮಾಡಿಕೊಂಡರು. ಅವರ ಅಪ್ಪಣೆ ಮತ್ತು ನಿಮ್ಮಗಳ ಅಪೇಕ್ಷೆಯಂತೆ, ಅನಿರೀಕ್ಷಿತವಾಗಿ ನಮ್ಮ ಪಾಲಿಗೆ ಬಂದ ಮಹಾ ಪ್ರಸಾದವೆಂದು, ನಾವು ಈ ಪೀಠವನ್ನು ಸ್ವೀಕರಿಸಿದ್ದೇವೆ." ಎಂಬ ಮಾತು ಯಥಾರ್ಥವಾಗಿದೆ. ಶ್ರೀ ಜಯವಿಭವ ಸ್ವಾಮಿಗಳು ಅವಸಾನ ಕಾಲದಲ್ಲಿ ಮೂರು ದಿನ ಮುಂಚೆಯೇ ಪ್ರಜ್ಞಾಹೀನಾವಸ್ಥೆಯಲ್ಲಿದ್ದರು. ಅವರು ಯಾವು ದರಮೇಲೆ ಬರೆದರೋ ನಮಗೆ ತಿಳಿಯದು. ಗಾಳಿಯಲ್ಲಿ ಬರೆದಿರಬೇಕು. ಕಾಗ ದದ ಮೇಲೆ ಬರೆದಿದ್ದರೆ ಆ ಬರೆವಣಿಗೆ ಶ್ರೀ ಮಠದ ಭಂಡಾರದಲ್ಲಿರಬಹುದು; ಗಾಳಿಯಲ್ಲಿ ಬರೆದಿದ್ದರೆ ಆ ಗುರು ನಿರೂಪ ಶ್ರೀ ಮಲ್ಲಿಕಾರ್ಜುನದೇವರ ಮನೋ ಸಂಪುಟದಲ್ಲಿರಬೇಕು. ಆಗ ಅಲ್ಲಿದ್ದ ಮಹಾ ಜನಗಳು ಯಾರು ಯಾರೆಂಬು ದನ್ನು ಅವರು ತಿಳಿಸಿಲ್ಲ. ಇಂಥ ಮಹಾ ಸಮಾಜದ ಪ್ರಾತಿನಿಧ್ಯ ಆಗ ಅಲ್ಲಿ ಇಲ್ಲದಿದ್ದುದು ಆಶ್ಚರ್ಯವೇ! ಇವರ ಚುನಾವಣೆ ಅಷ್ಟೊಂದು ಅವಸರದಲ್ಲಿ ನಡೆಯಬೇಕಾದ ಪ್ರಮೇಯವೇನಿತ್ತು! ಆಗ ಅಲ್ಲಿ ಸಮರ್ಥರಾದ ಹಲವರು ಅಭ್ಯರ್ಥಿಗಳಿರಲಿಲ್ಲವೆ? ಇವರೇ ಸರ್ವ ಸಮರ್ಥರೆಂದು ಮಹಾ ಜನರು ನಿರ್ಧರಿ ಸಿದರೇ! ಹಿಂದಣ ಚುನಾವಣೆಗಳೆಲ್ಲಾ ಬಹಿರಂಗವಾಗಿ ನಡೆದು ಈ ಚುನಾವಣೆ ನಾಟಕದಂತೆ ನಡೆಯಲು ಪ್ರಬಲವಾದ ಕಾರಣಗಳೇನೋ ಇರಬಹುದೆಂದು ಅನೇಕರು ಸಂಶಯಪಡುತ್ತಾರೆ. ನಾವು ಶ್ರೀ ಮಲ್ಲಿಕಾರ್ಜುನದೇವರ ಮಾತನ್ನು

2. *'ವಿಗ್ನಿಜಯ' ಗ್ರಂಥವನ್ನು ನೋಡಿರಿ.

ನಂಬಲು ಸಾಧ್ಯವಿಲ್ಲ. ⊕ಅವರಿಗೆ ಚಿತ್ರದುರ್ಗದಲ್ಲಿ ಆಶ್ರಮಸ್ವೀಕಾರ ನಡೆದ ಸಂದರ್ಭದಲ್ಲಿ ವಿದ್ವದ್ಗೋಷ್ಠಿ ನಡೆಯಿತು. ಆ ಸಮಯದಲ್ಲಿ ಶ್ರೀ ಮಲ್ಲಿಕಾರ್ಜುನ ದೇವರು "ಶ್ರೀ ಮಠದಿಂದ ನಾಲ್ಕು ಸಾವಿರ ರೂಪಾಯಿ ವೆಚ್ಚವಾದರೂ ಚಿಂತೆ ಯಿಲ್ಲ. ಪ್ರತಿಯೊಬ್ಬ ವಿದ್ವಾಂಸರಿಗೂ ೧೦೧ ರೂಪಾಯಿ ವಿದ್ವತ್ಸಂಭಾವನೆ ಕೊಡೋಣ, ವಿದ್ವಾಂಸರನ್ನು ಗೌರವಿಸೋಣ" ಎಂದು ವಾಗ್ದಾನ ಮಾಡಿದರು. ಡಾ|| ಎಸ್. ಸಿ. ನಂದೀಮಠ್, ಎಂ.ಎ.,ಪಿಹೆಚ್.ಡಿ., ಅವರು ವಿದ್ವದ್ಗೋಷ್ಠಿಯ ಅಧ್ಯಕ್ಷರಾಗಿದ್ದರು. ಸುಮಾರು ಇಪ್ಪತ್ತು ಮಂದಿ ವಿದ್ವಾಂಸರು ನಾಡಿನ ನಾನಾಭಾಗಗಳಿಂದ ಬಂದಿದ್ದರು. ವಿದ್ವತ್ಸಭೆ ನಡೆಯಿತು. ಶ್ರೀ ಮಲ್ಲಿಕಾರ್ಜುನ ದೇವರು ಅಂದು ಶ್ರೀ ಮಲ್ಲಿಕಾರ್ಜುನಸ್ವಾಮಿಗಳಾದರು. ವಿದ್ವಾಂಸರಿಗೆ ಮಠ ದಿಂದ ವಿದ್ವತ್ಸಂಭಾವನೆಯನ್ನು ದಯಪಾಲಿಸಲಿಲ್ಲ. ಅವರ ವಾಗ್ದಾನವನ್ನು ಮುರುಘೇಶ ನಡಸಿಕೊಡಲಿಲ್ಲ ! ಸ್ವಾಗತಸಮಿತಿಯವರು ವಿದ್ವಾಂಸರಿಗೂ ಗಣ್ಯ ಮಹನೀಯರಿಗೂ ಒಂದೊಂದು ಶಾಲನ್ನು ಬಹುಮಾನವಾಗಿ ಕೊಟ್ಟರು. ಶ್ರೀ ಮಲ್ಲಿಕಾರ್ಜುನಸ್ವಾಮಿಗಳು ಆಡಿದ ಮಾತನ್ನು ತಪ್ಪಿದರು. ವಿದ್ವಾಂಸ ಮಂಡಲಿಗೆ ಅಪಚಾರ ಮಾಡಿದರು ! ಮುರಘ ಮಠದ ಕೃಪಾಶ್ರಯದಲ್ಲಿ ಪ್ರಕಟವಾದ 'ಶ್ರೀ ಜಗದ್ಗುರು ಜಯದೇವ ದಿಗ್ವಿಜಯ'ದಲ್ಲಿ ಹೇಳಿರುವಂತೆ ಹಾವೇರಿ ಹೊಸಮಠದ ಸ್ವಾಮಿಗಳಾಗಿದ್ದ ಶ್ರೀ ಮಲ್ಲಿಕಾರ್ಜುನಸ್ವಾಮಿಗಳು ಬಂಗಾರದ ಒಡವೆಯೇ ಆದರು ! ಇವರು ಶ್ರೀ ಜಯವಿಭವಸ್ವಾಮಿಗಳ ಸಮಕಾಲೀನರೆಂದಮೇಲೆ ಮಧ್ಯ ವಯಸ್ಸು ಮೀರಿರಬೇಕು. ಶ್ರೀ ಆದಿ ಮುರುಘೇಶನೇ ಇಪ್ಪತ್ತನೆಯ ಶತಮಾನ ದಲ್ಲಿ ಶ್ರೀ ಮಲ್ಲಿಕಾರ್ಜುನಸ್ವಾಮಿಗಳ ರೂಪದಲ್ಲಿ ಈ ಪೀಠಾರೋಹಣ ಮಾಡಿರು ತ್ತಾನೆಂದು ಆ ಸಮಾಜದವರು ಗೌರವಿಸುತ್ತಾರೆ. * ಇವರು ಬಿಜಾಪುರ ಪ್ರಾಂತದ ಬೀಳಗಿ ಗ್ರಾಮದ ಶ್ರೀ ಗುರುವಯ್ಯನವರ ಸತ್ಪುತ್ರರು; ವ್ಯಾಕರಣ ವಿದ್ವಾಂಸರು; ಪಂಡಿತರು. ದೊಡ್ಡತನ ತಾನಾಗಿ ಇವರ ಮೇಲೆ ಬಿದ್ದು ಬಂದಿದೆ

---

⊕ ತಹಶೀಲ್ದಾರ್ ಶ್ರೀ ಆರ್. ಎಂ. ಬಸವಲಿಂಗಯ್ಯನವರು ಸೆಟ್ಲಮೆಂಟ್ ಅಸಿಸ್ಟಂಟ್ ಸೂಪರಿಂಟೆಂಡೆಂಟರು, ಚಿತ್ರದುರ್ಗ ಮತ್ತು ಸರ್ಕಾರಿ ಹೈಸ್ಕೂಲ್ ಕನ್ನಡ ಪಂಡಿತರು ಶ್ರೀ ಎರೆಸೀಮೆ ಚನ್ನಪ್ಪನವರು ವಿದ್ವದ್ಗೋಷ್ಠಿ ಉಪಸಮಿತಿ ಕಾರ್ಯದರ್ಶಿ ಗಳಾಗಿದ್ದರು.

* ನಮ್ಮ ನಿರಂಜನ-ಎಂಬ ನಮ್ಮ ಗ್ರಂಥವನ್ನು ನಿರೀಕ್ಷಿಸಿರಿ.

...ಲ್ಲದೆ ಮಹಾ ಅದೃಷ್ಟಶಾಲಿಗಳೆಂದೇ ಈ ಮಹಾಸ್ವಾಮಿಗಳನ್ನು ನಾವು ತಿಳಿಯ ...ಕೆಂಬ" ಎಂದು "ದಿಗ್ವಿಜಯ" ಗ್ರಂಥ ಯಥಾರ್ಥವನ್ನು ನುಡಿದಿರುತ್ತದೆ. ಆದರೆ, ...ವರ ನೂತನ ಮತಪಂಥ ಇವರ ವಯೋಧರ್ಮದ ಮಂದಹಾಸವನ್ನು ...ರುತ್ತದೆ !

ವೀರಶೈವರಲ್ಲಿ ಪ್ರಮಥಗಣ, ರುದ್ರಗಣ, ಯೋಗಪಂಥ ಗಣ, ಪುರಾತನ ಗಣ, ದಶಗಣ, ತ್ರಯೋದಶಗಣ, ಷೋಡಶಗಣ, ಶರಣಗಣ, ಅಷ್ಟಗಣ ಪರಂ ...ಯುಂಟು. ಅಲ್ಲಮರು ಯೋಗಪಂಥಗಣವರಾಗಿದ್ದಾರೆ. ಪ್ರತಿ ಕಲಿಯುಗದ ...ಯಲ್ಲಿ ಒಬ್ಬ ಯೋಗಪಂಥದಗಣವರನ ಅವತಾರವಾಗುತ್ತದೆ. ಈ ಯೋಗ ಪಂಥ ಗಣವರ ಅಲ್ಲಮರ ಪರಂಪರೆಯನ್ನು ಅನುಸರಿಸಿಯೇ ವಿರಕ್ತಪಂಥ ...ದಯವಾಯಿತೆಂದು ಹೇಳಬಹುದು. ನಾಥಪಂಥದ ಗುರುಪರಂಪರೆಯನ್ನು ಯೋಗಾಚಾರ್ಯರೆಂದು ಕರೆಯುತ್ತಾರೆ. ವೀರಶೈವವನ್ನು ಒಂದು ಜಾತಿ ...ದು ಹೇಳುವಂತಿಲ್ಲ. ಈ ಮತದಲ್ಲಿ ಎಲ್ಲ ವರ್ಣದವರೂ ವಿವಿಧ ವೃತ್ತಿಯ ...ೂ ಆಚಾರ ಸಂಪ್ರದಾಯ ತಾರತಮ್ಯವುಳ್ಳವರೂ ಇದ್ದಾರೆ. ಹಲವು ಪ್ರಭೇದ ...ವೆ. ಇದರಂತೆ ವಿರಕ್ತ ಸಂಪ್ರದಾಯವೆಂಬುದು ಒಂದು ಪಂಥವೇ ಹೊರತು ...ವೇ ಸಮಗ್ರ ವೀರಶೈವವಲ್ಲ. ಅವರಲ್ಲಿಯೂ ನೂರೆಂಟು ಜಾತಿಗಳಿವೆ. ಒಂದೊಂದು ಪಂಗಡದವರೂ ತಮ್ಮ ತಮ್ಮ ಗುರುಪೀಠಗಳನ್ನು ಏರ್ಪಡಿಸಿಕೊಂಡಿ ...ತ್ತಾರೆ. ಈ ವಿರಕ್ತರು ಒಂದು ಪಂಗಡದವರಲ್ಲ. ಅದು ಒಂದು ಪಂಥ. ವೀರ ಶೈವದ ಎಲ್ಲ ಪ್ರಭೇದಗಳಲ್ಲಿಯೂ ಈ ಪಂಥವಿರಬಹುದು. ಆದರೆ ಆ ವಿರಕ್ತ ...ಲ್ಲಾ ಈ ಪಂಚ ಸಮಯದವರೇ ಆಗಿರುವುದಿಲ್ಲ. ಅನೇಕರು ಜಂಗಮ ವಿರಕ್ತ ...ಗಿರುತ್ತಾರೆ. ಆದರಿಂದ ಈ ಪಂಚ ಸಮಯಗಳವರೂ ಒಂದುಗೂಡುವಂತಿಲ್ಲ. ...ವರೆಲ್ಲಾ ಸನಾತನ ವೀರಶೈವ ಗುರುವರ್ಗದಿಂದ ಪ್ರತ್ಯೇಕವಾಗಿರುತ್ತಾರೆ. ಗುರು ...ಲದಲ್ಲಿಯೂ ಅನೇಕ ಪಂಗಡಗಳಿವೆ. ಅವರಿಗೆಲ್ಲಾ ಪಂಚ ಆಚಾರ್ಯರೇ ಗುರುಗಳು. ಅವರು ವಿರಕ್ತರನ್ನೇ ಅಲ್ಲ, ಇತರ ನಾನಾ ಪ್ರಭೇದದ ಗುರುಗ ...ನ್ನು ಗೌರವಿಸುತ್ತಾರೆಯೇ ಹೊರತು, ಅವರನ್ನು ತಮ್ಮ ಗುರುಗಳೆಂದು ಒಪ್ಪು ...ದಿಲ್ಲ. ಗುರು ಎಂದೂ ಗುರುವೇ. ವಿರಕ್ತ ಎಂದೂವಿರಕ್ತನೇ. ಗುರುವಿಗೆ ಗೋತ್ರ ಸೂತ್ರಗಳುಂಟು; ವಿರಕ್ತನಿಗೆ ಗೋತ್ರ ಸೂತ್ರಗಳಿಲ್ಲ. ಆದರೆ, ಲಿಂಗ ಧಾರಣ, ಲಿಂಗಾರ್ಚನ, ಭಸ್ಮ ರುದ್ರಾಕ್ಷಧಾರಣ, ಗುರುಜಂಗಮಾರಾಧನ,

ಪಾದೋದಕ ಪ್ರಸಾದನಿಷೇವಣ, ಪಂಚಾಕ್ಷರೀ ಮಂತ್ರಪಠನ ಇವು ಎಲ್ಲ ರಲ್ಲಿಯೂ ಒಂದೇ ವಿಧ. ಏಕೆಂದರೆ ಇವು ಮತಪ್ರಕ್ರಿಯೆಗಳು. ಈ ವೃತ್ತಿ ಯಿಂದಲೇ ಸಮಾಜದಲ್ಲಿ ವಿರಕ್ತ ಪಂಥವೆಂಬುದು ಪ್ರತ್ಯೇಕವಾಗಿಯೇ ಬೆಳೆದು ಬಂದಿದೆ. ಈ ವಿರಕ್ತರಲ್ಲಿ ಪಂಚ ಸಮಯಾಚಾರಗಳು ಅರ್ವಾಚೀನ. ವಿರಕ್ತರಲ್ಲಿ ನಿರ್ಲಿಪ್ತ ಮನೋವೃತ್ತಿಯೇ ಮುಖ್ಯ. ಶ್ರೀ ವೈಷ್ಣವರಲ್ಲಿ ತೆಂಕಲೆ ಸಂಪ್ರದಾಯ ವಿದ್ದಂತೆ! ವಿರಕ್ತ ಜೀವನ ತ್ಯಾಗಮಯವಾದುದು. ಅವನು ಇಹಜೀವನ ರುಚಿಯ ಬಂಧನದಲ್ಲಿ ಬೀಳಬಾರದು. ಅವನಲ್ಲಿ ಶಿವಾನುಭವ ಜ್ಞಾನ ತುಂಬಿ ಬೇಕು. ಇಂಥ ಶಿವಾನುಭವಜ್ಞಾನ ಪೂರ್ವ ಪುಣ್ಯದಿಂದ ಯಾರಲ್ಲಿ ಬೇಕಾದರೂ ಅಂಕುರಿಸೀತು!

* ಒಮ್ಮೆ ಬಾಗಲಕೋಟೆಯ ಮಲ್ಲಪ್ಪನವರೆಂಬ ಗೃಹಸ್ಥರೊಬ್ಬರು ವೈರಾಗ್ಯಸ್ಥಿತಿಯನ್ನು ಅವಲಂಬಿಸಿದರು. ಅವರು ಅದುವರೆಗೆ ಶಾಲಾ ಉಪಾ ಧ್ಯಾಯರಾಗಿದ್ದರು. ಆತನೊಮ್ಮೆ ಹಾನಗಲ್ಲು ಕುಮಾರಸ್ವಾಮಿಗಳನ್ನು ಸಂ ರ್ಶಿಸಲು ಹಾನಗಲ್ಲು ಮಠಕ್ಕೆ ಬಂದರಂತೆ! ಆಗ ಎದುರಿಗೆ ತೂಗುಮಂಚ ಮೇಲೆ ಕುಳಿತುಕೊಂಡಿದ್ದ ಶ್ರೀಗಳನ್ನು ಕಂಡು "ಇಲ್ಲಿಯ ಸ್ವಾಮಿಗಳು ತಾವೇನು ?" ಎಂದು ಕೇಳಿದರು.

ಶ್ರೀಗಳು:- ಅನ್ನುವರು
ಮಲ್ಲಪ್ಪ:- ಯಾರು ?
ಶ್ರೀಗಳು:- ಜನರು

ಮಲ್ಲಪ್ಪ:- ಹಾಗೆನ್ನುವವರು ತಿಳಿಯದವರು. ಅಶನವಸನಗಳ ಚಿಂತೆ ಯನ್ನು ಬಿಟ್ಟು, ಭೋಗ ವಿಲಾಸಾದಿಗಳನ್ನು ಮನದಿಂದ ನೆನೆಯದೆ, ಭೂಮಿ ಯನ್ನೇ ಹಾಸುಗೆಯನ್ನಾಗಿ, ಆಕಾಶವನ್ನೇ ಹೊದಿಕೆಯನ್ನಾಗಿ ಮಾಡಿ ಕೊಂಡು ಶಮೆದಮೆಗಳೆಂಬ ಪುಷ್ಪಗಳ ಸುಗಂಧವನ್ನು ಆಘ್ರಾಣಿಸುತ್ತ ಪ್ರತಿಕ್ಷಣ ದಲ್ಲಿಯೂ ಅಲ್ಲೋಲ ಕಲ್ಲೋಲವಾಗುತ್ತಿರುವ ಈ ಪ್ರಪಂಚವನ್ನು ಸ್ಥೈರ್ಯ ದಿಂದ ಶಾಂತಿಮಯವಾದದ್ದೆಂದು ಪರಿಭಾವಿಸಿ, ಈಶ್ವರನಲ್ಲಿಯೂ ಸಹ ಯಾಚನೆಗೆ ಕೈಒಡ್ಡದೆ ಅಪವರ್ಗವನ್ನು ಸಾಧಿಸಿರುವ ವಿರತಿಯ ಮಾರ್ಗವನ್ನೆ! ನಾನಾತರಹದ ರುಚಿಪದಾರ್ಥಗಳ ಜಾಲದಲ್ಲಿ ದಾಸವೃತ್ತಿಯನ್ನು ನಾಚಿಸಿ

* ಶಿವಯೋಗ ಮಂದಿರದ ಬೆಳಗು ಸ್ಮಾರಕ ಗ್ರಂಥದಿಂದ ಸಂಗ್ರಹಿಸಿದ್ದು

ತೊಂದಿಸಿ, ಉಡಿಗೆತೊಡಿಗೆಗಳ ಮೋಹಪಾಶದಲ್ಲಿ ಶರೀರವನ್ನು ಕೆಡವಿ 'ನಾನು ಧಿಕಾರಿ; ನಾನು ಸ್ವಾಮಿ' ಎಂಬ ಅಹಂಭಾವನೆಯಿಂದ ಭೂಮಿಗೆ ಪಾದವನ್ನು ಸೋಂಕಿಸದೆ ಅಹಂಕಾರ ಮಮಕಾರಗಳ ಮಬ್ಬಿನ ಹಗ್ಗದಿಂದ ನಿರ್ಮಿಸಿದ ತೂಗುಮಂಚದ ಜೋಕಾಲಿ ಎತ್ತ ?' ಎಂದು ಆ ಗೃಹಸ್ಥ-ವಿರಾಗಿ ದಿಟ್ಟತನ ದ ಆಡಿದ ಮಾತನ್ನು ಕೇಳಿ "ಇಂಥ ಅಪೂರ್ವ ವ್ಯಕ್ತಿಗಳು ಇನ್ನೂ ನಮ್ಮ ಮಾಜದಲ್ಲಿರುವರಲ್ಲವೆ ?" ಎಂದು ಹಾನಗಲ್ಲು ಶ್ರೀಗಳು ಆಶ್ಚರ್ಯಪಟ್ಟರು !

ಆ ಗೃಹಯೋಗಿ ಮಲ್ಲಪ್ಪನವರ ಶಿವಾನುಭವತತ್ತ್ವ ಅನೇಕ ವಿರಕ್ತ ಠಾಧಿಕಾರಿಗಳ ತಾರಕಮಂತ್ರವಾಗಿದೆ! ವಿರಕ್ತರ ಆತ್ಮಶಕ್ತಿಯನ್ನು ಈ ಮಾತು ಳೆಯುತ್ತದೆ ! ವಿರಕ್ತಾಶ್ರಮದಲ್ಲಿ ವ್ಯಕ್ತಿ ನಿರಂಜನ ಸಿದ್ಧನಾಗುತ್ತಾನೆ ! ಸಿದ್ಧ ನಿಂತೆಡೆಯೇ ಪವಿತ್ರ ಕ್ಷೇತ್ರ ! ಮುಟ್ಟು ಮೈಲಿಗೆಗಳೆಂಬ ಕ್ಷುಲ್ಲಕ ಸ್ಥಿತಿ ಯನ್ನು ಅವನು ಮೀರಿರುತ್ತಾನೆ ! ಆ ಪರಮ ನಿರಂಜನ ಸ್ಪರ್ಶದಿಂದ ಪಂಚ ಭೂತಗಳೂ ಪರಿಶುದ್ಧವಾಗುತ್ತವೆ ! ಆ ಶಕ್ತಿ ಅವನ ಆತ್ಮ ಶಕ್ತಿ ; ಅದರ ರಿವೇ ಶಿವಾನುಭವ ! ಈ ಅರಿವು ಸಿದ್ಧಿಸದಿದ್ದಲ್ಲಿ ಅವನು ಇನ್ನೂ ನರನೇ ! ಹೇಳುವಂತಿಲ್ಲ !

ವಿರಕ್ತರಲ್ಲಿ ವಿವಿಧ ವಿಚಿತ್ರ ಸಂಪ್ರದಾಯಗಳುಂಟು. ಕನ್ನಡ ನಾಡಿನಲ್ಲಿ ರಕ್ತ ಮಠಾಧೀಶ್ವರರೊಬ್ಬರು ಯಾವುದೇ ಸಾರ್ವಜನಿಕ ಸಮಾರಂಭಕ್ಕೆ ಬಂದಾಗ, ತಮ್ಮದೇ ಆದ ಒಂದು ಪೀಠವನ್ನು ಹೊರಿಸಿಕೊಂಡು ಬರುತ್ತಾರೆ. ಅದೊಂದು ಹಳೆಯ ಮಡಿಸುವ 'ಕುರ್ಚಿ'. ಇದು ಅವರ ಸತ್ವ ಸಂಕೇತ ! ಅವರು ಆಗಲೇ ವಯಸ್ಸಾದವರು. ಸ್ವಯಂವಿದ್ಯಾ ಸಂಪನ್ನರು. ಮತಧರ್ಮದಲ್ಲಿ ಸಾಕಾದಷ್ಟು ತಿಳಿವಳಿಕೆಯಿಲ್ಲದಿದ್ದರೂ, ವ್ಯವಹಾರ ಜೀವನದಲ್ಲಿಯೂ ಚತುರರಲ್ಲ. ಮಹಾ ವಿರಕ್ತಮೂರ್ತಿ ನಿಂತ ನೆಲವೇ ಅವಿಮುಕ್ತ ಕ್ಷೇತ್ರವಾದೀತು ! ಮೆಟ್ಟಿದ ನೆಲ ಪುಣ್ಯಕ್ಷೇತ್ರವಾದೀತು ! ಅವರು ಎಲ್ಲಿಯಾದರೂ ಕೂಡಬಲ್ಲರು ! ಆತ್ಮಶಕ್ತಿ ಇದ್ದವರಿಗೆ ಹಳೆಯ 'ಕುರ್ಚಿ' ಏಕೆ ? ಇದು ತಪಶ್ಶಕ್ತಿಯಿಲ್ಲದವರ ಬಯಲಾಟ! ಆತ್ಮಶಕ್ತಿಯಿಲ್ಲದವರ ಆಡಂಬರ ! ಆ ಹಳೆಯ ಪೀಠ ಬಡಗಿಯ ಉಳಿಯ ಏಟಿ ನಿಂದ ರೂಪುಗೊಂಡಿತು ! ಅದೇನೂ 'ಶೂನ್ಯಸಿಂಹಾಸನ'ದ ತುಂಡು ಪೀಠವಲ್ಲ ! ಶಿವಾನುಭವ ಇನ್ನೂ ಈ ವಿರಕ್ತರಲ್ಲಿ ಅಳವಡಲಿಲ್ಲವೇನೋ ! ಆಧುನಿಕ ಜನ ಕೋಟಿ ಈ ಪೊಳ್ಳು ಭಾವನೆಯನ್ನು ಮೆಚ್ಚುವುದಿಲ್ಲ ! ಶರಣಧರ್ಮ ಇದನ್ನು

ಒಪ್ಪುವುದಿಲ್ಲ ! ಹಿಂದೆ ಮಹಾ ಶರಣೆ ಸರ್ವಶೀಲೆ ಚೆನ್ನಮ್ಮನ ಮಠಕ್ಕೆ ಮಹಾ ವಿರಕ್ತರೊಬ್ಬರು ಬಂದರು ! ಅವರೇ ಪಾಲ್ಕುರಿಕೆ ಸೋಮನಾಥ ಶಿವಯೋಗಿ ! ತಾಯಿ ಆ ವಿರಕ್ತರನ್ನು ಆದರಿಸಿ, ಮಠದಲ್ಲಿ ಕುಳ್ಳಿರಿಸಿ, ನೀರು ತರಲು ಸಮೀಪದ ಬಾವಿಗೆ ಹೋದಳು. ನೀರು ತುಂಬಿದ ಕೊಡವನ್ನು ಮಠದ ಮುಂದೆ ಸ್ವಲ್ಪ ದೂರದಲ್ಲಿ ನೆಲದ ಮೇಲಿಟ್ಟು ಆ ವೃದ್ಧೆ ಸ್ವಲ್ಪ ಸುಧಾರಿಸಿಕೊಂಡು, ಪುನಃ ಆ ಕೊಡವನ್ನು ಎತ್ತಿ ತಲೆಯ ಮೇಲಿರಿಸಿಕೊಂಡು ಮಠಕ್ಕೆ ಬಂದಳು. ಇದನ್ನೆಲ್ಲಾ ಆ ಅತಿಥಿ ವಿರಕ್ತರು ಮಠದಲ್ಲಿ ಕುಳಿತು ನೋಡುತ್ತಿದ್ದರು. ಆ ಶರಣೆ ಅತಿಥಿಯನ್ನು ಮಜ್ಜನ ಮಾಡುವಂತೆ ಹೇಳಿದಳು. "ಅಮ್ಮಾ ! ನೀನು ಸರ್ವಶೀಲೆಯೆಂದು ಕೇಳಿದ್ದೇನೆ. ತುಂಬಿದ ಕೊಡವನ್ನು ನೆಲದ ಮೇಲಿಟ್ಟು ತಂದದ್ದರಿಂದ ಆ ನೀರು ಮೈಲಿಗೆಯಾಯಿತಲ್ಲವೆ ?" ಎಂದು ಆ ವಿರಕ್ತರು ಶಂಕಿಸಿದರು ! "ಜಂಗಮೋತ್ತಮಾ ! ಇದೆಂಥ ಸಂಶಯ ! ನೀವು ನಿಂತಿದ್ದ ಸ್ಥಳದಲ್ಲಿ ನಾನು ಕೊಡವನ್ನಿಟ್ಟುದುದು ನಿಜ. ನಿಮ್ಮ ಪಾದಸ್ಪರ್ಶದಿಂದ ಆ ಸ್ಥಳ ಪವಿತ್ರವಾಯಿತು. ಆ ಸ್ಥಳದಲ್ಲಿ ನಾನಿಟ್ಟ ಕೊಡದ ನೀರು ವಿರಕ್ತರ ಪಾದಸ್ಪರ್ಶ ಬಲದಿಂದ ಪುಣ್ಯತೀರ್ಥವಾಯಿತಲ್ಲವೆ ? ನಿಮ್ಮ ಸಂಶಯ ಶರಣಧರ್ಮವಲ್ಲ ! ನಿಮಗಿನ್ನೂ ಶಿವಾನುಭವಜ್ಞಾನವಾಗಿಲ್ಲ ! ನಿಮ್ಮ ಆತ್ಮ ಶಕ್ತಿಯ ಅರಿವೇ ನಿಮಗಿಲ್ಲ !" ಎಂದು ಮರುಗಿದಳು ! ಆ ಮಹಾ ವಿರಕ್ತರು ಆ ನಿಜ ಶರಣೆ ಸರ್ವಶೀಲೆ ಚನ್ನಮ್ಮನ ಮುಂದೆ ಅಡ್ಡಬಿದ್ದರು ! ಶರಣೆ ಚನ್ನಮ್ಮನ ಶೀಲ ವಿರಕ್ತ ಮಠಾಧೀಶ್ವರರಿಗೆ ಅನುಕರಣೀಯವಾಗಿದೆ ! ಅವರಲ್ಲಿ ಆತ್ಮವಿಶ್ವಾಸವನ್ನು ಮೂಡಿಸುತ್ತದೆ !

ತತ್ವಾರ್ಥಜ್ಞಾನವಿಲ್ಲದೆ ನಾಮಮಾತ್ರಕ್ಕೆ ಗುರುವೆನಿಸಿಕೊಂಡವನು ತಾನೇ ಭವಸಾಗರವನ್ನು ದಾಟಲು ಅಸಮರ್ಥನಾಗಿರುವಾಗ ತನ್ನನ್ನು ಆಶ್ರಯಿಸಿದ ಮತ್ತೊಬ್ಬರನ್ನು ಭವಬಂಧನದಿಂದ ತಪ್ಪಿಸಿ ಮುಕ್ತರನ್ನು ಮಾಡಬಲ್ಲನೆ ? ನೀರಿನಲ್ಲಿ ತಾನೇ ಮುಳುಗಿಕೊಳ್ಳುವ ಕಲ್ಲು ತನ್ನನ್ನು ಗಂಟುಬಿದ್ದ ಮತ್ತೊಂದು ಕಲ್ಲನ್ನು ಮೇಲಕ್ಕೆ ತೇಲಿಸುವುದುಂಟೆ ?



# ತರಂಗ ೧೩.

## ಗುರುಪೀಠಗಳು; ಶೂನ್ಯತತ್ತ್ವ ಪ್ರಚಾರ

೫೩. "ಕಾಣದುದನರಸುವರಲ್ಲದೆ ಕಂಡುದನರಸುವರೇ । ಘನಕ್ಕೆ ಘನವಾದ ವಸ್ತು ತಾನೆ ಗುರುವಾದ ತಾನೆ ಲಿಂಗವಾದ ತಾನೆ ಜಂಗಮವಾದ ತಾನೆ ಪ್ರಸಾದವಾದ ತಾನೆ ಮಂತ್ರವಾದ ತಾನೆ ತಂತ್ರವಾದ ತಾನೆ ಯಂತ್ರವಾದ ತಾನೆ ಸಕಲ ವಿದ್ಯಾಸ್ವರೂಪವಾದ. ಇಂತಿವನೆಲ್ಲವನೊಳಕೊಂಡು ಕರಸ್ಥಲಕ್ಕೆ ಬಂದಬಳಿಕ ಇನ್ನು ನಿರ್ವಿಕಾರ ಕಾಣಾ ಗುಹೇಶ್ವರಾ ॥"

—ಅಲ್ಲಮಪ್ರಭು.

ಹನ್ನೆರಡನೆಯ ಶತಮಾನದಲ್ಲಿ ಕೇವಲ ವಿರಕ್ತ ಮಠಗಳೇ ಅಲ್ಲದೆ ಅನೇಕ ಗುರುಸಂಪ್ರದಾಯದ ಮಠಗಳೂ ನಿರ್ಮಾಣವಾದುವು. ವೀರಶೈವರಲ್ಲಿ ಗುರು, ಲಿಂಗ, ಜಂಗಮ ಈ ತತ್ತ್ವತ್ರಯ ಅತಿ ಮುಖ್ಯ. ವಿರಕ್ತಪಂಥ ಪ್ರಸಾರಕ್ಕಾಗಿ ಗುರು ಸಂಪ್ರದಾಯ ಅತ್ಯಾವಶ್ಯಕವಾಗಿತ್ತು. ಬಹುಶಃ ಸನಾತನ ವೀರಶೈವ ಗುರುಪೀಠಗಳು ಬಸವಣ್ಣನವರ ಶರಣ ಮಾರ್ಗವನ್ನು ಅಂಗೀಕರಿಸಿದಂತೆ ಕಾಣುವುದಿಲ್ಲ. ಆದರಿಂದ ರೇವಣಸಿದ್ಧರೂ, ಮರುಳಸಿದ್ಧರೂ ಬಸವಣ್ಣನವರ ಶರಣ ತತ್ತ್ವವನ್ನು ಮನಸಾರೆ ಅಂಗೀಕರಿಸಿ, ಗುರುಸ್ಥಲದಲ್ಲಿ ನಿಂತು, ತತ್ತ್ವತ್ರಯ ಸಿದ್ಧಾಂತವನ್ನು ಪೂರ್ಣಗೊಳಿಸಿರಲು ಸಾಧ್ಯ! ರೇವಣಸಿದ್ಧರು ತಮ್ಮ ಪರಮಾಪ್ತ ಶಿಷ್ಯರಾದ ಸಿದ್ಧರಾಮ, ಮರುಳಸಿದ್ಧ, ಕಾಡುಸಿದ್ಧ ಮೊದಲಾದ ವೀರಮಹೇಶ್ವರರೊಂದಿಗೆ ಕರ್ಣಾಟಕದಲ್ಲಿಯೇ ಅಲ್ಲದೆ, ತಮಿಳುನಾಡಿನಲ್ಲಿಯೂ ಸಂಚರಿಸಿ ಅನೇಕ ಗುರುಮಠಗಳನ್ನು ಸ್ಥಾಪಿಸಿದರು. ಕರ್ಣಾಟಕದಲ್ಲಿ ಸುತ್ತೂರು ಮಠ, ಎಳನಡು-ಅರಸೀಕೆರೆ ಮಠ, ಸಿರಿಗೆರೆ ಮಠ, ಗೂಳೂರು ಸಿಡುಮಾಮಿಡಿ ಮಠ, ಹೂಲಿಮಠ, ಮೊದಲಾದ ಪ್ರಮುಖ ಗುರುಮಠಗಳಲ್ಲಿ ಕೆಲವು ಆಗ ಸ್ಥಾಪನೆಯಾದುವು. ಇನ್ನೂ ಕೆಲವು ಮೊದಲೇ ಸ್ಥಾಪನೆಯಾಗಿದ್ದು ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣ ಕ್ರಾಂತಿಯಾದಮೇಲೆ ಬಸವಣ್ಣನವರ ವೀರಶೈವವನ್ನು ಅಂಗೀಕರಿಸಿದುವೆಂದು ತಿಳಿದುಬರುತ್ತದೆ. ಈ ಗುರುಮಠಗಳೆಲ್ಲಾ ತತ್ತ್ವದಲ್ಲಿ ಎಷ್ಟೇ ಉದಾರ ಮನೋಭಾವದಿಂದ ವರ್ತಿಸಿ, ಲೋಕ ಕಲ್ಯಾಣ

ವನ್ನು ಸಾಧಿಸಿದರೂ, ಅವು ತಮ್ಮ ಸಂಪ್ರದಾಯವನ್ನು ಪ್ರಾಚೀನ ಗುರುಸೂತ್ರ ವಿಡಿದೇ ಪ್ರಾರಂಭಿಸಿದುವು. ವಿರಕ್ತ ಮಠಗಳೂ ಅನಾದಿ ಸೂತ್ರವಿಡಿದು ಬಂದಂತೆಯೇ, ಗುರುಪೀಠಗಳೂ ಅನಾದಿ ಗುರುಸೂತ್ರವಿಡಿದೇ ಬಂದುವು. ಇದು ಸರಿಯಾಗಿಯೇ ಇದೆ. ವೀರಶೈವ ಇಂದಿನದಲ್ಲ! ಪ್ರಾಚೀನವಾದುದು. ಕಾಲ ಕಾಲಕ್ಕೆ ಸುಧಾರಣೆಯಾಗಿರಬಹುದು; ಆದರೆ ಮೂಲತತ್ತ್ವ ಒಂದೇ! ಈ ದೃಷ್ಟಿ ಯಿಂದ ಪರಿಭಾವಿಸಿದರೆ ಎಲ್ಲ ಮಠಗಳೂ ಪ್ರಾಚೀನವೇ! ಎಲ್ಲ ಮಠಗಳೂ ಪ್ರಾಚೀನವೇ! ಹೊಸದಾಗಿ ಮಠ ಉದಯವಾದ ಮಾತ್ರಕ್ಕೆ ತತ್ತ್ವ ಹೊಸ ದಾಗಿ ಉದಯವಾದಂತಲ್ಲ!

ಶರಣಯುಗದ ಪೂರ್ವದಲ್ಲಿಯೇ ಕರ್ಣಾಟಕದ ದಕ್ಷಿಣಾಗ್ರದಲ್ಲಿ ತಮಿಳು ನಾಡಿನ ಅಂಚಿನಲ್ಲಿರುವ ಸುತ್ತೂರು ಕ್ಷೇತ್ರದಲ್ಲಿ ರೇಣುಕ ಗುರುಸಂಪ್ರದಾಯ ಸೂತ್ರವಿಡಿದು ಶಿವರಾತ್ರಿ ಶಿವಾಚಾರ್ಯ ಪೀಠವೊಂದು ಸ್ಥಾಪನೆಯಾಗಿತ್ತು. ಇದು ಹದಿನೈದನೆಯ ಶತಮಾನದಲ್ಲಿ ಹರದನಹಳ್ಳಿ ನಿರಂಜನ ಸಿದ್ಧಲಿಂಗೇಶ್ವರ ಕಾಲದಲ್ಲಿ ಸ್ಥಾಪನೆಯಾಯಿತೆಂದೂ ಕೆಲವರು ವಿದ್ವಾಂಸರು ಹೇಳುತ್ತಾರೆ. ಇದು ಸರಿಯೆಂದು ಹೇಳಬಹುದು. ಆದರೆ, ಈ ಪೀಠಪರಂಪರೆ ಹನ್ನೆರಡನೆಯ ಶತ ಮಾನಕ್ಕಿಂತ ಹಿಂದೆಯೇ ಪ್ರಾರಂಭವಾಯಿತೆಂದೂ, ಸುತ್ತೂರಿನಲ್ಲಿ ಮಠ ಮಾತ್ರ ಹದಿನೈದನೆಯ ಶತಮಾನದಲ್ಲಿ ನಿರ್ಮಾಣವಾಯಿತೆಂದೂ ಗೊತ್ತಾಗುತ್ತದೆ. "ಸುತ್ತೂರು ಮಠದ ಉಗಮವು ಚೋಳರ ಕಾಲದಲ್ಲಿ ಆಗಿದೆಯೆಂದು ನಂಜನ ಗೂಡಿನ ೧೬೪ ನೆಯ ಶಿಲಾಶಾಸನದಿಂದ ತಿಳಿದುಬರುತ್ತದೆ. ಇದರಲ್ಲಿ ಶಕವರ್ಷ ೯೩೪ ನೆಯ ಅಂಗೀರಸ ಸಂವತ್ಸರ ಕಾರ್ತೀಕ ಮಾಸದ ಪೂರ್ಣಿಮೆಯಲ್ಲಿ ರಾಜೇಂದ್ರಚೋಳದೇವನೂ ಶ್ರೋತ್ರಿಯ ಗ್ರಾಮದ ಮಹಾ ಜನರೂ ರಾಜಗುರು ಗಳಾದ ಈಶಾನ ಈಶ್ವರ ಒಡೆಯರ್ಗೆ ದತ್ತಿಯನ್ನು ಕೊಟ್ಟಂತೆ ಉಲ್ಲೇಖವಿದೆ ಯೆಂದು ಆಸ್ಥಾನ ವಿದ್ವಾನ್ ಶಿವಾದ್ವೈತ ವಿದ್ಯಾಭೂಷಣ, ಸಾಹಿತ್ಯರತ್ನಂ ಶ್ರೀ ಎಂ. ಜಿ. ನಂಜುಂಡಾರಾಧ್ಯರು ಅವರು ತಾವು ಬರೆದಿರುವ "ಶಿವರಾತ್ರಿ ಶಿವಾ ಚಾರ್ಯ" ಎಂಬ ಗ್ರಂಥದಲ್ಲಿ ಹೇಳಿದ್ದಾರೆ. "ಸುತ್ತೂರು ಮಠವು ಅತಿ ಪ್ರಸಿದ್ಧ ವಾದುದು. ಇದು ಗುರು ವಿರಕ್ತ ಪರಂಪರೆಯನ್ನು ಸಮನ್ವಯಗೊಳಿಸಿ ವೀರ ಶೈವರ ಹೆಚ್ಚಳವನ್ನು ಆಧ್ಯಾತ್ಮಿಕ ಉನ್ನತಿಯನ್ನು ಸಾರುವ ಆದರ್ಶ ಗುರುಪೀಠ ವಾಗಿದೆ. ಈ ಪೀಠದ ಚರಿತೆಯಲ್ಲಿ ಅತಿ ಪ್ರಾಚೀನ ಸಂಪ್ರದಾಯದ ಪೀಠ

ಈಶ್ವರ ಒಡೆಯರಿಂದ ಮೊದಲುಮಾಡಿಕೊಂಡು ರೇವಣಸಿದ್ಧ, ಪ್ರಭುದೇವ, ತೋಂಟದಾರ್ಯ, ಮಾದೇಶ್ವರ, ಘನಲಿಂಗದೇವ ಮೊದಲಾದ ವೀರಶೈವ ಪೂಜ್ಯ ಆಚಾರ್ಯರ ನಿಕಟ ಸಂಬಂಧವನ್ನಿಟ್ಟುಕೊಂಡುದಕ್ಕೆ ಸಾಕಷ್ಟು ಆಧಾರಗಳಿವೆ. ಈ ಪೀಠದ ಘನತೆ ಮತ್ತು ಸಮಂಜಸತ್ವ ವೀರಶೈವರೆಲ್ಲರಿಗೂ ಅಭಿಮಾನದ ಸಂಗತಿಗಳಾಗಿವೆ" ಎಂದು ಡಾ|| ಶಿ. ಚೆ. ನಂದಿಮಠರವರು "ಶಿವರಾತ್ರಿ ಶಿವಾಚಾರ್ಯ" ಗ್ರಂಥದ ಮುನ್ನುಡಿಯಲ್ಲಿ ಹೇಳಿದ್ದಾರೆ. ಇದು ಯಥಾರ್ಥ. ಶ್ರೀ ಸುತ್ತೂರು ಮಠ ದಕ್ಷಿಣ ಕರ್ನಾಟಕದಲ್ಲಿ ತುಂಬ ಪ್ರಸಿದ್ಧವಾಗಿದೆ. ಇಲ್ಲಿ ತಮಿಳು ಶೈವ ಮತ್ತು ಕಲ್ಯಾಣದ ಬಸವಣ್ಣನವರ ಶರಣಶೈವ-ಎರಡೂ ಸಮರಸವಾಗಿ ಸೇರಿ ನೂತನ ಕಾಂತಿಯನ್ನು ಮೈಗೂಡಿಸಿಕೊಂಡವು. ಶೂನ್ಯತತ್ತ್ವ ಸಂಪ್ರದಾಯ ಇಲ್ಲಿ ಬೆಳೆಯಿತೆಂದು ಧಾರಾಳವಾಗಿ ಹೇಳಬಹುದು. ಹನ್ನೆರಡನೆಯ ಶತಮಾನದಲ್ಲಿ ರೇವಣಸಿದ್ಧರು ಈ ಪ್ರಾಂತದಲ್ಲಿ ಸಂಚರಿಸಿ ಶರಣಗುರು ಸಂಪ್ರದಾಯವನ್ನು ಹಬ್ಬಿಸಿದರೆಂಬುದು ವೀರಶೈವ ವಾಙ್ಮಯದಿಂದ ಗೊತ್ತಾಗುತ್ತದೆ. ಈ ಮಠದ ಹನ್ನೊಂದನೆಯ ಸ್ವಾಮಿಗಳಾದ ಘನಲಿಂಗದೇವರು ಶಿವಾನುಭವಶಾಸ್ತ್ರದಲ್ಲಿ ಉದ್ದಾಮ ಪಂಡಿತರಾಗಿದ್ದರು. ಅವರು ವಿರಕ್ತ ತೋಂಟದಾರ್ಯರ ಸಮಕಾಲೀನರು ಮತ್ತು ಅವರ ಕೃಪಾಪೋಷಿತರು. ನಿರ್ಮಾಯ ಗಣೇಶ್ವರ ಎಂಬ ಪರಮ ನಿರಂಜನಮೂರ್ತಿ ಮಲೆಮಾದೇಶ್ವರ ಸ್ವಾಮಿಗಳು ಸುತ್ತೂರು ಮಠದಲ್ಲಿ ಕೆಲವುಕಾಲವಿದ್ದರೆಂದು ಹೇಳುತ್ತಾರೆ. ಆಗ ಸಿದ್ಧನಂಜದೇಶಿಕೇಂದ್ರರು ಸುತ್ತೂರು ಪೀಠಾಧೀಶ್ವರರಾಗಿದ್ದರು. ಗುರು-ವಿರಕ್ತರ ಸಂಪ್ರದಾಯಗಳೆರಡೂ ಶರಣಮಾರ್ಗದಲ್ಲಿ ಪರಸ್ಪರ ಜೊತೆಗೂಡಿ ತತ್ತ್ವಪ್ರಚಾರ ಮಾಡಿದುವು. "ಸುತ್ತೂರು ಪೀಠವು ರೇಣುಕ ಪರಂಪರೆಗೆ ಸೇರಿದ ಯಾವ ಆಚಾರ್ಯರುಗಳ ಕಾಲದಲ್ಲಿಯೂ ಸ್ಥಾಪಿತವಾದಂತೆ ಕಂಡುಬರುವುದಿಲ್ಲ. ಈ ಪೀಠದ ಆದಿಗುರು ಶಿವರಾತ್ರೀಶ್ವರರು ರೇಣುಕರ ಚರಣರೇಣುವಾಗಿ ಅವತರಿಸಿದರೆಂದು ಸುತ್ತೂರು ಸಿಂಹಾಸನ ಗುರುಪರಂಪರೆ ಎಂಬ ಗ್ರಂಥದಲ್ಲಿ ಹೇಳಿದೆ. ಇದು ರೇಣುಕ ಶಾಖೆಯ ಪೀಠವಾಗಿದೆ. "ಬಸವಕಲ್ಯಾಣ ಕ್ರಾಂತಿಯ ತರುವಾಯ, ಮುಸುಡಿ ಚೌಡಯ್ಯನ ನೇತೃತ್ವದಲ್ಲಿ ಒಂದು ಶರಣವೃಂದ ಸುತ್ತೂರಿಗೆ ಬಂದು ಶಿವಾನುಭವವನ್ನು ನಡೆಯಿಸಿದಂತೆ ತಿಳಿದುಬರುತ್ತದೆ." ಈ ಪೀಠ ತನ್ನ ಮೂಲವನ್ನು ಆಚಾರ್ಯ ರೇಣುಕರಿಂದ ಪ್ರಾರಂಭಿಸುತ್ತದೆಯೆಂದರೆ, ಆ ಸೂತ್ರವಿಡಿದು ಸ್ಥಾಪನೆಯಾಯಿ

ತೆಂದು ಅರ್ಥ. ಈ ಪೀಠದ ಮೂಲಪುರುಷರಾದ ಶಿವರಾತ್ರೀಶ್ವರರಿಗೆ ಸ್ವಪ್ನದಲ್ಲಿ ಆಚಾರ್ಯ ರೇಣುಕರಿಂದ ಅನುಗ್ರಹವಾಯಿತಂತೆ ! ಇದು ಗುರುಪೀಠ. ಈ ಪೀಠದ ಸ್ವಾಮಿಗಳು 'ಜಗದ್ಗುರು'ಗಳೆಂದು ಸಮಾಜದಲ್ಲಿ ಗೌರವಾನ್ವಿತರಾಗಿದ್ದಾರೆ.

ಸುತ್ತೂರು ಪೀಠದ ಗುರುಪರಂಪರೆಯಲ್ಲಿ ಅನೇಕರು ಮಹಿಮಾಪುರುಷರಾಗಿದ್ದರು. ಈ ಮಠದ ಆಶ್ರಯದಲ್ಲಿ ಶರಣತತ್ತ್ವ ಸಂಪ್ರದಾಯ ಯಶಸ್ವಿಯಾಗಿ ನಡೆಯುತ್ತಿದೆ. ಈ ಪೀಠದ ಜಗದ್ಗುರು ಪೂಜ್ಯ ಶ್ರೀ ಶಿವರಾತ್ರಿ ಮಹಾಸ್ವಾಮಿಗಳು ಪರಮ ತಪೋನಿಷ್ಠರೂ, ಸುಸಂಸ್ಕೃತರೂ, ಮಹಾ ಜ್ಞಾನಿಗಳೂ ಆಗಿರುತ್ತಾರೆ. ಅವರಂತೆಯೇ ಜಗದ್ಗುರು ಪೂಜ್ಯ ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳೂ ಪರಮಶಿವಜ್ಞಾನ ಸಂಪನ್ನರೂ ಸಮಾಜೋದ್ಧಾರ ಕಾರ್ಯತತ್ಪರರೂ ವಿದ್ವಾಂಸರೂ ಆಗಿರುತ್ತಾರೆ. ಶ್ರೀ ಜಗದ್ಗುರು ಪೂಜ್ಯ ಶಿವರಾತ್ರಿ ರಾಜೇಂದ್ರ ಶಿವಾಚಾರ್ಯರು ಈಗ ಈ ಪೀಠದ ಪಟ್ಟಭದ್ರರಾಗಿದ್ದಾರೆ. ಶ್ರೀ ಜಗದ್ಗುರು ಶಿವರಾತ್ರೀಶ್ವರ ವಿದ್ಯಾಭಿವೃದ್ಧಿ ಸಂಸ್ಥೆಗಳು ಸಮಾಜದ ಪುಣ್ಯಕ್ಷೇತ್ರಗಳಂತಿವೆ. ಶಿವರಾತ್ರೀಶ್ವರ ಗುರುಕುಲ ಸಾಧಕರಿಗೆ ಆದರ್ಶ ಧಾರ್ಮಿಕ ಶಿಕ್ಷಣವನ್ನು ನೀಡುತ್ತಿದೆ. ಶಿವಯೋಗಮಂದಿರಕ್ಕಿಂತಲೂ ಇಲ್ಲಿ ಉದಾರ ಶರಣಜೀವನ ತುಂಬಿದೆಯೆಂದು ಹೇಳಬಹುದು. ಹಿರಿಯ ಜಗದ್ಗುರು ಶ್ರೀ ಶಿವರಾತ್ರಿ ಮಹಾಸ್ವಾಮಿಗಳವರು ಅಕ್ಷಯಮಂತ್ರ ಸಂಪತ್ತನ್ನು ಗಳಿಸಿ ಪ್ರಖ್ಯಾತರಾಗಿದ್ದಾರೆ. ಇವರು ಒಂದು ಕೋಟಿ ಎಂಭತ್ತು ಲಕ್ಷ ಪ್ರಣವ ಪಂಚಾಕ್ಷರಿ ಮಂತ್ರಗಳನ್ನೂ ಒಂದು ಲಕ್ಷ ದೇವೀ ನವಾರ್ಣವ ಮಂತ್ರಗಳನ್ನೂ ಬರೆದಿರುತ್ತಾರೆ. ಇವರ ಈ ಪಂಚಾಕ್ಷರೀ ಮಂತ್ರಸಂಪತ್ತು ಅಕ್ಷಯನಿಧಿಯಲ್ಲವೆ ! ಈ ತಪಃಫಲ ಸಮಾಜವನ್ನು ನಿರಂತರವೂ ರಕ್ಷಿಸುತ್ತದೆಯೆಂಬುದರಲ್ಲಿ ಸಂಶಯವಿಲ್ಲ. ಈ ಉಭಯ ಜಗದ್ಗುರುಗಳಿಂದಲೂ ಪೀಠದ ಕೀರ್ತಿ ವರ್ಧಿಸಿತು !

ಈ ಪೀಠದ ಜಗದ್ಗುರು ಪಟ್ಟಾವಳಿಯಲ್ಲಿ ೧. ಶಿವರಾತ್ರಿ ಶಿವಾಚಾರ್ಯರು. ೨. ಈಶಾನೇಶ್ವರ ಶಿವಾಚಾರ್ಯರು. ೩. ನಿಜಲಿಂಗಶಿವಾಚಾರ್ಯರು. ೪. ಸಿದ್ಧನಂಜದೇಶಿಕೇಂದ್ರರು. ೫. ಕಪಿನೀ ನಂಜುಂಡದೇಶಿಕೇಂದ್ರರು. ೬. ಚನ್ನವೀರದೇಶಿಕರು. ೭. ಸಿದ್ಧಮಲ್ಲ ಶಿವಾಚಾರ್ಯರು. ೮. ಪರ್ವತೇಂದ್ರರು. ೯. ಘಂಟೆ ಬಸವಪ್ಪ ಒಡೆಯರು. ೧೦. ಕೂಗಲೂರು ನಂಜುಂಡದೇಶಿಕರು. ೧೧. ಘನ

...ಗದೇವರು. ೧೨ ಇಮ್ಮಡಿ ಶಿವರಾತ್ರಿ ಸ್ವಾಮಿಗಳು. ೧೩. ಚನ್ನಬಸವ ...ಶಿಕರು. ೧೪. ಗುರುನಂಜದೇಶಿಕರು. ೧೫. ಗುರುಚನ್ನಬಸವ ಸ್ವಾಮಿಗಳು. ...ಗುರುಪಂಚಾಕ್ಷರೀ ದೇಶಿಕರು. ೧೭. ಚಿದ್ಘನಶಿವಾಚಾರ್ಯರು. ೧೮. ಚನ್ನ ...ದೇಶಿಕರು. ೧೯. ಮಹಾಂತ ದೇಶಿಕರು. ೨೦. ಸಿದ್ಧಲಿಂಗ ಶಿವಾಚಾರ್ಯರು. ... ಶಿವರಾತ್ರಿ ದೇಶಿಕರು. ೨೨. ಈಗ ಶಿವರಾತ್ರಿ ರಾಜೇಂದ್ರಸ್ವಾಮಿಗಳು ವಿರಾ ...ತ್ತಾರೆ. ಈ ಪೀಠದ ಹಿರಿಯ ಜಗದ್ಗುರು ಪೂಜ್ಯ ಶ್ರೀ ಶಿವರಾತ್ರಿ ದೇಶಿಕರು ...೧೩-೧-೬೭ರ ದಿನ ಲಿಂಗೈಕ್ಯರಾದರು. ಆ ಪೂಜ್ಯರ ಆತ್ಮ ಆ ಪರಂಜ್ಯೋತಿ ...ಲ್ಲಿ ಶಿಖಿಕರ್ಪೂರ ಯೋಗದಂತೆ ಲೀನವಾಯಿತು. ೧೨ನೆಯ ಶತಮಾನದ ಹಿಂದೆ ...ಳಾಮುಖರೂ, ಪಾಶುಪತರೂ, ಲಾಕುಳರೂ, ಶಾಕ್ತೇಯರೂ ಇಲ್ಲಿ ಪ್ರಮುಖ ...ದ್ದರು. ಈ ಶರಣ ಗುರುಪೀಠ ಬಸವಣ್ಣನವರ ವೀರಶೈವವನ್ನು ಅವಲಂಬಿಸಿತು. ...ಕ್ಷಿಣ ಕರ್ನಾಟಕದ ದಕ್ಷಿಣಾಗ್ರದಲ್ಲಿ ಈ ಗುರುಪೀಠ ಗೌಡ ವೀರಶೈವ ಶರಣ ...ರ್ಮ ಕಲ್ಪವೃಕ್ಷದಂತೆ ಒಪ್ಪುತ್ತಿದೆ. ಈ ಪೀಠದ ಶಿಷ್ಯಸಂಪತ್ತು ಹೇರಳವಾಗಿದೆ. ...ಪ್ರಭೇದವರಲ್ಲಿ ಅನೇಕರು ವಿದ್ಯಾವಂತರೂ ಅಧಿಕಾರಿಗಳೂ ಆಗಿರುತ್ತಾರೆ. ...ವಸಾಯ, ವ್ಯಾಪಾರ ವೃತ್ತಿಗಳಲ್ಲಿ ಮುಂದುವರಿದಿರುತ್ತಾರೆ.

ದಕ್ಷಿಣ ಕರ್ನಾಟಕದ ಮಧ್ಯಭಾಗದಲ್ಲಿ ಎಳನಡು-ಅರಸೀಕೆರೆ ಶ್ರೀ ಸಿದ್ಧ ...ರಾಮೇಶ್ವರ ಸಂಪ್ರದಾಯದ ಜಗದ್ಗುರು ಪೀಠವೂ ರೇಣುಕ ಸಂಪ್ರದಾಯವನ್ನು ...ರಿಸು ಸ್ಥಾಪನೆಯಾಯಿತು. ಇದು ಶರಣಧರ್ಮ ಗುರುಪೀಠ; ವೀರಸಿಂಹಾಸನ; ಎಳನಡು-ಅರಸೀಕೆರೆ ಸಂಸ್ಥಾನ. ಈ ಪೀಠದ ಮಠ ಎಳನಡು ಕ್ಷೇತ್ರದಲ್ಲಿಯೂ ...ಷ್ಟೆ ಅರಸೀಕೆರೆಯಲ್ಲಿಯೂ ಇದೆ. ಈ ಮಠಾಧೀಶ್ವರರು ಕಡೂರು ಮಠದಲ್ಲಿ ...ಪಯೋಗನಿರತರಾಗಿರುತ್ತಾರೆ. ಇದು ಜಗದ್ಗುರು ಧಾನಿ. ಹನ್ನೆರಡನೆಯ ಶತಮಾನದಲ್ಲಿ ರೇವಣಸಿದ್ಧರು ತಮ್ಮ ಶಿಷ್ಯ ಸಿದ್ಧರಾಮದೇವರು ಮೊದಲಾದವ ...ರೊಂದಿಗೆ ತಮಿಳುನಾಡಿನಲ್ಲಿ ಸಂಚರಿಸುತ್ತ, ಕರ್ನಾಟಕದ ಮಧ್ಯರಂಗದಂತಿ ...ರುವ ಚಿಕ್ಕನಾಯಕನಹಳ್ಳಿ, ಅರಸೀಕೆರೆ, ತಿಪಟೂರು ಮೊದಲಾದ ಪ್ರದೇಶಗಳಲ್ಲಿ ಅನೇಕಾನೇಕರನ್ನು ಶರಣಧರ್ಮ ದೀಕ್ಷೆಯಿಂದ ಪಾವನಗೊಳಿಸಿದರು. ಚಿಕ್ಕ ನಾಯಕನಹಳ್ಳಿ ಪ್ರಾಂತದ ಹುಳಿಯಾರು ಸಮೀಪದ ಎಳನಡುವಿನಲ್ಲಿ ತಮ್ಮ ಗುರುಪೀಠವನ್ನು ಸಂಸ್ಥಾಪಿಸಿದರು. ಶ್ರೀ ಸಿದ್ಧರಾಮೇಶ್ವರರೇ ಈ ಸಂಪ್ರದಾ ...ಯದ ಮೂಲ ಗುರುವಾದರು. ಇವರು ರೇವಣಸಿದ್ಧರ ಪರಮಾಪ್ತ ಶಿಷ್ಯರಾಗಿ

ವ್ದರು. ಆದರಿಂದ ಅವರು ಈ ಗುರುಪೀಠವನ್ನು ರೇಣುಕ ಸೂತ್ರನಿಡಿ
ನಿರ್ಮಿಸಿದರು. ಇದರ ಶಾಖೆಯೆಂಬಂತೆ ಆರಸೀಕೆರೆಯಲ್ಲಿಯೂ ಒಂದು ಗುರು
ಮಠ ನಿರ್ಮಾಣವಾಯಿತು. ಇದು ನೊಣಬ ವೀರಶೈವ ಸಂಪ್ರದಾಯ. ಇದು
ಬಸವಣ್ಣನವರ ಶರಣಧರ್ಮವನ್ನು ಅವಲಂಬಿಸಿದಹೂ, ಅವರ ಕಾಲಕ್ಕಿಂತಲೂ
ಹಿಂದೆಯೇ ಈ ಪರಂಪರೆಯ ಸಂಪ್ರದಾಯವಿತ್ತೆಂದು ತಿಳಿದುಬರುತ್ತದೆ. ಅಂತು
ಈ ಜಗದ್ಗುರು ಪೀಠ ಪ್ರಾಚೀನವಾದುದೆಂಬುವುದರಲ್ಲಿ ಸಂಶಯವಿಲ್ಲ. ಬನವಾಸಿ
ಯಲ್ಲಿರುವ ಮಧುಕೇಶ್ವರ ದೇವಸ್ಥಾನ ಶರಣಧರ್ಮದಲ್ಲಿ ಅತಿ ಪ್ರಮುಖ ಸ್ಥಾನ
ವನ್ನು ಪಡೆದಿರುತ್ತದೆ. ಆ ಕಾಲದಲ್ಲಿ ಆನವಟ್ಟಿಯ ಬಳಿಯ ಕುಪಟೂರಿನ
ಕೈಟಭೇಶ್ವರ ದೇವಾಲಯವೂ ತಾಳಗುಂದದ ತ್ರಿಣೇತ್ರಸ್ವಾಮಿಯ ದೇವಾಲ
ಯವೂ ಮುಖ್ಯವಾಗಿದ್ದುವು. ಬನವಾಸಿಯ ಮಧುಕೇಶ್ವರ ದೇವಾಲಯದಲ್ಲಿಯೇ
ಒಮ್ಮೆ ಆ ರಾಜ್ಯದ ರಾಜಪುತ್ರಿ ನವಮೋಹನಾಂಗಿ ಮಾಯಾದೇವಿಯು ಸಂಧ್ಯಾ
ಪೂಜಾ ಸಮಯದಲ್ಲಿ ಭರತನಾಟ್ಯಸೇವೆಯನ್ನು ಸಲ್ಲಿಸಿದಾಗ ಮಾಯಾ
ಕೋಲಾಹಲ ನಿರಂಜನಸಿದ್ಧ ಅಲ್ಲಮರು ಮೃದಂಗವಾದನ ಮಾಡಿ ಆ ರಾಜ
ಪುತ್ರಿಯ ಮನೋನುರಾಗವನ್ನು ಪಡೆದರು.! ಅವಳ ಅಂತಃಪುರದಲ್ಲಿ ಅಲ್ಲಮರು
ನಾಟ್ಯಾಚಾರ್ಯರಾಗಿದ್ದರೂ, ಅವಳ ಹಾವಭಾವ ವಿಲಾಸಗಳಿಗೆ ಮನಸೋಲದೆ
ಅರಮನೆಯನ್ನೂ ತ್ಯಜಿಸಿ ಹೊರಟುಹೋದರು. ಮಾಯಾಜಾಲದಿಂದ ಅಲ್ಲ
ಮರು ಪಾರಾದರು ! ಅಂಥ ವೈರಾಗ್ಯಮೂರ್ತಿ ! ಅವರೇ ಶರಣಯುಗದಲ್ಲಿ
ವಿರಕ್ತ ಸಂಪ್ರದಾಯದ ಮೂಲ ನಿರಂಜನರಾದರು ! ಆ ಕಾಲದಲ್ಲಿ ಬನವಾಸಿ
ನೊಳಂಬ ಚಕ್ರಾಧಿಪತ್ಯದ ರಾಜಧಾನಿಯಾಗಿತ್ತು ! ಆ ರಾಜ್ಯದಲ್ಲಿದ್ದ ವೀರಶೈವ
ರನ್ನು ನೊಳಂಬ ನಾಡಿನ ಬಗೆಯುವರೆಂದು ಕರೆಯುತ್ತಾರೆ. ಇಲ್ಲಿ ನೊಣಬ
ವೀರಶೈವರು ಪ್ರಮುಖರಾಗಿದ್ದಾರೆ. ಇವರು ಸದಾಚಾರಿಗಳೂ, ನೀತಿವಂತರೂ,
ಸುಸಂಸ್ಕೃತರೂ, ವಿದ್ಯಾವಂತರೂ ಆಗಿರುತ್ತಾರೆ. ಇವರು ವ್ಯಾಪಾರ ಮತ್ತು
ವ್ಯವಸಾಯ ವೃತ್ತಿಗಳಿಂದ ಜೀವನ ಮಾಡುತ್ತಾರೆ. ಅನೇಕರು ಸರ್ಕಾರಿ ಕೆಲ
ಸಗಾರರಾಗಿಗಳೂ, ಸಾಹಿತ್ಯ, ಶಾಸ್ತ್ರಗಳಲ್ಲಿ ಪಂಡಿತರೂ, ಆಗಿರುತ್ತಾರೆ. ಆ ನೊಳಂಬ
ರಾಜರೂ, ಅಲ್ಲಿ ಆಳಿದ ಕದಂಬರೂ ಆಗ ಬಳ್ಳಿಗಾವೆಯಲ್ಲಿದ್ದ ಕಾಳಾಮುಖ
ಮತ್ತು ಪಾಶುಪತ ಆಚಾರ್ಯರನ್ನು ಗೌರವಿಸುತ್ತಿದ್ದರು. ಆ ಕಾಲದಲ್ಲಿ
ರೇವಣಸಿದ್ಧರೂ, ಸಿದ್ಧರಾಮರೂ ವೀರಶೈವ ಧರ್ಮವನ್ನು ನಾನಾಮುಖವಾ

ಸಲಸಪರು. ದಕ್ಷಿಣ ಕರ್ಣಾಟಕದಲ್ಲಿ ಸಿದ್ಧರಾಮೇಶ್ವರಸ್ವಾಮಿ ದೇವಾಲಯ ಗಳು ಅನೇಕ ಸ್ಥಳಗಳಲ್ಲಿವೆ. ಆ ದೇವಾಲಯಗಳಲ್ಲಿರುವ ಸಿದ್ಧರಾಮೇಶ್ವರ ಸುಲಿಂಗವನ್ನು ಈ ಪ್ರಭೇದದ ಅರ್ಚಕರೇ ಪೂಜಿಸುತ್ತಾರೆ. ಇಂಥ ಸ್ಥಳ ಗಳಲ್ಲೆಲ್ಲಾ ಈ ಗುರುಸೂತ್ರದ ಮಠವೊಂದು ಇದ್ದೇ ಇರುತ್ತದೆ. ಈ ಪೀಠಕ್ಕೆ ಕಾಲಕಾಲದಲ್ಲಿ ಆಳಿದ ರಾಜರು ಅನೇಕ ಬಿರುದುಬಾವಲಿಗಳನ್ನೂ, ಖಿಲ್ಲತ್ತು ಗಳನ್ನೂ, ಭೂದಾನವನ್ನೂ ಕೊಟ್ಟಿರುತ್ತಾರೆ. ಈ ಮುಖ್ಯ ಪೀಠಕ್ಕೆ ಅನೇಕ ಶಾಖಾ ಮಠಗಳಿವೆ. ಗೋಡೆಕೆರೆ, ಶಿಡ್ಲಹಳ್ಳಿ, ತಮ್ಮಡಿಹಳ್ಳಿ, ಚಿಲ್ಕೂರು, ಹಿರಿಗುಡಿ ಮೊದಲಾದ ಕಡೆಗಳಲ್ಲಿರುವ ಶಾಖಾ ಮಠಗಳು ಪ್ರಮುಖವಾಗಿರು ತ್ತವೆ. ನೊಣಂಬ ವೀರಶೈವಕ್ಕೆ ಸೇರಿದ ಮಹಾಜನಗಳೂ ಕಟ್ಟೆಯ ಯಜ ಮಾನರೂ, ಮಠಾಧಿಕಾರಿಗಳೂ ಶಾಲಿವಾಹನ ಶಕ ೧೭೬೬ ರಲ್ಲಿ ಎಂದರೆ ಕ್ರಿ.ಶ. ೧೮೪೪ ರಲ್ಲಿ ನೊಣಂಬ ವೀರಶೈವರಿಗೆಲ್ಲಾ ಈ ಪೀಠವೇ ಮುಖ್ಯ ಸಂಸ್ಥಾನ ಮಠವೆಂದು ಬರೆದುಕೊಟ್ಟಿದ್ದಾರೆ. ಈ ಪೀಠಾಧಿಕಾರಿಗಳ ಸಂಪೂರ್ಣ ಪಟ್ಟಿ ನಮ್ಮಲ್ಲಿ ನಮಗೆ ದೊರೆಯಲಿಲ್ಲ—ಆದರೆ, ನಮ್ಮ ಸಂಶೋಧನೆಯಂತೆ ಶ್ರೀ ಗಂಗಪ್ಪ ಒಡೆ ಯರು ಮೊಟ್ಟಮೊದಲನೆಯ ಗುರುವರ್ಯರು. ಇವರು ಸುಮಾರು ಹನ್ನೆರಡ ನೆಯ ಶತಮಾನದಲ್ಲಿದ್ದರು. ಅವರಿಗಿಂತಲೂ ಹಿಂದಿನಿಂದ ಈ ಪರಂಪರೆ ಬಂದಿದೆ ಯೆಂದು ಹೇಳುತ್ತಾರೆ. ಅವರ ತರವಾಯ ೨. ಕಂತೆಪ್ಪ ಒಡೆಯರು. ೩. ಬೂದಿ ಯಪ್ಪ ಒಡೆಯರು. ೪. ಕ್ರಿಯಾಶಕ್ತಿದೇವರು. ೫. ಜ್ಞಾನಶಕ್ತಿದೇವರು. ೬. ಮುಕ್ತಿ ಮುನಿಸ್ವಾಮಿಗಳು. ೭. ಯೋಗಮುನೀಶ್ವರ ಸ್ವಾಮಿಗಳು. ೮. ಬಸವ ಲಿಂಗ ಶಿವಾಚಾರ್ಯರು. ೯. ಚನ್ನಬಸವಲಿಂಗಸ್ವಾಮಿಗಳು. ೧೦. ಯೋಗೀ ಶ್ವರ ಸ್ವಾಮಿಗಳು. ೧೧. ವೃಷಭೇಂದ್ರಸ್ವಾಮಿಗಳು. ೧೨. ಕರಿಬಸವರಾಜ ದೇಶಿಕರು. ೧೩. ಬಸವಲಿಂಗರಾಜ ದೇಶಿಕರು. ೧೪. ಬಸವರಾಜ ದೇಶಿಕರು. ೧೫. ಜಟಾ ಬಸವಲಿಂಗದೇಶಿಕರು. ೧೬. ಬಸವರಾಜದೇಶಿಕರು. ೧೭. ಬಸವ ರಾಜದೇಶಿಕರು ಮತ್ತು ಈಗ ೧೮. ಶ್ರೀ ಜಗದ್ಗುರು ಬಸವರಾಜ ದೇಶಿಕೇಂದ್ರ ಮಹಾ ಸ್ವಾಮಿಗಳು ಸಿಂಹಾಸನಾಧಿಪತಿಗಳಾಗಿರುತ್ತಾರೆ. ಇವರು ತುಂಬ ತಪೋ ನಿಷ್ಠರು. ಶಿವಜ್ಞಾನ ಸಂಪನ್ನರು; ಉದಾರ ಹೃದಯರು.

ಈ ನೊಣಂಬ ಪ್ರಭೇದದ ವೀರಶೈವ ಸಂಪ್ರದಾಯದ ಗುರುಪೀಠ ಸುಮಾರು ೮೦೦ ವರ್ಷಗಳ ಹಿಂದೆ ಸ್ಥಾಪಿತವಾಯಿತೆಂದು ರುದ್ರಶಕ್ತಿದೇವರಿಗೆ

ಬಳ್ಳಿಗಾವೆಯ ಕಸಪಯ್ಯ ನಾಯಕ ಶಾಲಿವಾಹನ ಶಕ ೧೦೬೮ ರಲ್ಲಿ ಕೊಟ್ಟಿರುವ ದಾನಶಾಸನದಿಂದ ವ್ಯಕ್ತವಾಗುತ್ತದೆ. ಅದರ ಹಿಂದೆ ಆರು ಮಂದಿ ಗುರುಗಳಾಗಿ ಹೋದರೆಂದು ಈ ಪೀಠದಲ್ಲಿರುವ ದಾಖಲೆಯಿಂದ ಗೊತ್ತಾಗುತ್ತದೆ. ಇಷ್ಟು ಎಷ್ಟೇ ಪ್ರಾಚೀನವಾದರೂ, ಬಸವಣ್ಣನವರ ಶರಣಧರ್ಮದ ಗುರುಪೀಠವು ರೇವಣಸಿದ್ಧ ಸಂಪ್ರದಾಯದಲ್ಲಿ ಸಿದ್ಧರಾಮೇಶ್ವರರಿಂದ ಪ್ರಾರಂಭವಾಯಿತೆಂದು ನಿರ್ಧರವಾಗಿ ಹೇಳಬಹುದು. ಸಿದ್ಧರಾಮರು ನಿರಂಜನವಂಶರತ್ನಾಕರದಲ್ಲಿ ಶೂನ್ಯ ಸಿಂಹಾಸನದ ಮೂರನೆಯ ನಿರಾಭಾರಿಯೆಂದು ಹೇಳಿದೆ. ಇವರು ಎಳನಸು ಶರಣಧರ್ಮ ಗುರುಪೀಠದ ಮೂಲಪುರುಷರೆಂದು ತಿಳಿದುಬರುವುದರಿಂದ, ಇವರು ರೇವಣಸಿದ್ಧರ ಸಂಗಡ ಕರ್ಣಾಟಕದಲ್ಲಿ ಸಂಚರಿಸಿದಾಗ, ಈ ಗುರುಪೀಠವನ್ನು ಸ್ಥಾಪಿಸಿದರೆಂದೂ, ಅನಂತರ ಕಲ್ಯಾಣದ ಶೂನ್ಯಸಿಂಹಾಸನದ ವಿರಕ್ತಪಟ್ಟವನ್ನು ಪಡೆದರೆಂದೂ ಊಹಿಸಲು ಸಾಕಷ್ಟು ಪ್ರಮಾಣಗಳಿವೆ. ಸಿದ್ಧರಾಮರು ಅಲ್ಲಮ ರೊಂದಿಗೆ ಒಂದುಸಾರಿ ಈ ಪ್ರಾಂತದಲ್ಲಿ ಸಂಚರಿಸಿದರೆಂದು ಗೊತ್ತಾಗುತ್ತದೆ. ಚಿಕ್ಕನಾಯಕನಹಳ್ಳಿಯ ಹತ್ತಿರದಲ್ಲಿರುವ ಕಾರೆಕುರ್ಚಿ ಬೆಟ್ಟದ ಗವಿಯಲ್ಲಿ ಅಲ್ಲ ಮರೂ ಸಿದ್ಧರಾಮರೂ ಶಿವಯೋಗನಿರತರಾಗಿದ್ದರೆಂದು ಹೇಳುತ್ತಾರೆ. ಆ ಗುಹೆ ಯಲ್ಲಿ ಯೋಗಾಸನದಲ್ಲಿರುವಂತೆ ಕಡೆದಿರುವ ಶಿಲಾಮೂರ್ತಿಯನ್ನು ಅಲ್ಲಮ ರೆಂದು ತಿಳಿಸುತ್ತಾರೆ. ಈ ಪೀಠಾಚಾರ್ಯರು ಸಮಾಜದ ವಿದ್ಯಾಪ್ರಗತಿಯನ್ನು ಸಾಧಿಸುತ್ತ, ಸಾಹಿತ್ಯ, ಸಂಸ್ಕೃತಿ, ಮತಧರ್ಮ ವಿಚಾರಗಳಲ್ಲಿ ತುಂಬ ಆಸಕ್ತಿ ಯಿಂದ ದುಡಿಯುತ್ತಿದ್ದಾರೆ.

ಹನ್ನೆರಡನೆಯ ಶತಮಾನದಲ್ಲಿ ದಕ್ಷಿಣ ಕರ್ಣಾಟಕದ ಉತ್ತರಾಗ್ರದಲ್ಲಿ ಮರುಳಸಿದ್ಧ ಸಂಪ್ರದಾಯದ ಗುರುಪೀಠವೊಂದು ಉಜ್ಜಯಿನಿಯಲ್ಲಿ ಪ್ರಾಚೀನ ಮರುಳಾಚಾರ್ಯರ ಸೂತ್ರವಿಡಿದು ಸ್ಥಾಪನೆಯಾಯಿತು. ಇದು ಸಾದರ ವೀರಶೈವ ಸಂಪ್ರದಾಯದ ಜಗದ್ಗುರು ಪೀಠವಾಗಿ ಪ್ರಸಿದ್ಧಿಯಾಗಿದೆ. ರೇವಣ ಸಿದ್ಧರ ಪ್ರಿಯಶಿಷ್ಯರಾದ ಮರುಳಸಿದ್ಧರೇ ಈ ಸಂಪ್ರದಾಯದ ಮೂಲ ಪುರುಷರು. ಜೀವನದ ಪರಿಪೂರ್ಣತೆಯಲ್ಲಿ ವ್ಯಕ್ತಿ ಹಿತಕ್ಕಿಂತ ಸಾಮಾಜಿಕ ಹಿತವೇ ಮುಖ್ಯ ವೆಂಬ ಬಸವಣ್ಣನವರ ತತ್ತ್ವವನ್ನು ಮರುಳಸಿದ್ಧರು ಕಾರ್ಯತಃ ಪ್ರಯೋಗಕ್ಕೆ ತಂದು ಯಶಸ್ವಿಯಾದರು. ಸಿರಿಗೆರೆ ಗುರುಪೀಠದವರು ಈಗಲೂ ಮರುಳಸಿದ್ಧರ ಶರಣಧರ್ಮವನ್ನು ಕಟ್ಟುನಿಟ್ಟಾಗಿ ಆಚರಣೆಯಲ್ಲಿಟ್ಟುಕೊಂಡಿದ್ದಾರೆ.

ಕಲ್ಯಾಣದಲ್ಲಿ ಬಸವಣ್ಣನವರೂ ಪ್ರಮಥರೂ ಕಟ್ಟಿದ ಸಮಾಜಧರ್ಮ ಇಂದು ಪ್ರಚಲಣೆಯಲ್ಲಿರುವುದನ್ನು ಸಿರಿಗೆರೆ ಧರ್ಮ ಪೀಠದಲ್ಲಿ ಕಾಣಬಹುದು. ಮರುಳ ಸಿದ್ಧರು ಕರ್ಣಾಟಕ, ಆಂಧ್ರ, ಮಹಾರಾಷ್ಟ್ರಗಳಲ್ಲಿ ಶರಣಧರ್ಮವನ್ನು ಪ್ರಚಾರ ಮಾಡಿ, ಮತ ಜಾತಿ ಕುಲಗಳೆಂಬ ತಾರತಮ್ಯವಿಲ್ಲದೆ ಪತಿತರನ್ನು ಲಿಂಗಧಾರಣೆ ಮಾಡಿ ಪವಿತ್ರಗೊಳಿಸಿ, ಅವರೆಲ್ಲ ಸದ್ಧರ್ಮಾನುವರ್ತಿಗಳಾಗುವಂತೆ ಅನುಗ್ರಹಿಸಿದರು. ಆದರಿಂದಲೇ ಸದ್ಧರ್ಮ ಸಿಂಹಾಸನವೆಂಬ ಹೆಸರು ಸಾರ್ಥಕವಾಯಿತು! ಇವರು ಮರುಳಸಿದ್ಧ ಪೀಠದ ಕೀರ್ತಿಯನ್ನು ಬೆಳಗಿದರು. ಕಗ್ಗಲ್ಲುಪುರ-ಕೇತನ ಹಳ್ಳಿಯ ಮಧ್ಯಪ್ರದೇಶದಲ್ಲಿ ಮರುಳಸಿದ್ಧ ಸಂಪ್ರದಾಯದ ಗುರುಪೀಠವನ್ನು ಸ್ಥಾಪಿಸಿದರು. ಅವರು ಈ ಪೀಠಾಧಿಕಾರವನ್ನು ಮಾಘ ಶುದ್ಧ ಪೂರ್ಣಿಮೆಯ ದಿನ ತೆಲುಗುಬಾಳು ಸಿದ್ಧೇಶ್ವರರಿಗೆ ಅನುಗ್ರಹಿಸಿ, 'ತರಳಾ! ನೂರ್ಕಾಲ ಬಾಳು: ಕಲ್ಯಾಣದ ಬಸವಣ್ಣನವರ ಶರಣಧರ್ಮವನ್ನು ಬೆಳಗಿಸು' ಎಂದು ಆಶೀರ್ವದಿಸಿ, ಕೆಲವು ದಿನಗಳಲ್ಲಿಯೇ ಲಿಂಗೈಕ್ಯರಾದರು. ಈ ಪೀಠವನ್ನು-ತರಳಬಾಳು ಪೀಠ ವೆಂದು ಜನರು ಕರೆಯಲಾರಂಭಿಸಿದರು. ಈಗಲೂ ಆ ಪೀಠದವರು ಮಾಘ ಶುದ್ಧ ಪೂರ್ಣಿಮೆಯ ದಿನವನ್ನು ತರಳುಬಾಳು ಹುಣ್ಣಿಮೆಯೆಂದು ಆಚರಿಸು ತ್ತಾರೆ. ಶರಣಧರ್ಮ ಗಗನದಲ್ಲಿ ಪೂರ್ಣ ಚಂದ್ರೋದಯವಾಯಿತು! ಆ ನಿರಭ್ರಶುಭ್ರವಾದ ಬೆಳುದಿಂಗಳಿನಂತೆಯೇ ಶರಣಧರ್ಮ ಈ ಪೀಠದ ಆಶ್ರಯ ದಲ್ಲಿ ಇಂದೂ ಸರ್ವಜನಾಹ್ಲಾದಕರವಾಗಿ, ಇಂಪು, ಸೊಂಪು, ತಂಪು ಗುಣಗ ಳಿಂದ ಪ್ರವರ್ಧಮಾನವಾಗುತ್ತಿದೆ. ಇದು ಅಭಿಮಾನಾಸ್ಪದವಾದ ಸಂಗತಿ! ಮರುಳಸಿದ್ಧರ ತರುವಾಯ ೧. ತರಳಬಾಳು ಸಿದ್ಧೇಶ್ವರರು. ೨. ಗಡ್ಡದ ಸಿದ್ಧ ಲಿಂಗದೇವರು. ೩. ಕೆಂಪಪ್ಪದೇವರು. ೪. ಚನ್ನಬಸವದೇವರು. ೫. ಗುರು ಸಿದ್ಧ ದೇವರು. ೬. ಶಿವಲಿಂಗದೇವರು. ೭. ಗುರುಬಸವದೇವರು. ೮. ಕರಿಸಿದ್ಧ ದೇವರು. ೯. ಶಾಂತವೀರದೇವರು. ೧೦. ಇಮ್ಮಡಿ ಕರಿಸಿದ್ಧದೇವರು. ೧೧. ಜಂಬಪ್ಪದೇವರು-ಈ ಪೀಠದ ಗುರುಪಟ್ಟಾವಳಿಯಲ್ಲಿ ಕಂಡುಬರುತ್ತಾರೆ. ಈಗ ಜಗದ್ಗುರು ಶ್ರೀ ಶಿವಕುಮಾರ ಶಿವಾಚಾರ್ಯರು ಈ ಪೀಠಾಧ್ಯಕ್ಷರಾಗಿರುತ್ತಾರೆ. ಜಂಬಪ್ಪದೇವರು ಉಜ್ಜಯಿನಿಯನ್ನು ಬಿಟ್ಟು ಸಿರಿಗೆರೆಯಲ್ಲಿ ಹೈಗರಾಜ್ಯದ ಅರಸರ ಅಪೇಕ್ಷೆಯಂತೆ ನೂತನ ಮಠವನ್ನು ಸ್ಥಾಪಿಸಿಕೊಂಡರೆಂದು ತಿಳಿದುಬರುತ್ತದೆ. ಈಗಿನ ಕಾರವಾರ ಜಿಲ್ಲೆಯ ದಕ್ಷಿಣ ಪ್ರಾಂತವೂ ಸೇರಿ ಭಟ್ಕಲ್‌ನಿಂದ ಹಿಡಿದು

ಚಿತ್ರದುರ್ಗ ಜಿಲ್ಲೆಯ ಪಶ್ಚಿಮ ಭಾಗವನ್ನು ಒಳಗೊಂಡು ಶಿವಮೊಗ್ಗ ಜಿಲ್ಲೆಯ ಪ್ರದೇಶವೆಲ್ಲಾ ಹೈಗರಾಜ್ಯಕ್ಕೆ ಸೇರಿತ್ತು. ಆ ರಾಜ್ಯ ಅಳಿದಮೇಲೆ, ಕೆಳದಿಯ ರಾಜ್ಯ ಸ್ಥಾಪನೆಯಾಯಿತು. ಈ ಹೈಗರಾಜ್ಯ ಜೈನರ ನೆಲೆವೀಡಾಗಿತ್ತು. ಹನ್ನೆರಡನೆಯ ಶತಮಾನದ ಪೂರ್ವಾರ್ಧದಲ್ಲಿ ಹಳೆಯಬೀಡಿನ ಜೈನ ಹೊಯ್ಸಳರು ಶ್ರೀವೈಷ್ಣವರಾದಮೇಲೆ, ಅನೇಕ ಜೈನರು ಶ್ರೀವೈಷ್ಣವ ಮತವನ್ನು ಅವಲಂಬಿಸಿದರು. ಆ ಧರ್ಮವನ್ನು ಒಪ್ಪದವರು ಅದೇ ಶತಮಾನದಲ್ಲಿ ಅಭಿವೃದ್ಧಿಗೆ ಬಂದ ಶರಣಧರ್ಮವನ್ನು ಸೇರಿದರೆಂದೂ ವಿದ್ವಾಂಸರು ಹೇಳುತ್ತಾರೆ.

* ಕೆಳದಿಯ ವೀರಶೈವ ರಾಜವಂಶದ ಮೂಲಪುರುಷ ಚೌಡಪ್ಪಗೌಡ. ಇವನ ಪೂರ್ವಜರು ಹೊಂಬುಚದಲ್ಲಿ ರಾಜ್ಯವಾಳಿದ ಜೈನಸಂತತಿಯವರು. ಹೊಂಬುಚದ ಜೈನ ರಾಜವಂಶದ ಮೂಲಪುರುಷ ಜಿನದತ್ತರಾಯ. ಅವನು ಉತ್ತರ ಮಧುರೆಯಿಂದ ಬಂದು ಇಲ್ಲಿ ರಾಜ್ಯ ಸ್ಥಾಪನೆ ಮಾಡಿದನು. ಆಗ ಮಾಳವ ಪ್ರಾಂತದಿಂದ ಜೈನರು ಬಂದು ಇಲ್ಲಿ ನೆಲೆಸಲು ಆರಂಭಿಸಿದರು. ಅವಂತಿಯ ಉಜ್ಜಯಿನಿಯಲ್ಲಿ ಜೈನರ ಸಾಮ್ರಾಜ್ಯವಿತ್ತು. ಅಲ್ಲಿ ಗೌಡ ವಂಶದವರು ಆಳುತ್ತಿದ್ದರು. ಮಾಳವ ಪ್ರಾಂತವನ್ನು ಗೌಡದೇಶವೆಂದು ಕರೆಯುತ್ತಾರೆ. ಹೊಂಬುಚದ ಜೈನವಂಶದ ಕೊನೆಯ ದೊರೆ ಶಿವಭಕ್ತನಾದನೆಂದೂ, ಅವನ ಮನೆತನದ ಚೌಡಪ್ಪಗೌಡನೆಂಬುವನು ಕೆಳದಿಯಲ್ಲಿ ರಾಜ್ಯ ಸ್ಥಾಪನೆ ಮಾಡಿದನೆಂದೂ ಚರಿತ್ರೆಯಿಂದ ತಿಳಿದುಬರುತ್ತದೆ. ಇವನ ವಂಶಜರು ಗೌಡದೇಶದವರಾದ್ದರಿಂದ ಇವರೂ ಗೌಡರಾಜರೆಂದು ಪ್ರಸಿದ್ಧಿಯಾದರು. ಇವರು ಹದಿನೈದನೆಯ ಶತಮಾನದಲ್ಲಿ ವಿಜಯನಗರದ ಸಾರ್ವಭೌಮನಿಂದ 'ನಾಯಕ' ಎಂಬ ಗೌರವ ಪದವಿಯನ್ನು ಪಡೆದರು. ಕೆಳದಿಯ ನಾಯಕರು ಇಕ್ಕೇರಿಯಲ್ಲಿಯೂ, ಅನಂತರ ಬಿದನೂರಿನಲ್ಲಿಯೂ ರಾಜ್ಯವಾಳಿದರು. ಹೊಂಬುಚದಲ್ಲಿ ಆಳಿದ ಜೈನರಾಜರನ್ನು ಹತ್ತು ಮತ್ತು ಹನ್ನೊಂದನೆಯ ಶತಮಾನಗಳ ಶಾಸನಗಳಲ್ಲಿ 'ಸಾಂತರು' ಎಂದು ಕರೆದಿರುತ್ತಾರೆ. ಈ ಸಾಂತರು ಸುಮಾರು ಹನ್ನೆರಡನೆಯ ಶತಮಾನದಲ್ಲಿ ಶಿವಭಕ್ತರಾದರು. ಇವರೇ ಸಾದರು ವೀರಶೈವದವರೊಳು ಪ್ರಮುಖ ಪ್ರಭೇದದವರಾಗಿರುತ್ತಾರೆಂದು ಹೇಳಬಹುದು. ಜಿನದತ್ತರಾಯನ

* ನಿರಂಜನ – ಎಂಬ ಗ್ರಂಥದಲ್ಲಿ ವಿವರಗಳನ್ನು ನಿರೀಕ್ಷಿಸಿ.

ಕಾಲದಿಂದಲೂ ಅವಂತಿಯ–ಉಜ್ಜಯಿನಿಯಲ್ಲಿ ಜೈನಧರ್ಮ ಗುರುಪೀಠವಿತ್ತು. ಉತ್ತರದಿಂದ ವಲಸೆ ಬಂದ ಜೈನರು ಬಹಳ ಪ್ರಾಚೀನ ಕಾಲವಲ್ಲಿಯೇ ದಕ್ಷಿಣದ ಶ್ರವಣಬೆಳಗೊಳದಲ್ಲಿ ನೆಲಸಿದರು. ಹಳೆಯಬೀಡಿನ ಹೊಯ್ಸಳರು ಸುಮಾರು ಹನ್ನೆರಡನೆಯ ಶತಮಾನದಲ್ಲಿ ವೈಷ್ಣವ ಪಂಥವನ್ನು ಅವಲಂಬಿಸಿದರು. ಆ ಶತಮಾನದಲ್ಲಿ ನಡೆದ ಶರಣಧರ್ಮ ಪ್ರಚಾರದಿಂದ ಅನೇಕ ಜೈನರು ಲಿಂಗವಂತ ಧರ್ಮವನ್ನು ಅನುಸರಿಸಿದರು. ಆದುವರೆಗಾಗಲೇ, ಉತ್ತರದ ಕಡೆಯಿಂದ ಬಂದ ಜೈನರು ತುಂಬ ಪ್ರಬಲರಾಗಿ, ರಾಜಾಶ್ರಯದಲ್ಲಿ ತಮ್ಮ ಧರ್ಮ, ಸಂಸ್ಕೃತಿ, ಸಾಹಿತ್ಯಗಳನ್ನು ಬೆಳಸುತ್ತಿದ್ದರು. ಅವರು ಅವಂತಿಯ ಉಜ್ಜಯಿನಿಯ ಹೆಸರಿನಿಂದಲೇ ಬಳ್ಳಾರಿ ಪ್ರಾಂತದ ಉಜ್ಜನಿಯನ್ನು ಸ್ಥಾಪಿಸಿ, ಇಲ್ಲಿಯೂ ತಮ್ಮ ಗುರುಪೀಠವನ್ನು ಸ್ಥಾಪಿಸಿಕೊಂಡರು. ಈ ಗುರುಪೀಠವೂ, ಶ್ರವಣಬೆಳಗೊಳದ ಗುರುಪೀಠವೂ ನಂದಿಗಣಕ್ಕೆ ಸೇರಿದವುಗಳೆಂದು ಜೈನವಾಙ್ಮಯದಿಂದ ಗೊತ್ತಾಗುತ್ತದೆ. ನಂದಿಯೇ ಈ ಗಣದ ಲಾಂಛನ. ಶ್ರವಣಬೆಳಗೊಳದ ಜೈನ ಜಗದ್ಗುರುಗಳನ್ನು "ಪಂಡಿತಾಚಾರ್ಯ"ರೆಂದು ಕರೆಯುತ್ತಾರೆ. ಇದು ಶಿವಭಕ್ತರಾದ ಪಾಶುಪತ ಧರ್ಮದವರ ಮತ್ತು ಜೈನ ಶ್ರಾವಕರ ಸಮ್ಮಿಲನ ಸಂಕೇತವೆಂದು ಹೇಳಬಹುದು. ಕಾದರು ವೀರಶೈವರ ಜಗದ್ಗುರು ಪೀಠ ಈಗ ಸಿರಿಗೆರೆಯಲ್ಲಿದೆ.

ಜೈನರು ಸ್ವಭಾವತಃ ಸಾತ್ವಿಕರು; ಸಾಧು ಜನರು. ಜೈನರ ಮತ್ತು ವೀರಶೈವರ ಧರ್ಮಗಳಲ್ಲಿ ನಿಕಟ ಸಂಬಂಧವಿರುವುದನ್ನು ಆಯಾ ಧರ್ಮಗಳ ಪಂಡಿತರು ಬಲ್ಲರು. ಆಗ ಅನೇಕ ಜೈನಬಾಂಧವರೆಲ್ಲ ವೀರಶೈವ ಶರಣಧರ್ಮವನ್ನು ಅವಲಂಬಿಸಿದರೆಂದು ಸಮಾಜ ಚರಿತ್ರೆಯಿಂದ ನಿರ್ಧರಿಸಬಹುದು. ಸಿರಿಗೆರೆ ಪೀಠದ ಶಿವಾಚಾರ್ಯರು ಬಳ್ಳಾರಿ ಮತ್ತು ರಾಯಚೂರು ಪ್ರಾಂತಗಳಲ್ಲಿ ಶರಣಧರ್ಮವನ್ನು ಪ್ರಚಾರ ಮಾಡಿದರು. ಅನೇಕ ಜೈನರು ವೀರಶೈವ ಧರ್ಮಾವಲಂಬಿಗಳಾದರು. ಹೈಗ ದೇಶದಲ್ಲಿ ರಾಜಾಶ್ರಯ ತಪ್ಪಿದಮೇಲೆ, ಜೈನರು ನಗರ ಮತ್ತು ಕೆಳದಿಯ ವೀರಶೈವ ರಾಜರ ಆಶ್ರಯದಲ್ಲಿ ಲಿಂಗವಂತ ಧರ್ಮವನ್ನು ಅಂಗೀಕರಿಸಿದರು. ಹತ್ತೊಂಬತ್ತನೆಯ ಶತಮಾನದಲ್ಲಿ ನಗರ ಸಂಸ್ಥಾನದ ಉತ್ತರಾಧಿಕಾರಿಯೆಂದು ಹೊನ್ನಾಳಿಯ ಹತ್ತಿರದ ಚಿಟ್ನಹಳ್ಳಿಯ ಸಾದರ ಮಲ್ಲಣ್ಣಗೌಡನೆಂಬ ರಾಜಸಂಬಂಧಿ ಪುನಃ ನಗರಸೀಮೆಯನ್ನು ಪಡೆಯಲು ದುಸ್ಸಾಹಸ ಮಾಡಿದನು. ಮೈಸೂರು ದಂಡು ಅವನನ್ನು ಅಡಗಿಸಲು ಇಂಗ್ಲಿ

ಷರ ಸಹಾಯವನ್ನು ಪಡೆಯಬೇಕಾಯಿತು. ಆ ಪ್ರಚಂಡ ಮಲ್ಲಣ್ಣಗೌಡ-ರಾಜಾ ಬೂದಿ ಬಸವಪ್ಪನಾಯಕನೆಂದು ಉದ್ಘೋಷಿಸಿಕೊಂಡನು. ಆಗ ನಗರ ರಾಜ ಮನೆತನದಲ್ಲಿ ಯುವರಾಜನನ್ನು ಬೂದಿ ಬಸವಪ್ಪನೆಂದು ಕರೆಯುತ್ತಿದ್ದರು. ಮನೆತನದ ಮನೆದೇವರು ಬೂದಿ ಬಸವೇಶ್ವರಸ್ವಾಮಿ. ತರಿಕೆರೆಯಲ್ಲಿ ಬೂದಿ ಬಸವೇಶ್ವರಸ್ವಾಮಿ ದೇವಾಲಯವಿದೆ. ನಗರದ ರಾಜರೂ ಕೆಳದಿಯ ರಾಜರೂ ರಕ್ತಸಂಬಂಧಿಗಳು. ಆದ್ದರಿಂದ ಈ ಮಲೆನಾಡಿನ ಎರಡು ರಾಜ್ಯಗಳನ್ನು ಸ್ಥಾಪಿಸಿದವರು ಸಾದರು ವೀರಶೈವರೆಂದು ಹೇಳಬಹುದು. ಕೆಳದಿಯ ಅರಸರು ಹುಬ್ಬಳ್ಳಿ ಮೂರುಸಾವಿರ ಮಠ ಮತ್ತು ಗದಗ ತೋಂಟದಾರ್ಯ ವಿರಕ್ತಮಠ ಅನಂತಪುರ ಮುರಘ ಮಠಗಳಿಗೆ ಅಪಾರ ಸಹಾಯವನ್ನು ಮಾಡಿ ಗೌರವಿಸಿದರು. ಸಾದರು ವೀರಶೈವ ಪಂಗಡದಲ್ಲಿ ಸಂಸ್ಕೃತಿ, ಸಾಹಿತ್ಯ, ವಿದ್ವತ್ತೆ, ಧಾರ್ಮಿಕಚಿತ್ತವೃತ್ತಿ ಸ್ವಾಭಾವಿಕವಾಗಿಯೇ ನೆಲೆಗೊಂಡಿವೆ. ಈ ಸಿರಿಗೆರೆ ಜಗದ್ಗುರು ಪೀಠದ ವಿದ್ಯಾ ಸಂಸ್ಥೆಗಳು ನಾಡಿನಲ್ಲಿ ಅನೇಕವಾಗಿವೆ. ಶರಣಜೀವನದ ಪ್ರಮುಖ ಘಟನೆಗಳನ್ನೆಲ್ಲಾ ಇಂದೂ ಸಾರ್ವಜನಿಕ ಹಬ್ಬಗಳಂತೆ ಈ ಸಂಪ್ರದಾಯದವರು ಆಚರಿಸುತ್ತಾರೆ. ಪ್ರಭುಪಾಡ್ಯಮಿ, ಮರಣವೇ ಮಹಾನವಮಿ, ಅಕ್ಕನ ಹುಣ್ಣಿಮೆ-ಇಂಥ ಶರಣರ ಸ್ಮಾರಕೋತ್ಸವಗಳನ್ನು ನಡಸುತ್ತಾರೆ. ಪ್ರತಿಯೊಬ್ಬರನ್ನೂ ಶರಣರೆಂದು ಗೌರವಿಸಿ ಕರೆಯುವ ಪರಿಪಾಠವನ್ನು ಈ ಪೀಠದವರು ಪರಿಪಾಲಿಸುತ್ತಾರೆ. ವಿದ್ಯಾರ್ಥಿ ನಿಲಯಗಳಲ್ಲಿ ಸದಾಚಾರ, ಸದ್ಧರ್ಮಗಳಿಗೆ ಲೋಪವಿಲ್ಲದಂತೆ, ಎಲ್ಲ ಮತದ ವಿದ್ಯಾರ್ಥಿಗಳಿಗೂ ಅವಕಾಶ ಕಲ್ಪಿಸಿರುತ್ತಾರೆ. ಶರಣಜೀವನದ ವಚನಗಳನ್ನೂ, ಗೀತೆಗಳನ್ನೂ, ನಾಟಕಗಳನ್ನೂ, ಶಿವಕಥೆಗಳನ್ನೂ ಪ್ರಚಾರ ಮಾಡಲು ಶಿವಾನುಭವ ಮಂಟಪ ಎಂಬ ಒಂದು ಪ್ರತ್ಯೇಕ ವ್ಯವಸ್ಥೆಯೇ ಈ ಪೀಠದ ಆಶ್ರಯದಲ್ಲಿ ಏರ್ಪಟ್ಟಿದೆ. ಇತ್ತೀಚೆಗೆ ಚಿತ್ರದುರ್ಗದಲ್ಲಿ ಶ್ರೀ ತರಳಬಾಳು ಹುಣ್ಣಿಮೆಯ ಮಹೋತ್ಸವವನ್ನು ನಡೆಸಿದರು. ಶರಣಧರ್ಮ ಪ್ರಚಾರ ಯಶಸ್ವಿಯಾಗಿ ನಡೆಯಿತು. ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜ ಒಡೆಯರ್ ಬಹಾದ್ದೂರ್ ಅವರು ಈ ಮಹೋತ್ಸವಕ್ಕೆ ಚಿತ್ತೈಸಿದ್ದರು. ಗೂಳೂರು ನಿಡುಮಾಮಿಡಿ ಮಠದ ಸ್ವಾಮಿಗಳಾದ ಶ್ರೀ ಜ. ಪ. ಚನ್ನಬಸವರಾಜದೇಶಿಕೇಂದ್ರರೂ ಈ ಉತ್ಸವದ ಭಾಗಿಗಳಾಗಿದ್ದರು. ಸಿರಿಗೆರೆಯ ಶ್ರೀ ಶಿವಕುಮಾರ ಶಿವಾಚಾರ್ಯ ಮಹಾಸ್ವಾಮಿಗಳು ಈ ಪೀಠದ ಘನತೆ ಗೌರವಗಳನ್ನು ಸಂವರ್ಧಿಸಿದರು! ಶರಣಧರ್ಮ

ಜ್ಞವಂತವಾಗಿ ಇಲ್ಲಿ ಪೂರ್ತಿಗೊಂಡಿದೆ. ಈ ಸೂತ್ರಾನುವರ್ತಿಗಳಾದ ಗುರು ಭಕ್ತ ಮಠಗಳೂ ನಾನಾಕಡೆಗಳಲ್ಲಿವೆ. ಈ ಪ್ರಭೇದದ ಜನರು ವ್ಯವಸಾಯ ಮತ್ತು ವ್ಯಾಪಾರಗಳಲ್ಲಿ ಮುಂಮುವರಿದಿರುತ್ತಾರೆ. ಅನೇಕರು ವಿದ್ಯಾವಂತರಾಗಿಯೂ ಸರ್ಕಾರಿ ಅಧಿಕಾರಿಗಳಾಗಿಯೂ ಇದ್ದಾರೆ. ವಿದ್ಯಾಭ್ಯಾಸ ತೀವ್ರಗತಿಯಿಂದ ಬೆಳೆಯುತ್ತಿದೆ; ಸಮಾಜವನ್ನು ಚೇತನಗೊಳಿಸುತ್ತಿದೆ.

ಕರ್ನಾಟಕದ ಉತ್ತರಾಗ್ರದಲ್ಲಿ ಹೂಲಿಯ ಗುರುಮಠ ಶರಣಧರ್ಮವನ್ನು ಹರಸುತ್ತಿದೆ. ಆ ಪೀಠದ ಜಗದ್ಗುರು ಪರಂಪರೆ ಸಮಾಜಾಭ್ಯುದಯವನ್ನು ಆಶೀರ್ವದಿಸುತ್ತಿದೆ. ಹೂಲಿಯನ್ನು ಪೂವಲ್ಲಿಯೆಂಬೂ ಕರೆಯುತ್ತಾರೆ. ಇದು ಬೆಳಗಾವಿ ಜಿಲ್ಲೆಯ ಸೌದತ್ತಿಯಿಂದ ಈಶಾನ್ಯ ದಿಕ್ಕಿಗೆ ಸುಮಾರು ಎರಡು ಹರದಾರಿ ದೂರದಲ್ಲಿದೆ. ಇದು ಶಿವಕ್ಷೇತ್ರ; ಗುರುಕ್ಷೇತ್ರ. ಇದು ಅತ್ಯಂತ ಮನೋಲ್ಲಾಸಕರ ಪ್ರಕೃತಿಯ ಮಡಿಲಿನಲ್ಲಿ ಸಹ್ಯಾದ್ರಿಶ್ರೇಣಿಯ ಸಿದ್ಧಾಚಲದ ಸಾನು ಪ್ರದೇಶದಲ್ಲಿದೆ. ಇಲ್ಲಿ ಪರಶಿವನು ದಕ್ಷಿಣಾಮೂರ್ತಿಯಾಗಿ ತಪಸ್ಸು ಮಾಡಿದನೆಂದು ತಿಳಿದುಬರುತ್ತದೆ. ಈ ಕ್ಷೇತ್ರದ ಮೂಲ ಪೀಠಾಚಾರ್ಯರೇ ಶ್ರೀ ದಕ್ಷಿಣಾಮೂರ್ತಿ. ಅನಂತರ ಅವರ ಪುತ್ರ ಕುಮಾರಸ್ವಾಮಿ ಈ ಪೀಠದ ಪರಮ ಗುರುವಾದನು. ಈತನು ವಾಮದೇವ ಮಹರ್ಷಿಗೆ ಪಟ್ಟಾಧಿಕಾರವನ್ನು ವಹಿಸಿ, ಕ್ರೌಂಚಪರ್ವತಾಗ್ರದಲ್ಲಿ ಶಿವಯೋಗ ಮಗ್ನನಾದನು. ಬಳ್ಳಾರಿಯ ಸಮೀಪದ ಸಂಡೂರು ಬಳಿಯಲ್ಲಿ ಈ ಕ್ರೌಂಚಗಿರಿ ಇದೆ. ಇದೇ ಸಂಡೂರು ಬೆಟ್ಟ. ಪುಣ್ಯ (ಪೂನಾ) ನಗರದ ಬಳಿಯ ಪಾರ್ವತಿಯ ಬೆಟ್ಟದ ಮೇಲೆ ಕುಮಾರಸ್ವಾಮಿ ದೇವಾಲಯವಿದೆ. ಸಂಡೂರು ನಾಥಪಂಥದ ಕೇಂದ್ರವಾಗಿತ್ತು. ಇಲ್ಲಿರುವ ಕುಮಾರ ಸ್ವಾಮಿಯನ್ನು ಸ್ತ್ರೀಯರು ದರ್ಶನ ಮಾಡುವಂತಿಲ್ಲ. ಪಕ್ಕದಲ್ಲಿಯೇ ತಾಯಿ ಪಾರ್ವತಿಯ ದೇವಾಲಯವಿದೆ. ಅಲ್ಲಿಯೇ ತಂದೆ ನಾಗನಾಥಸ್ವಾಮಿಯ ಶಿವಾಲಯವಿದೆ. ಹೂಲಿಯೂ ನಾಥಸಂಥದ ಕೇಂದ್ರವಾಗಿತ್ತು. ಹೂಲಿ ಬೃಹನ್ಮಠ ಗುರುಪರಂಪರೆಯಲ್ಲಿ, ಶ್ರೀ ದಕ್ಷಿಣಾಮೂರ್ತಿ, ಶ್ರೀ ಶಿವಕುಮಾರ ಸ್ವಾಮಿ, ಶ್ರೀ ವಾಮದೇವ ಮಹರ್ಷಿ, ಶ್ರೀ ದೂರ್ವಾಸ ಮಹರ್ಷಿ, ಶ್ರೀ ಶ್ರೀಕಂಠಸ್ವಾಮಿ, ಶ್ರೀ ಶ್ವೇತಾಶ್ವತರ ಮಹರ್ಷಿ, ಶ್ರೀ ಕೈವಲ್ಯ ಮಹರ್ಷಿ, ಶ್ರೀ ಸರ್ವೇಶ್ವರಮುನಿ, ಶ್ರೀ ವಿಶ್ವೇಶ್ವರ ಯತೀಂದ್ರ ಮತ್ತು ಶ್ರೀ ವಿಶ್ವಮುನೀಶ್ವರಸ್ವಾಮಿ ಎಂಬ ಪ್ರಾಚೀನ ಮಹರ್ಷಿಗಳು ಕಂಡುಬರುತ್ತಾರೆ. ಇತಿಹಾಸ

ಕಾಲದಲ್ಲಿ ಮೊಟ್ಟಮೊದಲನೆಯ ಗುರು ಸಿದ್ಧಚೈತನ್ಯ ಶಿವಾಚಾರ್ಯರು. ಇವರು ಕ್ರಿಸ್ತಶಕಪೂರ್ವ ಎರಡನೆಯ ಶತಮಾನದಲ್ಲಿದ್ದರೆಂದು ಗೊತ್ತಾಗುತ್ತದೆ. ಇವರು ಶಿವಯೋಗಸಿದ್ಧರೂ, ರಸಸಿದ್ಧರೂ ಆಗಿದ್ದರು. ಇವರ ತರುವಾಯ ಹೂಲಿಯ ಮಠದಲ್ಲಿ ೫೨ ಜನ ಸ್ಥಿರಪಟ್ಟಾಧಿಕಾರಿಗಳೂ, ೪೪ ಮಂದಿ ಚರಪಟ್ಟಾಧಿಕಾರಿಗಳೂ ಆಗಿಹೋದರೆಂದು ಆ ಮಠದ ಚರಿತ್ರೆಯಿಂದ ವ್ಯಕ್ತವಾಗುತ್ತದೆ. ಆ ಮಠದ ಪೂರ್ವಾಚಾರ್ಯರಲ್ಲಿ ಸಿದ್ಧನಂದೀಶ ಶಿವಾಚಾರ್ಯರು ಪ್ರಸಿದ್ಧರಾಗಿದ್ದರು. ಆಗ ಕಲ್ಯಾಣದಲ್ಲಿ ರಾಜ್ಯವಾಳುತ್ತಿದ್ದ ಚಾಲುಕ್ಯ ತ್ರಿಭುವನಮಲ್ಲ ವಿಕ್ರಮಾದಿತ್ಯನ ಅಣ್ಣ ಭುವನೈಕಮಲ್ಲ ಸೋಮೇಶ್ವರನು ಹೂಲಿಯಲ್ಲಿ ಪಂಚವರ್ಣ ಮಠವನ್ನು ಕಟ್ಟಿಸಿದನಲ್ಲದೆ, ಬಳ್ಳಾರಿಯ ಪ್ರಾಂತದಲ್ಲಿ ಉಜ್ಜಯಿನಿ ಎಂಬ ನಗರವನ್ನು ನಿರ್ಮಾಣ ಮಾಡಿಸಿ, ಅಲ್ಲಿ ಶ್ರೀ ಜಗದ್ಗುರು ಸದ್ಧರ್ಮ ಸಿಂಹಾಸನ ಮಠವನ್ನೂ ಕಟ್ಟಿಸಿದನೆಂದು ವೀರಶೈವ ವಾಙ್ಮಯದಿಂದ ಸಿದ್ಧವಾಗುತ್ತದೆ. ಕಲ್ಯಾಣದ ಚಾಲುಕ್ಯರ ಪೂರ್ವಜರು ಅವಂತಿಯ-ಉಜ್ಜಯಿನಿಯಲ್ಲಿ ರಾಜ್ಯವಾಳಿದ ಜೈನ ರಾಜವಂಶದವರೆಂಬುದನ್ನು ಚರಿತ್ರೆ ತಿಳಿಸುತ್ತದೆ. ಹೂಲಿಯ ಗುರುಪರಂಪರೆಯಲ್ಲಿ ಪ್ರಾಚೀನ ಆಚಾರ್ಯರು ಶಕ್ತಿದೇವತೆಯ ಆರಾಧಕರು. ಶ್ರೀ ಸಿದ್ಧಿಧಾತ್ರೀ ದೇವಿಯೇ ಅವರ ಆರಾಧ್ಯ ದೇವತೆಯಾಗಿದ್ದಳು. ಇದು ನಾಥಸಂಪ್ರದಾಯದಲ್ಲಿ ಗುರುನಾಥ ಪಂಥವೆಂಬುದರಲ್ಲಿ ಸಂಶಯವಿಲ್ಲ. ಕಾಳಾಮುಖರೂ ಈ ನಾಥಪಂಥದಲ್ಲಿದ್ದರು. ಅವರು ಶಿವಸಿದ್ಧರಾಗಿ ವೀರಶೈವವನ್ನು ಅಂಗೀಕರಿಸಿದರೆಂಬುದರಲ್ಲಿ ಅನುಮಾನವಿಲ್ಲ. ಇದು ಕಾಶೀ ವಿಶ್ವಾರಾಧ್ಯ ಪೀಠದ ಸೂತ್ರವಿಡಿದು ಗುರುಪೀಠವಾಯಿತು. ಇದು ಸಂಬಂಧದಿಂದ ತುಂಗಭದ್ರಾ ನದಿಯ ದಕ್ಷಿಣ ಭಾಗದಲ್ಲಿ ಕುರವತ್ತಿ ಬೃಹನ್ಮಠವೂ ನಂದ್ಯಾಲದ ಬೃಹನ್ಮಠವೂ ರೂಪುಗೊಂಡು, ಸನಾತನ ವೀರಶೈವವನ್ನು ಬೆಳೆಸಿದುವು; ಶರಣಧರ್ಮವನ್ನು ಹರಸಿದುವು. ಇದು ಪ್ರಾಚೀನ ಶಾಕ್ತೇಯ ಪಾಶುಪತ, ಕಾಳಾಮುಖ ಮತ್ತು ನಾಥಪಂಥಗಳನ್ನು ಸನಾತನ ವೀರಶೈವದಲ್ಲಿ ನಿಲ್ಲಿಸಿ ವೈದಿಕ-ತಾಂತ್ರಿಕ ಧರ್ಮವನ್ನು ನೆಲೆಗೊಳಿಸಿತು.

ದಕ್ಷಿಣ ಕರ್ನಾಟಕದ ಪೂರ್ವದಿಗ್ಭಾಗದಲ್ಲಿ ಹನ್ನೆರಡನೆಯ ಶತಮಾನದಲ್ಲಿ ಶ್ರೀಶೈಲಪೀಠದ ಗೂಳೂರು ನಿಡುಮಾಮಿಡಿ ಮಠದ ಆಶ್ರಯದಲ್ಲಿ ಶರಣಧರ್ಮ ಬೆಳಗಿತು. ಅನೇಕರು ಲಿಂಗಸಂತಧರ್ಮವನ್ನು ಅವಲಂಬಿಸಿದರು.

ಈ ಪೀಠದ ಶಿಷ್ಯವರ್ಗದಲ್ಲಿ ಸಜ್ಜನ (ಗಾಣಿಗರ) ಸಂಗಡದವರು ಪ್ರಮುಖರಾಗಿ ದ್ದಾರೆ. ಈ ಪೀಠ ಪ್ರಾಚೀನ ಘಂಟಾಕರ್ಣ ಸೂತ್ರಹಿಡಿದು ಸ್ಥಾಪನೆಯಾಯಿತು. ಈ ಪೀಠದ ಗುರುಗಳೂ ತಮ್ಮನ್ನು ಜಗದ್ಗುರುಗಳೆಂದು ಹೊಗಳಿಸಿಕೊಳ್ಳುತ್ತಾರೆ. ಬಸವಣ್ಣನವರ ಶರಣಧರ್ಮವನ್ನು ಬಿಡುಮಾಡಿ ಗುರುಪರಂಪರೆ ಏಕನಿಷ್ಠೆ ಯಿಂದ ಪರಿಪಾಲಿಸಿಕೊಂಡು ಬರುತ್ತಿದೆ; ಪ್ರಚಾರಮಾಡಿಕೊಂಡು ಬರುತ್ತಿದೆ. ಸಜ್ಜನಸಂಗಡದವರು ಸುಸಂಸ್ಕೃತರು; ಐಶ್ವರ್ಯವಂತರು. ಅನೇಕರು ಈ ಸಂಗಡದವರಲ್ಲಿ ವಿದ್ಯಾವಂತರಾಗಿರುತ್ತಾರೆ. ಹಲವರು ಸರ್ಕಾರಿ • ಅಧಿಕಾರಿಗ ಳಾಗಿಯೂ ಇದ್ದಾರೆ. ಇವರು ಆಚಾರ-ವಿಚಾರಗಳಲ್ಲಿ ಅನುಕರಣೀಯರಾಗಿ ದ್ದಾರೆ. ಹನ್ನೆರಡನೆಯ ಶತಮಾನದಲ್ಲಿ ಮತ್ತು ಆ ತರುವಾಯ ಸಜ್ಜನಸಂಗ ಡದವರು ಲಿಂಗಧಾರಿಗಳಾದಂತೆ ತಿಳಿದುಬರುತ್ತದೆ. ಈ ಪ್ರಭೇದದವರು ಏಕತ್ರರನ್ನೂ ಗೌರವಿಸುತ್ತಾರೆ ಇವರ ಗುರುಮಠ ಕಾನಾಮಡು ಕ್ಷೇತ್ರದಲ್ಲಿದೆ. ಸಜ್ಜನಸಂಗಡದವರೇ ಆ ಮಠದ ಗುರುಗಳಾಗುತ್ತಾರೆ. ಈ ಮಠ ಶ್ರೀಶೈಲ ಪೀಠದ ಆಧೀನ ಮಠಗಳಲ್ಲಿ ಒಂದಾಗಿದೆ.

ಗೂಳೂರು ಕೋಲಾರ ಜಿಲ್ಲೆಯ ಬಾಗೇಪಲ್ಲಿ ತಾಲ್ಲೂಕಿನಲ್ಲಿದೆ. ಇದು ಕನ್ನಡ-ತೆಲುಗು ನಾಡುಗಳ ಸಂಧಿಸ್ಥಾನದಲ್ಲಿದೆ. ಕನ್ನಡ-ತಮಿಳುನಾಡುಗಳ ಗಡಿಯಲ್ಲಿ ಶರಣ ಧರ್ಮದ ಕೇಂದ್ರವಾಗಿ ಸುತ್ತೂರಿನಲ್ಲಿ ರೇಣುಕ ಸಂಪ್ರದಾಯದ ಗುರುಪೀಠ ಸ್ಥಾಪನೆಯಾದಂತೆಯೇ ಕನ್ನಡ-ತೆಲುಗು ನಾಡುಗಳ ಗಡಿಯಲ್ಲಿ ಗೂಳೂರಿನಲ್ಲಿ ಪಂಡಿತಾರಾಧ್ಯಸಂಪ್ರದಾಯದ ಗುರುಪೀಠ ಸ್ಥಾಪನೆಯಾಯಿತು. ಚೋಳರಾಜರು ಈ ಪೀಠದಲ್ಲಿ ಪರಮ ಪೂಜ್ಯ ಭಾವವನ್ನಿಟ್ಟುಕೊಂಡಿದ್ದರು. ಇದು ಶರಣಧರ್ಮ ಗುರುಪೀಠ. ಶ್ರೀಶೈಲ ಗುರುಪೀಠದ ಜಗದ್ಗುರು ವಿರೂ ಪಾಕ್ಷದೇಶಿಕೇಂದ್ರ ಶಿಷ್ಯಪರಂಪರೆಯಲ್ಲಿ ಪ್ರಸಿದ್ಧರಾಗಿದ್ದ ಚಂದ್ರಗುಂಡ ದೇಶಿಕರು ಹನ್ನೊಂದನೆಯ ಶತಮಾನದಲ್ಲಿ ಗೂಳೂರಿನಲ್ಲಿ ತಮ್ಮ ಮಠವನ್ನು ಸ್ಥಾಪಿಸಿದ ರೆಂದೂ ರಾಜೇಂದ್ರ ಚೋಳನು ಈ ಮಠವನ್ನು ಕಟ್ಟಿಸಿದನೆಂದೂ ತಿಳಿದು ಬರುತ್ತದೆ. ಚಂದ್ರಗುಂಡ ದೇಶಿಕರು ಮಹಾಮಹಿಮರು. ಅವರು ಒಮ್ಮೆ ತೆಂಗಿನಮರವನ್ನು ತಮ್ಮ ಇಷ್ಟಲಿಂಗಾಭಿಷೇಕಕ್ಕಾಗಿ ಎಳನೀರು ಕಾಯಿಯನ್ನು ಕೇಳಲು ಆ ತೆಂಗಿನಮರ ಬಾಗಿ ಅವರಿಗೆ ಫಲಗಳನ್ನು ಅರ್ಪಿಸಿತಂತೆ! ಅವರು ಸುಮಾರು ಹನ್ನೊಂದನೆಯ ಶತಮಾನದ ಪ್ರಾರಂಭಕಾಲದಲ್ಲಿದ್ದರು.

ರಾಜೇಂದ್ರಚೋಳ ಮಹಾರಾಜನು ಚಂದ್ರಗುಂಡ ಶಿವಾಚಾರ್ಯರಿಗೆ ಮಣಿಖಚಿತ ಕನಕಸಿಂಹಾಸನ ಮತ್ತು ೩೨ ಬಿರುದುಗಳನ್ನು ಕೊಟ್ಟು ಗೌರವಿಸಿ ನೆಂದು ಈ ಮಠದ ಚರಿತ್ರೆಯಿಂದ ಗೊತ್ತಾಗುತ್ತದೆ. ಇವರು ಬೆಜವಾಡ ಪ್ರಾಂತದಲ್ಲಿದ್ದ ಕಾರ್ತ್ಯವೀರ್ಯಾರ್ಜುನನ ಸಂತತಿಯವರನ್ನು ಅನುಗ್ರಹಿಸಿ, ಅವರಿಗೆ ಲಿಂಗಧಾರಣವನ್ನು ಮಾಡಿಸಿ ತಮ್ಮ ಶಿಷ್ಯಕೋಟಿಯಲ್ಲಿ ಸೇರಿಸಿ ಕೊಂಡರು. ಇವರೇ ಸಜ್ಜನಶಿವಾಚಾರದ ಪಂಗಡದವರು. ಇವರ ಮನೆದೇವತೆ ಕನಕದುರ್ಗಾದೇವಿ. ಇವರು ದೇವರದಾಸಿಮಯ್ಯನೆಂಬ ಮಹಾ ಶರಣನನ್ನು ಅನುಗ್ರಹಿಸಿ, ಅವನಿಗೆ ಲಿಂಗಧಾರಣಮಾಡಿಸಿದರು. ಅವನ ವಂಶಜರಾದ ದೇವಾಂಗ ಶಿವಾಚಾರ ಪಂಗಡದವರು ಈ ಪೀಠದ ಶಿಷ್ಯರಾಗಿರುತ್ತಾರೆ. ಇವರ ಕಾಲಾನಂತರ, ಕರಿಬಸವ ದೇಶಿಕೇಂದ್ರರು ಪೆನುಗೊಂಡೆಯ ಪ್ರಾಂತದಲ್ಲಿ ಸುವರ್ಣಾವತೀ ನದಿಯ ತೀರದ ಅರಣ್ಯಪ್ರದೇಶದಲ್ಲಿ ಶಿವಾರ್ಚನೆಯನ್ನು ಮಾಡಿ ಅಲ್ಲಿ ಒಣಗಿ ನಿಂತಿದ್ದ ಮಾವಿನ ಮರದ ಬುಡಕ್ಕೆ ತಮ್ಮ ಇಷ್ಟಲಿಂಗಾಭಿಷೇಕ ಜಲವನ್ನು ಸುರಿಯಲು, ಅರೆಗಳಿಗೆಯಲ್ಲಿ ಆ ಮರವೆಲ್ಲಾ ಚಿಗುರಿ, ಹೂಬಿಟ್ಟು ಫಲಭರಿತವಾಯಿತಂತೆ ! ಆ ಮರ ತನ್ನ ರಸಫಲಗಳನ್ನು ಯಥೇಚ್ಛವಾಗಿ ಆ ಗುರು ಸನ್ನಿಧಿಗೆ ನೀಡಿತಂತೆ ! ಆ ಫಲಗಳನ್ನು ಆ ಗುರು ಇಷ್ಟಲಿಂಗಾರ್ಪಣೆ ಮಾಡಿ ಪ್ರಸಾದದಿಂದ ಪರಿವಾರವನ್ನೆಲ್ಲ ತೃಪ್ತಿಪಡಿಸಿದರಂತೆ! ತೆಲುಗುಭಾಷೆಯಲ್ಲಿ 'ಮಾಮಿಡಿ' ಎಂದರೆ, ಮಾವು ಎಂದು ಅರ್ಥ. ಆ ಮರ ಮಾವಿನಹಣ್ಣುಗಳನ್ನು ನೀಡಿದ್ದರಿಂದ "ನೀಡುಮಾಮಿಡಿ" ಎಂದು ಆ ಸ್ಥಳದ ಹೆಸರಾಯಿತು. ಅಲ್ಲಿಯೇ ಮಠವೊಂದು ನಿರ್ಮಾಣವಾಯಿತು. ಅದನ್ನು ನೀಡುಮಾಮಿಡಿ ಮಠವೆಂದು ಕರೆಯುತ್ತಾರೆ. ಇದು ಪವಾಡ. ಚನ್ನಬಸವಪುರಾಣದಲ್ಲಿ ಇದನ್ನು ನಿಡು ಮಾಗಡಿ ಎಂದು ಹೇಳಿದೆ. ಗುರುರಾಜ ಚಾರಿತ್ರದಲ್ಲಿಯೂ ನಿಡುಮಾಮಿಡಿಯ ವಿಚಾರ ಬಂದಿದೆ. ಕೆಲವು ಕಾಲಾನಂತರ ಈ ನಿಡುಮಾಮಿಡಿಯ ಮಠ ಗೂಳೂರಿನಲ್ಲಿ ಸ್ಥಾಪನೆಯಾಯಿತು. ನಿಡುಮಾಮಿಡಿ ಸಂಪ್ರದಾಯದ ಅನೇಕ ಮಠಗಳು ತೆಲುಗು, ತಮಿಳು ಮತ್ತು ಕನ್ನಡ ನಾಡುಗಳಲ್ಲಿ ಸ್ಥಾಪನೆಯಾಗಿ ರುತ್ತವೆ. ಗೂಳೂರು ಮಠ ಅನೇಕ ಶತಮಾನಗಳಕಾಲ ತುಂಬ ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಇದು ಶರಣ ಧರ್ಮವನ್ನು 'ಆಸಮುದ್ರಪರ್ಯಂತ' ಬೆಳಗಿತು. ಈ ಕರಿಬಸವ ದೇಶಿಕರು ಪಾಕನಾಟರೆಡ್ಡಿ ಪಂಗಡದವರನ್ನು ಲಿಂಗಧಾರಣ ಮಾ

ಜೀವ ಶರಣ ಧರ್ಮದಲ್ಲಿ ಅನುಗ್ರಹಿಸಿದರು. ಈ ಪರಂಪರೆಯಲ್ಲಿ ಇಮ್ಮಡಿ ಬಸವ ದೇಶಿಕರು, ಶಾಂತವೀರ ದೇಶಿಕರು, ಕರಿಬಸವರಾಜ ದೇಶಿಕರು, ಮರಿ ಬಸವರಾಜ ದೇಶಿಕರು, ಮಹೇಶ್ವರ ದೇಶಿಕರು, ಗುರುಸಿದ್ಧಬಸವರಾಜ ದೇಶಿಕರು, ಮುಮ್ಮಡಿ ಕರಿಬಸವ ದೇಶಿಕರು, ಕರಿಬಸವದೇಶಿಕೇಂದ್ರರು, ಮರಿಕರಿಬಸವದೇಶಿಕೇಂದ್ರರು, ನಾಲ್ವಡಿ ಕರಿಬಸವರಾಜದೇಶಿಕರು, ಪಟ್ಟದ ಮರಿಕರಿಬಸವರಾಜ ದೇಶಿಕೇಂದ್ರರು- ಈ ಮಠದ ಅಧಿಕಾರಿಗಳಾಗಿದ್ದರು. ಈಗ ಜಗದ್ಗುರು ಪಟ್ಟದ ಶ್ರೀ ಚನ್ನಬಸವರಾಜ ದೇಶಿಕೇಂದ್ರರು ಈ ಪೀಠಾಧೀಶ್ವರ ರಾಗಿರುತ್ತಾರೆ. ಇವರಿಗೆ ಸಖರಾಯಪಟ್ಟಣ ಮಠದ ಶ್ರೀ ಸದಾಶಿವ ಪ್ರಾಧ್ಯಕ್ಷ ಶಿವಾಚಾರ್ಯರಿಂದ ಅಧಿಕಾರ ಪ್ರದಾನವಾಯಿತು. ಶ್ರೀ ಸರ್ಪ ಭೂಷಣ ಮಠದ ಶ್ರೀ ಮಹದೇವಸ್ವಾಮಿಗಳಿಂದ ಅನುಗ್ರಹವಾಯಿತು. ಇವರು ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ದೊಡ್ಡ ವಿದ್ವಾಂಸರು. ಇವರಿಗೆ ಇಂಗ್ಲೀಷ್ ಮತ್ತು ತೆಲುಗು ಭಾಷೆಗಳ ಪರಿಚಯವಿದೆ. "ಗುರುವೆಂಬ ಹೆಮ್ಮೆಯು ಅಭಿಮಾನವು ನಮಗಿಲ್ಲ. ನಾವೊಬ್ಬ ಧರ್ಮ ಪ್ರಚಾರಕರೆಂದೂ, ಶಿವಸೇವಕರೆಂದೂ ಕಾರ್ಯಮಾಡಲಿಚ್ಛಿಸುತ್ತೇವೆ. ಮಹಿಮಾಪುರುಷರಾದ ನಮ್ಮ ಪೂರ್ವಾಚಾರ್ಯರುಗಳ ಆಶೀರ್ವಾದ ಬಲದಿಂದ ಇನ್ನುಮುಂದೆ ಇಲ್ಲಿ ನಾವು ಮಾಡುವ ನಮ್ಮ ಶಿವಪೂಜಾ ತಪಃಪ್ರಭಾವದ ಫಲವನ್ನು" ಪ್ರಜಾ ಕೋಟಿಯ ಶ್ರೇಯೋಭಿವೃದ್ಧಿಯಲ್ಲಿ ಧಾರೆಯೆರೆಯಲು ಸಂಕಲ್ಪಿಸಿರುತ್ತೇವೆ. ಎಂದು ಪಟ್ಟಾಧಿಕಾರ ಸ್ವೀಕಾರ ಕಾಲದಲ್ಲಿ ಉತ್ತಮ ಭಾಷಣ ಮಾಡಿದರು. ಇವರು ಈ ಪಟ್ಟಾಧಿಕಾರಿಗಳಾಗಿ ಸುಮಾರು ೨೮ ವರ್ಷಗಳಾದುವು. ಅಂದಿ ನಿಂದಲೂ ಇವರು ಸಾಹಿತ್ಯಸೇವೆಯನ್ನು ಅಖಂಡವಾಗಿ ಸಲ್ಲಿಸಿರುತ್ತಾರೆ. ಇವರು ಸರ್ವೋತ್ತಮ ಪ್ರೌಢ ತಾತ್ವಿಕಗ್ರಂಥಗಳನ್ನು ರಚಿಸಿರುತ್ತಾರೆ. ಅಲ್ಲದೆ ನಾಟಕ, ವಚನ, ಪ್ರಬಂಧ, ಕಾವ್ಯ ಗ್ರಂಥಗಳನ್ನೂ ಬರೆದಿರುತ್ತಾರೆ. ತುಂಬ ಸಾತ್ವಿಕರು, ಸರಳಗುಣ ಸಂಪನ್ನರು, ಶಿವಪೂಜಾನಿಷ್ಠರು, ನಿರ್ಮಲಚಿತ್ತರು. ಇವರ ಕನ್ನಡ ಭಾಷಾ ಶೈಲಿ ಹಸುಳೆಯ ಕಾಲ್ಗೆಜ್ಜೆಯ ನಿನಾದದಂತೆ ಮಂಜುಳ ವಾಗಿರುತ್ತದೆ. ಇವರು ವಿದ್ವಜ್ಜನಪ್ರಿಯರು; ವಿದ್ಯಾಪಕ್ಷಪಾತಿಗಳು. ಇವರು ಶಿವಯೋಗಮಂದಿರದಲ್ಲಿ ವಿರಕ್ತ ಸಮುದಾಯದಲ್ಲಿ ಶಿಕ್ಷಣ ಪಡೆದವರಾದರೂ, ಪಂಡಿತಾರಾಧ್ಯ ಸಂಪ್ರದಾಯದ ಶ್ರೀಮಠಾಧೀಶ್ವರರಾಗಿ ಬಸವಣ್ಣನವರ ಶರಣ

ಧರ್ಮವನ್ನು ಸನಾತನ ವೀರಶೈವ ತತ್ತ್ವದಲ್ಲಿ ಅಳವಡಿಸಿಕೊಂಡು ಸರ್ವಸ ನ್ವಯ ದೃಷ್ಟಿಯಿಂದ ಸಮಾಜದಲ್ಲಿ ನವಚೈತನ್ಯವನ್ನು ತುಂಬಿದರು. ಇವರು ನಿರ್ಮಲಚಿತ್ತವೃತ್ತಿಯ ಸತ್ಸಲ! ಇವರು ಉತ್ತರ ಕರ್ನಾಟಕದವರಾದ ದಕ್ಷಿಣ ಕರ್ನಾಟಕದ ನಯ, ಗಾಂಭೀರ್ಯ ಸಂಪ್ರದಾಯಗಳ ಜಾಡನ್ನು ಕಂಡುಕೊಂಡು, ಕರ್ನಾಟಕದ ಉತ್ತರ ದಕ್ಷಿಣ ಜನಾಂಗದ ಭಾವೈಕ್ಯತೆಯನ್ನು ಭಾಷಾಬಾಂಧವ್ಯವನ್ನೂ ಬಹಳ ಸುಂದರವಾಗಿ ರೂಪುಗೊಳಿಸಿ ಕೃತಾರ್ಥರಾ ದ್ದಾರೆ. ಇವರ ಪಟ್ಟಾಧಿಕಾರದ ಬೆಳ್ಳಿಯ ಹಬ್ಬವನ್ನು ಇತ್ತೀಚೆಗೆ ಶಿಷ್ಯಕೋಟಿ ಬೆಂಗಳೂರಿನಲ್ಲಿ ವೈಭವದಿಂದ ಆಚರಿಸಿತು. ಅನೇಕ ವಿದ್ವಾಂಸರಿಗೂ ಕಲಾ ವರಿಗೂ ಶ್ರೀಮಠದಿಂದ ಸುವರ್ಣಪದಕ ಮತ್ತು ಪ್ರಶಸ್ತಿಗಳನ್ನಿತ್ತು ಗೌರವಿ ದರು. ಈ ಮಠ ೧೧ ನೆಯ ಶತಮಾನದಿಂದಲೂ ಶರಣಧರ್ಮವನ್ನು ಪರಿಪೋಷಿಸುತ್ತ ಬಂದಿರುತ್ತದೆ.

ಶರಣಧರ್ಮ ಪ್ರಸಾರ ಕಾರ್ಯದಲ್ಲಿ ಈ ಗುರುಪೀಠಗಳಿಂದ ಅಪಾರ ಸೇ ನಡೆಯಿತು. ಬಸವಣ್ಣನವರ ಕಾಲದಲ್ಲಿ ನಾನಾ ಶೈವಪಂಥಗಳು ವೀರಶೈವದ ಸೇರುತ್ತಿದ್ದುವು. ಅದರಂತೆಯೇ ನಾಥಸಿದ್ಧಪಂಥವೂ ವೀರಶೈವವನ್ನು ಅವಲಂಬಿಸಿತು.

೬೬. "ಶೈವ ಸೈವೆರೆಗಾದ; ಪಾಶುಪತಿಪಥವನರಿಯ, ಕಾಳಾಮುಖ ಕಂಗೆ ಮಹಾವ್ರತಿಮದವೇರಿದ; ಸಂನ್ಯಾಸಿ ಪಾಷಂಡಿಯಾದ; ಕಾಪಾಲಿ ಮರುಳಾ ತಿರುಗಿದ; ಈ ಆರು ಭಕ್ತಿ ಪಂಥಕ್ಕೆ ಸಲ್ಲವು ಕೇಳಿರಣ್ಣಾ" ಎಂದು ಚನ್ನಬಸವ ನವರು ಹೇಳಿರುತ್ತಾರೆ. ಕಾಪಾಲಿಗಳನ್ನು ಶಾಕ್ತೇಯರೆಂದೂ ನಾಥಪಂಥದ ರೆಂದೂ ಕರೆಯುತ್ತಿದ್ದರು. ಇಂಥ ನಾಥಪಂಥದ ಪ್ರಾಚೀನ ಕೇಂದ್ರ ಈಗಲೂ ಆದಿಚುಂಚನಗಿರಿಯಲ್ಲಿದೆ.

ಕನ್ನಡನಾಡಿನ ಪ್ರಾಚೀನ ನಾಥಸಿದ್ಧ ಸಂಪ್ರದಾಯ ಮಠಗಳಲ್ಲಿ ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನ ಆದಿಚುಂಚಗಿರಿಯೂ ಪ್ರಸಿದ್ಧಿಯಾಗಿದೆ. ಇದು ಪುಣ್ಯಕ್ಷೇತ್ರ; ಸಿದ್ಧಕ್ಷೇತ್ರ. ಶಿವನ ಕಪಾಲದಿಂದ ಉದ್ಭವಿಸಿದ ಸಿದ್ಧಯೋಗಿ ಇಲ್ಲಿ ತಪಸ್ಸು ಮಾಡಿದನೆಂದೂ, ಇಲ್ಲಿಯೇ ಸಮಾಧಿಯೋಗದಲ್ಲಿರುತ್ತಾನೆಂದು ಸ್ಕಾಂದ ಪುರಾಣದಲ್ಲಿ ಉಕ್ತವಾಗಿದೆ. ಸಾರಂಗನಾಥ ಮತ್ತು ಅಘೋರನಾ ಎಂಬ ಇಬ್ಬರೂ ಈ ಸಿದ್ಧಯೋಗಿಯ ಅಂಶ ಸಂಭವರು. ನಪನಾಥರೂ

ಗಿರಿಯಲ್ಲಿ ತಪಸ್ಸುಮಾಡಿದರೆಂಬುದು ತಿಳಿದುಬರುತ್ತದೆ. ನವನಾಥರೂ ಸೇರಿ ಈ ಹನ್ನೆರಡು ಜನರೂ ಹನ್ನೆರಡು ಸ್ಥಳಗಳಲ್ಲಿ ತಮ್ಮ ತಮ್ಮ ಪೀಠಗಳನ್ನು ಸಂಸ್ಥಾಪಿಸಿದರು. ಸಿದ್ಧಯೋಗಿ ಆದಿಚುಂಚನಗಿರಿ ಪೀಠದ ಮೊದಲನೆಯಗುರುವಾದರು. ಈಪರಂಪರೆಯಲ್ಲಿ ಅರುವತ್ತೆಂಟುಗುರುನಾಥರು ಪ್ರಸಿದ್ಧರಾದರು. ಅವರೆಲ್ಲರಿಗೂ ನಾಥರು ಎಂದೇ ಹೆಸರು. ೬೮ ನೆಯ ಪೀಠಾಧೀಶ್ವರರಾದ ಶ್ರೀ ಭಕ್ತನಾಥರು ಸುಮಾರು ಒಂಬತ್ತು ವರ್ಷದ ಹಿಂದೆ ಮಹಾಸಮಾಧಿಯನ್ನು ಹೊಂದಿದರು. ಈಗ ಪರಮಪೂಜ್ಯ ಶ್ರೀ ಚಂದ್ರಶೇಖರ ನಾಥಸ್ವಾಮಿಗಳು ಈ ಸಿದ್ಧ ಸಿಂಹಾಸನಾಧೀಶ್ವರರಾಗಿ ವಿರಾಜಿಸುತ್ತಿದ್ದಾರೆ. ಇವರು ಮಹಾ ಯೋಗಸಿದ್ಧರೂ, ದಿವ್ಯಜ್ಞಾನ ಸಂಪನ್ನರೂ, ಅಧ್ಯಾತ್ಮಹೃದಯರೂ, ವಿದ್ಯಾಪಾರಂಗತರೂ ಆಗಿದ್ದಾರೆ. ಈ ಆದಿಚುಂಚನಗಿರಿಯ ಸಿದ್ಧಸಿಂಹಾಸನ ಜ್ವಾಲಾಪೀಠವೆಂದು ಪ್ರಸಿದ್ಧವಾಗಿದೆ. ಇದನ್ನು ಉರಿಗದ್ದುಗೆಯೆಂದೂ ಕರೆಯುತ್ತಾರೆ. ಈ ಜ್ವಾಲಾ ಪೀಠದ ಮಹಾತ್ಮ್ಯೆ ಅಪಾರ. ಯೋಗನಿಷ್ಠೆಯಿಲ್ಲದ ಯಾರೇಆಗಲಿ ಈ ಗದ್ದುಗೆಯನ್ನು ಮುಟ್ಟಿದರೆ ಅವರಿಗೆ ನಾನಾ ತೊಂದರೆಗಳುಂಟಾಗುತ್ತವೆಯೆಂದು ಭಕ್ತಕೋಟಿ ನಂಬಿದೆ. ಇವರು ಮಂತ್ರೋಪದೇಶ ಮತ್ತು ದೀಕ್ಷಾ ಸಂಸ್ಕಾರಗಳಿಂದ ಭಕ್ತರನ್ನು ಉದ್ಧರಿಸುತ್ತಾರೆ. ಇದು ನವನಾಥ ಸಂಪ್ರದಾಯ.

*" ಅಸ್ಮಿನ್ ಮತೇ ದಾಸಯೋಗ ಜಂಗಮ ಶ್ರವಣಸ್ತಥಾ ।
ಸಂನ್ಯಾಸಿ ಕಾಳಮುಖಾ ಚ ದರ್ಶನಾನಿ ವದಂತಿಹಿ ॥"

ಎಂದರೆ, ದಾಸ, ಯೋಗ, ಜಂಗಮ, ಶ್ರವಣ, ಸಂನ್ಯಾಸಿ, ಕಾಳಾಮುಖ ಎಂಬ ಐದು ಮತಗಳೂ ನಾಥಪಂಥದಲ್ಲಿವೆಯೆಂದು ಹೇಳಿರುತ್ತದೆ. ಎಡೆಯೂರು ಸಿದ್ಧಲಿಂಗೇಶ್ವರರ ತಪೋಭೂಮಿಯೂ ಅವರ ಗದ್ದುಗೆಯೂ ಆದಿಚುಂಚನ ಗಿರಿಯಿಂದ ಅನತಿದೂರದಲ್ಲಿವೆ. ಈ ಗಿರಿಕ್ಷೇತ್ರದಲ್ಲಿ ಗಂಗಾಧರೇಶ್ವರ ಸ್ವಾಮಿಯ ಭವ್ಯ ದೇವಾಲಯವಿದೆ. ಅಲ್ಲದೆ, ಇಲ್ಲಿ ಗಂಗಾಧರೇಶ್ವರ, ಚಂದ್ರಮೌಳೀಶ್ವರ, ಮಲ್ಲೇಶ್ವರ, ಸಿದ್ಧೇಶ್ವರ ಮತ್ತು ಸೋಮೇಶ್ವರ ಎಂಬ ಪಂಚಲಿಂಗಗಳಿವೆ. ಈ ಐದು ಲಿಂಗಗಳನ್ನೂ ಶಿವನೇ ಸ್ಥಾಪಿಸಿದನೆಂದು ಸ್ಥಳಪುರಾಣದಲ್ಲಿ ಹೇಳಿದೆ. ಈ ಐದೂ ವೀರಶೈವ ಪಂಚಪೀಠಗಳ ಪ್ರತೀಕವೆಂಬುದು ಸ್ಪಷ್ಟವಾಗಿದೆ. ಆದಿಶಕ್ತಿ ಪಾರ್ವ

* ಆಧಾರ: ದಿವ್ಯಕ್ಷೇತ್ರ ಶ್ರೀ ಆದಿಚುಂಚನಗಿರಿ ಗ್ರಂಥ: ಶ್ರೀ ಶ್ರೀ ಚಂದ್ರಶೇಖರ ನಾಥಸ್ವಾಮಿಜಿ ಅವರಿಂದ.

ತೀದೇವಿಯನ್ನು ಕಂಬದಮ್ಮನೆಂದು ಇಲ್ಲಿ ಆರಾಧಿಸುತ್ತಾರೆ. ಇಲ್ಲಿರುವ ಗವಿ ಸಿದ್ಧೇಶ್ವರನ ಲಿಂಗವೇ ಸಿದ್ಧನಾಥಯೋಗಿಯ ಸ್ಮಾರಕಲಿಂಗ. ಆದಿಚುಂಚನಗಿರಿ ನವನಾಥ ಸಂಪ್ರದಾಯದ ಕಾಪಾಲಿ ಶೈವಪಂಥದ ಕೇಂದ್ರವಾಗಿತ್ತು. ಇಲ್ಲಿ ಕಾಲಭೈರವ ಸ್ವಾಮಿಯ ದೇವಾಲಯವಿದೆ; ವಿಗ್ರಹ ಸುಂದರವಾಗಿದೆ. ಈ ಸಿದ್ಧ ಸಿಂಹಾಸನಾಧೀಶ್ವರರು ಶೈವರು. ವಿಭೂತಿ, ರುದ್ರಾಕ್ಷಿ, ಕಾವಿ, ಕಮಂಡಲು ವಿಭೂಷಿತರು. ಈ ಮಠದ ಶಿಷ್ಯಕೋಟಿ ಅಪಾರವಾಗಿದೆ. ಈ ನಾಥಪಂಥ ವೀರಶೈವದಮೇಲೆ ಪ್ರಭಾವ ಬೀರಿತೆಂದು ಹೇಳಬಹುದು. ಮೇಲುಕೋಟೆ ಇಲ್ಲಿಗೆ ಸಮೀಪದಲ್ಲಿದೆ. ಶ್ರೀ ರಾಮಾನುಜಾಚಾರ್ಯರು ಕಾಪಾಲಿಸಿದ್ಧ ಪಂಥವನ್ನು ಖಂಡಿಸಿರುತ್ತಾರೆ. ಆದರೆ ಶೈವರು ಕಾಪಾಲಿ ಪಂಥವನ್ನು ವೀರಶೈವದಲ್ಲಿ ಸಮಾವೇಶಗೊಳಿಸಿದರು. ಈ ಪೀಠಾಧೀಶ್ವರರನ್ನು 'ಜಗದ್ಗುರು'ಗಳೆಂದು ಗೌರವಿಸುತ್ತಾರೆ. ಸರ್ಕಾರದಿಂದ ಸಮಸ್ತ ಬಿರುದಬಾವಲಿಗಳ ಗೌರವಗಳು ಸಂದಿರುತ್ತವೆ. ಈ ಮಹಾಪೀಠ ಪ್ರಾಚೀನ ಸಂಸ್ಕೃತಿಯ ಕೇಂದ್ರವಾಗಿ ಬೆಳಗುತ್ತಿದೆ. ಇದು ಒಕ್ಕಲಿಗರ ಜನಾಂಗದ ಜಗದ್ಗುರುಪೀಠ. ಮೈಸೂರು ರಾಜ್ಯದಲ್ಲಿ ಒಕ್ಕಲಿಗರು ಪ್ರಬಲಜನಾಂಗ. ಈ ಜನಾಂಗದಲ್ಲಿ ಅನೇಕರು ವಿದ್ಯಾವಂತರಾಗಿಯೂ, ಸರ್ಕಾರಿ ಅಧಿಕಾರಿಗಳಾಗಿಯೂ, ಐಶ್ವರ್ಯವಂತರಾಗಿಯೂ ಇದ್ದಾರೆ. ವ್ಯವಸಾಯವೇ ಇವರ ಮುಖವೃತ್ತಿ. ದುಡಿಮೆಯೇ ಅವರ ದೈವ. ಜನ ಪ್ರಾಮಾಣಿಕರಾಗಿಯೂ ಸ್ವತಂತ್ರಮನೋಭಾವದವರಾಗಿಯೂಇರುತ್ತಾರೆ. ಒಕ್ಕಲಿಗರ ಅನೇಕ ರಾಜಮನೆತನಗಳು ಹಿಂದೆ ಪ್ರಸಿದ್ಧಿಯಾಗಿ ಮೆರೆದುವು. ಇವರು ಎಲ್ಲ ಮತದ ಗುರುಗಳನ್ನೂ ಗೌರವಿಸುತ್ತಾರೆ. ಆದಿಚುಂಚನಗಿರಿಯ ಪೀಠದ ಪ್ರಭಾವದಿಂದ ಒಕ್ಕಲಿಗರ ಜನಾಂಗ ತೇಜಃಪುಂಜವಾಗುತ್ತಿದೆ. ಈ ಜಗದ್ಗುರುಗಳ ಆಂಧೋಲಿಕಾ ಮಹೋತ್ಸವ ಕೆಂಪೇಗೌಡನ ಬೆಂಗಳೂರಿನಲ್ಲಿ ಅತ್ಯಂತ ವಿಜೃಂಭಣೆಯಿಂದ ನಡೆಯುವ ನಿರೀಕ್ಷೆ ಇದೆ. ಎಲ್ಲ ಜಗದ್ಗುರುಗಳಿಗೂ ಕರ್ನಾಟಕ ರಾಜಧಾನಿಯಲ್ಲಿ ಭವ್ಯ ಸ್ವಾಗತ ಲಭಿಸಬೇಕಾದುದು ಕಾಲಧರ್ಮೋಚಿತವಾಗಿದೆ.

ಈಗ ಆದಿಚುಂಚನಗಿರಿಯ ಸಿದ್ಧ ಸಿಂಹಾಸನಾಧೀಶ್ವರರಾಗಿರುವ ಶ್ರೀ ಚಂದ್ರಶೇಖರನಾಥಸ್ವಾಮಿಯವರು ತಾ|| ೨೯-೧೨-೧೯೬೬ ನೆಯ ದಿನ ಪಟ್ಟಾಭಿಷಕ್ತರಾದರು. ಇವರು ಈ ಪೀಠದ ಗುರುಪರಂಪರೆಯಲ್ಲಿ ಅರುವತ್ತೊಂಭತ್ತ

ನೆಯ ಪಟ್ಟಭದ್ರರು. ಈ ಕ್ಷೇತ್ರದ ಆರಾಧ್ಯಮೂರ್ತಿ ಶ್ರೀ ಗಂಗಾಧರ ಕಾಲಭೈರವೇಶ್ವರಸ್ವಾಮಿ. ಇದು ಪ್ರಾಚೀನ ಶೈವಕಾಪಾಲಿ ಸಂಪ್ರದಾಯದ ಕೇಂದ್ರವೆಂದು ಇತಿಹಾಸದಿಂದ ತಿಳಿದುಬರುತ್ತದೆ. ಇವರು ಲಿಂಗಧಾರಿಗಳಲ್ಲ; ಶಿವಲಿಂಗ ಪೂಜಾನಿರತರು.

ಕನ್ನಡನಾಡಿನಲ್ಲಿ ನಾಥಪಂಥ ಉಚ್ಛ್ರಾಯಸ್ಥಿತಿಯಲ್ಲಿತ್ತು. ಅದು ಕ್ರಮೇಣ ವೀರಶೈವದಲ್ಲಿ ಲೀನವಾಯಿತೆಂದು ಹೇಳಬಹುದು. ಮಂಗಳೂರು ನಗರದಲ್ಲಿಯೂ ನಾಥಪಂಥದ ಕೇಂದ್ರ ಪೀಠವಿದೆ. ಧರ್ಮಸ್ಥಳದ ಮಂಜುನಾಥ ಸ್ವಾಮಿ ನಾಥಪಂಥದ ಸಿದ್ಧನೆಂಬುದನ್ನು ಗಮನಿಸಬಹುದು. ಸಿರಾ ತಾಲ್ಲೂಕಿನ ಹೇಮಾವತಿಯೂ ನಾಥಸಿದ್ಧರ ಕೇಂದ್ರವಾಗಿತ್ತು.

ನಾಥಪಂಥದಲ್ಲಿ ಕಾಪಾಲಿಗಳು ತುಂಬ ಪ್ರಸಿದ್ಧರಾಗಿದ್ದರು. ವಿರಕ್ತ ಶ್ರೀ ಚಂದ್ರಶೇಖರನಾಥ ಸ್ವಾಮೀಜಿಯವರು ವಯೋವೃದ್ಧರು; ಜ್ಞಾನವೃದ್ಧರು. ಇವರು ಪರಮಹಂಸರು; ಈ ಪೀಠದ ಶಿಷ್ಯರು ಕರ್ಣಾಟಕ, ಆಂಧ್ರ, ತಮಿಳು ಮತ್ತು ಮಹಾರಾಷ್ಟ್ರ ಪ್ರಾಂತಗಳಲ್ಲಿ ವಿಶೇಷವಾಗಿರುತ್ತಾರೆ. ಪ್ರತಿವರ್ಷವೂ ಜಾತ್ರೆಯಕಾಲದಲ್ಲಿ ಮೂರು ದಿನ ಈ ಗುರುವರ್ಯರು ಸಿಂಹಾಸನಾರೋಹಣ ಮಾಡುತ್ತಾರೆ. ಭಕ್ತವೃಂದ ಶ್ರೀಗುರು ದರ್ಶನದಿಂದ ಪುನೀತರಾಗುತ್ತಾರೆ. ಇದು ಸಿದ್ಧಸಿಂಹಾಸನ. ಇದು ಲೋಹನಿರ್ಮಿತವಾದುದು. ಮೈಸೂರು ಅರಮನೆಯ ರಾಜಸಿಂಹಾಸನದಂತೆ ಇದೂ ಭವ್ಯವಾಗಿದೆ.



# ತರಂಗ ೧೪.

## ಸಿಂಹಾವಲೋಕನ; ವಿಹಂಗಮದೃಷ್ಟಿ

೭೭. "ಘಟವನೊಡೆದು ಬಯಲನೋಡಲದೇಕೆ ? ಆ ಘಟದೊಳಗಿಪ್ಪುದೇ ಬಯಲೆಂದರಿದೊಡೆ ಸಾಲದೇ? ಪಟವ ಹರಿದು ತಂತುವ ನೋಡಲದೇಕೆ? ಆ ಪಟವೇ ತಂತುವೆಂದರಿದೊಡೆ ಸಾಲದೇ ? ಕಟಕವ ಮುರಿದು ಕಾಂಚನವ ನೋಡಲದೇಕೆ ? ಆ ಕಟಕವೇ ಕಾಂಚನವೆಂದರಿದೊಡೆ ಸಾಲದೇ? ತನ್ನನಳಿದು ಘನವನೋಡಲದೇಕೆ? ತಾನೇ ಘನವೆಂದರಿದೊಡೆ ಸಾಲದೇ ಹೇಳಾ ರಾಮನಾಥ"

—ದೇವರದಾಸಿಮಯ್ಯ

ನಿರಂಜನವಂಶರತ್ನಾಕರ ವೀರಶೈವತತ್ತ್ವಪ್ರವಾಹಿನಿಯೇ ಹೊರತು ಇತಿಹಾಸ ದರ್ಪಣವಲ್ಲವೆಂಬುದನ್ನು ಸೂಚಿಸಲಾಗಿದೆ. ಸುಮಾರು ಆರು ಶತಮಾನಗಳಷ್ಟು ಅವಧಿಯಲ್ಲಿ ನಡೆದ ಜಂಗಮ ಧರ್ಮ ಪ್ರಗತಿಯನ್ನು ಅದು ರೂಪಿಸಿದೆ. ಶ್ರೀಮ ಚಿತ್ರದುರ್ಗ ವಿರಕ್ತಮಠದ ಆಶ್ರಯದಲ್ಲಿ ಇತ್ತೀಚೆಗೆ ಪ್ರೈದೋರಿದ ಗ್ರಂಥವೊಂದ ದನ್ನು ಮರೆಯುವಂತಿಲ್ಲ. ಅದರಲ್ಲಿ ವರ್ಣಿತವಾಗಿರುವ ಅತಿ ಮುಖ್ಯ ಘಟನೆ ಗಳನ್ನಾದರೂ ಸಿಂಹಾವಲೋಕನ ಮಾಡಿ, ಆ ಘಟನೆಗಳ ಐತಿಹಾಸಿಕ ಮೌಲ್ಯವನ್ನು ವಿಹಂಗಮದೃಷ್ಟಿಯಿಂದ ತಿಳಿಯಲು ಅವಕಾಶವಿದೆ. ಈ ಗ್ರಂಥ ದಲ್ಲಿ ಬಸವಣ್ಣನವರು ರಕ್ತಾಕ್ಷಿ ಸಂವತ್ಸರವೆಂದರೆ, ನೃಪಶಾಲಿವಾಹನ ಶಕ ೭೦೬ ನೆಯ ರಕ್ತಾಕ್ಷಿ ಸಂವತ್ಸರ ಫಾಲ್ಗುಣ ಶುದ್ಧ ಏಕಾದಶಿ ಮಂಗಳವಾರ ಉದಯ ೩ಘಗಳಿಗೆ ವೇಳೆಯಲ್ಲಿ ಕಪ್ಪಡಿ ಸಂಗಮೇಶ್ವರಲಿಂಗದಲ್ಲಿ ಐಕ್ಯರಾದರೆಂದು ಹೇಳಿದೆ. ಇದರಿಂದ ಬಸವಣ್ಣನವರು ಕ್ರಿ. ಶ. ೭೮೫ ರಲ್ಲಿ ಲಿಂಗೈಕ್ಯರಾದರೆಂದು ಹೇಳಿ ದಂತಾಯಿತು. ಅದು ೮ ನೆಯ ಶತಮಾನವಾಯಿತು. ಬಸವಣ್ಣನವರು ಕ್ರಿ. ಶ. ೧೧೬೭ ರಲ್ಲಿ ಕಾಲವಾದರೆಂದು ಸಂಶೋಧನೆಗಳಿಂದ ವಿದ್ವಾಂಸರು ನಿರ್ಧರಿಸುತ್ತಾರೆ. ಆದ್ದರಿಂದ ನಿರಂಜನವಂಶ ರತ್ನಾಕರದಲ್ಲಿ ಹೇಳಿರುವುದು ಸರಿಯಲ್ಲ.

ನಿರಂಜನವಂಶರತ್ನಾಕರವಂತೆ ಅಲ್ಲಮರು ಶೂನ್ಯಸಿಂಹಾಸನದ ಮೊದಲ ನೇ ಸಿರಾಭಾರಿ. ಅವರು ಕಲ್ಯಾಣಕ್ಕೆ ಮೊಟ್ಟಮೊದಲು ಹೋದಾಗಲೇ ಅವರನ್ನು ಬಸವಣ್ಣನವರು ಶೂನ್ಯಸಿಂಹಾಸನದಮೇಲೆ 'ಮೂರ್ತಗೊಳಿಸಿ' ದರು. ಇದು ನಿಜವಲ್ಲ. ಅವರು ಮೊಟ್ಟಮೊದಲನೆಯಸಾರಿ, ಕಲ್ಯಾಣಕ್ಕೆ ಹೋದಾಗ, ಶೂನ್ಯಸಿಂಹಾಸನವೇ ಸಿದ್ಧವಾಗಿರಲಿಲ್ಲ. ಅನಂತರ ಅವರು ೧೨ ವರ್ಷ ಕಳೆದಮೇಲೆ ಕಲ್ಯಾಣಕ್ಕೆ ಪುನಃ ಹೋಗುವ ವೇಳೆಗೆ ಶೂನ್ಯಸಿಂಹಾಸನ ಸಿದ್ಧವಾಗಿತ್ತೆಂದು ವಚನವಾಙ್ಮಯದಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ. ಅವರು ಕಲ್ಯಾಣದಲ್ಲಿ ಕೆಲವುಕಾಲವಿದ್ದು, ತಮ್ಮಲ್ಲಿದ್ದ ಸುವರ್ಣ ಶೂನ್ಯಸಿಂಹಾಸನ, ಪ್ರಣವಶಿಖಾಶೈಲ, ಶಿವಾನುಭವ ಪುಸ್ತಕಗಳನ್ನು ಚನ್ನಬಸವಣ್ಣನವರಿಗೆ ಕೊಟ್ಟು ಕಲ್ಯಾಣದಿಂದ ಶ್ರೀಶೈಲದತ್ತ ಹೋದರೆಂದೂ, ಶ್ರೀಶೈಲದ ಕದಳಿಯಬನದೊಳ ಗಿರುವ ಮಠದಲ್ಲಿ ರಕ್ತಾಕ್ಷಿ ಸಂವತ್ಸರದ ಪುಷ್ಯ ಶುದ್ಧ ಪಾಡ್ಯದ ಸೋಮವಾರ ದಿವಯ ೨೫ ಗಳಿಗೆಗೆ ತಮ್ಮ ಗುಹೇಶ್ವರಲಿಂಗದಲ್ಲಿ ನಿರ್ವಯಲರಾದರೆಂದೂ 'ನಿರಂಜನವಂಶ ರತ್ನಾಕರ'ದಲ್ಲಿ ಉಕ್ತವಾಗಿದೆ. ಅವರಿಗೆ ಶೂನ್ಯಸಿಂಹಾಸನ ಮತ್ತೂ ಬಸವಣ್ಣನವರಿಂದ ಬಂದಿತ್ತು! ಶಿಖಾಶೈಲ ಮತ್ತು ಶಿವಾನುಭವ ಪುಸ್ತಕಗಳು ಅವರಿಗೆ ಎಲ್ಲಿಂದ ಬಂದವು? ಪಟ್ಟಪ್ರದಾನದಲ್ಲಿ ಇವು ಅತ್ಯಂತ ಪ್ರಮುಖವಾದವುಗಳಲ್ಲವೆ? ಚನ್ನಬಸವಣ್ಣನವರಿಗೆ ಶಿಖಾಶೈಲಗಳನ್ನಿತ್ತು ಅಲ್ಲಮರು ಶ್ರೀಶೈಲದತ್ತ ನಿರ್ಗಮಿಸಿದರೆಂದಮೇಲೆ ಚನ್ನಬಸವಣ್ಣನವರಿಗೆ ಶಿಖಾಪಟ್ಟವಾಯಿತೆಂದೇ ಅರ್ಥವಾಗುತ್ತದೆ. ಆದರೆ, ಅದೇ ಗ್ರಂಥದಲ್ಲಿ "ಶ್ರೀ ಚನ್ನಬಸವದೇವರು ಎರಡನೇ ಶಿವಾನುಭವ ಪಟ್ಟಕ್ಕೆ ಕರ್ತೃಗಳಾಗಿ ಶೂನ್ಯಸಿಂಹಾಸನಕ್ಕೆ ಅಧಿಪತಿಗಳಾದ"ರೆಂದು ಹೇಳಿದೆ. ಹಾಗಾದರೆ, ಚನ್ನ ಬಸವಣ್ಣನವರಿಗೆ ಶಿಖಾಪಟ್ಟವಾಗಿತ್ತೇ? ಶಿವಾನುಭವ ಪಟ್ಟವಾಗಿತ್ತೇ? ನಿರಂಜನ ವಂಶರತ್ನಾಕರದಲ್ಲಿ ನಿರ್ದುಷ್ಟ ಅಭಿಪ್ರಾಯವಿಲ್ಲ.

ಚನ್ನಬಸವಣ್ಣನವರು ನಂದನನಾಮಸಂವತ್ಸರದ ವೈಶಾಖಶುದ್ಧ ಪಾಡ್ಯ ದಂದು ಹುಟ್ಟಿದರೆಂದು ನಿರಂಜನವಂಶರತ್ನಾಕರದಲ್ಲಿ ಹೇಳಿದೆ. ಆದ್ದರಿಂದ ಬಸವಣ್ಣನವರೂ ಅಲ್ಲಮರೂ ಲಿಂಗೈಕ್ಯರಾದ ರಕ್ತಾಕ್ಷಿಸಂವತ್ಸರಕ್ಕಿಂತ ಹಿಂದೆಯೇ ನಂದನಸಂವತ್ಸರದಲ್ಲಿ ಹುಟ್ಟಿದ ಚನ್ನಬಸವಣ್ಣನವರಿಗೆ ಆ ವೇಳೆಗೆ ೩೨ ವರ್ಷ ವಯಸ್ಸಾಗಿದ್ದಿತೆಂದು ಸಿದ್ಧವಾಗುತ್ತದೆ. ಇದರಿಂದ ಚನ್ನಬಸವಣ್ಣನವರು

ಶಾಲಿವಾಹನಶಕ ೬೭೫ ರಲ್ಲಿ ಎಂದರೆ ಕ್ರಿ. ಶ. ಸುಮಾರು ೭೫೩ರಲ್ಲಿ ಅವತಾರ ಮಾಡಿದರೆಂದು ನಿರಂಜನವಂಶ ರತ್ನಾಕರ ನಿರ್ಣಯಿಸಿದಂತಾಯಿತು. ಆದರೆ, ಅವರು ಕ್ರಿ. ಶ. ೧೧೪೩ ರಲ್ಲಿ ಹುಟ್ಟಿದರೆಂದು ಡಾ॥ ಆರ್. ಸಿ. ಹಿರೇಮಠ ಅವರು ವಿಚಾರಮಥನದಿಂದ ಗೊತ್ತುಮಾಡಿದ್ದಾರೆ. ನಿರಂಜನವಂಶರತ್ನಾಕರ ದಂತೆ ಅಲ್ಲಮರೂ, ಬಸವಣ್ಣನವರೂ ಮತ್ತು ಚನ್ನಬಸವಣ್ಣನವರೂ ಕ್ರಿ. ಶ. ೮ ನೆಯ ಶತಮಾನದಲ್ಲಿದ್ದರೆಂದು ಹೇಳಬೇಕಾಗುತ್ತದೆ. ಇದು ಅಸಂಭವ. ನಿರಂಜನವಂಶರತ್ನಾಕರ ಧಾರ್ಮಿಕ ಘಟನೆಗಳ ಮಾಲೆಯನ್ನು ಸಿದ್ಧಪಡಿಸಿದೆಯೇ ಹೊರತು ಚಾರಿತ್ರಿಕ ಸಂಗತಿಗಳನ್ನು ಪರಿಗಣಿಸಲಿಲ್ಲ. ಇದಕ್ಕೆ ಚರಿತ್ರೆಯು ಬಲ್ಲವಿಲ್ಲ; ಇತಿಹಾಸದ ಅರಿವಿಲ್ಲ. ಅಲ್ಲಮರು ಬಯಲಾದ ಶ್ರೀಶೈಲದಲ್ಲಿ ಅವರ ಮಠವಿದೆಯೆಂದರೆ, ಅದು ಶೂನ್ಯಸಿಂಹಾಸನವಾದಂತಲ್ಲ.

ಚಿತ್ರದುರ್ಗ ವಿರಕ್ತ ಮಠದ ಪಟ್ಟವಲ್ಲರಿಯ ಪ್ರಸ್ತಾವನೆಯಲ್ಲಿ ಅಲ್ಲಮರು ಶಾಲಿವಾಹನಶಕ ೭೮೬ ರಲ್ಲಿ ಕಲ್ಯಾಣಕ್ಕೆ ಬಂದು ಕಲಿಗತವರ್ಷ ೪೦೦೧, ಶಾಲಿವಾಹನಶಕ ೮೨೨ ನೆಯ ರೌದ್ರಿನಾಮ ಸಂವತ್ಸರದಲ್ಲಿ ಚನ್ನಬಸವಣ್ಣ ನವರಿಗೆ ಶೂನ್ಯಸಿಂಹಾಸನದ ಅಧಿಕಾರವನ್ನು ಕೊಟ್ಟು ಸರ್ವಪ್ರಮಥಗಣಗಳಿಗೆ ದರ್ಶನಾಶೀರ್ವಾದಗಳನ್ನಿತ್ತು ಮುಂದೆ ನಡೆದರೆಂದು ಉಕ್ತವಾಗಿದೆ. ಇದರಿಂದ ಪ್ರಭುದೇವರ ಕಾಲ ಕ್ರಿ. ಶ. ೯೦೦ಕ್ಕಿಂತಲೂ ಹಿಂದೆ ಎಂದಾಗುತ್ತದೆ. ವಿರೂ ಪಾಕ್ಷ ಪಂಡಿತ ಕವಿ ತನ್ನ ಚೆನ್ನಬಸವಪುರಾಣದಲ್ಲಿ ಬಸವಣ್ಣನವರು ಶಾ. ಶ. ೭೦೭ ನೆಯ ರಕ್ತಾಕ್ಷಿನಾಮ ಸಂವತ್ಸರದಲ್ಲಿ ಐಕ್ಯರಾದರೆಂದು ಹೇಳಿದ್ದಾನೆ. ಇದರಿಂದ, ಬಸವಣ್ಣನವರು ಕ್ರಿ. ಶ. ೭೮೫ ರಲ್ಲಿ ಕಾಲವಾದರೆಂದು ಹೇಳಿದಂತಾ ಯಿತು. ಚಿತ್ರದುರ್ಗ ಮಠದ ಪಟ್ಟವಲ್ಲರಿಯೂ ನಿರಂಜನವಂಶ ರತ್ನಾಕರವೂ ಬಹುಶಃ ವಿರೂಪಾಕ್ಷಪಂಡಿತ ಕವಿಯನ್ನು ಅನುಸರಿಸಿದೆಯೆಂದು ಅನುಮಾನಿಸ ಬಹುದು. ಚಾರಿತ್ರಿಕ ದೃಷ್ಟಿಯಿಂದ ಪಟ್ಟವಲ್ಲರಿಯಾಗಲಿ ನಿರಂಜನವಂಶ ರತ್ನಾಕರವಾಗಲಿ ಪ್ರಮಾಣ ಗ್ರಂಥಗಳಲ್ಲವೆಂದು ಹೇಳಬಹುದು. ಇದರಂತೆಯೇ ಬಿಜ್ಜಳನ ವಧೆ ಕ್ರಿ. ಶ. ೭೮೫ ರಲ್ಲಿ ಆಯಿತೆಂಬಂತೆ ನಿರಂಜನವಂಶ ರತ್ನಾಕರದಲ್ಲಿ ಹೇಳಿರುವುದೂ ಅಸಮಂಜಸ. ಈ ಪುಸ್ತಕವನ್ನು ಇತಿಹಾಸ ಪರಿಜ್ಞಾನವಿಲ್ಲದ ವಿರಕ್ತಧರ್ಮವೇತ್ತರು ಬರೆದಿರುತ್ತಾರೆಂಬುದರಲ್ಲಿ ಸಂಶಯವಿಲ್ಲ.

ಚನ್ನಬಸವಣ್ಣನವರ ತರುವಾಯ ಸಿದ್ಧರಾಮಯ್ಯನವರು ಶೂನ್ಯಸಿಂಹಾಸನಾಧೀಶ್ವರರಾದರು. ಅವರ ತರುವಾಯ, ಅನಾದಿಗಣನಾಥರು ಈ ಪೀಠಿಗೆಯ ಸಿಂಹಭಾಗಿಗಳಾದರು. ಇವರ ಕಾಲ ಕ್ರಿ. ಶ. ಸುಮಾರು ೧೩ ನೆಯ ಶತಮಾನದ ಮಧ್ಯಭಾಗವೆಂದು ಹೇಳಬಹುದು (ಕಿ. ಶ. ೧೨೦೦). ಅವರು ಗೊಹೆಯಲ್ಲಿ ಎಂದರೆ, ಈಗಿನ ಗೋವೆಯಲ್ಲಿ ಅಲ್ಲಮರು ಕಟ್ಟಿಸಿದ್ದ ಗುಹೇಶ್ವರ ದೇವಾಲಯದ ಲಿಂಗದಲ್ಲಿ ಐಕ್ಯವಾದರು. ಅಲ್ಲಮರು ನವನಾಥ ಪಂಥದ ಅನುಯಾಯಿಗಳಾಗಿದ್ದ ಕಾಲದಲ್ಲಿ ಪಶ್ಚಿಮ ಸಮುದ್ರ ತೀರದಲ್ಲಿ ಗೊಹೆ ಎಂಬ ಪುರವನ್ನು ನಿರ್ಮಿಸಿ, ಅಲ್ಲಿ ಗುಹೇಶ್ವರ ದೇವಾಲಯವನ್ನು ನಿರ್ಮಿಸಿದ್ದರೆಂದು ಅರ್ಥವಾಗುತ್ತದೆ. ಏಕೆಂದರೆ, ಸಹ್ಯಾದ್ರಿ ಶ್ರೇಣಿಯ ಪರ್ವತಪ್ರಾಂತದಲ್ಲಿ ನವನಾಥ ಪಂಥದ ಹಲವಾರು ಕ್ಷೇತ್ರಗಳಿದ್ದುವು; ಅವರ ಮಠಗಳಿದ್ದುವು. ಮಂಗಳೂರು, ಧರ್ಮಸ್ಥಳ, ಗೋಕರ್ಣ, ಗೋವಾ, ವಜ್ರೇಶ್ವರಿ, ಪೂನಾ, ಶಿರ್ಡಿ, ಕೊಲ್ಲಾಪುರ, ಅಥಣಿ, ಸೌಂದತ್ತಿ, ಹೂಲಿ, ಹುಬ್ಬಳ್ಳಿ, ಹಾನಗಲ್ಲು, ಬಳ್ಳಿಗಾವಿ, ಚಿತ್ರದುರ್ಗ, ಕುಂಚನಗಿರಿ, ಸಂಡೂರು ಮೊದಲಾದ ಸ್ಥಳಗಳಲ್ಲಿ ನಾಥಪಂಥದ ಮಠಗಳಿದ್ದುವೆಂದು ಮಠಧರ್ಮ ಚರಿತ್ರೆಗಳಿಂದ ವ್ಯಕ್ತವಾಗುತ್ತದೆ. ಗೊಹೆಯಲ್ಲಿ ಗುಹೇಶ್ವರ ದೇವಾಲಯವನ್ನು ಕಟ್ಟಿಸಿ, ಸ್ಥಾವರಲಿಂಗ ಪ್ರತಿಷ್ಠೆ ಮಾಡಿಸಿದಾಗ, ಅಲ್ಲಮರು ವಿರಕ್ತ ಪಂಥಾನುಯಾಯಿಗಳಾಗಿರಲಿಲ್ಲ. ಆದ್ದರಿಂದ ಅಲ್ಲಿ ಶೂನ್ಯಸಿಂಹಾಸನ ಮಠವಿರಲು ಸಾಧ್ಯವಿಲ್ಲ. ಅನಾದಿಗಣನಾಥರ ತರುವಾಯ ಆದಿಗಣನಾಥರು ಬಂದರು. ಪ್ಲೇಂಛರು ಗೊಹೆಯಲ್ಲಿ ನೆಲಸಿದ್ದರಿಂದ, ಭವಿಸಂಪರ್ಕದಲ್ಲಿರಬಾರದೆಂದು ಆದಿಗಣನಾಥರು ತಮ್ಮ ಮಠದ ದ್ವಾರವನ್ನು ಮುಚ್ಚಿ ಭದ್ರಪಡಿಸಿ ಮೈಸೂರು ರಾಜ್ಯದ ಕಾವೇರೀ ನದಿಯ ತೀರದಲ್ಲಿರುವ ಶಂಭುಲಿಂಗನ ಬೆಟ್ಟದ ಹತ್ತಿರ ಪ್ರಭುಸ್ವಾಮಿಯ ಬೆಟ್ಟದಲ್ಲಿ ನೆಲಸಿದರೆಂದು 'ರತ್ನಾಕರ' ಗ್ರಂಥದಲ್ಲಿ ಹೇಳಿದೆ. ನಿಜಗುಣಶಿವಯೋಗಿ (ಕ್ರಿ. ಶ. ೧೫೦೦) ಶಂಭುಲಿಂಗನ ಬೆಟ್ಟದಲ್ಲಿ ತಪಸ್ಸು ಮಾಡಿದರು. ಕ್ರಿ. ಶ. ೧೧೬೦ ರಲ್ಲಿ ಬಸವಣ್ಣನವರ ಕಾಲದಲ್ಲಿ ನಿಜಗುಣನೆಂಬ ವಚನಕಾರನಿದ್ದನು. ಅವನು ಶಂಭುಲಿಂಗನ ಬೆಟ್ಟದಲ್ಲಿ ತಪಸ್ಸು ಮಾಡಲಿಲ್ಲ. ಆದ್ದರಿಂದ ನಿಜಗುಣಶಿವಯೋಗಿ ಈ ಆದಿಗಣನಾಥರ ಸಮಕಾಲೀನರಲ್ಲ. ಇವರು ಕ್ರಿ./ಶ. ೧೨೦೦ ರಲ್ಲಿ ಪ್ರಭುಸ್ವಾಮಿಯ ಬೆಟ್ಟದಲ್ಲಿ ಶಿವಯೋಗದಲ್ಲಿದ್ದರೆಂದು ಊಹಿಸಬಹುದು.

ಆದಿಗಣನಾಥರ ತರುವಾಯ ನಿರ್ಮಾಯ ಗಣೇಶ್ವರರು ಈ ಶೂನ್ಯ ಪರಮವಿರಕ್ತರಾದರು. ಇವರು ಆಜನ್ಮವಿರಕ್ತರು; ಆಶ್ರಮವಿರಕ್ತರಲ್ಲ! ಇವರೇ ಸುಪ್ರಸಿದ್ಧ ಮಲೆಯಮಹದೇಶ್ವರಸ್ವಾಮಿಗಳು. ಮಹಾಮಹಿಮರು. ಇವರು ಸುತ್ತೂರು ಮಠದಲ್ಲಿ ಕೆಲವು ಕಾಲವಿದ್ದರಂತೆ. ಸಿದ್ಧನಂಜದೇಶಿಕರು ಆಗ ಸುತ್ತೂರು ಪೀಠಾಧ್ಯಕ್ಷರಾಗಿದ್ದರೆಂದೂ ಅವರ ಕಾಲ ಕ್ರಿ. ಶ. ೧೨೪೦ ಎಂದು 'ಶಿವರಾತ್ರಿ ಶಿವಾಚಾರ್ಯರು' ಗ್ರಂಥದಲ್ಲಿ ಹೇಳಿದೆ. ಆದ್ದರಿಂದ ನಿರ್ಮಾಯ ಗಣೇಶ್ವರರ ಕಾಲ ಕ್ರಿ. ಶ. ಸುಮಾರು ೧೨೨೫ ಎಂದು ನಿರ್ಣಯಿಸಬಹುದು. ಆಗ ಚಿತ್ರದುರ್ಗದ ವಿರಕ್ತಮಠವೇ ಇರಲಿಲ್ಲ. ಆದ್ದರಿಂದ ನಿರ್ಮಾಯಗಣವ ಮಲೆಯಮಾದೇಶ್ವರರು ಚಿತ್ರದುರ್ಗ ಮುರಘಮಠದ ಸ್ವಾಮಿಯಾಗಿದ್ದರೆಂಬುದು ನಿಜವಲ್ಲ. ನಿರ್ಮಾಯ ಗಣೇಶ್ವರರಿಗೂ ಮುರಘಾಮಠಕ್ಕೂ ಯಾವ ಸಂಬಂಧವೂ ಇಲ್ಲ. ಚಿತ್ರದುರ್ಗ ಮುರಘಮಠಕ್ಕಿಂತಲೂ ಪ್ರಾಚೀನವಾದ ಆನಂದಪುರ ಮುರಘಾಮಠದ ಪಟ್ಟಾವಳಿಯಲ್ಲಿಯೂ ಇವರ ಹೆಸರಿಲ್ಲ.

ನಿರ್ಮಾಯಗಣವರರ ತರುವಾಯ ನಿರಂಜನಸ್ವಾಮಿಗಳೆಂಬುವರು ಶೂನ್ಯ ಪೀಠಾಧಿಕಾರಿಯಾದರು. ಇವರು ಹಳೇ ಬೀಡಿಗೆ ಹೋಗಿದ್ದರೆಂದೂ, ಅಲ್ಲಿ ಕೆರೆಯಪದ್ಮರಸ, ಹರಿಹರ ಮತ್ತು ರಾಘವಾಂಕ ಕವಿಗಣವನ್ನು ಆಶೀರ್ವದಿಸಿದ ರೆಂದೂ ನಿರಂಜನ ವಂಶರತ್ನಾಕರ ತಿಳಿಸುತ್ತದೆ. ಈ ಕವಿಗಳ ಕಾಲ ಕ್ರಿ. ಶ. ಸುಮಾರು ೧೩೦೦ ಎಂದು ಗೊತ್ತಾಗಿದೆ. ಆದ್ದರಿಂದ ನಿರಂಜನ ಸ್ವಾಮಿಗಳ ಕಾಲ ಕ್ರಿ. ಶ. ಸುಮಾರು ೧೨೫೦ ರಿಂದ ಕ್ರಿ.ಶ. ೧೨೭೫ ಎಂದು ಹೇಳಬಹುದು. ಇವರು ಕಲ್ಯಾಣದಲ್ಲಿ ಜ್ಞಾನಾನಂದ ಸ್ವಾಮಿಗಳಿಗೆ ಶಿವಾನುಭವ ಚರಂತಿ ಪಟ್ಟವನ್ನು ಮಾಡಿ, ಅಲ್ಲಿಯೇ ಬಯಲಾದರು.

ಈ ನಿರಾಭಾರಿ ಪರಂಪರೆಯಲ್ಲಿ ಜ್ಞಾನಾನಂದ ಸ್ವಾಮಿಗಳು ಎಂಟನೆಯ ವರು. ಇವರ ಕಾಲ ಕ್ರಿ. ಶ. ಸುಮಾರು ೧೨೭೫ ರಿಂದ ಕ್ರಿ. ಶ. ೧೩೦೦ ಎಂದು ಗೊತ್ತಾಗುತ್ತದೆ. ಹಿಂದೆ, ಕಲ್ಯಾಣದಲ್ಲಿ ಬಸವಣ್ಣನವರು ಶೂನ್ಯ ಸಿಂಹಾಸನದಲ್ಲಿ ಅಲ್ಲಮಪ್ರಭುದೇವರನ್ನು ಕುಳ್ಳಿರಿಸಿ ಪೂಜೆಮಾಡಿದ ಸ್ಥಳದಲ್ಲಿ ಇವರು ಪ್ರಭುದೇವರ ಮಠವನ್ನು ಕಟ್ಟಿಸಿ, ಶೂನ್ಯಸಿಂಹಾಸನವನ್ನು ರಚಿಸಿ ಜಂಗಮ ದಾಸೋಹವನ್ನು ನಡೆಸುತ್ತ ಶಿವಯೋಗ ನಿರತರಾದರು. ಇದನ್ನು ಶೂನ್ಯಸಿಂಹಾಸನಮಠವೆಂದು ನಿರ್ದುಷ್ಟವಾಗಿ ಹೇಳಬಹುದು. ಶೂನ್ಯಸಿಂಹಾ

ಷ ಧಾರ್ಮಿಕ ಸ್ವರೂಪವನ್ನು ಪಡೆಯಿತೆಂಬುದನ್ನು ಒಪ್ಪಬಹುದು. ಇವರು ಶ್ರೀಶೈಲದಲ್ಲಿ ಬಯಲಾದರು. ಇವರ ತರುವಾಯ ಆತ್ಮಗಣವರರೂ, ಅಧ್ಯಾತ್ಮ ಗಣವರರೂ ಅನುಕ್ರಮವಾಗಿ ಈ ಪರಂಪರೆಯಲ್ಲಿ ಬಂದರು. ಇವರಿಬ್ಬರೂ ಸರಾಸರಿ ೫೦ ವರ್ಷಕಾಲ ಬದುಕಿದ್ದರೆಂದರೆ, ಕ್ರಿ. ಶ. ಸುಮಾರು ೧೩೫೦ ರಲ್ಲಿ ಹನ್ನೊಂದನೆಯವರಾದ ರುದ್ರಮುನಿಸ್ವಾಮಿಗಳೆಂಬುವರು ನಿರಾಭಾರಿಗಳಾದ ರೆಂದು ಊಹಿಸಬಹುದು. ಇವರನ್ನು ತಿಪ್ಪೇರುದ್ರ ಸ್ವಾಮಿಗಳೆಂದು ನಿರಂಜನ ವಂಶರತ್ನಾಕರ ಗುರುತಿಸುತ್ತದೆ. ಇವರು ನಿಡುಗಲ್ಲುಪುರದಲ್ಲಿ ಓದುಮಠದ ಚನ್ನಪ್ಪದೇವರು ಎಂಬ ಕವಿಯನ್ನು ಅನುಗ್ರಹಿಸಿದರೆಂದೂ, ಇವರ ಗದ್ದುಗೆ ನಾಯಕನಹಟ್ಟಿಯಲ್ಲಿದೆಯೆಂದೂ ಹೇಳಿದೆ. ಆದ್ದರಿಂದ ಇವರ ಕಾಲ ಕ್ರಿ. ಶ. ಸುಮಾರು ೧೩೫೦ ರಿಂದ ಕ್ರಿ. ಶ. ೧೩೭೫ ಎಂದು ನಿರಂಜವಂಶರತ್ನಾಕರದ ನಿರಾಭಾರಿಗಳ ಕಾಲಮಾನವನ್ನು ಅನುಸರಿಸಿ ಹೇಳಬಹುದು. ಆದರೆ, ನಿಡುಗಲ್ಲು ಚನ್ನಪ್ಪಯ್ಯಕವಿ 'ಶರಣ ಲೀಲಾಮೃತ' ಕಾವ್ಯವನ್ನು ಕ್ರಿ. ಶ. ೧೭೫೦ ರಲ್ಲಿ ಬರೆದನೆಂದು ಕವಿಚರಿತೆಯಲ್ಲಿ ಹೇಳಿದೆ. ಆದ್ದರಿಂದ ರುದ್ರಮುನಿಸ್ವಾಮಿಗಳೆಂಬ ತಿಪ್ಪೇರುದ್ರಸ್ವಾಮಿಯು ಕಾಲ ಕ್ರಿ. ಶ. ೧೩೫೦ ಎಂದು ನಿರಂಜನವಂಶರತ್ನಾಕರವಂತೆ ಹೇಳಲು ಸಾಧ್ಯವಿಲ್ಲ. 'ಶರಣಲೀಲಾಮೃತ'ದಲ್ಲಿ ಕವಿ ತಿಪ್ಪೇರುದ್ರಸ್ವಾಮಿಯ ಹೆಸರನ್ನೇ ಎತ್ತಿರುವುದಿಲ್ಲ, ಆ ಕಾವ್ಯರಚನೆಯಾದಮೇಲೆ ಬಹುಶಃ ತಿಪ್ಪೇರುದ್ರಸ್ವಾಮಿ ನಿಡುಗಲ್ಲಿಗೆ ಹೋಗಿರಬೇಕು. ಆಗ ಆ ಕವಿಯು ಕಾವ್ಯವನ್ನು ಓದಿಸಿ ಕೇಳಿರಬೇಕು. ಇವನ್ನೆಲ್ಲಾ ಗಮನಿಸಿದರೆ ತಿಪ್ಪೇರುದ್ರ ಸ್ವಾಮಿ ಕ್ರಿ. ಶ. ಸುಮಾರು ೧೭೫೦ ಎಂದು ನಿರ್ಧರವಾಗಿ ಹೇಳಬಹುದು. ಕ್ರಿ. ಶ. ೧೫೬೦ ರ ಸುಮಾರಿನಲ್ಲಿದ್ದ ಕೊಟ್ಟೂರು ಬಸವೇಶ್ವರರೂ ತಿಪ್ಪೇರುದ್ರ ಸ್ವಾಮಿಗಳೂ ಸಮಕಾಲೀನರೆಂದು ನಾಯಕನಹಟ್ಟಿ ಮತ್ತು ಕೊಟ್ಟೂರು ಪ್ರಾಂತಗಳಲ್ಲಿ ಜನರಾಡಿಕೊಳ್ಳುವುದು ಸರಿಯಲ್ಲ. ಆದ್ದರಿಂದ ಕಿ. ಶ. ೧೩೫೦ ರಿಂದ ಕ್ರಿ. ಶ. ೧೭೫೦ ರವರೆಗೆ ಸುಮಾರು ೪೦೦ ವರ್ಷಕಾಲ ನಿರಂಜನ ವಂಶರತ್ನಾಕರದಂತೆ, ಶೂನ್ಯಸಿಂಹಾಸನ ಪರಂಪರೆ ನಿಂತುಹೋಗಿತ್ತೆಂದು ಹೇಳಬಹುದೆ? ಈ ರುದ್ರಮುನಿಸ್ವಾಮಿಯೆಂಬ ಇವರು ಆಪರಂಪರೆಯಲ್ಲಿ ಹನ್ನೊಂದನೆಯವರಾಗಿರುತ್ತಾರೆ. ಇದೇ ಪರಂಪರೆಯ ೧೬ನೆಯ ಶಂಕರಾಚಾರ್ಯಸ್ವಾಮಿಗಳು ವಿಜಯನಗರದ ಪ್ರೌಢದೇವರಾಯನ ಕಾಲದಲ್ಲಿ ಹಂಪೆಯಲ್ಲಿ ಕರಸ್ಥಲದ

ವೀರಣ್ಣ ಒಡೆಯರೇ ಮೊದಲಾದ ನೂರೊಂದು ವಿರಕ್ತರಿಗೆ ಜ್ಞಾನೋಪದೇ ಮಾಡಿದರೆಂದು ನಿರಂಜ ವಂಶರತ್ನಾಕರದಲ್ಲಿ ಉಕ್ತವಾಗಿದೆ. ಕರಸ್ಥಲದ ವೀರಣ್ಣ ಒಡೆಯರು ಕ್ರಿ. ಶ. ಸುಮಾರು ೧೪೦೦ ರಲ್ಲಿದ್ದರೆಂದು ಕವಿಚರಿತೆಯಲ್ಲಿ ಹೇಳಿದೆ. ಆದ್ದರಿಂದ ಶಂಕರಾಚಾರ್ಯ ಸ್ವಾಮಿಗಳ ಕಾಲ ಕ್ರಿ. ಶ. ಸುಮಾರು ೧೪೦೦ ಎಂದು ತರ್ಕಿಸಬಹುದು. ಇದರಿಂದ ೧೬ ನೆಯ ಶಂಕರಾಚಾರ್ಯ ಸ್ವಾಮಿಗ ಪೂರ್ವಾಚಾರ್ಯರಾದ ೧೧ ನೆಯ ರುದ್ರಮುನಿಸ್ವಾಮಿ (ತಿಪ್ಪೇರುದ್ರಸ್ವಾಮಿ) ಕಿ. ಶ. ೧೭೫೦ ರಲ್ಲಿದ್ದರೆಂದು ಹೇಳಲಾದೀತೆ ! ಇದರಂತೆಯೇ ಈ ಸಿಂಹಾ ಶ್ರೇಣಿಯಲ್ಲಿ ೧೯ ನೆಯವರಾದ ತೋಂಟದ ಸಿದ್ಧಲಿಂಗರ ಕಾಲ ಕ್ರಿ. ಶ. ೧೪೭೦ ಎಂದು ಗೊತ್ತಾಗಿರುವುದರಿಂದ, ಇವರ ಹಿಂದಿನವರಾದ ತಿಪ್ಪೇರುದ್ರರ ಕಾಲವನ್ನು ಕ್ರಿ. ಶ. ೧೭೫೦ ಎಂದು ಹೇಳುವಂತಿಲ್ಲ. ಇಂಥ ಐತಿಹಾಸಿಕ ಪ್ರಮಾದಗಳನ್ನು ನಿರಂಜನವಂಶರತ್ನಾಕರದಲ್ಲಿ ಸ್ಪಷ್ಟವಾಗಿ ಕಾಣಬಹುದು. ಆದ್ದರಿಂದ ರುದ್ರ ಮುನಿಸ್ವಾಮಿಗಳೇ ಬೇರೆ; ತಿಪ್ಪೇರುದ್ರಸ್ವಾಮಿಗಳೇ ಬೇರೆ ಎಂದು ನಿರ್ಧರವಾ ಹೇಳಬಹುದು. ತಿಪ್ಪೇರುದ್ರಸ್ವಾಮಿಗಳು ನಿರಂಜನಪಟ್ಟಾವಳಿಯಲ್ಲಿ ಬರುವು ದಿಲ್ಲ. ಅವರ ಕಾಲ ಕ್ರಿ. ಶ. ೧೭೫೦ ಎಂದು ಖಚಿತವಾಗಿ ವ್ಯಕ್ತವಾಗುತ್ತದೆ.

ಇನ್ನೊಂದು ಇಂಥ ಐತಿಹಾಸಿಕ ಪ್ರಮಾದವನ್ನು ನಿರಂಜನವಂಶ ರತ್ನಾ ಕರದಲ್ಲಿ ಆರಿಸಿ ತೋರಿಸಬಹುದು. ಈ ಪರಂಪರೆಯಲ್ಲಿ ಹತ್ತೊಂಭತ್ತನೆಯ ತೋಂಟದ ಸಿದ್ಧಲಿಂಗರಾದಮೇಲೆ, ೨೪ ನೆಯ ಸಿದ್ಧವೀರಸ್ವಾಮಿಗಳು ಬಹಳ ಪ್ರಮುಖರಾಗಿ ಕಂಡುಬರುತ್ತಾರೆ. ಇವರು ಅಷ್ಟೇನೂ ಪ್ರಶಾಂತಚಿತ್ತರೆಂದು ಕಂಡುಬರುವುದಿಲ್ಲ. ಇವರ ಕಾಲದಿಂದ ಈಚೆಗೆ ಶೂನ್ಯಸಿಂಹಾಸನ ಸಂಪ್ರ ದಾಯ ಕವಲಾಯಿತು. ಇವರೇ ಕಟ್ಟಿಗೆಹಳ್ಳಿ ಸ್ವಾಮಿಯವರೆಂದು ಹೆಸರಾ ದ್ದವರು. ಇವರು ಮೈಸೂರು ರಾಜರಿಂದ ಸನ್ಮಾನಿತರಾದರೆಂದು ನಿರಂಜನ ವಂಶರತ್ನಾಕರದಲ್ಲಿ ಹೇಳಿದೆ. ಇವರು ಮಾಗಡಿ ಪಟ್ಟಣದಲ್ಲಿ ತಮ್ಮ ಬೃಹನ್ಮ ವಲ್ಲಿ ನೋಡಾಸಿದ್ಧಲಿಂಗಸ್ವಾಮಿಗಳಿಗೆ ಶಿವಾನುಭವ ಚರಂತಿಗೆಯ ಪಟ್ಟವನ್ನು ಮಾಡಿ, ಇನ್ನೊಬ್ಬ ಶಿಷ್ಯ ಮುರಿಗೆರುದ್ರಸ್ವಾಮಿ ಎಂಬುವರಿಗೆ ನೋಡಾಸಿದ್ಧಲಿಂಗ ರಿಂದ ಅನುಗ್ರಹವನ್ನು ಕೊಡಿಸಿ ಆ ಇಬ್ಬರನ್ನೂ ದೆಹಲಿಯ ಬಾದಶಹನಿಂದ ಶೂನ್ಯಸಿಂಹಾಸನ, ಶಿಖಾಶೈಲಗಳನ್ನು ತರಲು ಕಳಿಸಿದರೆಂದು ನಿರಂಜನ ವಂಶ ರತ್ನಾಕರ ತಿಳಿಸುತ್ತದೆ. ಇವರು ಅನಂತರ ಹಾನಗಲ್ಲು ಸೀಮೆಯಲ್ಲಿ ಹರಿಯುವ

ಪದಾನದಿಯ ತೀರದಲ್ಲಿರುವ ತಿಳಿಪಳ್ಳಿ ಎಂಬ ಗ್ರಾಮದಲ್ಲಿ ಲಿಂಗೈಕ್ಯರಾದರು. ಇವರ ಗದ್ದುಗೆ ಅಲ್ಲಿದೆ. ಅವರಿಗೆ ಅವಸಾನಕಾಲದಲ್ಲಿ ೬೦ ವರ್ಷ ವಯಸ್ಸಾಗಿತ್ತು. ಇವರು ತಮ್ಮ ಶಿಷ್ಯರು ತಂದ ಶೂನ್ಯಸಿಂಹಾಸನ, ಶಿಖಾಶೈಲಗಳನ್ನೇ ನೋಡಲು ಅವಕಾಶವಾಗಲಿಲ್ಲ. ಇಷ್ಟಾದರೂ ಇವರ ಕಾಲಮಾನವನ್ನು ಸುಜನವಂಶರತ್ನಾಕರ ತಿಳಿಸಿಲ್ಲ. ನಾವು ಬೇರೆ ಆಧಾರವನ್ನು ಹುಡಕಬೇಕು. ಚಿತ್ರದುರ್ಗದ ಬಿಚ್ಚುಗತ್ತಿಯ ಭರಮಪ್ಪನಾಯಕನಿಗೆ ಕ್ರಿ. ಶ. ೧೬೮೯ ರಲ್ಲಿ ಪಟ್ಟವಾಯಿತು. ಇಮ್ಮಡಿ ಮುರುಘಾ ಸ್ವಾಮಿಗಳು ೧೭೨೦ ರ ಸುಮಾರಿನಲ್ಲಿ ಲಿಂಗವಾದರು. ಆದ್ದರಿಂದ ಅವರ ಹಿರಿಯ ಗುರು ಕಟ್ಟಿಗೆಹಳ್ಳಿ ಸ್ವಾಮಿಗಳು ಸುಮಾರು ಕ್ರಿ. ಶ. ೧೬೭೫ ರಲ್ಲಿ ಲಿಂಗವಾದರೆಂದು ನಿಖರವಾಗಿ ಹೇಳಬಹುದು. ಶ್ರೀನುಡನಾದಿ ಅಲ್ಲಮಪ್ರಭು ಗ್ರಂಥದಲ್ಲಿಯೂ ಬುದ್ಧಯ್ಯ ಪುಗೆಯ್ಯಸ್ವಾಮಿ ಪುರಾಣೀಕರು ಇದೇ ಅಭಿಪ್ರಾಯವನ್ನು ಸೂಚಿಸಿದ್ದಾರೆ. ಎಂದಮೇಲೆ, ಇವರ ಶಿಷ್ಯ ಮುರಿಗೆಯ ಶಾಂತವೀರಸ್ವಾಮಿಯ ಕಾಲ ಕ್ರಿ. ಶ. ೧೫೬೦ ಎಂದೂ, ಇವರು ಕಟ್ಟಿಗೆಹಳ್ಳಿಸ್ವಾಮಿಗಳ ಶಿಷ್ಯರೆಂದೂ ಚಿತ್ರದುರ್ಗ ವಿರಕ್ತಮಠಾಧೀಶ್ವರರಾದ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಬೆಂಗಳೂರಲ್ಲಿ ಮಾಡಿದ ಅನುಗ್ರಹ ಭಾಷಣದಲ್ಲಿ ಧೂಳೆಬ್ಬಿಸಿದ್ದಾರೆ. ಮುರಿಗೆಯ ಶಾಂತವೀರರ ಕಾಲವಂತೂ ಕ್ರಿ. ಶ. ೧೫೬೦. ಅದು ಸರಿ. ಆದರೆ ಇಬ್ಬರಿಗೂ ಸುಮಾರು ನೂರಾರು ವರ್ಷಗಳ ಅಂತರವಿದೆಯೆಂಬುವನ್ನು ಗಮನಿಸಬಹುದು. ಈ ಶಾಂತವೀರರ ಹೆಸರು ಸುಜನವಂಶರತ್ನಾಕರದಲ್ಲಿ ಬಂದಿಲ್ಲ, ಇಮ್ಮಡಿ ಮುರಿಗಾಸ್ವಾಮಿಗಳು ಕಟ್ಟಿಗೆಹಳ್ಳಿ ಸಿದ್ಧವೀರಸ್ವಾಮಿಗಳ ಶಿಷ್ಯರೇ ಹೊರತು,ಮುರಿಗೆಯ ಶಾಂತವೀರರೇ ಇಮ್ಮಡಿ ಮುರಿಗಾಸ್ವಾಮಿಗಳೆಂದೂ ಹೇಳುವಂತಿಲ್ಲ. ಮುರಿಗೆಯಶಾಂತವೀರರ ಹೆಸರು ಚಿತ್ರದುರ್ಗದ ವಿರಕ್ತ ಪಟ್ಟಾವಳಿಯಲ್ಲಿಯೂ ಇಲ್ಲ. ಕಟ್ಟಿಗೆಹಳ್ಳಿಯ ಸಿದ್ಧವೀರಸ್ವಾಮಿಗಳ ಸಾಕ್ಷಾತ್ ಶಿಷ್ಯರೆಂದರೆ ನೋಡಾಸಿದ್ಧಲಿಂಗ ಸ್ವಾಮಿಗಳು. ಆದ್ದರಿಂದ ಅವರಕಾಲ ಕ್ರಿ. ಶ. ೧೭೦೦ ಎಂದು ಹೇಳಬಹುದು. ನೋಡಾ ಸಿದ್ಧಲಿಂಗರೂ ಇಮ್ಮಡಿ ಮುರಿಗಾಸ್ವಾಮಿಗಳೂ ಗುರು-ಶಿಷ್ಯರಾದರೂ ಇಬ್ಬರೂ ಸಮಕಾಲೀನರೆಂಬುದರಲ್ಲಿ ಸಂಶಯವಿಲ್ಲ. ಇದನ್ನೆಲ್ಲ ಸಾವಧಾನವಾಗಿ ಪರಿಶೀಲಿಸಿದರೆ, ಮುರಿಗೆಯ ಶಾಂತವೀರರಿಗೂ ಚಿತ್ರದುರ್ಗದ ವಿರಕ್ತ ಮಠದವರಿಗೂ ಏನೇನೂ ಸಂಬಂಧವಿಲ್ಲ ಎಂಬುವನ್ನು ಇತಿಹಾಸ ಸಮರ್ಥಿಸು

ತ್ತದೆ. ಆದರೂ, ಮುರಿಗೆಯ ಶಾಂತವೀರರೇ ಮುರಘಾ ಸಮುಯುವ ಆದ್ಯ ಪುರುಷರೂ ಚಿತ್ರದುರ್ಗ ಮಠದ ಮೂಲ ಪುರುಷರೂ ಆಗಿರುತ್ತಾರೆಂಬುದು ಸ್ಫಟಿಕನಿರ್ಮಲಸತ್ಯವೆಂಬುದನ್ನು ಮರೆಯಬಾರದು. ಈ ಮುರಿಗೆಯ ಶಾಂತ ವೀರರು ಆನಂದಪುರ ಮುರುಘಾಮಠದ ಗುರುಪರಂಪರೆಯಲ್ಲಿ ೯ ನೆಯ ವಿರಕ್ತ ರಾಗಿರುತ್ತಾರೆ.

ಈ ಪರಂಪರೆಯಲ್ಲಿ *ಗಂಗಾಧರಸ್ವಾಮಿ, ಶಬ್ದಮಣಿಸ್ವಾಮಿ, ತೋಂಟದ ಸಿದ್ಧಲಿಂಗಸ್ವಾಮಿ, ನಿರಕ್ಷರ ಬೋಳಬಸವಸ್ವಾಮಿ, ಗುಮ್ಮಳಾಪುರದ ಸಿದ್ಧಲಿಂಗ ಸ್ವಾಮಿ, ಗೂಳೂರು ಗುರುಸಿದ್ಧಸ್ವಾಮಿ, ಗಗನದಾರ್ಯಸ್ವಾಮಿ, ಕಟ್ಟಿಗೆಹಳ್ಳಿ ಸ್ವಾಮಿ, ಮುರಿಗೆಯ ಶಾಂತವೀರಸ್ವಾಮಿ ಇವರೇ ಮೊದಲಾದವರ ಹೆಸರುಗಳಿವೆ. ಚಿತ್ರದುರ್ಗ ವಿರಕ್ತಮಠದ ಪಟ್ಟಾವಳಿಯಲ್ಲಿ ಚನ್ನಬಸವಣ್ಣಸ್ವಾಮಿಗಳ ಅನಂತರ ತೋಂಟದಸಿದ್ಧಲಿಂಗಸ್ವಾಮಿ, ನಿರಕ್ಷರ ಬೋಳಬಸವಸ್ವಾಮಿ, ಗುಮ್ಮಳಾಪುರದ ಸಿದ್ಧಲಿಂಗಸ್ವಾಮಿ, ಗೂಳೂರು ಗುರುಸಿದ್ಧಸ್ವಾಮಿ, ಗಗನದಾರ್ಯಸ್ವಾಮಿ, ಕಟ್ಟಿಗೆಹಳ್ಳಿಸ್ವಾಮಿ, ಇಮ್ಮಡಿ ಮುರಿಗಾಸ್ವಾಮಿ- ಮೊದಲಾದವರ ಹೆಸರುಗಳಿವೆ. ಇದರಂತೆಯೇ ಗದಗ ತೋಂಟದಾರ್ಯ ಪೀಠದ ಗುರು ಪರಂಪರೆಯಲ್ಲಿ ತೋಂಟದ ಸಿದ್ಧಲಿಂಗರ ತರುವಾಯ §ನಿರಕ್ಷರ ಬೋಳ ಬಸವ ಸ್ವಾಮಿ ಕ್ರಿ. ಶ. ೧೪೫೫ ರಿಂದ ೧೪೭೧; ಗೂಳೂರು ಸಿದ್ಧವೀರಸ್ವಾಮಿ ಕ್ರಿ. ಶ. ೧೪೭೧ ರಿಂದ ೧೪೮೭; ಉದ್ದಾನಾರ್ಯಸ್ವಾಮಿ ಕ್ರಿ.ಶ. ೧೪೮೭ ರಿಂದ ೧೫೦೭; ಹರಿಹರಸ್ವಾಮಿ ಕ್ರಿ. ಶ. ೧೫೦೭ ರಿಂದ ೧೫೩೦; ಭಿಕ್ಷದ ಬಸವಲಿಂಗ ಸ್ವಾಮಿ ಕ್ರಿ. ಶ. ೧೫೩೦-೧೫೬೦; ಕಟ್ಟಿಗೆಹಳ್ಳಿ ರಾಚೋಟಸ್ವಾಮಿ ಕ್ರಿ. ಶ. ೧೫೬೦ ರಿಂದ ೧೬೧೦ ಎಂದು ಮೊದಲಾಗಿ ಗುರುಪರಂಪರೆಯನ್ನು ಅವರವರ ಕಾಲಮಾನದೊಂದಿಗೆ ಸೂಚಿಸಿರುತ್ತದೆ. ನಿರಂಜನ ವಂಶರತ್ನಾಕರದಲ್ಲಿ ಹೇಳಿ ರುವ ಕಟ್ಟಿಗೆಹಳ್ಳಿ ಸಿದ್ಧವೀರಸ್ವಾಮಿಗಳೇ ಬೇರೆ ಗದಗ ವಿರಕ್ತಪರಂಪರೆಯಲ್ಲಿ ಬಂದಿರುವ ಕಟ್ಟಿಗೆಹಳ್ಳಿ ರಾಚೋಟಸ್ವಾಮಿಗಳೇ ಬೇರೆ ಎಂಬುದು ಗಮನಾರ್ಹ ವಾಗಿದೆ. ಇವರಕಾಲ ಕ್ರಿ.ಶ. ೧೫೬೦ ರಿಂದ ೧೬೧೦ ಎಂದು ಹೇಳಿದೆ. ಈ ರಾಚೋಟಸ್ವಾಮಿಗಳೇ ಆನಂದಪುರ ಮುರಘಾಮಠದ ಪರಂಪರೆಯಲ್ಲಿ ಬರುವ

---

* ಕೆಳದಿ ನಾಯಕನ ಶಾಸನದಲ್ಲಿ ಈ ಪರಂಪರೆಯನ್ನು ಹೇಳಿದೆ.

§ ನಿರಂಜನಜಂಗಮವಂಶದರ್ಪಣ ಗ್ರಂಥವನ್ನು ಅವಲೋಕಿಸಿರಿ.

ಕಟ್ಟಿಗೆಹಳ್ಳಿ ಸ್ವಾಮಿಗಳೆಂಬುವರಲ್ಲಿ ಅನುಮಾನವಿಲ್ಲ. ಹೀಗೆ ಒಬ್ಬರೇ ಸ್ವಾಮಿಗಳು ಬೇರೆ ಬೇರೆ ಮಠಗಳ ಪಟ್ಟಾವಳಿಯಲ್ಲಿ ಕಂಡುಬರುತ್ತಾರೆಂಬುದು ಸ್ಪಷ್ಟವಾಗಿದೆ. ಕಟ್ಟಿಗೆಹಳ್ಳಿ ಸಿದ್ಧವೀರಸ್ವಾಮಿಗಳನ್ನು ಕಟ್ಟಿಗೆಹಳ್ಳಿ ಸ್ವಾಮಿಗಳೆಂದು ಕರೆಯುವ ವಾಡಿಕೆಯಿರುವಂತೆಯೇ ಕಟ್ಟಿಗೆಹಳ್ಳಿ ರಾಜೋಟಿಸ್ವಾಮಿಗಳನ್ನೂ ಕಟ್ಟಿಗೆಹಳ್ಳಿ ಸ್ವಾಮಿಗಳೆಂದೇ ಕರೆಯುವ ಪರಿಪಾಠವಿದ್ದಿರಬೇಕು. ರಾಜೋಟಿ ಸ್ವಾಮಿಗಳು ಹಿರಿಯರು, ಸಿದ್ಧವೀರಸ್ವಾಮಿಗಳು ಕಿರಿಯರು. ಈ ರಾಜೋಟಿ ಸ್ವಾಮಿಗಳೇ ಆನಂದಪುರಮಠದ ಪರಂಪರೆಯಲ್ಲಿರುವ ಕಟ್ಟಿಗೆಹಳ್ಳಿಸ್ವಾಮಿಗಳು. ಇವರ ಶಿಷ್ಯರೇ ಮುರಿಗೆಯ ಶಾಂತವೀರರು. ಆದ್ದರಿಂದ ಅವರ ಕಾಲ ಕ್ರಿ. ಶ. ...೦ ರಿಂದ ೧೬೨೦ ಎಂದು ಊಹಿಸಬಹುದು. ಗುರುಶಿಷ್ಯರಿಬ್ಬರೂ ದೀರ್ಘಕಾಲ ಬದುಕಿದ್ದರೆಂದು ನಂಬಬಹುದು. ಇತಿಹಾಸ ಸಮನ್ವಯ ದೃಷ್ಟಿಯಿಂದ ಈ ಇಬ್ಬರೂ ಆನಂದಪುರ ಮುರುಘಾ ಮಠದ ಪರಂಪರೆಯಲ್ಲಿ ಗುರುಶಿಷ್ಯರೆಂಬುದು ಸಹಜವಾಗಿದೆ. ಇವರಿಗೂ ಚಿತ್ರದುರ್ಗ ಮಠದ ಗುರುಪರಂಪರೆಗೂ ಸಂಬಂಧವೆಂದರೆ, ಮುರಿಗೆಯ ಶಾಂತವೀರರ ಕಾಲದಲ್ಲಿ ಪ್ರಾರಂಭವಾದ ಮುರಘ ...ಯ ಸ್ಮಾರಕವಾಗಿ ಚಿತ್ರದುರ್ಗ ಮಠ ಮುರಘಾ ಸಮಯದ ಮಠವೆಂಬಂತೆ ಶಾಂತವೀರರನ್ನು ಮೂಲಸ್ವಾಮಿಯೆಂದು ಗೌರವಿಸಬೇಕಾದುದು ತತ್ತ್ವಸಮ್ಮತವಾಗಿಯೇ ಇದೆ. ಆದ್ದರಿಂದ ಆನಂದಪುರ ಮುರಘಾಮಠವೇ ಮೂಲ ಮಠವೆಂಬುದು ಸಿದ್ಧವಾಯಿತು. ಅದೇ ಬೃಹನ್ಮಠ; ಅದೇ ಜಗದ್ಗುರುಪೀಠ.

ಹದಿನೆಂಟನೆಯ ಶತಮಾನದಲ್ಲಿ ನೋಡಾ ಸಿದ್ಧಲಿಂಗರೂ ಮುರಘರೂ ...ಹಲಿಗೆ ಹೋಗುವಾಗ ದಾರಿಯಲ್ಲಿ ಕಲ್ಯಾಣವನ್ನು ಸೇರಿ, ಅಲ್ಲಿ ಪ್ರಭುಸ್ವಾಮಿಯ ಶೂನ್ಯಸಿಂಹಾಸನ ಮಠದಲ್ಲಿ ಮಹಾಗಣಾರಾಧನೆಯನ್ನು ಮಾಡಿಸಿ ಗದ್ದುಗೆ ಪೂಜೆಯನ್ನು ನೆರವೇರಿಸಿ ಮುಂದೆ ಪ್ರಯಾಣಮಾಡಿದರೆಂದು ನಿರಂಜನವಂಶ ರತ್ನಾಕರದಲ್ಲಿ ಹೇಳಿದೆ. ಆದ್ದರಿಂದ, ಕಲ್ಯಾಣದಲ್ಲಿ ಶೂನ್ಯಸಿಂಹಾಸನ ಮಠ ಪ್ರಸಿದ್ಧವಾಗಿತ್ತೆಂದು ನಿರ್ಧರವಾಗಿ ಗೊತ್ತಾಗುತ್ತದೆ. ಈ ಶತಮಾನದಲ್ಲಿ ಪ್ರಬಲವಾದ ಪಂಚಸಮಯದ ಮಠಗಳು ಎಲ್ಲ ಜಂಗಮ ಮಠಗಳನ್ನೂ ತಮ್ಮ ವ್ಯವಸ್ಥೆಗೆ ಸೇರಿಸಿಕೊಂಡವು. ಈ ಮಠಗಳೆಲ್ಲಾ ಶೂನ್ಯಸಿಂಹಾಸನ ಪರಂಪರೆಯನ್ನು ಅನುಸರಿಸಿದುವು. ತೋಂಟದ ಸಿದ್ಧಲಿಂಗರನ್ನು ತಮ್ಮ ಪರಂಪರೆಯ ಮೂಲ ಪುರುಷನೆಂದು ಗೌರವಿಸಿ, ಅವರ ತರುವಾಯದ ಸಾಲ್ಕಾರುಮುಂದಿ

ನಿರಾಭಾರಿಗಳನ್ನೂ ತಮ್ಮ ಮಠದ ಪೂರ್ವಗುರುಗಳೆಂದು ಸೂಚಿಸಿ, ತಮ್ಮ ತಮ್ಮ ಮಠಗಳ ಪಟ್ಟವಲ್ಲರಿಯನ್ನು ಬೆಳಸಿಕೊಂಡವು. ಅದರಿಂದಲೇ, ಆನಂದಪುರ ಮತ್ತು ಗದಗ ಮಠಗಳ ವಿರಕ್ತಶ್ರೇಣಿಯಲ್ಲಿಯೂ ಸಿದ್ಧಲಿಂಗರ ಮತ್ತು ಅವರ ಶಿಷ್ಯಗಣದ ಹೆಸರುಗಳು ಕಂಡುಬರುತ್ತಿವೆ. ಇದೇ ಪರಿಪಾಠವನ್ನೇ ಹದಿನೆಂಟನೆಯ ಶತಮಾನದಲ್ಲಿ ಹುಟ್ಟಿದ ಚಿತ್ರದುರ್ಗದ ವಿರಕ್ತಮಠವೂ ಅನುಸರಿಸಿದುದರಲ್ಲಿ ಆಶ್ಚರ್ಯವೇನೂ ಕಂಡುಬರುವುದಿಲ್ಲ. ಆದರೆ, ಇದು ಮೂಲ ಮುರಘಾಮಠವನ್ನು ತನ್ನ ಪ್ರಚಾರ ವೈಖರಿಯಿಂದ ಕರ್ತೃವಿಗ್ರಹದಂತೆ ಆನಂದಪುರದ ಶ್ರೀಮಠದ ಆವರಣದಲ್ಲಿಯೇ ನೆಲೆಗೊಳಿಸಿತು. ಶ್ರೀ ಜಯದೇವ ಸ್ವಾಮಿಗಳು ಚಿತ್ರದುರ್ಗದ ಮಠದ ಕೀರ್ತಿಯನ್ನು ಬೆಳಗಲು ವಿಶ್ವಪ್ರಯತ್ನ ಮಾಡಿ ಚರಿತಾರ್ಥರಾದರು! ದೈವಯೋಗದಿಂದ ಚಿತ್ರದುರ್ಗದ ಮಠ ಕರ್ನಾಟಕದ ಹೃದಯದಂತಿರುವ ಚಿತ್ರದುರ್ಗದಲ್ಲಿ ಬೆಳಗಾಂ, ಧಾರವಾಡ, ಹುಬ್ಬಳ್ಳಿ, ದಾವಣಗೆರೆ, ತುಮಕೂರು, ಬೆಂಗಳೂರುಗಳಂಥ ಪ್ರಮುಖ ನಗರಗಳನ್ನು ಕೂಡಿಸುವ ಹೆದ್ದಾರಿಯ ಪಕ್ಕದಲ್ಲಿದೆ. ಆನಂದಪುರ ಮಠ ಮಲೆನಾಡಿನ ಹಾಮಾನದಲ್ಲಿ ಕಾಂತಾರ ಪ್ರದೇಶದಲ್ಲಿದೆ. ಅದಕ್ಕೆ ನಾಗರಿಕ ನಗರಗಳ ಸಂಪರ್ಕ ಕಡಮೆ. ಪ್ರಯಾಣ ಸೌಕರ್ಯಗಳೂ ತೃಪ್ತಿಕರವಾಗಿಲ್ಲ. ಅದ್ದರಿಂದಲೇ ಅದು ಸಹ್ಯಾದ್ರಿ ಪ್ರಾಂತದ ಮಳೆಮಂಜಿನಲ್ಲಿ ಕಂಡುಬರುತ್ತಿದೆ! ಚಿತ್ರದುರ್ಗದ ಮಠ ಬಯಲುಸೀಮೆಯ ತಿಳಿಬಿಸಿಲಿನಲ್ಲಿ ಕಂಗೊಳಿಸುತ್ತಿದೆ! ಚಿತ್ರದುರ್ಗದ ಮಠ ಮುರಘಾಸಮುದಾಯದ ಕೇಂದ್ರವಾಯಿತು! ಈ ಸಮಯಾಚಾರ ಧರ್ಮತತ್ತ್ವವಾಹಿನಿ ಮೂಲ ಪಂಚಾಚಾರ್ಯ ಪೀಠಗಳಮೇಲೆಯೂ ನುಗ್ಗಿತು! ಅವುಗಳ ಪ್ರಾಚೀನತೆಯನ್ನು ಅಲುಗಾಡಿಸಿತು! ಕಾಲಧರ್ಮದಿಂದ ಸನಾತನ ವೀರಶೈವ ಸಾರ್ವಭೌಮ ಪೀಠಗಳು ನಿಸ್ಸಹಾಯಕವಾದವು! ಬಸವಣ್ಣನವರು ಸನಾತನ ವೀರಶೈವದಲ್ಲಿ ಉದಾರಪಂಥವನ್ನು ಸೃಷ್ಟಿಸಿದಂದಿನಿಂದಲೂ ಪ್ರಾಚೀನ ಗುರುಪೀಠಾಚಾರ್ಯರು ಜಾತಿಸಾಂಕರ್ಯವಾಯಿತೆಂದು ತಟಸ್ಥರಾದರು. ಅದರಿಂದಲೇ ಈ ಪಂಚಸಮುದಾಯದ ವಿರಕ್ತಮಠಗಳಿಗಿಂತಲೂ ಪ್ರಾಚೀನವಾದ ಜಂಗಮ ಮಠಗಳೂ ವಿರಕ್ತ ಸಮಯದ ಅನುಯಾಯಿಗಳಾದುವು! ವಿರಕ್ತಮಠಗಳನ್ನು ಓಲೈಸಿದುವು! ಇಷ್ಟಾದರೂ ವಿರಕ್ತಧರ್ಮ ಗೋದಾವರಿಯನ್ನು ಹೇ ದಾಟಲಿಲ್ಲ! ಎಲ್ಲ ವಿರಕ್ತಮಠಗಳೂ ಶೂನ್ಯಸಿಂಹಾಸನ ಪರಂಪರೆಯನ್ನು

ಕೊಂಪಹೊ, ಆನಂದಪುರ-ಚಿತ್ರದುರ್ಗ ವಿರಕ್ತಮಠ, ಹುಬ್ಬಳ್ಳಿ ಮೂರುಸಾವಿರ ಮಠ, ಗದಗು-ಡಂಬಳ ವಿರಕ್ತಮಠ ಇವು ಪ್ರಮುಖ ಕೇಂದ್ರ ಮಠಗಳೆನಿಸಿವೆ. ನಿಷ್ಪಕ್ಷಪಾತದೃಷ್ಟಿಯಿಂದ ಅವಲೋಕಿಸಿದರೆ, ನಿರ್ಮಾತ್ಸರ್ಯ ಬುದ್ಧಿಯಿಂದ ನಿರ್ಣಯಿಸಿದರೆ, ನಿರಂಜನ ವಂಶರತ್ನಾಕರದಲ್ಲಿ ಕಂಡುಬರುವ ಗುರುಪರಂಪರೆ ಯನ್ನು ಹುಬ್ಬಳ್ಳಿ ಮೂರುಸಾವಿರ ಮಠದ ಪ್ರಾಚೀನ ಗುರುಪರಂಪರೆಯೆಂದು ಹೇಳಬಹುದು.

"ಮೂಲಗುರುಸ್ಥಾನ ಕಲ್ಯಾಣ ಕ್ರಾಂತಿಯ ನಂತರ ಚಿನ್ಮೂಲಾದ್ರಿಗೇ ವರ್ಗಾಯಿಸಲ್ಪಟ್ಟಂತಾಯಿತು. ಅಲ್ಲಿಂದ ಒಡೆದ ಶಾಖೆಗಳೇ ಈ ಸಮಯಗಳು" ಎಂದು 'ಶ್ರೀ ಜಗದ್ಗುರು ಜಯದೇವ ದಿಗ್ವಿಜಯ'ದಲ್ಲಿ ಹೇಳಿದೆ. ಇದು ಅಭಿ ಮಾನದಮಾತು. ಆ ಗ್ರಂಥ ದಾಕ್ಷಿಣ್ಯ ದಕ್ಷಿಣಾಮೂರ್ತಿಯಾಗಿ ಹುಟ್ಟಿಬಂದಿದೆ. ಮೂಲಗುರು (ವಿರಕ್ತ) ಸ್ಥಾನ ಚಿನ್ಮೂಲಾದ್ರಿಗೆ ಬರಲಿಲ್ಲ; ಅದು ಕಲ್ಯಾಣದಲ್ಲಿ ಮೇ ನೆಲಸಿತು; ಆನಂದಪುರದಲ್ಲಿ ಮೂಡಿತು; ಚಿತ್ರದುರ್ಗದಲ್ಲಿ ದಾಂಗುಡಿ ಯಿಟ್ಟಿತು! ಉಳಿದ ಸಮಯಗಳು ಇವರಿಂದ ಒಡೆದ ಶಾಖೆಗಳಲ್ಲ! ಇದೂ ಅವೂ-ಎಲ್ಲಾ ಮೂಲ ಶೂನ್ಯಸಿಂಹಾಸನದ ಶಾಖೆಗಳೆಂಬುದೇ ಸರಿಯಾದುದು.

ಚಿತ್ರದುರ್ಗದ ಇಮ್ಮಡಿ "ಮುರಘರಾಜೇಂದ್ರ ಸ್ವಾಮಿಗಳ ಅನಂತರ ಪಟ್ಟಾಧಿಕಾರಿಗಳಾದ ಗುರುಸಿದ್ಧಸ್ವಾಮಿಗಳೇ ಗುರುಪೀಠದ ಚಿಹ್ನಾಂಕಿತಗಳನ್ನು ಧರಿಸಿ ರಾಜಪ್ರಜೆಗಳಿಂದ ಸಾರ್ವಜನಿಕವಾಗಿ ಸನ್ಮಾನಿತರಾದ ಗುರುಪೀಠದ ಅಧಿಕಾರಿಗಳಾಗಿರುವರು. ಇವರಿಂದ ಈ ಸಾರ್ವಜನಿಕ ಪಟ್ಟಾಭಿಷೇಕ ಮಹೋ ತ್ಸವವು ಜಯದೇವಸ್ವಾಮಿಗಳವರೆಗೂ ಎಡೆಬಿಡದೆ ನಡೆಯುತ್ತಾ ಬಂದಿರುವುದು. ಈ ವಿಷಯವೆಲ್ಲವೂ ನಿರಂಜನ ವಂಶರತ್ನಾಕರ ಮತ್ತು ಪಟ್ಟವಲ್ಲರಿ ಇವುಗಳಿಂದ ವ್ಯಕ್ತಪಡುವುದು" ಎಂದೂ ಅದೇ 'ದಿಗ್ವಿಜಯ' ಗ್ರಂಥದಿಂದ ಗೊತ್ತಾಗುತ್ತದೆ. ಇದರಿಂದ, ಇಮ್ಮಡಿ ಮುರಗೀಸ್ವಾಮಿಗಳು ಬಿರುದುಬಾವಲಿಗಳನ್ನು ಮೆರೆಯಿಸಿ ಕೊಂಡು ಸಾರ್ವಜನಿಕವಾಗಿ ಸನ್ಮಾನಿತರಾಗಲಿಲ್ಲವೆಂದೂ ಸಾರ್ವಜನಿಕವಾಗಿ ಪಟ್ಟಾಭಿಷಕ್ತರಾಗಲಿಲ್ಲವೆಂದೂ ಅರ್ಥವಾಗುತ್ತದೆ. ಇದರಿಂದ ಮುರಗೀಸ್ವಾಮಿ ಗಳಿಗೆ ಶಾಸ್ತ್ರೋಕ್ತವಾಗಿ ಅನುಗ್ರಹವಾಗಿರಲಿಲ್ಲವೆಂಬ ಅನುಮಾನ ಬರುತ್ತದೆ. ಅವರು ಕೇವಲ ಮಠವನ್ನು ಸ್ಥಾಪಿಸಿ, ಬಿಡಿ ವಿರಕ್ತರಾಗಿಯೇ ಇದ್ದುಕೊಂಡು ಅವರ ತರುವಾಯ ಶಿಷ್ಯ ಗುರುಸಿದ್ಧಸ್ವಾಮಿ ಎಂಬುವರಿಗೆ ಅಧಿಕಾರ ಪ್ರದಾನ

ಮಾಡಿಸಿರಬಹುದೆಂಬ ಸಂಶಯು ಬರುತ್ತದೆ. ಅಥಣಿ ಶಿವಯೋಗಿಗಳು ಯಾವುದೊಂದು ಮಠದ ಸ್ವಾಮಿಯೂ ಆಗಿರಲಿಲ್ಲ. ಆದರೆ, ಅವರ ಅನುಗ್ರಹಕ್ಕೆ ಪಾತ್ರರಾಗಿದ್ದ ಹಲವರು ಅನೇಕ ಗುರು, ವಿರಕ್ತಮಠಗಳಿಗೆ ಸ್ವಾಮಿಗಳಾಗುತ್ತಿದ್ದರು. ಇಮ್ಮಡಿ ಮುರಘಾಸ್ವಾಮಿಗಳು ಬಿಚ್ಚುಕತ್ತಿ ಭರಮಪ್ಪನಾಯಕನ ಕೋರಿಕೆಯಂತೆ ಮರಳಿ ಚಿತ್ರದುರ್ಗಕ್ಕೆ ಆಗಮಿಸಿದರೆಂದು ಶ್ರೀ ಮಲ್ಲಿಕಾರ್ಜುನಸ್ವಾಮಿಗಳ ಪಟ್ಟಾಧಿಕಾರ ಭಾಷಣದಲ್ಲಿ ಹೇಳಿದೆ. ಮೊದಲು ಸಾಃ ಅವರು ತುರುಗಾಹಿ ಭರಮಪ್ಪನಾಯಕನ ಸರ್ಪಯೋಗ ಘಟನೆಯನ್ನು ಕಂಡು ಹರಸಿದಾಗ ಬಂದಿದ್ದರು. ಈಗ ಮರಳಿ ಬಂದರೆಂದು ಹೇಳಿದಂತಾಯಿತು. ಆದ್ದರಿಂದ, ದೆಹಲಿಯಿಂದ ಹಿಂದಿರುಗಿಬಂದ ಮುರಘಾಸ್ವಾಮಿಗಳು ನೇರವಾಗಿ ಇಸಳೂರಿಗೆಹೋದರೆಂದು ಪಟ್ಟಾಧಿಕಾರ ಭಾಷಣ ದೃಢಪಡಿಸುತ್ತದೆ ಮತ್ತು ಅವರು ಇಸಳೂರಿನಲ್ಲಿಯೇ ನಿಂತರೆಂದೂ ಖಚಿತಗೊಳಿಸುತ್ತದೆ. ಅವರು ಭರಮಪ್ಪನಾಯಕನ ಕೋರಿಕೆಯಂತೆ. ಚಿತ್ರದುರ್ಗಕ್ಕೆ ಬಂದರೆಂಬುದು ನಿಜವಲ್ಲ. ಅವರು ಚಿತ್ರದುರ್ಗದತ್ತ ಆಶ್ರಯುವನ್ನು ಅರಸಿಕೊಂಡುಬಂದರೆಂಬುದು ನಿಜ. ಅವರ ಗುರು ಅವರನ್ನು ನಿರಾಕರಿಸಿದ್ದರಿಂದ ಆ ಗುರುವಿನಿಂದ ಅನುಗ್ರಹವನ್ನು ಪಡೆಯಲಾರದೆ, ವಿದ್ವೇಷಮನೋಭಾವದಿಂದ ಪೂರ್ವಪರಿಚಯದ ಚಿತ್ರದುರ್ಗದತ್ತ ಬಂದಿರಬೇಕು; ಅವರು ಇಲ್ಲಿ ಒಂದು ಮಠವನ್ನು ಕಟ್ಟಿಸಿ, ಗುರುಸಿದ್ಧರಿಗೆ ಪಟ್ಟಗಟ್ಟಿಸಿ ಚಿತ್ರದುರ್ಗದಲ್ಲಿ ಮುರಘಾ ಸಮುಯುವನ್ನು ಸ್ಥಾಪಿಸಿರಬೇಕು-ಎಂದು ತರ್ಕಿಸಬಹುದು. ಅವರು ಬಂದಾಗ ಶೂನ್ಯಸಿಂಹಾಸನವನ್ನು ಚಿತ್ರದುರ್ಗಕ್ಕೆ ತಂದರೆಂಬುದನ್ನೂ, ಅಂಥ ಪ್ರಖ್ಯಾತ ಸಿಂಹಾಸನ ದೆಹಲಿಯಿಂದ ಬಂದು ದುರ್ಗದಲ್ಲಿ ಸ್ಥಾಪಿತವಾಯಿತೆಂಬುದನ್ನೂ ಸೂಚಿಸಲು ಪಾಳೆಯಗಾರ ಶಾಸನಬರೆಯಿಸದಿರುತ್ತಿದ್ದನೆ! ಮುರಿಗಾಸ್ವಾಮಿಗಳಿಗೆ ಮಠಗಳನ್ನು ಕಟ್ಟಿಸಿಕೊಟ್ಟು, ಉಂಬಳಿಗಳನ್ನು ಬಿಟ್ಟದ್ದರೆ ಪಾಳೆಯಗಾರರು ಶಾಸನಗಳನ್ನು ಬರೆಯಿಸದಿರುತ್ತಾರೆಯೆ! ಅಂಥ ಶಾಸನಗಳನ್ನು ಮಠದವರು ಪ್ರಕಟಿಸಿದರೆ ಪರಮೋಪಕಾರವಾದೀತು!

ಇತಿಹಾಸವನ್ನು ಜಾಗರೂಕತೆಯಿಂದ ಅಭ್ಯಾಸಮಾಡಿದಷ್ಟೂ ಹೊಸ ಹೊಸ ಸಂಗತಿಗಳು ಬೆಳಕಿಗೆ ಬರುತ್ತವೆ. ಮುರಘಾ ಸಮುಯದ, ಇತಿಹಾಸವೆಂದರೆ ಕೇವಲ ಚಿತ್ರದುರ್ಗ ವಿರಕ್ತಮಠದ ಇತಿಹಾಸವಲ್ಲವೆಂಬುದನ್ನು ಸದಾ ನೆನಪಿನಲ್ಲಿಡಬೇಕು. ನಾನಾ ಮಠಧರ್ಮಗಳ ಚರಿತ್ರೆಯನ್ನು ಆಸಕ್ತಿಯಿಂದ

ಅಭ್ಯಾಸಮಾಡಿದರೆ, ಕಾಲಕಾಲಕ್ಕೆ ಅನೇಕ ಹೊಸ ಹೊಸ ಪಂಥಗಳು ಸಮಾಜ ಧರ್ಮವನ್ನು ರೂಪಿಸುತ್ತ ಬಂದವೆಂಬುದನ್ನು ಮನಗಾಣಬಹುದು. ಹಲವು ಪಂಥಗಳಲ್ಲಿ ಕೆಲವು ವಾಮಾಚಾರಗಳೂ ಅಂಥ ಸಂಪ್ರದಾಯಗಳೂ ಕಂಡು ಬರುವುದುಂಟು. ಅವು ಕೇವಲ ಆ ಪಂಥ ಪ್ರಚಾರಕರ ಮನೋಧರ್ಮ ವಾದವೇ ಹೊರತು ಸಮಾಜಧರ್ಮವಾಗಲಿಲ್ಲ. ಯಾವ ಧರ್ಮವೂ ಹೊಸದಲ್ಲ. ಪ್ರತಿಯೊಂದರ ಬೇರೂ ಬಹಳ ಆಳಕ್ಕೆ ಇಳಿದು ಅಲ್ಲಿಂದ ತನ್ನ ಪೋಷಕಶಕ್ತಿ ಯನ್ನು ಹೀರಿಕೊಂಡು ಬೆಳೆದಿರುತ್ತದೆ. ಕಾಲಧರ್ಮದಿಂದ ಅದು ಕೆಲವುಕಾಲ ಸೊರಗಿರುತ್ತದೆ; ವ್ಯಕ್ತಿಮನೋಧರ್ಮದಿಂದ ಕೆಲವುಕಾಲ ಒಣಗಿರುತ್ತದೆ. ಎಲ್ಲ ಧರ್ಮಗಳೂ ಸಮಾಜದ ಶುಭೋದಯವನ್ನೇ ಸಾಧಿಸುತ್ತವೆ. ಆದರೆ, ಯಾವದೊಂದು ಧರ್ಮಕ್ಕೂ ಅದರ ಗುಣಮೌಲ್ಯವಿದ್ದೇ ಇರುತ್ತದೆ. ಅದರ ವಯಸ್ಸು ಮುಖ್ಯವಲ್ಲ; ಅದರ ಗುಣಮುಖ್ಯ. ಮಾನವನ ಮನೋಭಾವ ವೈಶಾಲ್ಯಕ್ಕೆ ಸಾಧಕವಾದ ಸರ್ವೋತ್ತಮರೀತಿ ಗುಣಸಂಪನ್ನವಾದುದೇ ಶ್ರೇಷ್ಠ ಧರ್ಮ. ಆದರೆ ಪೂರ್ಣ ಧರ್ಮದರ್ಶನವನ್ನು ಅರಿಯದವರು ಅನೇಕ ಸಂದ ರ್ಭಗಳಲ್ಲಿ ನಿಜವನ್ನು ಮರೆತು ನಿಜದ ಆಭಾಸವನ್ನು ನಿಜವೆಂದು ತೋರಿಸಲು ಪ್ರಯತ್ನಗಳೂ ನಡೆಯದೇ ಇಲ್ಲ. ಅಂಥ ಸಂದರ್ಭಗಳಲ್ಲಿಯೇ ಇತಿಹಾಸ ದಾರಿತೋರಿಸುತ್ತದೆ; ಬೆಳಕು ಚೆಲ್ಲುತ್ತದೆ.

'ಮುರಿಗಿಸಮಯ ಮುರಘರೆಂಬ ದ್ರಾವಿಡ ಪುರಾತನರಬಳಿವಿಡಿದು ರೂಪು ಗೊಂಡಿತೆಂಬುದು ನಿರ್ವಿವಾದ. ಅದು ಪ್ರಾಚೀನಧರ್ಮ. ಹನ್ನೆರಡನೆಯ ಶತ ಮಾನದಲ್ಲಿಯೇ ಅದು ಬಸವಣ್ಣನವರ ಶರಣಧರ್ಮದಲ್ಲಿ ಸೇರಿಕೊಂಡಿತಾದರೂ, ಹದಿನಾರನೆಯ ಶತಮಾನದಲ್ಲಿ ಒಂದು ವ್ಯವಸ್ಥಾರೂಪದಲ್ಲಿ ಕನ್ನಡನಾಡಿ ನಲ್ಲಿ ಹಬ್ಬಿತು. ಅದು ನಾಥಸಿದ್ಧ ಸಂಪ್ರದಾಯ ಮತ್ತು ಮಹಾನುಭಾವ ಪಂಥಗಳ ತತ್ತ್ವಸಾರಗಳನ್ನು ಹೀರಿಕೊಂಡು, ಶರಣಧರ್ಮದ ಅಂತಶ್ಶಕ್ತಿಯಾಗಿ ವಿರಕ್ತಪಂಥದಲ್ಲಿ ವಿರಾಜಿಸುತ್ತ ವೀರಶೈವದಲ್ಲಿ ನಿಂತಿತು. ಮುರಘಾ ಸಮಯ ಸುಮಾರು ನಾಲ್ಕುನೂರು ವರ್ಷಗಳ ಹಿಂದೆ ಅಥಣಿಯಲ್ಲಿ ರೂಪುಗೊಂಡಂತೆ ಕಂಡುಬರುತ್ತದೆ. ಮುರಘಾಸಮಯದ ರೇವಣಸಿದ್ಧಸ್ವಾಮಿಗಳೆಂಬುವರು ಕಲ್ಯಾಣದಕಡೆಯಿಂದ ಬಂದು ಅಥಣಿಯಲ್ಲಿ ನೆಲಸಿದರು. ಅವರ ಶಿಷ್ಯರು ಅವರಿಗೊಂದು ಮೂರು ಅಂಕಣದ ಮಠವನ್ನು ಕಟ್ಟಿಸಿಕೊಟ್ಟರು. ಅದೇ

ಗಚ್ಚಿನಮಠ. ಈಗ ಅದು ದೊಡ್ಡಮಠವಾಗಿದೆ. ಇವರ ಗದ್ದುಗೆ ಈ ಮಠದ ಆವರಣದಲ್ಲಿದೆ. ಇವರ ತರುವಾಯ, ಗುರುಶಾಂತಸ್ವಾಮಿ, ಮುರುಳಶಂಕರಸ್ವಾಮಿ, ಮುರಘೇಂದ್ರಸ್ವಾಮಿ, ಚೆನ್ನಬಸವಸ್ವಾಮಿ, ಮುರುಳಶಂಕರಸ್ವಾಮಿ, ಗುರುಶಾಂತಸ್ವಾಮಿ, ಚನ್ನಬಸವಸ್ವಾಮಿ, ಸಿದ್ಧಲಿಂಗಸ್ವಾಮಿ ಮೊದಲಾದ ವಿರಕ್ತರು ಈ ಸಮಯಪರಿಪಾಲಕರಾಗಿ ಧರ್ಮೋದ್ಧಾರ ಕಾರ್ಯಗಳನ್ನು ಮಾಡಿದರೆಂದು ಆ ಮಠದ ಚರಿತ್ರೆಯಿಂದ ತಿಳಿದುಬರುತ್ತದೆ. ಈ ಪರಂಪರೆಯಲ್ಲಿ ಅಥಣಿ ಶಿವಯೋಗಿಗಳೆಂಬ ಮಹಾವಿರಕ್ತರು ಪರಮಪೂಜ್ಯರಾಗಿದ್ದಾರೆ. ಇವರ ಪೂರ್ವಾಶ್ರಮದ ಹೆಸರು ಗುರುಲಿಂಗದೇವರು. ಇವರ ಕಾಲ ೧೯ನೆಯ ಶತಮಾನ. ಇವರು ಯಾವುದೊಂದು ಮಠದ ಸ್ವಾಮಿಯೂ ಆಗಿರಲಿಲ್ಲ. ಶ್ರೀ ಜಯದೇವಸ್ವಾಮಿಗಳೂ ಶ್ರೀ ವಾಗೀಶ ಶಿವಾಚಾರ್ಯರೂ, ಶ್ರೀ ಜಯವಿಭವಸ್ವಾಮಿಗಳೂ ಶ್ರೀ ಮೃತ್ಯುಂಜಯಸ್ವಾಮಿಗಳೂ, ಈಗಿರುವ ಅಥಣಿ ಶ್ರೀ ಚೆನ್ನಬಸವಸ್ವಾಮಿಗಳೂ ಶ್ರೀ ಶಿವಯೋಗಿಗಳ ಕೃಪಾಪಾತ್ರರು. ಶಿವಯೋಗಿಗಳು ಅಥಣಿಯಲ್ಲಿ ೬೩ ಪುರಾತನರ ಪೂಜಾಸಮಾರಂಭವನ್ನು ೬೩ ದಿನಗಳ ಕಾಲ ೧೯೧೬ ನೆಯ ಇಸವಿಯಲ್ಲಿ ನೆರವೇರಿಸಿದರು. ಈ ಪೂಜಾ ಸಂಸ್ಮರಣೆಗಾಗಿ ಅಲ್ಲಿ ಪುರಾತನೇಶ್ವರ ದೇವಾಲಯವನ್ನು ಸ್ಥಾಪಿಸಿದರು. ಕಾಲಕ್ರಮದಲ್ಲಿ ಧಾರವಾಡ ಮುರಘಾ ಮಠದಲ್ಲಿ ೬೩ ಪುರಾತನರ ಹೆಸರಿನಲ್ಲಿ ೬೩ ಕೊಠಡಿಗಳು ನಿರ್ಮಾಣವಾಗಿವೆ. ಈ ಸಮಯದ ಮಠಗಳು ನಾಡಿನಲ್ಲಿ ಅನೇಕವಾಗಿವೆ. ಇಂಥ ಮಠಗಳಲ್ಲಿ ಶಿವಮೊಗ್ಗ ಜಿಲ್ಲೆಯ ಅನಂತಪುರ ಮುರಘಾಮಠ ಅತ್ಯಂತ ಪ್ರಾಚೀನವಾದುದು. ಮುರಿಗೆಶಾಂತವೀರದೇಶಿಕರೆಂಬುವರು ಅನಂತಪುರ ಮುರಘಮಠದ ಸ್ವಾಮಿಯಾಗಿದ್ದರು. ಅವರು ಕ್ರಿ. ಶ. ೧೫೩೦ ರಲ್ಲಿ ಜೀವಿಸಿದ್ದರು. ಇವರು ಉತ್ತಮ ಪಂಡಿತರೂ ಕವಿಗಳೂ ಆಗಿದ್ದರು. ಅಥಣಿ ಮುರಘಸಮಯದ ಮಠಕ್ಕಿಂತಲೂ ಹಿಂದೆಯೇ ಅನಂತಪುರದ ಮುರಘಸಮಯದ ಮೂಲಮಠ ಚಿಕ್ಕಿನಕಲ್ಲುಮಠವಾಗಿತ್ತು. ಮುರಿಗೆಶಾಂತವೀರಸ್ವಾಮಿಯ ಶಿಷ್ಯರಲ್ಲಿ ಸಂಪಾದನೆಯ ಚೆನ್ನಂಜೆದೇವ, ಕಂಪಿನಂಜಯ್ಯ, ಮುರಿಗೆದೇಶಿಕೇಂದ್ರ, ಮಹಾಂತಸ್ವಾಮಿ, ಇಮ್ಮಡಿ ಮುರಿಗೆಯಸ್ವಾಮಿ, ಇಮ್ಮಡಿ ಗುರುಶಿವಸ್ವಾಮಿ, ಸೋಮಶೇಖರ ಶಿವಯೋಗಿ ಮೊದಲಾದ ಅನೇಕ ಶಿಷ್ಯಪ್ರಶಿಷ್ಯರಿದ್ದರು. ಸಂಪಾದನೆಯ ಚನ್ನಂಜೆದೇವರು ಸಂಪಾದನೆ ಸಮಯದ ಸ್ವಾಮಿಯೂ

ಪ್ರತಿಯೇ, ಕಂಪಿನಸಂಜಯ್ಯದೇವರು ಕಲ್ಯಾಣದ ಕೆಂಪಿನಸಮಯದ ಸ್ವಾಮಿಯಾದರು. ಈ ಶಿಷ್ಯವೃಂದದಲ್ಲಿ ಇಮ್ಮಡಿ ಮುರಿಗೆಯಸ್ವಾಮಿಯೇ ಚಿತ್ರದುರ್ಗದ ವಿರಕ್ತಮಠವನ್ನು ಸ್ಥಾಪಿಸಿ ಆ ಮಠದ ಮೂಲಪುರುಷರಾದರು. ಮುರಿಗೆಯ ಶಾಂತವೀರರ ಮತ್ತು ಅವರ ಕೆಲವು ಪ್ರಮುಖ ಶಿಷ್ಯ ಪ್ರಶಿಷ್ಯರ ವಿವರಗಳನ್ನು ಕನ್ನಡ ಕವಿಚರಿತ್ರೆಯಿಂದ ಅರಿಯಬಹುದು.

* ಮುರಿಗೆಯ ಶಾಂತವೀರನೆಂಬುವನು ಕ್ರಿ. ಶ. ೧೬೩೦ ರಲ್ಲಿದ್ದನೆಂದೂ, ಈತನು ಪ್ರಭುಲಿಂಗದ ಕಂದ, ವೈರಾಗ್ಯ ಷಟ್ಪದಿ, ಏಕೋನವಿಂಶತಿ ಪ್ರಬಂಧ ಇವುಗಳನ್ನು ಬರೆದಿದ್ದಾನೆಂದೂ, ಈತನು ಮುರಿಗಿಮಠದ ಸ್ವಾಮಿಯಾಗಿದ್ದನೆಂದೂ, ಈತನು ತೋಂಟದ ಸಿದ್ಧಲಿಂಗನ (ಕ್ರಿ. ಶ. ೧೪೭೦) ಶಿಷ್ಯ ಬೋಳಬಸವನ ಅನುಗ್ರಹಕ್ಕೆ ಪಾತ್ರನಾಗಿದ್ದನೆಂದೂ, ಕಟ್ಟಿಗೆಹಳ್ಳಿ ದೇವನ ಶಿಷ್ಯನಾಗಿದ್ದನೆಂದೂ ತಿಳಿದುಬರುತ್ತದೆ. ಪ್ರಭುಲಿಂಗದ ಕಂದಗ್ರಂಥದಲ್ಲಿ ಶಿವಪೂಜೆಯನ್ನು ಯೋಗಶಾಸ್ತ್ರಕ್ರಮದಿಂದ ನಿರೂಪಿಸಿದ್ದಾನೆ. ಈ ಗ್ರಂಥಕ್ಕೆ ಪರ್ವತಶಿವಯೋಗಿ (ಸು. ೧೬೫೦) ಒಂದು ವ್ಯಾಖ್ಯಾನವನ್ನು ಬರೆದಿದ್ದಾನೆ.

ಮುರಿಗೆ ದೇಶಿಕೇಂದ್ರ (ಸು. ೧೬೭೦) ಎಂಬ ವೀರಶೈವಕವಿ ರಾಜೇಂದ್ರ ವಿಜಯವನ್ನು ಬರೆದಿದ್ದಾನೆ. ಇವನು ಮುರಿಗೆಯ ಮಠದ ಸ್ವಾಮಿಯಾಗಿದ್ದಂತೆ ತೋರುತ್ತದೆ. ಇವನು ಪ್ರಭುಲಿಂಗದ ಕಂದ ಮುಂತಾದ ಗ್ರಂಥಗಳನ್ನು ಬರೆದಿರುವ ಮುರಿಗೆಯ ಶಾಂತವೀರನೇ ಆಗಿರಬಹುದೆಂಬ ಸಂದೇಹಬರುತ್ತದೆ. ಇದರ ಇವನು ಬೇರೆ. ಮಲಪ್ರಭಾನದಿಯ ತೀರದಲ್ಲಿರುವ ಹಮ್ಮಿರಪುರ ಅಥವಾ ಪಟ್ಟದಕಲ್ಲು ಎಂಬ ನಗರದ ರಾಜ ತ್ರೈಲೋಕ್ಯಚೂಡಾಮಣಿಯ ಮಗ ಹಮ್ಮೀರನನ್ನು ಕುರಿತು ರಾಜೇಂದ್ರ ವಿಜಯ ಕಾವ್ಯವನ್ನು ಇವನು ಬರೆದಿರುತ್ತಾನೆ. ಹಮ್ಮೀರನಿಗೆ ರಾಜೇಂದ್ರ, ಮನುರಾಜ, ಅನಿಮಿಷೇಂದ್ರ ಎಂಬ ಹೆಸರುಗಳೂ ಉಂಟು.

ಮಹಾಂತಸ್ವಾಮಿ (ಸು. ೧೬೭೦) ಎಂಬ ಕವಿ ಮುರಿಗೆಯ ಶಾಂತವೀರನ (ಸು. ೧೬೩೦) ಸ್ತುತಿರೂಪವಾದ ಒಂದು ಷಟ್ಪದಿ ಗ್ರಂಥವನ್ನು ಬರೆದಿದ್ದಾನೆ. ಇದನ್ನು ಸಾಂದ್ಯ ಎಂದು ಕರೆಯುತ್ತಾರೆ. ಇವನಿಗೆ ಮಹಾಂತಯ್ಯ, ಮುರಿಗೆ ಸ್ವಾಮಿ ಎಂಬ ಹೆಸರುಗಳೂ ಇವೆ. ಇವನು ಮುರಿಗೆಯ ಶಾಂತವೀರನ ಕಾಲದಮೇಲೆ ಆ ಮಠಕ್ಕೆ ಸ್ವಾಮಿಯಾಗಿದ್ದಂತೆ ತೋರುತ್ತದೆ. "ಮುರಿಗೆಯ

ಸ್ವಾಮಿಗಳು ನಿರೂಪಿಸಿದ ನಾಂದ್ಯ" ಎಂಬ ಒಂದು ಗ್ರಂಥವಿದೆ. ಇದರಲ್ಲಿ ವಿವಿಧ ಷಟ್ಪದಿಗಳಲ್ಲಿ ಬರೆದಿರುವ ೨೪ ಪದ್ಯಗಳಿವೆ.

**ಇಮ್ಮಡಿ ಮುರಿಗೆಯಸ್ವಾಮಿ** (ಸು. ೧೫೯೦) ಎಂಬ ಕವಿ 'ಶಿವಲಿಂಗ ನಾಂದ್ಯ'ವನ್ನು ಬರೆದಿದ್ದಾನೆ. ಇವನು ವೀರಶೈವ ಕವಿ. ಮಹಾಂತಸ್ವಾಮಿಯ (ಸು. ೧೫೬೦) ಕಾಲವಾದಮೇಲೆ ಮುರಿಗೆಯ ಮಠದ ಪಟ್ಟಕ್ಕೆ ಬಂದಂತೆ ತೋರುತ್ತದೆ. ಇವನ ನಾಂದ್ಯ ಪುಸ್ತಕದಲ್ಲಿ ೨೫ ಪದ್ಯಗಳಿವೆ. ಭಾಮಿನೀ ಷಟ್ಪದಿ ೧೧, ವಾರ್ಧಕ ೧೪.

**ಸೋಮಶೇಖರ ಶಿವಯೋಗಿ** (ಸು. ೧೭೦೦) ಎಂಬ ಕವಿ ತೋಂಟದ ಸಿದ್ಧಲಿಂಗನ ಷಟ್ಸ್ಥಲಜ್ಞಾನಸಾರಾಮೃತದ ವಚನದ ಟೀಕೆಯನ್ನು ಬರೆದಿದ್ದಾನೆ. ಈ ಟೀಕೆಯ ಆರಂಭದಲ್ಲಿ ತೋಂಟದ ಸಿದ್ಧಲಿಂಗೇಶ್ವರನ ಕರುಣಾಪ್ರಸಾದ ಪಾತ್ರರಾದ ಬೋಳಬಸವೇಶ್ವರ; ಗೂಳೂರು ಸಿದ್ಧಲಿಂಗಯ್ಯ; ಗುಮ್ಮಳಾಪುರದ ಸಿದ್ಧವೀರಯ್ಯ; ಗಗನದಯ್ಯ; ಕಟ್ಟಿಗೆಹಳ್ಳಿ ಸಿದ್ಧಲಿಂಗೇಶ್ವರ; ಮುರಿಗೆ ಶಾಂತವೀರೇಶ್ವರ ಮತ್ತು ಈ ಶಾಂತವೀರೇಶ್ವರನಿಂದ ಅನುಗ್ರಹಪಡೆದ ಮುರಿಗೆ ಗುರುಸಿದ್ಧೇಶ್ವರ ಎಂಬ ೭ ಜನ ಶಿಷ್ಯಪ್ರಶಿಷ್ಯ ಪರಂಪರೆಯನ್ನು ಸೂಚಿಸಿ, ಅವರಲ್ಲಿ ತಾನು ಲನೆಯವನೆಂದು ಹೇಳಿಕೊಂಡಿರುತ್ತಾನೆ. ಈ ಮೇಲೆ ಕಂಡ ವಿಚಾರಗಳು ಕರ್ಣಾಟಕ ಕವಿಚರಿತೆಯ ಎರಡನೆಯ ಸಂಪುಟದಲ್ಲಿ ಉಕ್ತವಾಗಿವೆ. ಕವಿಚರಿತೆಕಾರರು ಈ ದ್ವಿತೀಯ ಸಂಪುಟದಲ್ಲಿ 'ಗ್ರಂಥಶುದ್ಧಿ'ಯನ್ನು ಕೊಟ್ಟಿದ್ದಾರೆ. (ಪುಟ ೫೭೨) ಅದರಲ್ಲಿ "ಸೋಮಶೇಖರ ಶಿವಯೋಗಿ (ಪುಟ ೫೭೬) ಕೊಟ್ಟಿರುವ ತೋಂಟದ ಸಿದ್ಧಲಿಂಗನ ಶಿಷ್ಯಪರಂಪರೆಯ ಪ್ರಕಾರ ಮುರಿಗೆಯ ಶಾಂತವೀರನು ಆ ಗುರುವಿನಿಂದ ೬ ನೆಯವನಾಗುತ್ತಾನೆ. ಇದು ನಿಜವಾಗಿದ್ದ ಪಕ್ಷದಲ್ಲಿ ಇವನ ಕಾಲವನ್ನು ಸುಮಾರು ೩೦ ವರ್ಷ ಈಚೆ ಹಾಕಬೇಕಾಗುತ್ತದೆ. ಇವನು ಶಿವಲಿಂಗಮಹಿಮಾ ಷಟ್ಪದ ಎಂಬ ಗ್ರಂಥವನ್ನೂ ಬರೆದಿರುವಂತೆ ತೋರುತ್ತದೆ" ಎಂದು ಹೇಳಿದ್ದಾರೆ. ಆದ್ದರಿಂದ ಮುರಿಗೆಯ ಶಾಂತವೀರನ ಕಾಲ ಸು. ೧೫೬೦ ಎಂದು ಹೇಳಬಹುದು.

ಕವಿಚರಿತೆಕಾರರು ಇದೇ ಎರಡನೆಯ ಸಂಪುಟದ ೫೭೫ ನೆಯ ಪುಟದಲ್ಲಿ "**ಇಮ್ಮಡಿ ಮುರಿಗೆಯಸ್ವಾಮಿ.** ಈತನ ಹೆಸರು ಗುರುಸಿದ್ಧ. ಇವನು ಮುರಿಗೆಯ ಶಾಂತವೀರನ (ಪುಟ ೨೧೨) ಶಿಷ್ಯನು. ಇವನ ನಾಂದ್ಯದ

ಮದು ಪ್ರತಿಯಲ್ಲಿ ೩೫ ಪದ್ಯಗಳಿವೆ. ಇವುಗಳಲ್ಲಿ ಕೆಲವು ಶಿವಲಿಂಗ ಎಂದು ಮುಗಿಯುತ್ತವೆ. ಈತನು ಹಾಲಾಸ್ಯಪುರಾಣ ಎಂಬ ಚಂಪೂ ಗ್ರಂಥವನ್ನೂ ಶ್ವನಿಸ್ತೋತ್ರವನ್ನೂ ಬರೆದಿದ್ದಾನೆ. ಹಾಲಾಸ್ಯಪುರಾಣವು ದೊಡ್ಡಗ್ರಂಥವೆಂದು ತೋರುತ್ತದೆ. ಇದರ ನಾಂದಿಪದ್ಯಗಳುಮಾತ್ರ ನಮಗೆ ದೊರಕಿವೆ. ಇವುಗಳಲ್ಲಿ ಕೆಲವು ಶಿವಲಿಂಗಸ್ತುತಿರೂಪವಾಗಿಯೂ ಕೆಲವು ಸುಂದರೇಶ ಸ್ತುತಿರೂಪವಾಗಿಯೂ ಇವೆ. ಇವುಗಳನ್ನು ನೋಡಿಯೇ ಷಡಕ್ಷರದೇವನು (ಪುಟ ೪೪೨) ತನ್ನ ನಾಂದೀಪದ್ಯಗಳನ್ನು ರಚಿಸಿರುವಂತೆ ತೋ ೯ ರು ತ್ತ ದೆ ." ಎಂದು ಹೇಳಿರುತ್ತಾರೆ.

ಕವಿಚರಿತೆಕಾರರಾದ ಪ್ರಾಕ್ತನವಿಮರ್ಶವಿಚಕ್ಷಣ, ರಾವ್‌ಬಹದ್ದೂರ್ ಮಹಾಮಹೋಪಾಧ್ಯಾಯ, ಸನ್ಮಾನ್ಯ ಆರ್. ನರಸಿಂಹಾಚಾರ್ಯರು, ಎಂ.ಎ., ಐ.ಆರ್.ಎ.ಎಸ್. ಅವರು ತಮ್ಮ ಕರ್ಣಾಟಕ ಕವಿಚರಿತೆಯ ಮೂರನೆಯ ಸಂಪುಟದ ೨೪೧ ನೆಯ ಪುಟದಲ್ಲಿ ಪರಿಶಿಷ್ಟವನ್ನು ಕೊ ಟ್ಟಿ ರು ತ್ತಾ ರೆ. "ಬಿಟ್ಟುಹೋಗಿರುವ ಕೆಲವರು ಕವಿಗಳವಿಷಯ" ಎಂದು ಇದರಲ್ಲಿ ಸೂಚಿಸಿರುತ್ತಾರೆ. ಇದರಲ್ಲಿ ೨೫೧ ನೆಯ ಪುಟದಲ್ಲಿ " ಇಮ್ಮಡಿ ಮುರಿಗೆಯಸ್ವಾಮಿ ೧೭೦೦. ಈತನು ಹಾಲಾಸ್ಯ ಪುರಾಣವನ್ನು ಬರೆದಿರುವುದಾಗಿ ಹಿಂದೆಯೇ ಹೇಳಿದ್ದೇವೆ. ಈ ಗ್ರಂಥವು ಈಚೆಗೆ ದೊರೆಯಿತು. ಇದರಲ್ಲಿ ಗ್ರಂಥವು ಪೂರ್ತಿಯಾದಕಾಲವು ಶಕ ೧೬೪೭ ನೆಯ ಶಾರ್ವರಿ ವರ್ಷವೆಂದು (೧೭೨೦) ಈ ಪದ್ಯದಲ್ಲಿ ಹೇಳಿದೆ.

೬. ಓವಿದ ಶಾಲಿಸುವಾಹನ | ಸಾವಿರದರುನೂರರಿಂದೆನಾಲ್ವತ್ತೆರಡನೆ |
ಯಾವರಿಸಿದನುತಶಾರ್ವರಿ | ಭೂಪಿತವರಸಿಂಹಲಗ್ನದೊಳಗತಿಶಯದಿಂ||

ಎಂಬುದರಿಂದ, ಈ ಕವಿಗೆ ನಾವು ಸುಮಾರಿನಮೇಲೆ ಕೊಟ್ಟಿರುವ ಕಾಲಕ್ಕೂ (ಸು. ೧೫೫೦) ಇಲ್ಲಿ ಹೇಳಿರುವ ಕಾಲಕ್ಕೂ ಬಹಳ ವ್ಯತ್ಯಾಸವಿದೆ. ಇದರಿಂದ ಈತನು ಬೇರೆ ಒಬ್ಬ ಕವಿಯೋ ಎಂಬ ಸಂದೇಹ ಹುಟ್ಟಬಹುದು. ಆದರೆ, ಸೋಮಶೇಖರ ಕವಿಯ ಹೇಳಿಕೆಯ ಪ್ರಕಾರ ಈ ಕವಿ ತೋಂಟದಸಿದ್ಧಲಿಂಗನ (ಸು. ೧೪೭೦) ಶಿಷ್ಯಪರಂಪರೆಯಲ್ಲಿ ೭ ನೆಯವನಾಗುವುದರಿಂದ ಇವನ ಕಾಲವು ಸುಮಾರು ೧೬೭೦ ಆಗಬಹುದು. ಈ ಶಿಷ್ಯಪರಂಪರೆಯಲ್ಲಿ ಇನ್ನೂ ಒಬ್ಬಿಬ್ಬರ

ಹೆಸರು ಬಿಟ್ಟುಹೋಗಿದ್ದರೂ ಇರಬಹುದು; ಅಥವಾ ಕೆಲವರು ಬಹುಕಾಲ ಜೀವಿಸಿರಬಹುದು. ಆದುದರಿಂದ ಮೇಲೆ ಕೊಟ್ಟಿರುವ ಗ್ರಂಥನಿರ್ಮಾಣ ಕಾಲವು ಸರಿಯಾಗಿರಬಹುದೆಂದು ತೋರುತ್ತದೆ. ಇದರಿಂದ ಈ ಕವಿಯ ಗುರು ಮುರಿಗೆಯ ಶಾಂತವೀರ ಮುಂತಾದವರ ಕಾಲವನ್ನೂ ಯಥೋಚಿತವಾಗಿ ಈಚಿಗೆ ಹಾಕಬೇಕಾಗುತ್ತದೆ. ಈಗ ಈತನ ನಾಂದೀ ಪದ್ಯಗಳನ್ನು ಅನುಸರಿಸಿ ಷಡಕ್ಷರದೇವನು ತನ್ನ ನಾಂದೀ ಪದ್ಯಗಳನ್ನು ಬರೆದಿರಬಹುದು ಎಂಬ ನಮ್ಮ ಊಹೆಗೆ ಅವಕಾಶವಿಲ್ಲ." ಇವನ ಗ್ರಂಥ ಹಾಲಾಸ್ಯಪುರಾಣ. "ಇದು ಚಂಪೂರೂಪವಾಗಿದೆ." ಇದರಲ್ಲಿ ಮಧುರೆಯ ಸುಂದರೇಶ್ವರಂ ಚತುಷ್ಷಷ್ಟಿ ಲೀಲೆಗಳನ್ನು ನಟಿಸಿದ ಕಥಾವೃತ್ತಾಂತವನ್ನು ಹೇಳಿದೆ. "ಅಲ್ಲದೆ, ಪೂರ್ವದಲ್ಲಿ ಈ ಕಥೆಯನ್ನು ಸೋದೆಯ ಪ್ರಭುವಾದ ಸದಾಶಿವಭೂಪತಿ 'ವರ್ಣಕ' ವಾಗಿ ಬರೆದಿದ್ದಂತೆಯೂ, ಅದನ್ನೇ ತಾನು 'ವಸ್ತುಕ' ವಾಗಿ ರಚಿಸಿದಂತೆಯೂ" ಕವಿ ಹೇಳಿಕೊಂಡಿದ್ದಾನೆ.

ಇದನ್ನು ಸಾವಧಾನವಾಗಿ ಅವಲೋಕಿಸಿದರೆ, ಇಮ್ಮಡಿ ಮುರಿಗೆಯ ಸ್ವಾಮಿಗೆ ಗುರುಸಿದ್ಧಸ್ವಾಮಿ ಎಂದು ಹೆಸರಿತ್ತೆಂದೂ, ಈ ಇಮ್ಮಡಿ ಮುರಿಗೆಯ ಸ್ವಾಮಿಯೇ ಚಿತ್ರದುರ್ಗದ ವಿರಕ್ತಮಠವನ್ನು ಸ್ಥಾಪಿಸಿದ ಮೊದಲನೆಯ ಗುರುವೆಂದೂ, ಇವರನ್ನೇ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಅವರ ಪಟ್ಟಾಧಿಕಾರ ಭಾಷಣದಲ್ಲಿ ಇಮ್ಮಡಿ ಮುರಘರಾಜೇಂದ್ರ ಸ್ವಾಮಿಗಳೆಂದು ಸೂಚಿಸುತ್ತಾರೆಂದೂ ತಿಳಿಯಬಹುದು. ಆ ಕಾಲದಲ್ಲಿ ಭರಮಪ್ಪನಾಯಕ ಚಿತ್ರದುರ್ಗದಲ್ಲಿ ಪಾಳೆಯಗಾರನಾಗಿದ್ದನೆಂದು ಚರಿತ್ರೆಯೂ ದನಿಗೂಡಿಸುತ್ತದೆ. ಆದ್ದರಿಂದ ಇಮ್ಮಡಿ ಮುರಿಗೆಯಸ್ವಾಮಿಯ ಕಾಲ ಸು. ೧೬೯೦ ರಿಂದ ೧೭೩೦ ಎಂದು ಧಾರಾಳವಾಗಿ ಹೇಳಬಹುದು. ಇದೇ ಕಾಲದಲ್ಲಿ ಇಮ್ಮಡಿ ಮುರಿಗೆಯ ಸ್ವಾಮಿ ಹಾಲಾಸ್ಯಪುರಾಣವನ್ನು ಬರೆದು ಮುಗಿಸಿರುತ್ತಾನೆಂದು ಕವಿಚರಿತೆಕಾರರು ಹೇಳಿರುವ ಮಾತೂ ಸರಿಬರುತ್ತದೆ. ಈ ಇಮ್ಮಡಿ ಮುರಿಗೆಯಸ್ವಾಮಿ ಅಥವಾ ಗುರುಸಿದ್ಧಸ್ವಾಮಿ "ತಮ್ಮ ಪಟ್ಟಶಿಷ್ಯರಾದ ಇಮ್ಮಡಿ ಗುರುಸಿದ್ಧಸ್ವಾಮಿಗಳಿಗೆ ಪೀಠದ ಅಧಿಕಾರವನ್ನು ದಯಪಾಲಿಸಿ ಎಲ್ಲರನ್ನೂ ಆಶೀರ್ವದಿಸಿ ತಾವು ಶಿವಯೋಗ ಸಮಾಧಿಯಲ್ಲಿ ಪ್ರವೇಶಮಾಡಿದರು" ಎಂದು ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಅವರ ಭಾಷಣದಲ್ಲಿ ತಿಳಿಸಿರುತ್ತಾರೆ. ಇಮ್ಮಡಿ ಗುರುಸಿದ್ಧ

ಸ್ವಾಮಿಯೇ ಚಿತ್ರದುರ್ಗದ ವಿರಕ್ತಮಠದ ಎರಡನೆಯ ಸಿರಾಭಾರಿಯೆಂಬುದು ಖಚಿತವಾಯಿತು. ಈ ಮಠದ ಮೊದಲನೆಯ ನಿರಾಭಾರಿಯ ಹೆಸರು ಗುರುಸಿದ್ಧಸ್ವಾಮಿಯೆಂದಿತ್ತಾದ್ದರಿಂದ ಅದೇ ಹೆಸರಿನ ಎರಡನೆಯ ಸಿರಾಭಾರಿಯನ್ನು ಇಮ್ಮಡಿ ಗುರುಸಿದ್ಧಸ್ವಾಮಿಯೆಂದು ಕರೆಯಲಾಗಿದೆ. ಅದು ಸರಿಯಾಗಿಯೇ ಇದೆ. ಹಾಗಾದರೆ, ಚಿತ್ರದುರ್ಗದ ಮಠದ ಸಂಸ್ಥಾಪಕರಾದ ಮೊದಲನೆಯ ಗುರುಸಿದ್ಧಸ್ವಾಮಿಯನ್ನು ಇಮ್ಮಡಿ ಮುರಿಗೆಯಸ್ವಾಮಿಯೆಂದು ಕರೆಯಬೇಕಾದರೆ, ಅವರಿಗಿಂತಲೂ ಹಿಂದೆ ಒಬ್ಬ ಮುರಿಗೆಯಸ್ವಾಮಿ ಪೀಠಾಧಿಕಾರಿಯಾಗಿರಬೇಕೆಂದು ಸಿದ್ಧವಾಗುತ್ತದೆ. ಆದರೆ, ಚಿತ್ರದುರ್ಗದ ವಿರಕ್ತಮಠದ ಮೂಲಪುರುಷನೇ ಇಮ್ಮಡಿ ಮುರಿಗೆಯಸ್ವಾಮಿ ಎಂದರೆ ಒಂದನೆಯ ಗುರುಸಿದ್ಧಸ್ವಾಮಿಯಾಗಿರುವುದರಿಂದ, ಮೊದಲನೆಯ ಮುರಿಗೆಯಸ್ವಾಮಿಯೊಬ್ಬನು ಮಠಾಧಿಕಾರಿಯಾಗಿದ್ದನೆಂದು ಊಹಿಸಲು ಅವಕಾಶವುಂಟು. ಈನರು ಚಿತ್ರದುರ್ಗದ ಮಠದವರಂತೂ ಆಗಿರಲು ಸಾಧ್ಯವಿಲ್ಲ. ಇದೇ ಹೆಸರಿನ ಮಠ ಎಲ್ಲಿಯಾದರೂ ಈ ಹಿಂದೆಯೇ ಪ್ರಸಿದ್ಧವಾಗಿರಬೇಕೆಂಬ ಅನುಮಾನ ಬರುತ್ತದೆ. ಅಂಥಮಠ ಶಿವಮೊಗ್ಗ ಜಿಲ್ಲೆಯ ಆನಂದಪುರದಲ್ಲಿ ಇಂದಿಗೂ ಸುಪ್ರಸಿದ್ಧವಾಗಿದೆ. ಶ್ರೀ ಸಚ್ಚಿದಾನಂದ ಮುರಘರಾಜೇಂದ್ರ ಮಹಾಸ್ವಾಮಿಗಳು ಆನಂದಪುರಂ ಮುರಘಾ ಮಠದ ಜಗದ್ಗುರುವಾಗಿ ರಾರಾಜಿಸುತ್ತಿದ್ದಾರೆ. ಆ ಪೀಠದ ಗುರುಪರಂಪರೆಯನ್ನು ಅವಲೋಕಿಸಿದರೆ, ಅದರಲ್ಲಿ ಕಟ್ಟಿಗೆಹಳ್ಳಿ ಸ್ವಾಮಿಗಳ ಶಿಷ್ಯ ಮುರಿಗೆಯ ಶಾಂತವೀರಸ್ವಾಮಿಯ ಹೆಸರು ಕಂಡುಬರುತ್ತದೆ. ಈತನ ಕಾಲ ಸುಮಾರು ೧೫೭೦ ಎಂದು ಕವಿಚರಿತೆಕಾರರು ಹೇಳಿರುತ್ತಾರೆ. ಈ ಶಾಂತವೀರಸ್ವಾಮಿಯೇ ಒಂದನೆಯ ಮುರಿಗೆಯಸ್ವಾಮಿ ಎಂದು ನಿಸ್ಸಂದೇಹವಾಗಿ ಹೇಳಬಹುದು. ಕೆಳದಿಯ ಸೋಮಶೇಖರನಾಯಕನು ಶಾಲಿವಾಹಶಕ ೧೫೯೩ ನೆಯ ಧಾತುಸಂವತ್ಸರದಲ್ಲಿ ಆನಂದಪುರದಲ್ಲಿ ಮುರಘಾಮಠವನ್ನು ಕಟ್ಟಿಸಿದಂತೆ ಶಾಸನದಿಂದ ನಿರ್ಧಾರವಾಗುತ್ತದೆ; ಎಂದರೆ, ಕ್ರಿ. ಶ. ೧೬೭೦ ನೆಯ ಇಸವಿಯಲ್ಲಿ ಮುರಘಮಠ ಅಲ್ಲಿ ನಿರ್ಮಿತವಾಯಿತು. ಇದರ ಮೂಲ ಪೀಠ ಚಿಕ್ಕನಕಲ್ಲುಮಠ. ಅದು ಅತ್ಯಂತ ಪ್ರಾಚೀನವಾದುದು. ಚಿತ್ರದುರ್ಗದ ವಿರಕ್ತಮಠ ಸುಮಾರು ೧೭೦೦ರಲ್ಲಿ ಸ್ಥಾಪಿತವಾಗಿದೆಯೆಂದು ವ್ಯಕ್ತವಾಗುತ್ತದೆ. ಆದ್ದರಿಂದ ಆನಂದಪುರದ ಮುರಘ ಮಠ ಈ ಚಿತ್ರದುರ್ಗದ ವಿರಕ್ತಮಠಕ್ಕಿಂತಲೂ ಸುಮಾರು ೩೦ ವರ್ಷ ಹಿಂದೆಯೇ ಸ್ಥಾಪನೆಯಾಯಿತೆಂದು

ಒಪ್ಪಬಹುದು. ಮೂಲ ಬೆಕ್ಕಿನಕಲ್ಲುಮಠ ಸುಮಾರು ೧೩ ನೆಯ ಶತಮಾನ ದಲ್ಲಿಯೇ ಸ್ಥಾಪನೆಯಾಯಿತೆಂದು ಶಾಸನದಿಂದ ಗೊತ್ತಾಗುತ್ತದೆ. ಕಟ್ಟಿಗೆಹಳ್ಳಿ ಸಿದ್ಧವೀರಸ್ವಾಮಿಯ ಶಿಷ್ಯ ರುದ್ರಪ್ಪ ಗುರುಕೃಪೆಯಿಂದ ಮೂರನೆಯ ಆತನು ಇಮ್ಮಡಿ ಮುರಿಗೆಯಸ್ವಾಮಿಯೆಂದು ಹೆಸರಿಟ್ಟುಕೊಂಡು ಚಿತ್ರದುರ್ಗದ ಪಾಳೆಯಗಾರನ ಆಶ್ರಯದಲ್ಲಿ ನಿಂತನೆಂಬುದು ಸಮಂಜಸವಾಗಿದೆ. ಈ ರುದ್ರಪ್ಪನಿಗೆ ಗುರುಸಿದ್ಧನೆಂಬ ಹೆಸರೂ ಇತ್ತು. ಈ ಇಮ್ಮಡಿ ಮುರಿಗೆಸ್ವಾಮಿ ಯೆಂಬ ಗುರುಸಿದ್ಧಸ್ವಾಮಿಯು ಕರ್ತೃಗದ್ದುಗೆ ಚಿತ್ರದುರ್ಗದ ಮಠದಲ್ಲಿ ಇವರ ಶಿಷ್ಯರೇ ಇಮ್ಮಡಿ ಗುರುಸಿದ್ಧಮುರುಘಾಸ್ವಾಮಿಯೆಂದು ಚಿತ್ರದುರ್ಗದ ಮಠದ ಎರಡನೆಯ ವಿರಕ್ತ ಪಟ್ಟಭದ್ರರಾದರು. ಈ ಇಮ್ಮಡಿಗುರುಸಿದ್ಧಸ್ವಾಮಿ ಗಳಹೆಸರು ಆನಂದಪುರದ ಮುರಘಮಠದ ನಿರಾಭಾರಿ ಪರಂಪರೆಯಲ್ಲಿಯೂ ಕಂಡುಬರುತ್ತದೆ.

## ತರಂಗ ೧೫.

### ಆನಂದಪುರಂ ಮುರಘಾಮಠ; ಚಿತ್ರದುರ್ಗದ ಮುರಘಾಮಠ

೬೮. "ಸತ್ಯವಿಲ್ಲದವರೊಡನೆ ಸಹಸ್ರಕೊಮ್ಮೆ ನುಡಿಯಲಾಗದು. ಲಕ್ಷಕೊಮ್ಮೆ ನುಡಿಯಲಾಗದು. ಕೋಟಿಗೊಮ್ಮೆ ನುಡಿಯಲಾಗದು. ಸುಡಲಿ, ಅವರ ರೊಡೆತನಮಾರಿಹೋಗಲಿ, ಗುಹೇಶ್ವರಾ, ನಿಮ್ಮ ಶರಣರಲ್ಲದವರೊಡನೆ ಬಾಯ್ದೆರೆಯಲಾಗದು."

—ಅಲ್ಲಮಪ್ರಭು.

ಶೂನ್ಯಸಿಂಹಾಸನ ಶರಣಧರ್ಮದಲ್ಲಿ ಪ್ರಮುಖಸ್ಥಾನವನ್ನು ಪಡೆದಿರುತ್ತದೆ. ಈ ವಿಚಾರದಲ್ಲಿ ಸಂಶಯವಿಲ್ಲ. ಕಲ್ಯಾಣದಲ್ಲಿ ಶಿವಾನುಭವ ಗೋಷ್ಠಿಯ ಅಧ್ಯಕ್ಷರು ಮಂಡಿಸುತ್ತಿದ್ದ ಪೀಠವೇ ಶೂನ್ಯಸಿಂಹಾಸನ. ಈ ಶೂನ್ಯಸಿಂಹಾ ಸನಪರಂಪರೆಯಲ್ಲಿ ಆನಂದಪುರದ ಮುರಘಾಮಠ ಮತ್ತು ಚಿತ್ರದುರ್ಗದ

ಮುರಘಾಮಠ ಈ ಎರಡು ಮಠಗಳಲ್ಲಿ ಪ್ರಾಚೀನ ಮೂಲಮಠ ಯಾವುದೆಂಬುದನ್ನು ಇತಿಹಾಸ ನಿರ್ಣಯಿಸುತ್ತದೆ. ಮುರಘಾಸಮುಯದ ಮಠಗಳಲ್ಲಿ ಈ ಎರಡು ಮಠಗಳೂ ಪ್ರಧಾನ ಸಂಸ್ಥೆಗಳೇ. ಶೂನ್ಯಸಿಂಹಾಸನದ ಮೂಲಮಠ ಕಲ್ಯಾಣದಲ್ಲಿದೆ. ಹಿಂದೆ, ಸುಮಾರು ಹದಿಮೂರನೆಯ ಶತಮಾನದಲ್ಲಿಯೇ ಕಲ್ಯಾಣದಲ್ಲಿ ಈ ಮಠ ಸ್ಥಾಪನೆಯಾಯಿತು. ಆ ಶೂನ್ಯಸಿಂಹಾಸನವನ್ನು ದೆಹಲಿಯಿಂದ ತರಲಿಲ್ಲ! ಇಲ್ಲಿ ಶೂನ್ಯಸಿಂಹಾಸನವಂತೂ ಸ್ಥಾಪನೆಯಾಯಿತು. ಮೂಲ ಸಿಂಹಾಸನ ದೆಹಲಿ ಬಾದಷಹನಲ್ಲಿತ್ತೆಂಬುದನ್ನು ಒಪ್ಪಲು ಸಾಧ್ಯವಿಲ್ಲ. ಅದೊಂದು ಕಲ್ಪನೆ. ಆ ಮಠದಲ್ಲಿಯೇ ಎಲ್ಲ ನಿರಾಭಾರಿಗಳೂ ಪಟ್ಟಾಧಿಕಾರವನ್ನು ಪಡೆಯದಿದ್ದರೂ, ಕಲ್ಯಾಣಮಠವೇ ಮೂಲ ಶೂನ್ಯಸಿಂಹಾಸನಮಠವೆಂಬುದನ್ನು ಅಲ್ಲಗಳೆಯುವಂತಿಲ್ಲ. ಈ ಪ್ರಭುದೇವರ ಮಠದ ಸ್ವಾಮಿಯಾಗಲಿರುವ ಒಬ್ಬ ವಟು ಈಗ ಹುಬ್ಬಳ್ಳಿ ಮೂರುಸಾವಿರಮಠದಲ್ಲಿ ವಿದ್ಯಾವ್ಯಾಸಂಗ ಮಾಡುತ್ತಿದ್ದಾರೆ. ಈ ಮಠದಲ್ಲಿ ನಿತ್ಯ ರುದ್ರಾಭಿಷೇಕ ನಡೆಯುತ್ತಿದೆ; ಗದ್ದುಗೆಯಪೂಜೆಯೂ ಉಂಟು. ಈ ಗದ್ದುಗೆಯ ಹತ್ತಿರ ಸಿಹಿಯನ್ನು ಇಟ್ಟರೂ ನೊಣಗಳು ಅದನ್ನು ಮುತ್ತುವುದಿಲ್ಲವಂತೆ! ಹಿಂದೆ ಜಡೇಸ್ವಾಮಿಗಳೆಂಬುವರು ಈ ಮಠದ ಸ್ವಾಮಿಯಾಗಿದ್ದರೆಂದೂ, ಅವರ ಗದ್ದುಗೆಯೂ ಇಲ್ಲಿರುವುದೆಂದು ತಿಳಿದುಬರುತ್ತದೆ. ಈ ಮೂಲಮಠವನ್ನು ಸುಮಾರು ಹದಿಮೂರನೆಯ ಶತಮಾನದಲ್ಲಿ ಕಟ್ಟಿರಬಹುದೆಂದು ತಜ್ಞರು ಭಾವಿಸುತ್ತಾರೆ.

ಇಂದು ಕಲ್ಯಾಣದಲ್ಲಿ ತ್ರಿಪುರಾಂತಕನ ಕೆರೆಯತೀರದಲ್ಲಿರುವ ಪ್ರಶಸ್ತ ಕ್ಷೇತ್ರದಲ್ಲಿ ಪಂಚ ಆಚಾರ್ಯ ಪೀಠಗಳ ಪ್ರತೀಕವಾಗಿ, ಅಂದು ಬಸವಣ್ಣನವರು ಪಂಚಲಿಂಗಗಳನ್ನು ಸ್ಥಾಪಿಸಿದ್ದಾರೆ. ಆ ಲಿಂಗಗಳು ಈಗಲೂ ಇವೆ. ಪಂಚಸೂತ್ರಪೀಠವೆಂದು ಆ ಪಂಚಲಿಂಗ ಕ್ಷೇತ್ರವನ್ನು ಕರೆಯುತ್ತಾರೆ. ಆ ಪರಿಸರದಲ್ಲಿಯೇ ಪ್ರಾಚೀನ ಶೂನ್ಯಸಿಂಹಾಸನ ಮಠ ಕಂಗೊಳಿಸುತ್ತಿದೆ. ಚೆಂಗಣಗಿಲ ಕೋಟೆವಿರುವ ಎಡೆಯಲ್ಲಿ ನೂತನ ಶಿವಾನುಭವ ಮಂಟಪವನ್ನು ನಿರ್ಮಾಣ ಮಾಡುತ್ತಿದ್ದಾರೆ. ಅಲ್ಲಿರುವ ಬಸವಮಂದಿರದಲ್ಲಿ ಒಂದು ಶಿಲಾವೃಷಭಮೂರ್ತಿಯಿದೆ. ಬಸವಣ್ಣನವರು ಕಲ್ಯಾಣವನ್ನು ಬಿಟ್ಟು ಹೋಗುವಾಗ, ಶರಣರಿಗೆ ತಮ್ಮ ಕುರುಹು ಇರಲಿ ಎಂದು ಅಲ್ಲಿದ್ದ ಕಲ್ಲೊಂದನ್ನು ಮುಟ್ಟಿದರಂತೆ! ಅದು ಕೂಡಲೇ ವೃಷಭರೂಪವಾಯಿತಂತೆ! ಈ ಬಸವಮಂದಿರ ಹಿಂದೆ ಗುರುಸ್ಥಳದ

ಮಠವಾಗಿತ್ತೆಂದು ಹೇಳುತ್ತಾರೆ. ಬಸವಣ್ಣನವರು ಸ್ಥಾವರಲಿಂಗ ಪ್ರತಿಷ್ಠೆ ಯನ್ನು ಮಾಡಿದರೆಂಬುದೂ, ಪಂಚ ಆಚಾರ್ಯರಲ್ಲಿ ಗೌರವಭಾವವನ್ನಿಟ್ಟು ಕೊಂಡಿದ್ದರೆಂಬುದೂ, ಅವರು ವೃಷಭಗಣದ ವೀರಶೈವರೆಂಬುದೂ ಸಿದ್ಧವಾಗುತ್ತದೆ. ಶ್ರೀಶೈಲ ಪೀಠ ವೃಷಭಗಣಕ್ಕೆ ಸೇರಿದುದು. ಈ ಪ್ರಭೇದವವರು ಇಷ್ಟಲಿಂಗಧಾರಿಗಳಾಗಿದ್ದಂತೆಯೇ ಯಜ್ಞೋಪವೀತಧಾರಿಗಳೂ ಆಗಿದ್ದರು. ಬಸವಣ್ಣನವರು ಅನಂತರ ಲಿಂಗವಂತರಾದರು. ಅವರು ಕಲ್ಯಾಣಕ್ಕೆ ಹೋದ ಮೇಲೆ, ಎಂದರೆ ವೀರಶೈವ ದೀಕ್ಷೆಯನ್ನು ಹೊಂದಿದಮೇಲೆ ಈ ಪಂಚಲಿಂಗ ಗಳನ್ನು ಸ್ಥಾಪಿಸಿರಬಹುದು. ಇದು ಸಾಧ್ಯವೆ ? ಇದನ್ನು ಪಂಡಿತರು ಹೇಳಬೇಕು.

ಬಸವಣ್ಣನವರು ಸಂಸ್ಥಾಪಿಸಿದ ಶೂನ್ಯಸಿಂಹಾಸನ ಕೇವಲ ತತ್ತ್ವ ಸಂಕೇತವಾಗಿತ್ತು. ಅಂದಿನ ವಚನಕಾರರೂ ಅದನ್ನು ಶರಣಸಂಗೋಷ್ಠಿಯ ಅಧ್ಯಕ್ಷಪೀಠವೆಂದು ಹೇಳಿರುತ್ತಾರೆ. ಆದರೂ ಅದು ಆಗಲೇ ಧಾರ್ಮಿಕ ವಿಗ್ರಹವಾಗುತ್ತಿತ್ತೆಂದೂ ಕಂಡುಬರುತ್ತದೆ.

೬೯. "ಕೊಟ್ಟ ದ್ರವ್ಯವನ್ನು ತಮ್ಮ ತಮ್ಮ ಲಿಂಗಕ್ಕೆ ಸಮರ್ಪಣೆಯಮಾಡಿ ಕೊಂಡು ತನು ಭೋಗಾದಿಭೋಗಂಗಳ ಭೋಗಿಸುತಿರ್ದರಲ್ಲಾ. ಹೊನ್ನ ಪರಿಯಾಣಂಗಳಲ್ಲಿ ಅನಂತಪರಿಯ ಗುಗ್ಗುಳ, ಧೂಪವ ಸಾಂಗವೆಸಗಲು ಭಕ್ತ ದಿಂದ ನಡೆತಂದು "ಶೂನ್ಯಸಿಂಹಾಸನ"ದ ಮುಂದೆ ನಿಂತಿರ್ದರು. ಪಂಚಮ ವಾದ್ಯ ಮೊಳಗುತ್ತಿರಲು ಅವರವರ ಕೈಯನೀವಾಳಿಗಳನೀಸಿಕೊಂಡು "ನಾಗಾ ಯಮ್ಮಗಳು" ನಿಃಕಳಂಕ ಮಲ್ಲಿಕಾರ್ಜುನಗೆ ಆರತಿಯನೆತ್ತುದಿರ್ದರೆಲ್ಲಾ" ಎಂದು ಮೋಳಿಗೆಯ ಮಾರಯ್ಯನವರು ಒಂದು ವಚನದಲ್ಲಿ ಹೇಳಿರುತ್ತಾರೆ. ಆಗ ಶೂನ್ಯಸಿಂಹಾಸನದ ಪೂಜೆ ನಡೆಯುತ್ತಿತ್ತು. ಮುತ್ತೈದೆಯರು ಆರತಿಗಳನ್ನು ತರುತ್ತಿದ್ದರು. ನಾಗಲಾಂಬಿಕೆ ಆ ಆರತಿಗಳನ್ನೆಲ್ಲಾ ತಾನು ಕೈಗೆ ತೆಗೆದು ಕೊಂಡು ಆರತಿಯನ್ನು ಶೂನ್ಯಸಿಂಹಾಸನಕ್ಕೆ ಬೆಳಗಿಕೊಡುತ್ತಿದ್ದಳು. ಆ ಶೂನ್ಯಸಿಂಹಾಸನ ಕಾಲಕ್ರಮೇಣ ವಿರಕ್ತಧರ್ಮ ಸಿಂಹಾಸನವಾಯಿತು. ಈ ಸಂಪ್ರದಾಯದ ಮಠಗಳು ನಾಡಿನಲ್ಲಿ ರೂಪುಗೊಂಡವು. ಅಂಥ ಮಠಗಳಲ್ಲಿ ಆನಂದಪುರದ ಮಠವೂ ಒಂದು; ಚಿತ್ರದುರ್ಗದ ಮುರಘಾಮಠವೂ ಒಂದು. ಇವೆರಡೂ ಮುರಘಾಸಮುದಾಯದ ಮಠಗಳೇ.

*ತಾ|| ೨೯-೭-೧೯೬೦ನೆಯ ದಿನ ಚಿತ್ರದುರ್ಗ ವಿರಕ್ತ ಮಠಾಧೀಶ್ವರರು ಶ್ರೀ ಮಲ್ಲಿಕಾರ್ಜುನಸ್ವಾಮಿಗಳು ಬೆಂಗಳೂರಲ್ಲಿ ನಡೆದ ಒಂದು ಸಮಾರಂಭದಲ್ಲಿ ಅನುಗ್ರಹ ಭಾಷಣ ಮಾಡಿದರು. ಅದರಲ್ಲಿ ಅವರು "ಇನ್ನೂ ಪೀಠದ ವಿಚಾರವಾಗಿ ಕೆಲವು ಮಾತುಗಳನ್ನು ನಿರೂಪಿಸಬೇಕಾಗಿದೆ. ಚಿನ್ಮೂಲಾದ್ರಿ ಬೃಹನ್ಮಠ; ಮಹಾಪೀಠದ ಮೂಲಪುರುಷರು, ಕಾರಣಪುರುಷರು, ಮಹಾಕರ್ತೃ ಮುರುಘರಾಜೇಂದ್ರ ಮಹಾಸ್ವಾಮಿಗಳು. ಅವರು ಚನ್ನಬಸವಣ್ಣನವರ ಕುಮಾಯು, ಶಿಖಾಶೈಲಗಳನ್ನು ಮತ್ತೆ ದೊರಕಿಸಿ, ಶಿಖಾಪಟ್ಟದ ಪ್ರಭುವಾಗಿ ಮೆರೆದ ಮಹಾನುಭಾವರು. "ಮುರಿಗೆಯ ಶಾಂತವೀರ" ಎಂಬುದು ಅವರ ಪೂರ್ಣನಾಮ; ಸಂಪೂರ್ಣನಾಮ. ಕಾಲಕ್ರಮೇಣ, ಹೆಸರಿನಲ್ಲಿ ಸಂಕ್ಷೇಪವಾಗಿ "ಶಾಂತವೀರ" ಎಂಬುದು ಮರೆಯಾಗಿ, ಮುರಗೇಶ, ಮುರಿಗೇಶ ಮುರುಘೇಶ ಮುರಿಗಿಸ್ವಾಮಿ-ಎಂಬ ಹೆಸರುಗಳು, ಸ್ವಲ್ಪ ವ್ಯತ್ಯಾಸದೊಡನೆ ಬಳಕೆಯಲ್ಲಿ ಬಂದುವು; ಸಾರ್ವತ್ರಿಕವಾದುವು. ಹಳ್ಳಿಗರು ಈಗಲೂ ಬೃಹನ್ಮಠವನ್ನು "ಮುರಿಗಿಮಠ, ಮುರಿಗಿಸ್ವಾಮಿ ಮಠ" ಎಂದು ಕರೆಯುತ್ತಾರೆ. (ನಾಗರಿಕರು ಏನೆಂದು ಕರೆಯುತ್ತಾರೆಯೋ ?) ಜನತೆಗೆ ಮಹಾಮಹಿಮರೆಂಬುದು ಗೋಚರವಾದಾಗ ಅವರು "ಮುರಘರಾಜೇಂದ್ರ"ರಾದರು! "ಮುರಿಗಾ" ಎಂಬುದು ಶುದ್ಧರೂಪ. ಮುರಿಗಾಗುರುಗಳವರ ಶಿಷ್ಯೋತ್ತಮರೂ ಉತ್ತರಾಧಿಕಾರಿಗಳೂ ಆದ ದ್ವಿತೀಯ ಮುರಿಗಾಗುರುಸಿದ್ಧ ದೇಶಿಕೇಂದ್ರ ಮಹಾಸ್ವಾಮಿಗಳು (ಕ್ರಿ. ಶ. ೧೬೭೭) ತಮ್ಮ "ಪ್ರಭುಲೀಲಾ" ಎಂಬ ಸಂಸ್ಕೃತ ಮಹಾಕಾವ್ಯದಲ್ಲಿ "ಮುರಿಗಾ ಶಾಂತವೀರ" ಪದದ ಅರ್ಥ ವಿವರಣೆಯನ್ನು ಬಹು ಚಮತ್ಕಾರವಾಗಿ ಮಾಡಿದ್ದಾರೆ. ಆ ಮಹಾತ್ಮರ ಜೀವನಕಾಲ ಹದಿನಾರನೆಯ ಶತಮಾನದ ಪೂರ್ವಾರ್ಧ ಎಂದರೆ, ಕ್ರಿ.ಶ. ೧೫೩೦ ಎಂದು ಕರ್ಣಾಟಕ ಕವಿಚರಿತೆಯ ಅಭಿಪ್ರಾಯ. ಅದೇ ಶತಮಾನದ ಉತ್ತರಾರ್ಧ ಎಂದರೆ, ೧೫೬೦ ಎಂದು ಮತ್ತೊಂದು ಅಭಿಪ್ರಾಯ. ಅದೇನಿದ್ದರೂ ಅವರ ಕಾಲ ಹದಿನಾರನೆಯ ಶತಮಾನವೆಂಬುದು ಖಚಿತ. ಅವರ ಕೃತಿಗಳು "ಪ್ರಭುಲಿಂಗಕಂದ", "ವೈರಾಗ್ಯಷಟ್ಪದಿ" "ಏಕೋ

* ಈ ವಿಚಾರಗಳನ್ನೆಲ್ಲಾ ಈ ಗ್ರಂಥದಲ್ಲಿ ಈ ಮೊದಲೇ ನಿರೂಪಿಸಲಾಗಿದೆ. ಈ ಭಾಷಣ ಇತ್ತೀಚೆಗೆ ನಡೆದುದರಿಂದ ಪುನಃ ಆ ವಿಚಾರಗಳನ್ನು ಸೂಕ್ಷ್ಮವಾಗಿ ಇಲ್ಲಿ ವಿವೇಚಿಸಲಾಗಿದೆ.

ನವಿಂಶತಿ ಪ್ರಬಂಧ" ಈ ಮೂರು ಈಗ ಉಪಲಬ್ಧವಾಗಿವೆ. ಅವರ ಗುರುಗಳು ಕಟ್ಟಿಗೆಹಳ್ಳಿಯ ಸಿದ್ಧವೀರ ಸ್ವಾಮಿಗಳು. "ಬಿಚ್ಚುಗತ್ತಿ ಭರಮಪ್ಪನಾಯಕ ದೊರೆಯಾದುದು ಅವರ ಆಶೀರ್ವಾದದಿಂದ. ಅವನು ಚಿತ್ರದುರ್ಗದ ಹನ್ನೆರಡನೆಯ ದೊರೆ. ಅವನ ಕೋರಿಕೆಯಂತೆ ಅವನಿಗೆ ದರ್ಶನಾಶೀರ್ವಾದಗಳನ್ನು ದಯಪಾಲಿಸುತ್ತ ಅವರು ಚಿತ್ರದುರ್ಗದಲ್ಲಿಯೇ ನೆಲಸಿದರು. ಅವರಿಗಾಗಿ ಮೇಲುದುರ್ಗದಲ್ಲಿ ಒಂದು ಮಠವನ್ನು ಅವನು ಕಟ್ಟಿಸಿಕೊಟ್ಟನು. ಅವರಲ್ಲಿ ಅವರು ಕೆಲವುಕಾಲ ವಾಸವಾಗಿದ್ದರು". ಅನಂತರ ಅವನು "ಆ ಸ್ವಾಮಿಗಳಿಗೆ ಮತ್ತೊಂದು ಮಠವನ್ನು ಕಟ್ಟಿಸಿಕೊಟ್ಟನು. ಅದೇ ಬೃಹನ್ಮಠ" ಎಂದು ಹೇಳಿದರು.

ಶ್ರೀ ಮಲ್ಲಿಕಾರ್ಜುನಸ್ವಾಮಿಗಳ ಅನುಗ್ರಹ ಭಾಷಣದಿಂದ ಯಾರಿಗೂ ಯಾವ ಅನುಗ್ರಹವೂ ಲಭಿಸಿದಂತಿಲ್ಲ. ಅದರಿಂದ ಅವರಿಗೇ ಅನುಗ್ರಹವಾಯಿತೇನೋ! ಅವರ ಪಟ್ಟಾಧಿಕಾರ ಕಾಲದಲ್ಲಿ ಅವರು ಮಾಡಿದ ಅನುಗ್ರಹ ಭಾಷಣಕ್ಕಿಂತಲೂ ಮೂರು ವರ್ಷಗಳ ತರುವಾಯ ಅವರು ಬೆಂಗಳೂರಲ್ಲಿ ಮಾಡಿದ ಅನುಗ್ರಹ ಭಾಷಣದಲ್ಲಿ ತೂಕ ಕಡಿಮೆಯಾಗಿದೆ; ಮಾತು ಮುಂಚಾಗಿದೆ; ಮಂತ್ರ ಲೋಪವಾಗಿದೆ; ತಂತ್ರ ಆಗಮವಾಗಿದೆ. ಇದರಲ್ಲಿ ಇತಿಹಾಸ ಪ್ರಜ್ಞೆಯೇ ಕಾಣುವುದಿಲ್ಲ. 'ಮುರಘ' ಪದವನ್ನು ಕುರಿತು ಹಿಂದೆಯೇ ವಿವೇಚಿಸಿರುತ್ತದೆ. ಅದು ಪುನಃ ಇಲ್ಲಿ "ಪಿಷ್ಟಪೇಷಣನ್ಯಾಯ"ವಾಗಬಾರದು.

ಚಿನ್ಮೂಲಾದ್ರಿ ಪೀಠದ ಮೂಲಪುರುಷರು "ಮುರಿಗೆಯ ಶಾಂತವೀರರೆಂದೂ, ಅವರ ಕಾಲ ಕ್ರಿ. ಶ. ೧೫೬೦ ಎಂದೂ, ಅವರ ಗುರುಗಳು ಕಟ್ಟಿಗೆಹಳ್ಳಿಯ ಸಿದ್ಧವೀರಸ್ವಾಮಿಗಳೆಂದೂ, ಬಿಚ್ಚುಗತ್ತಿಯ ಭರಮಪ್ಪನಾಯಕನು ಅವರ ಆಶೀರ್ವಾದದಿಂದ ದೊರೆಯಾದನೆಂದೂ, ಅವನು ಅವರಿಗಾಗಿ ಮೇಲುದುರ್ಗದಲ್ಲಿ ಒಂದು ಮಠವನ್ನು ಕಟ್ಟಿಸಿಕೊಟ್ಟನೆಂದೂ, ದ್ವಿತೀಯ ಮುರಿಗಾ ಗುರುಸಿದ್ಧ ಸ್ವಾಮಿಗಳು ಮುರಿಗೆಯ ಶಾಂತವೀರಸ್ವಾಮಿಗಳ ಉತ್ತರಾಧಿಕಾರಿಗಳಾದರೆಂದೂ ಶ್ರೀ ಮಲ್ಲಿಕಾರ್ಜುನಸ್ವಾಮಿಗಳು ಅವರ ಅನುಗ್ರಹ ಭಾಷಣದಲ್ಲಿ ತಿಳಿಸಿರುತ್ತಾರೆ. ಇವರ ಭಾಷಣ ಕಲ್ಲುಕಟ್ಟಿಕೊಂಡು ನೀರಿನಲ್ಲಿ ಈಜುವ ಬುದ್ಧಿವಂತನ ಸಾಹಸದಂತಿದೆ! ಈ ವಿಚಾರಗಳನ್ನೆಲ್ಲಾ ನಾವು ಹಿಂದೆಯೇ ವಿಮರ್ಶಿಸಿರುತ್ತೇವೆ.' ಪುನಃ ಅವುಗಳನ್ನು ಇಲ್ಲಿ ಕಲಸುಮೇಲೋಗರ ಮಾಡ

ಖಾದು! ಆದರೆ, ಒಂದು ಮಾತನ್ನು ಇಲ್ಲಿ ಹೇಳಬೇಕಾಗಿದೆ. ಶ್ರೀ ಮುರಿಗೆಯ ಶಾಂತವೀರಸ್ವಾಮಿಯ ಕಾಲ ಕ್ರಿ. ಶ. ೧೫೭೦ ಎಂಬುದನ್ನು ಬೆಂಗಳೂರು ಶಾಸನ ಒಪ್ಪಿಕೊಂಡಿದೆ. ನಾವೂ ಅದನ್ನು ಅನುಮೋದಿಸುತ್ತೇವೆ. ಆದರೆ, ಅವರಿಗೆ ಆಶ್ರಯವಿತ್ತ ಬಿಚ್ಚುಗತ್ತಿಯ ಭರಮಪ್ಪನಾಯಕನ ಕಾಲ ಕ್ರಿ. ಶ. ೧೬೮೯ ರಿಂದ ಕ್ರಿ. ಶ. ೧೭೨೦ ಎಂದು ಚರಿತ್ರೆ ಸಾರುತ್ತಿದೆ. ಇದರಿಂದ ಗುರುವಿಗೂ ರಾಜನಿಗೂ ಸುಮಾರು ೧೩೦ ವರ್ಷಗಳಕಾಲ ಅಂತರವಿದೆ; ಅಷ್ಟೆ! ಇವರಂತೆ ನೋಡಿದರೆ, ಮುರಿಗೆಯ ಶಾಂತವೀರಸ್ವಾಮಿಗಳಿಗೆ ಪಾಳೆಯಗಾರನು ಮೇಲುದುರ್ಗದಲ್ಲಿ ಮಠ ಕಟ್ಟಿಸಿದನೆಂಬುದಾಗಲಿ, ಮುರಿಗೆಯ ಶಾಂತವೀರ ಸ್ವಾಮಿಗಳು ಅಲ್ಲಿ ಕೆಲವು ಕಾಲವಿದ್ದರೆಂಬುದಾಗಲಿ ಬ್ರಹ್ಮಚಾರಿಯ ಸಂತಾನ ಪಂಥಾಯಿತು! ಈಗ ಸಂಪಿಗೆಸಿದ್ಧೇಶ್ವರಸ್ವಾಮಿಯ ದೇವಾಲಯದ ಹತ್ತಿರ ಇರುವ ಶಿಲಾಮಂದಿರವನ್ನೇ ಮೇಲುದುರ್ಗದ ಮಠವೆಂದು ಅನೇಕರು ತಿಳಿದು ಕೊಂಡಿರುತ್ತಾರೆ. ಅದರಲ್ಲಿ ಮಠದ ಲಕ್ಷಣಗಳೇ ಇಲ್ಲ. ಅದನ್ನು ಪಾಳೆಯ ಗಾರ 'ಅತಿಥಿ' ಗೃಹವೆಂದು ಕಟ್ಟಿಸಿದನೆಂದು ಹಿರಿಯರು ಹೇಳುತ್ತಾರೆ. ಅಲ್ಲಿ ಶ್ರೀಶೈಲ ಪೀಠದ ಶಾಖಾಮಠವಾಗಿ ಮೇಲುದುರ್ಗದ ಮಠವೊಂದಿರಬೇಕು. ಆ ಮಠ ಈಗ ಅಲ್ಲಿಲ್ಲ. ಬೆಟ್ಟದಮೇಲೆ ಪಂಚಪೀಠಗಳ ಮಠಗಳೂ ಇದ್ದುವು. ಅವು ಯಾವೂ ಈಗ ಇಲ್ಲ. ಮುರಿಗೆಯಮಠ ಬೆಟ್ಟದಮೇಲಿತ್ತೆಂದು ನಂಬಲು ಆಧಾರಗಳಿಲ್ಲ. ಕ್ರಿ. ಶ. ೧೬೮೭ ರಲ್ಲಿದ್ದ ದ್ವಿತೀಯ ಮುರಿಗಾ ಗುರುಸಿದ್ಧ ಸ್ವಾಮಿಗಳೆಂಬುವರು ಕ್ರಿ. ಶ. ೧೫೭೦ ರಲ್ಲಿದ್ದ ಮುರಿಗಾಶಾಂತವೀರಸ್ವಾಮಿಗಳ ಶಿಷ್ಯೋತ್ತಮರೂ ಉತ್ತರಾಧಿಕಾರಿಗಳೂ ಆಗಲು ಸಾಧ್ಯವೆ? ದ್ವಿತೀಯ ಮುರಿಗಾ ಗುರುಸಿದ್ಧಸ್ವಾಮಿಗಳು ಇಮ್ಮಡಿ ಮುರಿಗಾಸ್ವಾಮಿಗಳ ಶಿಷ್ಯರೂ ಉತ್ತರಾಧಿಕಾರಿಗಳೂ ಆದರೆಂಬುದನ್ನು ಮರೆತು ಮುರಿಗೆಯ ಶಾಂತವೀರ ಸ್ವಾಮಿಗಳನ್ನೇ ಇಮ್ಮಡಿ ಮುರಿಗಾಸ್ವಾಮಿಗಳೆಂದು ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಭಾವಿಸಿಕೊಂಡಿರುತ್ತಾರೆ. ಆದ್ದರಿಂದ ಮುರಿಗೆಯ ಶಾಂತವೀರ ಸ್ವಾಮಿಗಳೇ ಬೇರೆ; ಚಿತ್ರದುರ್ಗದ ವಿರಕ್ತ ಮಠದ ಮೂಲಪುರುಷ ಇಮ್ಮಡಿ ಮುರುಘಾಸ್ವಾಮಿಯೇ ಬೇರೆ ಎಂಬುದನ್ನು ಆ ಪೀಠದ ನಿರಾಭಾರಿ ಪಂಡಿತರೇ ತಿಳಿಯದಿರುವುದು ಪರಮಾಶ್ಚರ್ಯ! ಇಮ್ಮಡಿ ಮುರುಘಾಸ್ವಾಮಿಯ ಕಾಲ ೧೭೨೦. ಆದ್ದರಿಂದ ಕ್ರಿ. ಶ. ೧೬೮೭ ರಲ್ಲಿದ್ದ ದ್ವಿತೀಯ ಮುರಿಗಾ ಗುರುಸಿದ್ಧ

ಸ್ವಾಮಿಗಳು ಇಮ್ಮಡಿ ಮುರಿಗಾಸ್ವಾಮಿಗಳ ಶಿಷ್ಯರೂ ಉತ್ತರಾಧಿಕಾರಿಗಳೂ ಆಗುವುದು ಸಂಭವನೀಯ. ಮುರಿಗೆಯ ಶಾಂತವೀರ ಸ್ವಾಮಿಗಳು ರಚಿಸಿದ ಗ್ರಂಥಗಳ ಹೆಸರನ್ನು ಸೂಚಿಸಿರುವ ಶ್ರೀ ಮಲ್ಲಿಕಾರ್ಜುನಸ್ವಾಮಿಗಳು ಕ್ರಿ. ಶ. ೧೫೬೦ ರಲ್ಲಿದ್ದ ಮುರಿಗೆಯ ಶಾಂತವೀರ ಸ್ವಾಮಿಗಳನ್ನೇ ಪ್ರತ್ಯೇಕ ವ್ಯಕ್ತಿಯೆಂದು ನಿರ್ದುಷ್ಟವಾಗಿ ತಿಳಿದುಕೊಂಡಿದ್ದಾರೆಂದು ಅರ್ಥವಾಗುತ್ತದೆ. "ಪ್ರಭುಲೀಲಾ" ಎಂಬ ಸಂಸ್ಕೃತ ಮಹಾಕಾವ್ಯವನ್ನು ಬರೆದ ದ್ವಿತೀಯ ಮುರಿಗಾ ಗುರುಸಿದ್ಧಸ್ವಾಮಿಗಳು ಕ್ರಿ. ಶ. ೧೬೮೭ ರಲ್ಲಿದ್ದರೆಂದು ಶ್ರೀ ಮಲ್ಲಿಕಾರ್ಜುನಸ್ವಾಮಿಗಳೇ ಹೇಳಿರುತ್ತಾರೆ ಎಂದಮೇಲೆ ದ್ವಿತೀಯ ಮುರಿಗಾ ಗುರುಸಿದ್ಧಸ್ವಾಮಿಗಳು ಮುರಿಗಾ ಶಾಂತವೀರ ಸ್ವಾಮಿಗಳ ಉತ್ತರಾಧಿಕಾರಿಗಳೆಂಬುದನ್ನು ನಂಬಲು ಸಾಧ್ಯವಿಲ್ಲ. ಬಿಚ್ಚುಗತ್ತಿಯ ಭರಮಪ್ಪನಾಯಕನ ಕಾಲವೇ ಬೇರೆ; ಮುರಿಗೆಯ ಶಾಂತವೀರ ಸ್ವಾಮಿಯ ಕಾಲವೇ ಬೇರೆ. ಇವರ ಆಶೀರ್ವಾದ ಬಲದಿಂದ ಭರಮಪ್ಪನಾಯಕ ಪಾಳೆಯಗಾರನಾಗಲಿಲ್ಲವೆಂಬುದಂತೂ ನಿತ್ಯಸತ್ಯ. ಇಮ್ಮಡಿ ಮುರಿಗಾಸ್ವಾಮಿಗಳ ಆಶೀರ್ವಾದದಿಂದಲೂ ಭರಮಪ್ಪನಾಯಕನಿಗೆ ರಾಜ್ಯಾಭಿಷೇಕವಾಗಿಲ್ಲವೆಂಬುದೂ ಅಷ್ಟೇ ನಿಜ. ಆ ನಾಯಕನ ಪೂರ್ವಪುಣ್ಯ ಸಂಕೇತವೆಂಬಂತೆ ಸರ್ಪಯೋಗ ಘಟನೆ ನಡೆದಿರಬಹುದೇ ಹೊರತು, ಅದನ್ನು ಅನಿರೀಕ್ಷಿತವಾಗಿ ಮುರಿಗಾಸ್ವಾಮಿಗಳು ನೋಡಿರಬಹುದೇ ಹೊರತು, ಇದರಲ್ಲಿ ಸ್ವಾಮಿಗಳ ತಪಃಪ್ರಭಾವವೇನೂ ಕಾಣುವುದಿಲ್ಲ. ಆ ಘಟನೆ ನಡೆಯಿತೆಂಬುದನ್ನಾದರೂ ಮುರಿಗಾಸ್ವಾಮಿಗಳು ನಿದ್ರೆಯಿಂದ ಎಚ್ಚರಗೊಂಡ ಭರಮಪ್ಪನಾಯಕನಿಗೆ ತಿಳಿಸಬಹುದಾಗಿತ್ತು! ಅಂಥ ನೈತಿಕ ಧೈರ್ಯ ಅವರಲ್ಲಿರಲಿಲ್ಲ! ಆ 'ಮಾಯಾಕೋಲಾಹಲರು' ಆ ದನಗಾಹಿಯನ್ನು ಅಜ್ಞಾನದಲ್ಲಿರಿಸಿ, ತಮ್ಮ ಮಾಹಾತ್ಮ್ಯೆಯನ್ನು ಮೆರೆದಂತೆ 'ನಟರಾಜಲೀಲೆ'ಯನ್ನು ಅಭಿವ್ಯಕ್ತಗೊಳಿಸಿದರು; ಅಷ್ಟೆ. ಈ ಸಂದರ್ಭವೇ ಕಟ್ಟುಕಥೆಯೆಂಬುದನ್ನೂ ಹಿಂದೆಯೇ ಹೇಳಿದ್ದೇವೆ.

ಶ್ರೀ ಮಲ್ಲಿಕಾರ್ಜುನಸ್ವಾಮಿಗಳಿಗೆ ಇತಿಹಾಸದ ಸಂಶೋಧನೆ ಬಗ್ಗೆ ಬೇಕಾಗಿದ್ದಿಲ್ಲ. ಅವರು ಅವರ ಬೆಂಗಳೂರು ಭಾಷಣದಲ್ಲಿ ಪೌರಾಣಿಕ ಸಂಗತಿಗಳನ್ನೇ ಹೇಳಿದ್ದರೆ ಎಷ್ಟೋ ಆಪ್ಯಾಯಮಾನವಾಗಿರುತ್ತಿತ್ತು! ಇತಿಹಾಸ ಯಾವಾಗಲೂ ಹೊಳೆಯುವ ನಿಲುವುಗನ್ನಡಿ ಇದ್ದಂತೆ! ಅದರಕಡೆಗೆ ಇಣಿಕಿನೋಡಿದರೂ,

ಮ ನಮ್ಮ ಓರೆಕೋರೆಗಳನ್ನು ಪ್ರತಿಬಿಂಬಿಸುತ್ತದೆ. ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳಿಗೆ ಇತಿಹಾಸದ ಅನುಭವ ಹೆಚ್ಚಿದಷ್ಟೂ ಇಂಥ ಪ್ರಮಾದಗಳು ಕಡಿಮೆಯಾಗುತ್ತವೆ. "ಬೆಂಗಳೂರು ಕನ್ನಡದ ರಾಜಧಾನಿ; ದಕ್ಷಿಣದ ಆರೋಗ್ಯ ಧಾಮ". "ಇಲ್ಲಿ ಕಲಾಕೌಶಲವಿದೆ; ಸಾಹಿತ್ಯ ಸಂಸ್ಕೃತಿಯಿದೆ; ಪಾಂಡಿತ್ಯ ಪ್ರತಿಭೆಯಿದೆ-ಏನೆಲ್ಲವೂ ಇದೆ!" ಎಂದು ಅವರು ಅವರ ಭಾಷಣದಲ್ಲಿ ಪ್ರಶಂಸಿಸುವ ಬೆಂಗಳೂರು ನಗರದಲ್ಲಿ ತಮ್ಮ ಮಠದ ಇತಿಹಾಸವನ್ನು ಬಲ್ಲವರೂ ಇರುಹುದೆಂಬುದನ್ನು ಅರಿಯದಾದರಲ್ಲಾ!

ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಅವರ ಬೆಂಗಳೂರು ಭಾಷಣದಲ್ಲಿ ಇನ್ನೊಂದು ಐತಿಹಾಸಿಕ ಪ್ರಮಾದವನ್ನು ಮಾಡಿರುತ್ತಾರೆ. ಮುರಿಗೆಯ ಶಾಂತವೀರರ ಗುರು ಕಟ್ಟಿಗೆಹಳ್ಳಿ ಸಿದ್ಧವೀರಸ್ವಾಮಿಗಳೆಂದು ಹೇಳಿರುತ್ತಾರೆ. 'ನಿರಂಜನವಂಶ ರತ್ನಾಕರ'ದಲ್ಲಿ ಸೂಚಿಸಿರುವ ನಿರಾಭಾರಿ ಪರಂಪರೆಯಲ್ಲಿ ಕಟ್ಟಿಗೆಹಳ್ಳಿ ಸ್ವಾಮಿಗಳು ಇಪ್ಪತ್ತೆ್ರೖದನೆಯವರು. ಅದು ಅವರ ಕಾಲವನ್ನು ಹೇಳುವುದಿಲ್ಲ. ಈ ನಿರಾಭಾರಿ ಪರಂಪರೆಯಲ್ಲಿ ಮುರಿಗೆಯ ಶಾಂತವೀರರು ಕಂಡುಬರುವುದಿಲ್ಲ. ಆದರೆ ಅವರು ಬೇರೊಬ್ಬ ಕಟ್ಟಿಗೆಹಳ್ಳಿ ಸ್ವಾಮಿಗಳ ಶಿಷ್ಯವೃಂದದಲ್ಲಿದ್ದರೆಂದು ಅರಿಯಬಹುದು. ಕಟ್ಟಿಗೆಹಳ್ಳಿ ಸ್ವಾಮಿಗಳ ತರುವಾಯ ತೋಂಟದ ಸಿದ್ಧಲಿಂಗರು ಆ ಪರಂಪರೆಯ ಶಿವಾನುಭವ ಪಟ್ಟಭದ್ರರಾದರೆಂದು "ನಿರಂಜನವಂಶ ರತ್ನಾಕರ" ತಿಳಿಸುತ್ತದೆ. ಮುರಿಗಾ ಸ್ವಾಮಿಗಳೊಂದಿಗೆ ಚಿತ್ರದುರ್ಗಕ್ಕೆ ಹೋದವರು ಇವರೇ. ಕಟ್ಟಿಗೆಹಳ್ಳಿ ಸ್ವಾಮಿಗಳ ಮಾತಿನಂತೆ ತೋಂಟದ ಸಿದ್ಧಲಿಂಗರು ವಯಸ್ಸಿನಲ್ಲಿ ಹಿರಿಯರೆಂದು ಹೇಳಬಹುದು. ಬಿಚ್ಚುಕತ್ತಿ ಭರಮಪ್ಪನಾಯಕನಿಗೆ ಪಟ್ಟವಾದದ್ದು ಕ್ರಿ. ಶ. ೧೬೮೯. ಆ ವೇಳೆಗೆ, ಮುರಿಗಾಸ್ವಾಮಿಗಳಿಗೆ ಸುಮಾರು ೩೦ ವರ್ಷವಾಗಿತ್ತೆಂದು ಹೇಳಿದರೂ, ತೋಂಟದ ಸಿದ್ಧಲಿಂಗರಿಗೆ ಸುಮಾರು ೫೦ ವರ್ಷವಾಗಿತ್ತೆಂದು ಹೇಳಬಹುದು. ಅದರಿಂದ ಅವರ ಕಾಲ ಸುಮಾರು ೧೬೫೦ ಎಂದು ಊಹಿಸಬಹುದು. ಎಂದ ಮೇಲೆ, ಅವರ ಗುರು ಕಟ್ಟಿಗೆಹಳ್ಳಿ ಸ್ವಾಮಿಗಳ ಕಾಲ ಕ್ರಿ. ಶ. ೧೬೭೫ ಎಂದು ನಿರ್ಧರಿಸಬಹುದು. "ಶ್ರೀಮದನಾದಿ ಅಲ್ಲಮಪ್ರಭು" ಎಂಬ ಗ್ರಂಥದಲ್ಲಿ ಶ್ರೀ ಶಿವಾನೇಕರೂ ಇದೇ ಅಭಿಪ್ರಾಯವನ್ನು ಸೂಚಿಸಿರುತ್ತಾರೆ. ಆದ್ದರಿಂದ ಕಟ್ಟಿಗೆಹಳ್ಳಿ ಸ್ವಾಮಿಗಳ ಕಾಲ ಕ್ರಿ. ಶ. ೧೬೫೦ ರಿಂದ ೧೬೭೫ ಎಂದು ಹೇಳ

ಬಹುದು. ಹಾಗಾದರೆ ಕ್ರಿ. ಶ. ೧೫೫೦ ರಿಂದ ೧೬೦೦ ರ ವರೆಗೆ ಬಾಳಿರ ಬಹುದಾದ ಮುರಿಗೆಯ ಶಾಂತವೀರರು ಕಟ್ಟಿಗೆಹಳ್ಳಿಯ ಸ್ವಾಮಿಗಳ ಶಿಷ್ಯರಾಗಿರಲು ಸಾಧ್ಯವಿಲ್ಲ.

"ನಮ್ಮ ಪೀಠದ ಸಮಗ್ರ ಚರಿತ್ರೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಪರಿಶೋಧಿಸಿ, ಪ್ರಕಟಿಸುವ ಕಾರ್ಯವನ್ನು ನಾವು ಕೈಕೊಂಡಿದ್ದೇವೆ. ಅದರಲ್ಲಿ ಎಲ್ಲತರಹದ ಆಕ್ಷೇಪವಿಕ್ಷೇಪಗಳ ಸಮೀಕ್ಷೆಯನ್ನು ಸೂಕ್ಷ್ಮವಾಗಿ ಮಾಡಲಾಗುವುದು. ಮುಖ್ಯವಾಗಿ, ಚನ್ನಬಸವಣ್ಣನವರು ಉಳವಿಯ ಮಹಾಮನೆಯನ್ನು ಸೇರುವ ಮುನ್ನ, ಶಿಖಾಶೈಲ, ಸುವರ್ಣಸಿಂಹಾಸನ–ಇವುಗಳನ್ನು ವಜೀರ ಮಲ್ಲೂಖಾನನ ಕೈಯಲ್ಲಿ ಕೊಟ್ಟರೆ ? ಮಲ್ಲೂಖಾನನು ಯಾರು ? ಆಗ ದಿಲ್ಲಿಯನ್ನು ಯಾರು ಆಳುತ್ತಿದ್ದರು ? ಶಿಖಾಶೈಲವೆಂದರೆ ಏನು ? ಕರ್ತೃಗಳು ಅವುಗಳನ್ನು ಯಾವ ಬಾಡಸಹನಿಂದ ತಿರುಗಿ ತೆಗೆದುಕೊಂಡುಬಂದರು ? ಈ ಮೊದಲಾದ ಐತಿಹಾಸಿಕ ಸಮಸ್ಯೆಗಳನ್ನು ಪರಿಹರಿಸಲಾಗುವುದು". ಎಂದು ಶ್ರೀ ಮಲ್ಲಿಕಾರ್ಜುನಸ್ವಾಮಿಗಳು ಅವರ ಬೆಂಗಳೂರು ಭಾಷಣದಲ್ಲಿ ಭರವಸೆಯಿತ್ತಿದ್ದಾರೆ. ಅಲ್ಲದೆ, "ಇನ್ನೊಂದು ಮಹತ್ವವಿಷಯವೆಂದರೆ ಇದೇ ನಗರದಲ್ಲಿ ನಮ್ಮ ಗುರುಗಳು, ಮೂರು ವರ್ಷಗಳ ಹಿಂದೆ (೧೪-೫-೧೯೬೪) ಸಮಾಜ ಪ್ರಮುಖರ ಸಮ್ಮುಖದಲ್ಲಿ ನಮ್ಮನ್ನು ಚುನಾಯಿಸಿ ಉತ್ತರಾಧಿಕಾರದ ವ್ಯವಸ್ಥೆಯನ್ನು ಪೂರ್ಣಗೊಳಿಸಿದರು !" ಎಂದೂ ಹೇಳಿದ್ದಾರೆ. ಪಟ್ಟಾಧಿಕಾರ ಭಾಷಣದಲ್ಲಿ ಅವರು ಹೇಳಿರುವ ಚುನಾವಣೆಯ ರೀತಿಯೇ ಬೇರೆ ! ಯಾವುದನ್ನು ಸರಿಯೆಂದು ನಂಬೋಣ ! ಈ ಗ್ರಂಥದ ೧೩೨ನೆಯ ಪುಟದಲ್ಲಿ ಶ್ರೀ ಜಯದೇವ ಸ್ವಾಮಿಗಳವರ ಅಭಿಪ್ರಾಯವನ್ನು ಚುನಾವಣೆಯ ವಿಚಾರದಲ್ಲಿ ಸೂಚಿಸಿರುತ್ತೇವೆ. "ಹಿಂದಣ ಸ್ವಾಮಿಗಳ ಅನುಮತಿಯಿಂದ ಉತ್ತರಾಧಿಕಾರಿಯ ಚುನಾವಣೆ ನಡೆಯಬೇಕಾಗಿಲ್ಲ. ಸಮಾಜದವರೇ ಉತ್ತರಾಧಿಕಾರಿಯನ್ನು ಚುನಾಯಿಸಬೇಕು"ಎಂದು ಶ್ರೀ ಜಯದೇವ ಸ್ವಾಮಿಗಳು ಸಂದೇಹಕ್ಕೆ ಆಸ್ಪದವಿಲ್ಲದಂತೆ ತಿಳಿಸಿರುತ್ತಾರೆ. ಒಂದು ವೇಳೆ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳ ಚುನಾವಣೆಯನ್ನು ಸಮಾಜವೇ ಸಾರ್ವಜನಿಕವಾಗಿ ನಡೆಸಿದ್ದರೆ, ಅದಕ್ಕೆ ಯಾರ ಆಕ್ಷೇಪಣೆಯೂ ಇಲ್ಲ. ಯಾರು ಯಾರು ಅಭ್ಯರ್ಥಿಗಳಾಗಿದ್ದರು ! ಸಾರ್ವಜನಿಕ ಪ್ರಕಟಣೆಯ ಮೂಲಕ ಅರ್ಹರಾದ ಉಮೇದುವಾರರನ್ನು

ಸ್ಥಾಪಿಸಲಾಗಿತ್ತೇ ? ಚುನಾವಣೆಯ ಸಮಿತಿ ಏರ್ಪಟ್ಟಿತ್ತೇ ? ಅಖಂಡ ವೀರಶೈವ ಸಮಾಜದ ಪ್ರಾತಿನಿಧ್ಯ ಆ ಸಮಿತಿಯಲ್ಲಿತ್ತೇ ? ಸಮಿತಿ ಪ್ರತಿಯೊಬ್ಬ ಅಭ್ಯರ್ಥಿಯನ್ನೂ ಕರೆಯಿಸಿ ಅವರವರ ಯೋಗ್ಯತಾಸಿದ್ಧಿಯನ್ನು ಪರಿಶೀಲಿಸಿ ನಿರ್ಣಯಿಸಿತೇ ? ಆ ವರದಿಯನ್ನು ಸರ್ಕಾರಕ್ಕೆ ಕಳಿಸಿತೇ ? ಅನಂತರ ತೀರ್ಮಾನಿಸಲಾಯಿತೆ ? ಎಂಬ ಅನೇಕ ಅಂಶಗಳ ವಿಚಾರದಲ್ಲಿ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಏನನ್ನೂ ಹೇಳಿಲ್ಲ. ಈಗ ಬೆಂಗಳೂರು ಭಾಷಣದಲ್ಲಿ ಆ ವಿಚಾರಗಳನ್ನು ಹೇಳಬೇಕಾಗಿಯೂ ಇಲ್ಲ. ಎಂದಮೇಲೆ, ಅವರ ಚುನಾವಣೆಯನ್ನು ಕುರಿತು ಮೂರು ವರ್ಷವಾದಮೇಲೆ, ಬೆಂಗಳೂರು ಭಾಷಣದಲ್ಲಿ ಪುನಃ ಅದೇಕೆ ಪ್ರಸ್ತಾಪ ಮಾಡಿದರೋ ನಮಗೆ ತಿಳಿಯದು ! ಬಹುಶಃ ಅವರು ಶೂನ್ಯ ಸಿಂಹಾಸನದ ಸಿಂಹಸ್ವಪ್ನವನ್ನು ಕಂಡರೇನೋ ! ತಮ್ಮ ಮಠದ ವಿಚಾರದಲ್ಲಿ ಆಕ್ಷೇಪ ವಿಕ್ಷೇಪಗಳಿವೆಯೆಂಬುದನ್ನು ಅವರು ಮನಗಂಡಿದ್ದಾರೆ. ಇವರ ಕಾಲದಲ್ಲಿಯಾದರೂ ಚಿತ್ರದುರ್ಗದ ವಿರಕ್ತಮಠದ ನಿಜಚರಿತ್ರೆ ಬೆಳಕಿಗೆ ಬಂದರೆ ಶ್ರೀ ಮಠದ ಕೀರ್ತಿ ದಿಗಂತವಿಶ್ರಾಂತವಾದೀತು ! ಇಂಥ ಅಮೌಲ್ಯ ಸೇವೆ ಇವರಿಂದ ನಡೆಯಲಿ ಎಂದು ಹಾರೈಸುತ್ತೇವೆ. ಅದನ್ನು ನೋಡಿ, ಈ ಮಠದ ವಿಚಾರದಲ್ಲಿ ನಮಗಿರುವ ಇತಿಹಾಸಜ್ಞಾನವನ್ನು ವೃದ್ಧಿಪಡಿಸಿಕೊಳ್ಳುತ್ತೇವೆ; ಅಭಿಪ್ರಾಯಗಳನ್ನು ತಿದ್ದಿಕೊಳ್ಳುತ್ತೇವೆ. *"ಶೂನ್ಯ ಸಿಂಹಾಸನ" ಗ್ರಂಥದ ಆಕ್ಷೇಪವಿಕ್ಷೇಪಗಳನ್ನು 'ಕಾಕತಾಳನ್ಯಾಯದಂತೆ' ಶ್ರೀ ಮಲ್ಲಿಕಾರ್ಜುನಸ್ವಾಮಿಗಳು 'ಪರೋಕ್ಷಜ್ಞಾನ'ದಿಂದ ಅರಿತು ತಮ್ಮ ಅಭಿಪ್ರಾಯಗಳನ್ನು ಭಾಷಣದಲ್ಲಿ ವ್ಯಕ್ತಪಡಿಸಿದಂತಿದೆ ! ನಮ್ಮ ನಿರೀಕ್ಷೆ ನಿಜವಾಯಿತು ! ಶ್ರೀ ಮಠದ 'ಸಹಕಾರ ಮುದ್ರಣ' ಮನೋಭಾವ ಪರಿಸ್ಫುಟವಾಯಿತು ! ಇದು ಶುಭ ಸೂಚನೆ !

ಶ್ರೀ ಮಲ್ಲಿಕಾರ್ಜುನಸ್ವಾಮಿಗಳು ತಿಳಿಸಿರುವಂತೆ ಮುರಿಗೆಯ ಶಾಂತವೀರ ಸ್ವಾಮಿಗಳು ಚಿತ್ರದುರ್ಗದ ವಿರಕ್ತಮಠದ ಪೀಠಾಧಿಕಾರಿಗಳಲ್ಲ. ಅವರ ಶಿಷ್ಯ ಪರಂಪರೆಯ ಇಮ್ಮಡಿ ಮುರಘಾಸ್ವಾಮಿಯೇ ಈ ಮಠದ ಮೂಲಪುರುಷ. ಚಿತ್ರದುರ್ಗದ ಮಠ ಕ್ರಿ. ಶ. ಸುಮಾರು ೧೭೦೧ ರಲ್ಲಿ ನಿರ್ಮಾಣವಾಯಿತು. ಮುರಿಗೆಯ ಶಾಂತವೀರ ಸ್ವಾಮಿಗಳು ಆನಂದಪುರ ಮುರಘಾಮಠದ ಗುರು

* ನಿರಂಜನ – ಗ್ರಂಥದಲ್ಲಿ ವಿವರಗಳನ್ನು ನಿರೀಕ್ಷಿಸಿರಿ.

ಪರಂಪರೆಯಲ್ಲಿ ಕಂಡುಬರುತ್ತಾರೆ. ಅವರ ಕಾಲ ಕ್ರಿ. ಶ. ೧೫೭೦. ಕಟ್ಟಿಗೆ ಹಳ್ಳಿಯ ಸ್ವಾಮಿಗಳಾದಮೇಲೆ ಮುರಿಗೆಯ ಶಾಂತವೀರ ಸ್ವಾಮಿಗಳು ಆನಂದ ಪುರ ಮುರಘಾಮಠದ ಸ್ವಾಮಿಗಳಾದರು. ಅಲ್ಲಿಂದ ಬಹಳ ಕಾಲಾನಂತರ ಚಿತ್ರದುರ್ಗದ ಇಮ್ಮಡಿ ಗುರುಸಿದ್ಧಸ್ವಾಮಿಗಳು ಆನಂದಪುರ ಮುರಘಾಮಠದ ಸ್ವಾಮಿಗಳಾದರು. ಆಗ ಆನಂದಪುರ ಮಠದಿಂದಲೇ ಸ್ವಾದಿ ಚನ್ನವೀರ ದೇವರನ್ನು ಕಳಿಸಿ, ಚಿತ್ರದುರ್ಗ ವಿರಕ್ತಮಠಕ್ಕೆ ಪಟ್ಟಗಟ್ಟಿದರು. ಮುರಿಗೆಯ ಶಾಂತವೀರ ಸ್ವಾಮಿಗಳ ಶಿಷ್ಯಪರಂಪರೆಯಲ್ಲಿ ಒಬ್ಬರಾದ ಇಮ್ಮಡಿ ಮುರಿಗಾ ಸ್ವಾಮಿಗಳಿಗೆ ರುದ್ರಪ್ಪ ಮತ್ತು ಗುರುಸಿದ್ಧಸ್ವಾಮಿ ಎಂಬ ಬೇರೆ ಬೇರೆ ಹೆಸರುಗಳಿದ್ದುವು. ಇವರು ಕಟ್ಟಿಗೆಹಳ್ಳಿ ಸ್ವಾಮಿಗಳ ಆಗ್ರಹಕ್ಕೆ ಪಾತ್ರರಾಗಿ, ಇಸಳೂ ರಿನಿಂದ ಹೊರಟುಬಂದು ಚಿತ್ರದುರ್ಗದ ಪಾಳೆಯಗಾರರ ಆಶ್ರಯವನ್ನು ಪಡೆದ ರೆಂಬುದು ನಿರ್ವಿವಾದ. ಮೇಲುದುರ್ಗದ ಮಠವನ್ನು ಮುರಿಗಿಯಸ್ವಾಮಿ ಗಳಿಗಾಗಿ ಪಾಳೆಯಗಾರ ಕಟ್ಟಿಸಲಿಲ್ಲ. ಶ್ರೀ ಮಲ್ಲಿಕಾರ್ಜುನಸ್ವಾಮಿಗಳು ಅವರ ಪಟ್ಟಾಧಿಕಾರ ಭಾಷಣದಲ್ಲಿ ಇಮ್ಮಡಿ ಮುರಿಗಾಸ್ವಾಮಿಗಳೇ ಚಿತ್ರದುರ್ಗದ ವಿರಕ್ತಮಠದ ಮೊದಲನೆಯ ನಿರಾಭಾರಿಗಳೆಂದು ಹೇಳಿದ್ದಾರೆ. ಮೂರು ವರ್ಷವಾದಮೇಲೆ, ಇವರ ಇತಿಹಾಸಪ್ರಜ್ಞೆ ಪ್ರಫುಲ್ಲವಾಯಿತೇನೋ ! ಮುರಿಗೆಯ ಶಾಂತವೀರರೇ ಚಿತ್ರದುರ್ಗದ ಮಠದ ಮೂಲಸ್ವಾಮಿಗಳೆಂದಿರುತ್ತಾರೆ ! ಮೇಲು ದುರ್ಗದ ಮಠವನ್ನು ಪಾಳೆಯಗಾರ ಭರಮಪ್ಪನಾಯಕ ಮುರಿಗೆಯ ಶಾಂತ ವೀರ ಸ್ವಾಮಿಗಳಿಗಾಗಿಯೇ ಕಟ್ಟಿಸಿದನೆಂದು ತಿಳಿಸಿರುತ್ತಾರೆ. ಈ ಎರಡು ಅಂಶಗಳೂ ನಿರಾಧಾರ ! ಇತಿಹಾಸ ಇವುಗಳನ್ನು ಸಮರ್ಥಿಸುವುದಿಲ್ಲ. ಈ ಮಠದ ಮೂಲಪೀಠ ಆನಂದಪುರದಲ್ಲಿದೆ. ಅದರ ಚರಿತ್ರೆಯನ್ನು ಅವಲೋಕಿ ಸಿದರೆ, ಚಿತ್ರದುರ್ಗ ವಿರಕ್ತಮಠದ ಚರಿತ್ರೆಯಮೇಲೆ ಹೆಚ್ಚು ಬೆಳಕು ಬೀಳುತ್ತದೆ ಯೆಂಬುದರಲ್ಲಿ ಸಂದೇಹವಿಲ್ಲ.

ಆನಂದಪುರ ಮಠ ಮುರಘಸಮಯದ ಮಠಗಳಲ್ಲಿ ಅತ್ಯಂತ ತೇಜಸ್ವಿ ಯಾಗಿದೆ. ಈ ಸಮಯದ ಕೇಂದ್ರ ಅಥಣಿ. ಅಲ್ಲಿಂದ ಮುರಘಾಸಮಯ ತನ್ನ ಬೆಳಕನ್ನು ಬೀರಿತು. ಇದು ಕೆಳದಿಯ ವೀರಶೈವರಾಜರ ಆಶ್ರಯದಲ್ಲಿ ತನ್ನ ಮಠವನ್ನು ಆನಂದಪುರದಲ್ಲಿ ಸ್ಥಾಪನೆ ಮಾಡಿಕೊಂಡಿತು. ಕ್ರಿ ಶ. ೧೫೭೦ ರಲ್ಲಿದ್ದ ಮುರಿಗೆಯ ಶಾಂತವೀರಸ್ವಾಮಿಯ ಕಾಲದಲ್ಲಿ ಮುರಘಸಮಯ

ಸಹ್ಯಾದ್ರಿ ಶ್ರೇಣಿಯಲ್ಲಿ ವ್ಯಾಪಿಸಿಸಿತು. ಸುಮಾರು ಹನ್ನೆರಡನೆಯ ಶತಮಾನ ದಿಂದಲೂ ಶಿವಮೊಗ್ಗ ಜಿಲ್ಲೆಯಲ್ಲಿ ತುಂಗಭದ್ರಾ ನದಿಯ ತೀರದಲ್ಲಿ ಬೆಕ್ಕಿನಕಲ್ಲು ಮಠ ಪ್ರಸಿದ್ಧವಾಗಿತ್ತು. ಅದು ಜಂಗಮಮಠ. ಆ ಪ್ರದೇಶ ಮಹಾ ಪುಣ್ಯಾ ರಣ್ಯವಾಗಿತ್ತು. ಅಲ್ಲಿಯೇ ಹಿಂದೆ ಜಮದಗ್ನಿ ಮಹರ್ಷಿಯ ಆಶ್ರಮವಿತ್ತೆಂದು ಪುರಾಣಗಳಲ್ಲಿ ಉಕ್ತವಾಗಿದೆ. ಜಮದಗ್ನಿಯ ಹೆಂಡತಿ ರೇಣುಕಾದೇವಿಯನ್ನು ತನ್ನ ಮಗ ಪರಶುರಾಮ ಕೊಂದಮೇಲೆ, ಆ ಮಹರ್ಷಿ ತುಂಗಭದ್ರಾ ನದಿಯ ತೀರದ ಈ ಪುಣ್ಯಾರಣ್ಯದಲ್ಲಿ ಬಹಳಕಾಲ ತಪಸ್ಸು ಮಾಡಿದನಂತೆ! ಸೌಂದತ್ತಿಯ ಸಮೀಪದಲ್ಲಿರುವ ಎಲ್ಲಮ್ಮನಗುಡ್ಡದ ಪ್ರಾಂತದಲ್ಲಿ ಜಮದಗ್ನಿ ಋಷಿಯ ಆಶ್ರಮ ವಿತ್ತು. ಅಲ್ಲಿ ಈಗಲೂ ಎಲ್ಲಮ್ಮನ ದೇವಾಲಯವಿದೆ; ಜಮದಗ್ನಿ ಋಷಿಯ ಗುಡಿ ಇದೆ. ಪರಶುರಾಮನ ದೇವಾಲಯವೂ ಅಲ್ಲಿದೆ. ಆ ಪ್ರದೇಶದಲ್ಲಿಯೇ ಪರಶುರಾಮ ತನ್ನ ತಂದೆಯ ಆಜ್ಞೆಯಂತೆ, ತನ್ನ ತಾಯಿ ರೇಣುಕಾದೇವಿ ಯನ್ನು ಸಂಹರಿಸಿದನೆಂದು ಹೇಳುತ್ತಾರೆ. ರೇಣುಕೆ ಶಕ್ತಿದೇವತೆ. ಅವಳನ್ನು ಎಲ್ಲಮ್ಮನೆಂದೂ ಕರೆಯುತ್ತಾರೆ. ಪರಶುರಾಮನ ಪ್ರಾರ್ಥನೆಯಂತೆ ಜಮದಗ್ನಿ ತನ್ನ ತಪೋಬಲದಿಂದ ಹೆಂಡತಿಯನ್ನು ಬದುಕಿಸಿದನಂತೆ! ಎಲ್ಲಮ್ಮನಗುಡ್ಡದ ಪ್ರಾಂತ ನಾಥಸಿದ್ಧರ ಆವಾಸಸ್ಥಾನವಾಗಿತ್ತು. ಅಲ್ಲಿಗೆ ಅತಿ ಸಮೀಪದಲ್ಲಿಯೇ ಮಲಪ್ರಭಾ ನದಿಯ ತೀರದಲ್ಲಿ ಸಿದ್ಧಾಚಲವಿದೆ. ಎಲ್ಲಮ್ಮನ ಗುಡ್ಡದಲ್ಲಿ ಜೋಗಿನಾಥ ಮತ್ತು ಏಕನಾಥಸಿದ್ಧರ ದೇವಾಲಯಗಳಿವೆ. ಹನ್ನೆರಡನೆಯ ಶತಮಾನದಲ್ಲಿ ಈ ನಾಥಪಂಥ ವೀರಶೈವದಲ್ಲಿ ಮರೆಯಾಗುತ್ತಿತ್ತು. ಅದೇ ಕಾಲದಲ್ಲಿಯೇ ಬೆಕ್ಕಿನಕಲ್ಲು ಮಠ ಅಲ್ಲಮಪ್ರಭು ಸಂಪ್ರದಾಯದ ಬಳಿವಿಡಿದು ತುಂಗಭದ್ರಾ ತೀರದಲ್ಲಿ ಸ್ಥಾಪನೆಯಾಯಿತು. ಆದರೆ ಈ ಮಠ ಸುಮಾರು ೧೫ ನೆಯ ಶತಮಾನದಲ್ಲಿ ನಿರ್ಮಾಣವಾಯಿತು. ಉತ್ತರದ ಕಲ್ಯಾಣದಿಂದ ಬಂದ ಪ್ರಭುಸ್ವಾಮಿ ಸಂಪ್ರದಾಯದ ಗಂಗಾಧರ ಶಿವಯೋಗಿ ಎಂಬುವರು ಇಲ್ಲಿ ತಪಸ್ಸು ಮಾಡಿದರು. *ಈ ಶಿವಯೋಗಿಯ ತರುವಾಯ ಬೆಕ್ಕಿನಕಲ್ಲು ಮಠದ ಗುರುಪರಂಪರೆಯಲ್ಲಿ ಶಬ್ದಮಣಿಸ್ವಾಮಿ, ತೋಂಟದ ಸಿದ್ಧಲಿಂಗಸ್ವಾಮಿ, ಸಿಕ್ಷರಬೋಳಬಸವಸ್ವಾಮಿ, ಗುಮ್ಮಳಾಪುರದ ಸಿದ್ಧಲಿಂಗಸ್ವಾಮಿ, ಗೂಳೂರು ಗುರುಸಿದ್ಧಸ್ವಾಮಿ, ಗಗನದಾರ್ಯಸ್ವಾಮಿ, ಕಟ್ಟಿಗೆಹಳ್ಳಿಸ್ವಾಮಿ, ಮುರಿಗೆಯ

* ಕೆಳದಿಯ ನಾಯಕನ ಶಾಸನ.

ಶಾಂತವೀರಸ್ವಾಮಿ, ಇಮ್ಮಡಿ ಗುರುಸಿದ್ಧಸ್ವಾಮಿ, ತಾರೀಕಟ್ಟೆಮಠದ ಬಸವ ಲಿಂಗಸ್ವಾಮಿ, ನ್ಯಾಮತಿ ಗದ್ದುಗೆಮಠದಸ್ವಾಮಿ, ಹಾರನಹಳ್ಳಿ ಚೌಕಿಮಠದ ಸಿದ್ಧಲಿಂಗಸ್ವಾಮಿ, ಶಾಂತವೀರಸ್ವಾಮಿ, ಬೆಕ್ಕಿನಕಲ್ಲು ಮಠದ ಗುರುಬಸವ ಸ್ವಾಮಿ, ಆನಂದಪುರ-ಗವಿಮಠದ ಮುದ್ದುವೀರಸ್ವಾಮಿ, ಆನಂದಪುರ ಮಠದ ಲಿಂಗಸ್ವಾಮಿ, ಇವರೆಲ್ಲಾ ಆನಂದಪುರ ಮುರಘಾಮಠದ ಸ್ವಾಮಿಗಳಾಗಿದ್ದರು. ಈಗ ಜಗದ್ಗುರು ಶ್ರೀ ಸಚ್ಚಿದಾನಂದ ಮುರಘರಾಜೇಂದ್ರ ಸ್ವಾಮಿಗಳು ಆನಂದ ಪುರ ಮುರಘಾಮಠದ ಸಿರಾಭಾರಿ ಪಟ್ಟಭದ್ರರಾಗಿರುತ್ತಾರೆ. ಆನಂದಪುರ ವಿರಕ್ತಮಠ ಪ್ರಶಾಂತ ಸನ್ನಿವೇಶದಲ್ಲಿ ಕಂಗೊಳಿಸುತ್ತಿದೆ.

ಮುರಿಗೆಯ ಶಾಂತವೀರಸ್ವಾಮಿಯ ಕಾಲ ಕ್ರಿ. ಶ. ಸುಮಾರು ೧೬೫೦ ರಿಂದ ೧೬೦೦. ಅವರ ಕಾಲದಲ್ಲಿ ಪ್ರಾಚೀನ ಬೆಕ್ಕಿನಕಲ್ಲು ಮಠ ಮುರುಘ ಸಮಯದ ವಿರಕ್ತ ಮಠವಾಯಿತು. ಅವರಾದಮೇಲೆ ಕ್ರಿ. ಶ. ಸುಮಾರು ೧೭೫೫ ರಲ್ಲಿ ಇಮ್ಮಡಿ ಗುರುಸಿದ್ಧಸ್ವಾಮಿಗಳು ಚಿತ್ರದುರ್ಗ ವಿರಕ್ತ ಮಠದಿಂದ ಬಂದು ಆನಂದಪುರಂ ಮುರಘಾಮಠದ ಸ್ವಾಮಿಗಳಾದರು. ಆದ್ದರಿಂದ ಮುರಿಗೆಯ ಶಾಂತವೀರಸ್ವಾಮಿಗಳ ತರುವಾಯ ಸುಮಾರು ೧೫೫ ವರ್ಷಗಳ ಕಾಲ ಇಮ್ಮಡಿ ಗುರುಸಿದ್ಧಸ್ವಾಮಿಗಳ ಕಾಲದವರೆಗೆ ಯಾರು ಯಾರು ಪೀಠಾ ಧಿಕಾರಿಗಳಾಗಿದ್ದರೆಂಬುದನ್ನು ತಿಳಿಯಬೇಕಾಗಿದೆ. ಈ ಗುರುಪಟ್ಟಾವಳಿಯನ್ನು ನೋಡಿದರೆ ಆನಂದಪುರ ಮುರಘಾಮಠ ಚಿತ್ರದುರ್ಗದ ವಿರಕ್ತಮಠಕ್ಕಿಂತಲೂ ಅತ್ಯಂತ ಪ್ರಾಚೀನವಾದುದೆಂದೂ ಅದೇ ಮೂಲ ಮುರುಘಾಸಮಯ ಮಠ ವೆಂದೂ ನಿರ್ಧರವಾಗಿ ತಿಳಿಯಬಹುದು. ಚಿತ್ರದುರ್ಗದ ಜಯದೇವಸ್ವಾಮಿಗಳು ೧೯೩೩ ನೆಯ ಇಸವಿಯಲ್ಲಿ ಆನಂದಪುರ ಮುರಘಾಮಠದಲ್ಲಿ ಲಿಂಗೈಕ್ಯ ಶ್ರೀ ಲಿಂಗಮಹಾಸ್ವಾಮಿಗಳ ಪಾದಪೂಜೆಯನ್ನು ಕರ್ತೃಗದ್ದುಗೆಯಲ್ಲಿ ನೆರವೇ ರಿಸಿದರೆಂದು ಆ ಮಠದ ದಾಖಲೆಯಿಂದ ಗೊತ್ತಾಗುತ್ತದೆ. ಬೆಕ್ಕಿನಕಲ್ಲು ಮಠ ಶಿವಮೊಗ್ಗ ನಗರದಿಂದ ಸುಮಾರು ಒಂದು ಹರಿದಾರಿ ದೂರದಲ್ಲಿದೆ. ಕೆಳದಿ ನಾಯಕನು ಬರೆಯಿಸಿರುವ ಶಾಸನದಮೇರೆಗೆ ಬೆಕ್ಕಿನಕಲ್ಲು ಮಠವೇ ಈ ಮೂಲಪೀಠ. ಮುರಿಗೆಯ ಶಾಂತವೀರ ಸ್ವಾಮಿಗಳು (ಕ್ರಿ.ಶ.೧೬೫೦) ಈ ಪೀಠದ ಗುರುವಾಗಿದ್ದರು. ಅವರ ಕಾಲದಲ್ಲಿ ಈ ಜಂಗಮಮಠ ಮುರುಘಾ

ಮುಯುದ ವಿರಕ್ತಮಠವಾಯಿತು. *ಆನಂದಪುರ ಮುರಘಾಮಠ ಶಾಲಿವಾಹನ ಶಕ ೧೫೪೨ ನೆಯ ಧಾತುನಾಮ ಸಂವತ್ಸರ ಮಾರ್ಗಶಿರ ಶುದ್ಧ ತ್ರಯೋದಶಿ ಎಂದರೆ ಕ್ರಿ. ಶ. ೧೬೨೦ ರಲ್ಲಿ ನಿರ್ಮಾಣವಾಯಿತು. ಮುರಿಗೆಯ ಶಾಂತವೀರಸ್ವಾಮಿಗಳ ತರುವಾಯ ಈ ಮಠ ನಿರ್ಮಾಣವಾಗುವವರೆಗೆ ಸುಮಾರು ೧೫೫ ವರ್ಷಕಾಲ ಮುರಘಾಸಮಯ ಆನಂದಪುರ ಮಠದಲ್ಲಿ ಪ್ರವರ್ಧಿಸಿತು. ಇಮ್ಮಡಿ ಗುರುಸಿದ್ಧಸ್ವಾಮಿಗಳು ಚಿತ್ರದುರ್ಗದಿಂದ ಬಂದು ಕ್ರಿ. ಶ. ೧೭೨೫ ರಲ್ಲಿ ಆನಂದಪುರಂ ಮೂಲಪೀಠದ ಸ್ವಾಮಿಗಳಾದರು. ಅಲ್ಲಿಗೆ ಆನಂದಪುರ ಮುರಘಾಮಠ ನಿರ್ಮಾಣವಾಗಿ ಸುಮಾರು ೫೦ ವರ್ಷವಾಗಿತ್ತೆಂದು ನಿರ್ಣಯವಾಗಿ ಹೇಳಬಹುದು. ಚಿತ್ರದುರ್ಗದ ವಿರಕ್ತಮಠ ಕ್ರಿ. ಶ. ೧೭೧೫ ರಲ್ಲಿ ನಿರ್ಮಾಣವಾಯಿತು. ಕೆಳದಿಯ ಇಮ್ಮಡಿ ಸೋಮಶೇಖರನಾಯಕ ಚಿತ್ರದುರ್ಗದಿಂದ ಇಮ್ಮಡಿ ಗುರುಸಿದ್ಧ ಮುರಘಾಸ್ವಾಮಿಗಳನ್ನು ಕರೆಯಿಸಿ ಕೊಂಡು ಅವರಿಗೆ ತನ್ನ ರಾಜ್ಯದ ಆನಂದಪುರ ಮುರಘಾಮಠದ ಅಧಿಕಾರವನ್ನು ವಹಿಸಿದನು. ಚಿತ್ರದುರ್ಗದ ಪಾಳೆಯಗಾರರು ಮುರಘಾಮಠವನ್ನು ಕಟ್ಟಿಸಿ ಗ್ರಾಮ ಉಂಬಳಿಯನ್ನೂ ಆ ಮಠಕ್ಕೆ ಬಿಟ್ಟುಕೊಟ್ಟಂತೆ ನಮಗೆ ಶಾಸನಾಧಾರಗಳು ದೊರೆತಿಲ್ಲ. ಹಾಗೇನಾದರೂ, ಶಾಸನಾಧಾರವಿದ್ದರೆ, ನಮ್ಮ ಅಭಿಪ್ರಾಯ ವನ್ನು ಮಾರ್ಪಡಿಸಿಕೊಳ್ಳುತ್ತೇವೆ. ಚಿತ್ರದುರ್ಗದ ವಿರಕ್ತಮಠ ಆನಂದಪುರ ಮೂಲ ಮುರಘಾಮಠದಿಂದ ಪ್ರತ್ಯೇಕ ಶಾಖೆಯಾಗಿಯೇ ಬರುತ್ತಿದೆಯೆಂಬು ದನ್ನು ಕೆಳದಿನಾಯಕನ ಶಾಸನದ ಆಧಾರದಿಂದ ನಿಶ್ಚಯಿಸಬಹುದು.

ಕೆಳದಿಯನಾಯಕರ ಕಾಲದಲ್ಲಿ ಆನಂದಪುರ ಅತ್ಯಂತ ಪ್ರಸಿದ್ಧ ನಗರವಾ ಗಿತ್ತು. ಸುಮಾರು ೧೦ ನೆಯ ಶತಮಾನದ ಚಾಲುಕ್ಯರ ಶಾಸನಗಳಲ್ಲಿ ಆನಂದಪುರದ ವಿಚಾರಗಳನ್ನು ಅರಿಯಬಹುದು. ಸುಮಾರು ೮ ನೆಯ ಶತ ಮಾನದಲ್ಲಿ ಅಂಧಾಸುರನೆಂಬುವನು ಇಲ್ಲಿ ಆಳಿದನೆಂದೂ, ಹೊಂಬುಚದ ಜಿನದತ್ತರಾಯ ಅವನನ್ನು ಜಯಿಸಿದನೆಂದೂ ಜೈನವಾಙ್ಮಯದಿಂದ ತಿಳಿದು ಬರುತ್ತದೆ. ಕೆಳದಿಯ ಒಂದನೆಯ ಸೋಮಶೇಖರನಾಯಕ ಈ ವನಪ್ರದೇಶ ದಲ್ಲಿ ತನ್ನ ಪ್ರೇಯಸಿಯೊಂದಿಗೆ ವಿಹರಿಸಿ ಆನಂದತುಂದಿಲ ಹೃದಯನಾದನಂತೆ!

*ಆಧಾರ: ಕೆಳದಿಯ ಸೋಮಶೇಖರನಾಯಕನು ಬರೆಯಿಸಿದ ತಾಮ್ರಶಾಸನ. ಈ ಶಾಸನ ಆನಂದಪುರಂ ಮುರಘಾಮಠದವರಲ್ಲಿದೆ.

ಆ ನೆನಪಿಗಾಗಿ ಅದನ್ನು ಆನಂದಪುರವೆಂದು ಕರೆದನೆಂದು ಹೇಳುತ್ತಾರೆ. ಅನಂತಪುರ ಅಲ್ಲಿಂದ ಮುಂದೆ ಆನಂದಪುರವಾಯಿತು. ಅವನೇ ಈ ಮನೋಹರ ವನಪ್ರದೇಶದಲ್ಲಿ ಮುರಘಾ ಮಠವನ್ನು ಕ್ರಿ. ಶ. ೧೬೭೦ ರಲ್ಲಿ ಕಟ್ಟಿಸಿದನೆಂದು ಶಾಸನದಲ್ಲಿ ಹೇಳಿದೆ. ತುಂಗಾನದಿಯ ತೀರದಲ್ಲಿದ್ದ ಬೆಕ್ಕಿನಕಲ್ಲುಮಠದ ಗುರುಪರಂಪರೆ ಆನಂದಪುರ ಮುರಘಾಮಠದಲ್ಲಿ ಮುಂದುವರಿಯಿತು. ಕ್ರಿ. ಶ. ೧೫೬೦ ರ ಸುಮಾರಿನಲ್ಲಿಯೇ ಮುರಿಗೆಯ ಶಾಂತವೀರಸ್ವಾಮಿಗಳು ಈ ಪೀಠಾಧೀಶ್ವರರಾಗಿದ್ದರು. ಬೆಕ್ಕಿನಕಲ್ಲು ಜಂಗಮಮಠ ಆಗಲೇ ಮುರಘಾ ಸಮಯದ ಮಠವಾಯಿತು. ಈಗ ಆನಂದಪುರಮಠವೇ ಪ್ರಧಾನಮಠವಾಗಿರುತ್ತದೆ. ಚಿತ್ರದುರ್ಗದ ವಿರಕ್ತಮಠದ ಹಿನ್ನೆಲೆಯಲ್ಲಿ ಆನುವಂಶಿಕ ಪಟ್ಟಾವಳಿಯೇನೂ ಇಲ್ಲ. ಅದು ನಿರಂಜ ವಂಶರತ್ನಾಕರ ಗ್ರಂಥವನ್ನು ತನ್ನ ಪುರಾವೃತ್ತ ದಾಖಲೆಯೆಂದು ಭಾವಿಸಿಕೊಂಡು, ಚನ್ನಬಸವಣ್ಣನವರ ತರುವಾಯ ಸುಮಾರು ೬೦೦ ವರ್ಷಗಳಾದಮೇಲೆ ಇಮ್ಮಡಿ ಮುರಘಾಸ್ವಾಮಿಯೇ ಶಿಖಾಪಟ್ಟದ ಮೂಲ ಪುರುಷನೆಂದು ಇತಿಹಾಸದಮೇಲೆ ಕಾವಿಯ ತೆರೆಯನ್ನು ಎಳೆದಿರುತ್ತದೆ. ಅಷ್ಟೇ ಅಲ್ಲ, ಮೂಲ ಶೂನ್ಯಸಿಂಹಾಸನವನ್ನೂ ಶಿಖಾಶೈಲಗಳನ್ನೂ (ಇವೆಲ್ಲಾ ಕಲ್ಪನೆ) ದೆಹಲಿಯ ದರ್ಬಾರಿನಿಂದ ಈ ಮಠ ಪಡೆಯಿತೆಂದು ತನ್ನ ಮಠದ ನಗಾರಿಯನ್ನು ತಾನೇ ಬಾರಿಸುತ್ತಿದೆ; ಕಹಳೆಯನ್ನು ಮೊಳಗಿಸುತ್ತಿದೆ. ಇದು "ಅಸಂಭವಂ ಹೇಮಮೃಗಸ್ಯಜನ್ಮಾತಥಾಪಿರಾಮೋ ಲುಲುಭೇ ಮೃಗಾಯ" ಎಂಬಂತಾಯಿತು! ಎಂದರೆ ಚಿನ್ನದಜಿಂಕೆ ಹುಟ್ಟುವುದು ಅಸಂಭವ. ಆದರೂ, ಶ್ರೀರಾಮ ಚಿನ್ನದ ಜಿಂಕೆಯನ್ನು ಅರಸುತ್ತ ಧಾವಿಸಿ ಭ್ರಾಂತಿಪಟ್ಟನು! ಶ್ರೀರಾಮಚಂದ್ರನೇ ಭ್ರಾಂತಿಗೊಳಗಾದನೆಂದಮೇಲೆ, ಇನ್ನುಳಿದ 'ನರಮಾನವ'ರ ಪಾಡೇನು! ಚಿತ್ರದುರ್ಗದ ವಿರಕ್ತ ಮುರಘಾಮಠ ಶೂನ್ಯಸಿಂಹಾಸನದ ಮೂಲಮಠವೆಂಬುದೂ, ಅದು ದೆಹಲಿಯಿಂದ ಶಿಖಾಶೈಲಗಳನ್ನು ಪಡೆಯಿತೆಂಬುದೂ ಭ್ರಾಂತಿ! ಮಹಾಭ್ರಾಂತಿ! ಈ ಮಠದ ಕೆಲವರು ವಂದಿಮಾಗಧರು ಆಗಾಗ ಈ ಮಾತನ್ನು ಹೇಳುತ್ತಾರೆ; ಈ ಮಠದ ನಗಾರಿಯನ್ನು ಹೊಡೆಯುತ್ತಾರೆ; ಕಹಳೆಯನ್ನು ಊದುತ್ತಾರೆ; ಪರಾಕು ಹೇಳುತ್ತಾರೆ! ವೀರಶೈವತತ್ತ್ವವನ್ನು ಅರಿಯದವರೂ, ಇತಿಹಾಸವನ್ನು ತಿಳಿಯದವರೂ ಈ ಮಠದ ಮಹಾದ್ವಾರದಲ್ಲಿ ನಿಂತು 'ಜೀಯಾ! ಹಸಾದ'! ಎನ್ನುತ್ತಾರೆ. ಇದರಿಂದ

ಕ್ಕೇನೂ ಅಗೌರವವಿಲ್ಲ; ಇತಿಹಾಸಕ್ಕೆ ಅಪಮಾನವಿಲ್ಲ. *ಅನೇಕ ಸಂದರ್ಭಗಳಲ್ಲಿ ಸರಿಯಾದ ತಿಳಿವಳಿಕೆಯಿಲ್ಲದ ವೀರಶೈವೇತರ 'ಬುದ್ಧಿವಂತರು' ಇಂಥ ಪ್ರಮಾದಗಳನ್ನು ಮಾಡುತ್ತಾರೆ. ಅದಿರಲಿ.

ಪಂಚಸಮಯಾಚಾರದ ಮಠಗಳಲ್ಲಿ ಚಿತ್ರದುರ್ಗದ ವಿರಕ್ತಮಠ ಪ್ರಧಾನ ಮಠವಲ್ಲ. ಆನಂದಪುರ ಮುರಘಾಮಠ ಪ್ರಮುಖಮಠ, ಬೃಹನ್ಮಠ! ...ಗಿಯುಶಾಂತವೀರಸ್ವಾಮಿ ಆನಂದಪುರ ಮುರಘಾ ಮಠದ ಪಟ್ಟವಲ್ಲರಿಯಲ್ಲಿದ್ದಾರೆ. ಚಿತ್ರದುರ್ಗ ವಿರಕ್ತಮಠದ ಪಟ್ಟಾವಳಿಯಲ್ಲಿ ಅವರ ಹೆಸರಿಲ್ಲ. ಅವನ್ನೇ ಚಿತ್ರದುರ್ಗದ ಮಠದ ಸಂಸ್ಥಾಪಕ ಇಮ್ಮಡಿ ಮುರಘಾಸ್ವಾಮಿಗಳೆಂದು ಅನೇಕರಂತೆ ಶ್ರೀ ಮಲ್ಲಿಕಾರ್ಜುನಸ್ವಾಮಿಗಳು ಭ್ರಮಾತ್ಮಕರಾಗಿದ್ದಾರೆ. ಆ ಭ್ರಮಾ ನಿವಾರಣೆಯನ್ನು ಅವರೇ ಮಾಡಿಕೊಳ್ಳಬೇಕು. ಇನ್ನೂ ಕೆಲವು ಭ್ರಮೆಗಳನ್ನು ಅವರು ಆಗಾಗ ವ್ಯಕ್ತಪಡಿಸುತ್ತಾರೆ. ಅವುಗಳಿಗೆಲ್ಲಾ ನಮ್ಮ ...ಪುಜನ' ಗ್ರಂಥದಲ್ಲಿ ಸಮಾಧಾನಗಳನ್ನು ಸೂಚಿಸಿರುತ್ತೇವೆ. ಆನಂದಪುರ ಮುರಘಾ ಬೃಹನ್ಮಠದ ಗುರುಪರಂಪರೆ ಉಜ್ವಲವಾದುದು. ಮಹಾಮಹಿಮರೂ ಮಹಾತಪಸ್ವಿಗಳೂ ಆ ಪೀಠದ ನಿರಾಭಾರಿಗಳಾಗಿದ್ದರು. ಅದೇ ಅನಾದಿ ಜಂಗಮ ವಿರಕ್ತಮಠ.

ಕೆಳದಿಯ ಎರಡನೆಯ ಸೋಮಶೇಖರನಾಯಕನು ಇಮ್ಮಡಿ ಗುರುಸಿದ್ಧಸ್ವಾಮಿಗಳನ್ನು ಚಿತ್ರದುರ್ಗದಿಂದ ಕರೆಯಿಸಿಕೊಂಡು ಆನಂದಪುರ ಮುರಘಾ ಮಠದಲ್ಲಿ ಪುನಃ ಅವರಿಗೆ ಶಿಖಾಪಟ್ಟವನ್ನು ಕಟ್ಟಿದನೆಂದು ಶಾಸನದಿಂದ ತಿಳಿಯುತ್ತದೆ. ಚಿತ್ರದುರ್ಗದ ಮಠವೇ ಮೂಲಪೀಠವಾಗಿದ್ದರೆ, ಆನಂದಪುರಮಠಕ್ಕೆ ಇಮ್ಮಡಿ ಗುರುಸಿದ್ಧಸ್ವಾಮಿಗಳು ಪೀಠಾಧಿಕಾರಿಗಳಾಗುತ್ತಿರಲಿಲ್ಲ. ಆನಂದಪುರದ ಮಠವೇ ಬೃಹನ್ಮಠವೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಇಮ್ಮಡಿ ಗುರುಸಿದ್ಧಸ್ವಾಮಿಗಳಿಗೆ ಆನಂದಪುರ ಪೀಠಾಧಿಕಾರವಾದಮೇಲೆ, ಅಲ್ಲಿಂದ ತಮ್ಮ ಶಿಷ್ಯ ಸ್ವಾದಿ ದೊಡ್ಡಚೆನ್ನವೀರಸ್ವಾಮಿಯನ್ನು ಚಿತ್ರದುರ್ಗದ ಮಠಕ್ಕೆ ಕಳಿಸಿ, ಇಲ್ಲಿ ಅವರಿಗೆ ವಿರಕ್ತಪಟ್ಟಕಟ್ಟಿದರು. ಇವರು ಸ್ವಾದಿ ಚೆನ್ನವೀರಸ್ವಾಮಿಗಳೆಂದು ಚಿತ್ರದುರ್ಗದ ವಿರಕ್ತಪಟ್ಟಾವಳಿಯಲ್ಲಿ ಕಂಡುಬರು

* ತಾ|| 3—7—1967 ನೆಯ ಸಂಯುಕ್ತಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ ಈ ಮಠದ ವಿಚಾರವನ್ನು ದಯೆಯಿಟ್ಟು ಓದಿರಿ.

ತ್ತಾರೆ. ಮುರಿಗಾ ಶಾಂತವೀರಸ್ವಾಮಿಗಳ ತರುವಾಯ ಆನಂದಪುರದ ಮುರುಘಾಮಠಕ್ಕೆ ಯಾರು ಸ್ವಾಮಿಗಳಾಗಿದ್ದರೆಂಬುದು ಶಾಸನದಿಂದ ಗೊತ್ತಾಗುವುದಿಲ್ಲ. ಈ ವಿಚಾರ ಇದರಲ್ಲಿ ಬರಬೇಕಾದ ಪ್ರಮೇಯವೂ ಇಲ್ಲ. ಕವಿಚರಿತಕಾರರ ಅಭಿಪ್ರಾಯವನ್ನು ಅನುಸರಿಸಿ ಆಲೋಚಿಸಿದರೆ, ಮುರಿಗೆಯ ಶಾಂತವೀರಸ್ವಾಮಿಗಳ ತರುವಾಯ ಮುರಿಗೆ ದೇಶಿಕೇಂದ್ರ ಎಂಬುವರೂ, ಅವರ ತರುವಾಯ ಮಹಾಂತಸ್ವಾಮಿ ಎಂಬವರೂ ಆನಂದಪುರ ಮುರಘಾಮಠದ ಸ್ವಾಮಿಗಳಾಗಿದ್ದರೆಂದು ಊಹಿಸಲು ಅವಕಾಶವಿದೆ. ಮುರಿಗೆಯ ಶಾಂತವೀರಸ್ವಾಮಿಗಳ ಶಿಷ್ಯವೃಂದದಲ್ಲಿದ್ದ ಒಂದನೆಯ ಗುರುಸಿದ್ಧಸ್ವಾಮಿಯೆಂಬ ಇಮ್ಮಡಿ ಮುರಿಗೆಯ ಸ್ವಾಮಿಯೇ ಚಿತ್ರದುರ್ಗದಲ್ಲಿ ಮಠಕಟ್ಟಿಸಿಕೊಂಡು ನಿಂತಂತೆ ದೃಢಪಡುತ್ತದೆ. ಮುರಿಗೆಯ ಶಾಂತವೀರಸ್ವಾಮಿಯಿಂದ ಇಮ್ಮಡಿ ಗುರುಸಿದ್ಧಸ್ವಾಮಿಯ ಕಾಲದವರೆಗೆ ಸುಮಾರು ೧೩೫ ವರ್ಷಗಳ ಅಂತರದಲ್ಲಿ ಕೊನೆಯಪಕ್ಷ ಮೂರು ಜನರಾದರೂ ಆನಂದಪುರಮಠದ ಸ್ವಾಮಿಗಳಾಗಿದ್ದಿರಬಹುದು. ಕೆಲವು ಕಾಲ ಯಾರೂ ಆ ಪೀಠದ ಸ್ವಾಮಿಯಾಗಿರಲಿಲ್ಲವೆಂದೂ ಹೇಳಬಹುದು. ಈ ಅವಧಿಯಲ್ಲಿ ಯಾರು ಯಾರು ಸ್ವಾಮಿಗಳಾಗಿದ್ದರೆಂಬುವನ್ನು ನಿರ್ಧರಿಸಲು ಸಾಕಾದಷ್ಟು ಸಾಧನಗಳಿವೆ.

ಶಿವಮೊಗ್ಗ ತಾಲ್ಲೂಕು ಮುತ್ತಿನಕೊಪ್ಪ ಗ್ರಾಮದಲ್ಲಿರುವ ಹಾಲಸ್ವಾಮಿ ಮಠದಲ್ಲಿ ಹಾಲಸ್ವಾಮಿಗಳೆಂಬುವರ ಗದ್ದುಗೆ ಇದೆ. ಹಾಲಸ್ವಾಮಿಗಳು ಮಹಾಮಹಿಮರೂ, ಶಿವಯೋಗಿಗಳೂ ಆಗಿರಬೇಕು. ಏಕೆಂದರೆ, ಚಿತ್ರದುರ್ಗದ ವಿರಕ್ತಮಠದ ಇಮ್ಮಡಿ ಮುರಘಾಸ್ವಾಮಿಗಳು ಬರೆದಿರುವ 'ಹಾಲಾಸ್ಯಪುರಾಣ' ಬಹುಶಃ ಈ ಹಾಲಸ್ವಾಮಿಯನ್ನು ಕುರಿತು ಬರೆದಿರಬಹುದು. ಇವರು ಮುರಘ ಸಂಪ್ರದಾಯದವರೆಂಬುವುದರಲ್ಲಿ ಅನುಮಾನವಿಲ್ಲ. ಇವರು ಮುರಿಗಾ ಶಾಂತವೀರಸ್ವಾಮಿಗಳ ತರುವಾಯ ಆ ಮಠದ ಸ್ವಾಮಿಯಾಗಿದ್ದರೆಂದು ತರ್ಕಿಸಬಹುದು. ಅನಂತರ 'ರಾಜೇಂದ್ರ ವಿಜಯಕಾವ್ಯ'ವನ್ನು ಬರೆದ ಮುರಿಗೆಯ ದೇಶಿಕೇಂದ್ರಸ್ವಾಮಿಗಳು ಈ ಮಠದ ಸ್ವಾಮಿಯಾಗಿರಬಹುದು. ಮುತ್ತಿನಕೊಪ್ಪದ ಹಾಲಸ್ವಾಮಿ ಮಠದಲ್ಲಿರುವ ಇನ್ನೊಂದು ಗದ್ದುಗೆ ಇವರದಾಗಿರಬಹುದೆಂದು ಹೇಳುತ್ತಾರೆ. ಇವರಾದಮೇಲೆ, ಮಹಾಂತಸ್ವಾಮಿಗಳು ಮುರಿಗಾಸ್ವಾಮಿಗಳು ಈ ಪೀಠದ ಅಧಿಕಾರಿಗಳಾದರೆಂದು ಗೊತ್ತಾಗುತ್ತದೆ.

ಇವರು "ಮುರಿಗೆಯುಸ್ವಾಮಿಗಳು ನಿರೂಪಿಸಿದ ನಾಂದ್ಯ" ಎಂಬ ಗ್ರಂಥವನ್ನು ಬರೆದಿರುತ್ತಾರೆ. ಮುತ್ತಿನಕೊಪ್ಪ ಗ್ರಾಮದ ಹಾಲಸ್ವಾಮಿ ಮಠದಲ್ಲಿರುವ ಪೂರನೆಯ ಗದ್ದುಗೆಯನ್ನು ಈ ಮುರಿಗೆಯುಸ್ವಾಮಿಗಳ ಗದ್ದುಗೆಯೆಂದು ಹಿರಿಯರು ನಂಬುತ್ತಾರೆ.

ಸುಮಾರು ಕ್ರಿ. ಶ. ೧೭೦೦ ರಲ್ಲಿದ್ದ ಸೋಮಶೇಖರ ಶಿವಯೋಗಿ ಎಂಬು ವವು ತೋಂಟದ ಸಿದ್ಧಲಿಂಗೇಶ್ವರರ ಷಟ್ಸ್ಥಲಜ್ಞಾನಸಾರಾಮೃತದ ವಚನದ ಟೀಕೆಯನ್ನು ಬರೆದಿರುತ್ತಾರೆ. ಇವರೂ ಆನಂದಪುರ ಮುರಘ ಸಮುಯದವರೇ. ಇವರು ಇಮ್ಮಡಿ ಗುರುಸಿದ್ಧಸ್ವಾಮಿಯ ಶಿಷ್ಯರೆಂದು ಹೇಳಿಕೊಂಡಿರುತ್ತಾರೆ. ಆನಂದಪುರ ಮುರಘಾಮಠದ ಪಟ್ಟಾವಳಿಯಲ್ಲಿ ಇಮ್ಮಡಿ ಗುರುಸಿದ್ಧಸ್ವಾಮಿಗಳ ತರುವಾಯ, ತಾರೀಕಟ್ಟೆ ಮಠದ ಬಸವಲಿಂಗಸ್ವಾಮಿಗಳೂ, ಅನಂತರ ನ್ಯಾಮತಿ ಗದ್ದುಗೆ ಮಠದ ಸ್ವಾಮಿಗಳೂ ಕಂಡುಬರುತ್ತಾರೆ. ಈ ನ್ಯಾಮತಿ ಗದ್ದುಗೆ ಮಠದ ಸ್ವಾಮಿಗಳೆಂಬುವರೇ ಇಮ್ಮಡಿ ಗುರುಸಿದ್ಧಸ್ವಾಮಿಗಳ ಶಿಷ್ಯರಾದ ಸೋಮಶೇಖರ ಶಿವಯೋಗಿಗಳೆಂದು ತಿಳಿಯುಬರುತ್ತದೆ. ಇವರು ಹೆಚ್ಚುಕಾಲ ನ್ಯಾಮತಿಯಲ್ಲಿ ಶಿವಯೋಗನಿರತರಾಗಿರುತ್ತಿದ್ದರು. ಹೀಗೆ, ಆನಂದಪುರ ವಿರಕ್ತಪೀಠದ ಗುರುಪಟ್ಟಾವಳಿಯನ್ನೂ, ಆ ಮಠದ ನಿರ್ಮಾಣವನ್ನೂ ಶಾಸನದ ಆಧಾರದಿಂದ ನಿರ್ಧರಿಸಬಹುದು. ಇಂಥ ಯಾವುದೊಂದು ಶಾಸನಾಧಾರವೂ ಚಿತ್ರದುರ್ಗದ ಮಠದ ನಿರ್ಮಾಣಕ್ಕಾಗಲಿ, ಅದರ ಗುರುಪರಂಪರೆಯನ್ನು ಹೇಳುವುದಕ್ಕಾಗಲಿ ನಮಗೆ ಲಭ್ಯವಾಗಿಲ್ಲ. ಆನಂದಪುರ ಮಠದ ಗುರುಪರಂಪರೆ ಯಲ್ಲಿ ಕಂಡುಬರುವ ತೋಂಟದ ಸಿದ್ಧಲಿಂಗೇಶ್ವರರನ್ನೂ, ಮುರಿಗೆಯ ಶಾಂತ ವೀರರನ್ನೂ ಚಿತ್ರದುರ್ಗದ ವಿರಕ್ತ ಮಠದವರು ತಮ್ಮ ಮೂಲ ಗುರುಗಳೆಂದು ಹೇಳಿಕೊಳ್ಳುತ್ತಾರೆ; ಅದು ಸರಿ. ಆದರೆ ಅವರು ಚಿತ್ರದುರ್ಗದ ಮಠದ ಅಧಿಕಾರಿಗಳಾಗಿರಲಿಲ್ಲ. ಇಮ್ಮಡಿ ಮುರಿಗಾಸ್ವಾಮಿಯೇ ಚನ್ನಬಸವಣ್ಣನವರ ತರುವಾಯ ಶಿಖಾಪಟ್ಟಾಧಿಕಾರಿಯಾದರೆಂದು ಚಿತ್ರದುರ್ಗದ ಮಠದವರು ಲವಲೇಶವೂ ಹಿಂಜರಿಯದೆ ಒಪ್ಪಿಕೊಳ್ಳುತ್ತಾರೆ. ಚನ್ನಬಸವಣ್ಣನವರೂ ಶಿವಾನುಭವ ಚರಂತಿಗೆಯುವರೇ ಹೊರತು ಶಿಖಾಪಟ್ಟದವರಲ್ಲವೆಂಬುದನ್ನು ನಿರಂಜನವಂಶರತ್ನಾಕರ ಸ್ಪಷ್ಟವಾಗಿ ತಿಳಿಸುತ್ತದೆ. ಆದ್ದರಿಂದ, ನಿರಂಜನ ವಂಶ ರತ್ನಾಕರವೂ ಇವರಿಗೆ ಪ್ರಮಾಣಗ್ರಂಥವಲ್ಲವೆಂದು ಹೇಳಿದಂತಾಯಿತು.

ಆದರೆ, ತೋಂಟದ ಸಿದ್ಧಲಿಂಗರನ್ನು ತಮ್ಮ ಮೂಲಗುರುವೆಂದು ಅಂಗೀಕರಿಸು ತ್ತಾರೆ. ಇದೇ ಸೋಜಿಗ! ಪಂಚಸಮಯಗಳವರೂ ತೋಂಟದ ಸಿದ್ಧಲಿಂಗ ರನ್ನು ಮೂಲಗುರುವೆಂದು ಭಾವಿಸಿರುವಂತೆ ಕಂಡುಬರುತ್ತದೆ. ಆನಂದಪುರದ ಮುರಘಾಮಠ ಹದಿನೇಳನೆಯ ಶತಮಾನದಲ್ಲಿ ನಿರ್ಮಾಣವಾಯಿತಾದರೂ, ಅದರ ಮೂಲ ಬೆಕ್ಕಿನಕಲ್ಲು ಮಠ ಸುಮಾರು ಹದಿನಾಲ್ಕನೆಯ ಶತಮಾನ ದಲ್ಲಿಯೇ ರೂಪುಗೊಂಡಿತೆಂದು ನಿರ್ಧರಿಸಬಹುದು; ಏಕೆಂದರೆ, ಆ ಪರಂಪರೆ ಯಲ್ಲಿ ತೋಂಟದ ಸಿದ್ಧಲಿಂಗರು ಮೂರನೆಯ ಸಿರಾಭಾರಿ. ಅವರ ಕಾಲ ಸುಮಾರು ಕ್ರಿ. ಶ. ೧೪೮೦. ಅವರ ಹಿಂದಣ ಇಬ್ಬರು ಸಿರಾಭಾರಿಗಳಲ್ಲಿ ಮೊದಲನೆಯ ಗಂಗಾಧರಸ್ವಾಮಿಗಳು ೧೪ನೆಯ ಶತಮಾನದ ಪ್ರಾರಂಭದಲ್ಲಿ ದ್ದರೆಂದು ಊಹಿಸಬಹುದು. ಅವರು ೧೨ನೆಯ ಶತಮಾನದಲ್ಲಿಯೇ ಅಲ್ಲಮ ರಿಂದ ಅನುಗ್ರಹ ಪಡೆದು ಕಲ್ಯಾಣದಿಂದ ಬಂದು ಜಮದಗ್ನಿ ಮಹರ್ಷಿಯ ತಪೋವನವಾಗಿದ್ದ ತುಂಗಾನದಿಯ ತೀರದ ಅರಣ್ಯ ಪ್ರದೇಶದಲ್ಲಿ ಶಿವಯೋಗ ನಿರತರಾಗಿದ್ದ ಗುರುಪರಂಪರೆಯವರೆಂದು ಕೆಳದಿನಾಯಕನ ಶಾಸನದ ಅವ ಲೋಕನದಿಂದ ನಮಗೆ ಹೊಳೆಯುತ್ತದೆ. ವಿದ್ವಾಂಸರು ಪರಿಶೀಲಿಸಬೇಕು. ಅದೇನೇಇರಲಿ, ಈ ಮಠ ೧೨ನೆಯ ಶತಮಾನದಲ್ಲಿ ಪ್ರಾರಂಭವಾಯಿತೆಂದು ಹೇಳಬಹುದು. ಮುರಘಾಸಂಪ್ರದಾಯದ ಅಥಣಿಯ ಗಚ್ಚಿನಮಠ ೧೬ನೆಯ ಶತಮಾನದಲ್ಲಿ ಸ್ಥಾಪನೆಯಾಯಿತು. ಆ ಶತಮಾನದಲ್ಲಿಯೇ ಮುರಿಗೆಯ ಶಾಂತವೀರಸ್ವಾಮಿ ಬೆಕ್ಕಿನಕಲ್ಲುಮಠದ ಸ್ವಾಮಿಯಾದರು. ಅಲ್ಲಿಂದ ಮುರಘಾ ಸಮಯ ಪ್ರಾರಂಭವಾಯಿತು. ಚಿತ್ರದುರ್ಗದ ಮಠ ೧೮ನೆಯ ಶತಮಾನದ ಪ್ರಾರಂಭದಲ್ಲಿ ನಿರ್ಮಾಣವಾಯಿತು. ಈಗ ನಮಗೆ ಲಭಿಸಿರುವ ಆಧಾರಗಳನ್ನು ಅವಲಂಬಿಸಿ ಹೇಳುವುದಾದರೆ ಆನಂದಪುರ ಮುರಘಾಮಠವೇ ಮುರಘಾ ಸಮಯದ ಮೂಲಪೀಠ; ಬೃಹನ್ಮಠ; ಜಗದ್ಗುರು ಪೀಠ; ಚಿತ್ರದುರ್ಗದ ಮಠ ಅನಂತರ ಉದಯವಾಯಿತೆಂಬುದರಲ್ಲಿ ಅನುಮಾನವಿಲ್ಲ.

ಆನಂದಪುರ ಮುರಘಾಮಠ ಶೂನ್ಯ ಸಂಪ್ರದಾಯದಲ್ಲೂ ಪ್ರಾಚೀನಮಠ; ಅಲ್ಲಮರು ಅನಾದಿಶೂನ್ಯವಿಡಿದುಬಂದವರು. ಹುಬ್ಬಳ್ಳಿ ಮೂರುಸಾವಿರಮಠ ಸನಾತನ ವೀರಶೈವದ ಜಂಗಮತತ್ತ್ವವಿಡಿದು ಬಂದುದು. ಇದು ಶುದ್ಧ ವೈದಿಕ-ತಾಂತ್ರಿಕ ಸಂಪ್ರದಾಯ; ಮುರಘಾಮಠ ತಾಂತ್ರಿಕ-ವೈದಿಕ ಸಂಪ್ರ

ದಾಯ. ಈ ಎರಡೂ ಮಠಗಳು ನಾಥಪಂಥವನ್ನು ವೀರಶೈವದಲ್ಲಿ ಅಳವಡಿಸಿಕೊಂಡು ವಿರಕ್ತ ಪೀಠಗಳಾದುವು. ಮೂರುಸಾವಿರಮಠ ವೈದಿಕಶೈವಪೂರ್ಣ ಜಂಗಮಪೀಠ, ಮುರಘಾಮಠ ದ್ರಾವಿಡಶೈವಪೂರ್ಣ ಜಂಗಮಪೀಠ. ಸುಮಾರು ೧೬ನೆಯ ಶತಮಾನದಲ್ಲಿ ಈ ಮಠಗಳು ಸಮಯಾಚಾರ ಶೂನ್ಯ ಸಿಂಹಾಸನ ಮಠಗಳೆನಿಸಿದುವು. *ಚೀಲಾಳ ಸಮಯ, ಸಂಪಾದನೆಯ ಸಮಯ ಮತ್ತು ಕೆಲಸಿಸ ಸಮಯಗಳ ಬೃಹನ್ಮಠಗಳೂ ಪ್ರಮುಖ ವಿರಕ್ತ ಕೇಂದ್ರಗಳಾಗಿರುತ್ತವೆ.

## ತರಂಗ ೧೫.

—∘—

### ಹುಬ್ಬಳ್ಳಿ ಮೂರುಸಾವಿರ ಮಠ; ಗದಗ-ಡಂಬಳತೋಂಟದಾರ್ಯ ಮಠ

೭೦. "ಅತಿಮಥನವೆಂಬ ಶೂನ್ಯಸಿಂಹಾಸನವನೇರಿಕೊಂಡು
ನಾವೆ ಹಿರಿಯರು, ನಾವೆ ದೇವರೆಂಬರು; ತಮ್ಮ ತಾವರಿಯರು.
ಅಪ್ರತಿಮನಭುಂಜಕರಮೆಚ್ಚ ನಮ್ಮ ಕೂಡಲಚನ್ನಸಂಗಯ್ಯನು".

—ಚನ್ನಬಸವಣ್ಣನವರು.

ಸನಾತನ ಜಂಗಮಸಂಪ್ರದಾಯದ ಮಠಗಳಲ್ಲಿ ಹುಬ್ಬಳ್ಳಿ ಮೂರುಸಾವಿರ ಮಠ ಅತ್ಯಂತ ಪ್ರಾಚೀನವಾದುದೆಂದು ಹೇಳಬಹುದು. ಮೂರುಸಾವಿರ ಮಠ ಎಂಬ ಹೆಸರೇ ಅವರ ಪ್ರಾಚೀನತೆಯನ್ನು ಸೂಚಿಸುತ್ತದೆ. ನಿರಂಜನ ಜಂಗಮ ಶ್ರೇಣಿಯಲ್ಲಿ ಅಲ್ಲಮರನ್ನು ಪರಮಗುರುವೆಂದು ವೀರಶೈವ ಸಮಾಜ ಗೌರವಿಸುತ್ತದೆ. ಇವರು ಗುಹೇಶ್ವರಲಿಂಗ ಸೂತ್ರಾನುಯಾಯಿಗಳು; ಎಂದರೆ ಸ್ಕಾಂದ ಗೋತ್ರಜರು ಎಂದು ಹೇಳಬಹುದು. ಈ ಸ್ಕಾಂದಮಠ ಅತ್ಯಂತ ಪುರಾತನವಾದುದು. ಸ್ಕಾಂದಗೋತ್ರದ ಗುರುಪೀಠ ಕಾಶಿಯಲ್ಲಿ ಪ್ರತಿಷ್ಠಾಪಿತವಾದಂತೆಯೇ ಆ ಗೋತ್ರದ ಜಂಗಮಪೀಠ ಹನ್ನೆರಡನೆಯ ಶತಮಾನದಲ್ಲಿ ಕರ್ನಾಟಕದ ಕಲ್ಯಾಣ ಪಟ್ಟಣದಲ್ಲಿ ಶೂನ್ಯ ಸಿಂಹಾಸನ ಮಠವೆಂದು ರೂಪು

* ಈ ಮಠಗಳ ವಿಚಾರವನ್ನು "ನಿರಂಜನ" ಗ್ರಂಥದಲ್ಲಿ ಅವಲೋಕಿಸಿರಿ.

ಗೊಂಡು, ಅನಂತರ ಹದಿಮೂರನೆಯ ಶತಮಾನದ ಮಧ್ಯಭಾಗದಲ್ಲಿ ಕಲ್ಯಾಣದಲ್ಲಿಯೇ ಧಾರ್ಮಿಕ ಪೀಠವಾಗಿ ನಿರ್ಮಾಣವಾಯಿತೆಂದು ಹೇಳಬಹುದು. ಕನ್ನಡನಾಡಿನಲ್ಲಿ ಅದೇ ಯುಗದಲ್ಲಿಯೇ ಹೂಲಿಯಲ್ಲಿ ಪಂಚವಣ್ಣಿಗೆ ಮಠ ಸ್ಥಾಪನೆಯಾಯಿತು. ಇದು ಸ್ಕಂದಸೂತ್ರದ ಮಠವೆಂಬುದರಲ್ಲಿ ಸಂಶಯವಿಲ್ಲ. ಇದು ವೀರಶೈವ ಪಂಚಮಶಾಲೆಯವರ ಪ್ರಮುಖ ಪೀಠವಾದಂತೆ ತಿಳಿದುಬರುತ್ತದೆ. ಚಳ್ಳಗೇರಿ ಕಾಮಾರಿ ಸಿದ್ಧೇಶ್ವರಸ್ವಾಮಿ ಎಂಬುವರು ಹೂಲಿ ಮಠದ ಆಳಿಯಂದಿರಾಗಿದ್ದರು. ಕಾಮಾರಿ ಎಂಬುದು ಪಂಚಮಶಾಲೆಯ ಒಂದು ಶಾಖೆಯೆಂಬುದು ಸ್ಪಷ್ಟವಾಗಿದೆ. ಶಿವನ ಈಶಾನಮುಖದಿಂದ ಹುಟ್ಟಿದ ಪಂಚವಕ್ತ್ರಗಣೇಶ್ವರನೇ ವಿಶ್ವಾರಾಧ್ಯನೆಂದು ನಂಬಬಹುದು. ಶಿವನ ಒಂದೇ ಮುಖದಲ್ಲಿ ಹುಟ್ಟಿದ ವಿಶ್ವಾರಾಧ್ಯನು ಗುರುವಾಗಿ ಪಂಚವಕ್ತ್ರಗಣೇಶ್ವರ ಶಿಷ್ಯನಾಗಲು ಸಾಧ್ಯವಿಲ್ಲ. ಸ್ಕಂದನೆಂದರೆ ಕುಮಾರಸ್ವಾಮಿ; ಈ ಕುಮಾರ ಪಂಥ ಅತ್ಯಂತ ಪ್ರಾಚೀನವಾದುದು. ಚನ್ನಬಸವಣ್ಣನವರು ಸಾಕ್ಷಾತ್ ಷಣ್ಮುಖನ ಅವತಾರವೆಂದು ಹೇಳಿದೆ. ಅವರು ಕುಮಾರಪಂಥದವರೆಂದು ನಿರ್ಧರವಾಗಿ ಹೇಳಬಹುದು. ಸ್ಕಾಂದಮತ ಶ್ರೀ ಶಂಕರಾಚಾರ್ಯರ ಕಾಲಕ್ಕಿಂತಲೂ ಪ್ರಾಚೀನವಾದುದೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. "ಪಂಚಬ್ರಹ್ಮ ಶಾಲೆಗಳೇ ಪಂಚಶಾಲೆಗಳು. ಇವುಗಳಲ್ಲಿ ಬಸವೇಶ್ವರರದು ಪಂಚಮ (ಐದನೆಯ) ಶಾಲೆ" ಎಂದು 'ಶ್ರೀ ಅನಾದಿವೀರಶೈವಸಂಗ್ರಹ'ದಲ್ಲಿ ಉಕ್ತವಾಗಿದೆ. ಆದ್ದರಿಂದ ಬಸವಣ್ಣನವರೂ ಸ್ಕಾಂದಗೋತ್ರಾನುಯಾಯಿಗಳಾದಾಯಿತು. ಅವರೂ ಕುಮಾರಪಂಥಾನುಯಾಯಿಗಳು.

"ನಿರಂಜನಜಂಗಮಸ್ವರೂಪರಾದ ಷಣ್ಮುಖಸ್ವಾಮಿಗಳವರೇ ಕಲ್ಯಾಣಪುರದಿ ಅವತರಿಸಿ ಚನ್ನಬಸವರಾಜೇಂದ್ರರೆಂಬ ನಾಮವಂ ತಾಳ್ದು ವೀರಶೈವ ಮತ ಉದ್ಧಾರಕರಾದಕಾರಣ ಮೂಲಗುರುವು ಚನ್ನಬಸವೇಶ್ವರಸ್ವಾಮಿಗಳವರು. ಈ ಕುಮಾರಸ್ವಾಮಿಗಳವರು ಕಲ್ಯಾಣದಲ್ಲಿ ಶ್ರೀ ಬಸವರಾಜೇಂದ್ರರ ಸಹೋದರಿಯಾದ ಅಕ್ಕನಾಗತಿಯರ ಚಿದ್ಗರ್ಭದಲ್ಲಿ" ಅವತರಿಸಿ, "ವೀರಶೈವ ಮತವನ್ನು ಉದ್ಧಾರಮಾಡುತ್ತ ಇದ್ದರು".— ಎಂದು ನಿರಂಜನವಂಶ ರತ್ನಾಕರದಲ್ಲಿ ಹೇಳಿದೆ. ಹನ್ನೆರಡನೆಯ ಶತಮಾನದಲ್ಲಿ ಕುಮಾರಪಂಥ ನಾನಾಮುಖವಾಗಿ ಬೆಳೆಯಿತು. ಚನ್ನಬಸವಣ್ಣನವರು ಶೂನ್ಯಸಿಂಹಾಸನದಲ್ಲಿ ಶಿವಾನುಭವ

ಸ್ವಭದ್ರರಾದರು. ಇವರು ಎರಡನೆಯ ಶಿವಾನುಭವಪಟ್ಟದ ನಿರಾಭಾರಿ ಯಾದರು. ಇವರು ಅನುಭವಮಂಟಪದಲ್ಲಿ ಪ್ರಭುವಂಶದ ೧೨ ಸಾವಿರ ಸ್ಥಲಬ್ರಹ್ಮಿಗಳೊಂದಿಗೆ ಶಿವಾನಂದ ಸುಖದಲ್ಲಿದ್ದರು. ಇವರು "ತಮ್ಮ ಸ್ಥಾದ ಸೊನ್ನಲಪುರದ ಸಿದ್ಧರಾಮೇಶ್ವರದೇವರಿಗೆ ನೀವು ನಮ್ಮ ಸಹಶ್ರಿಕರಾದ ಸ್ಥಲಬ್ರಹ್ಮಿಗಳಾದ ಚನ್ನಂಜಯ್ಯ, ಕೋಲುಶಾಂತಯ್ಯ, ಕುದುರೆಶಾಂತಯ್ಯ ಚದ ಶಾಂತಯ್ಯ ಮುಂತಾದ ಮೂರುಸಾವಿರ ವಿರಕ್ತರಿಗೆ ಗುರುಗಳಾಗಿರು ಎಂದು ಆಜ್ಞಾಪಿಸಿ" ಉಳವಿಯತ್ತ ದಯಮಾಡಿಸಿದರು- ಎಂದು ನಿರಂಜನ ವಶ ರತ್ನಾಕರದಲ್ಲಿ ಉಕ್ತವಾಗಿದೆ. ಇಲ್ಲಿ ಮೂರುಸಾವಿರ ವಿರಕ್ತರಿಗೆ ಗುರುವಾಗಿರುವಂತೆ ಚನ್ನಬಸವಣ್ಣನವರು ಹೇಳಿದ ಮಾತನ್ನು ಗಮನಿಸಿದರೆ, ವರ ಕಾಲದಲ್ಲಿಯೇ ಮೂರುಸಾವಿರ ವಿರಕ್ತಗಣವೊಂದು ಮತಪ್ರಚಾರ ಕಾರ್ಯದಲ್ಲಿ ಪ್ರಮುಖವಾಗಿತ್ತೆಂದು ಊಹಿಸಬಹುದು. ವಿರಕ್ತ ಮೂರು ಸಾವಿರವೆಂದರೆ ತ್ರಿಲಿಂಗಾನುಭಾವಿಗಳೆಂದು ಅರ್ಥ. ಇವರು ಅಲ್ಲಮಪ್ರಭು ಮೂಲಸಂತತಿಯವರು. ವೀರಶೈವ ಅಷ್ಟಾವರಣದಲ್ಲಿ ಗುರು, ಲಿಂಗ, ಜಂಗಮ ತತ್ತ್ವತ್ರಯದಲ್ಲಿ ಜಂಗಮವೆಂದರೆ ಶಿವಯೋಗಿ. ಈ ಜಂಗಮದಲ್ಲಿ ಸ್ವಯ, ಚರ, ಪರ ಎಂಬ ಮೂರು ಬಗೆಗಳುಂಟು. ಸ್ವಯಜಂಗಮ ಎಂದರೆ ಮಠ ದಲ್ಲಿಯೇ ಇದ್ದುಕೊಂಡು ಶಿವಯೋಗಾನುಷ್ಠಾನ ತಪೋಬಲದಿಂದ ವೀರಶೈವರಿಗೆ ಧರ್ಮಬೋಧೆ ಮಾಡುವವರು; ಚರಜಂಗಮ ದೇಶದಲ್ಲಿ ಸಂಚರಿಸಿ ಧರ್ಮಪ್ರಸಾರ ಮಾಡುತ್ತಾರೆ. ಪರಜಂಗಮ ಮಠದಲ್ಲಿಯಾಗಲಿ, ಅರಣ್ಯದಲ್ಲಿಯಾಗಲಿ, ಗುಹೆಯಲ್ಲಿಯಾಗಲಿ ಏಕಾಂತವಾಗಿ ಶಿವಯೋಗನಿರತರಾಗಿರುತ್ತಾರೆ. ಈ ಮೂರು ವಿಧದವರೂ ಜ್ಞಾನಸಧನರೇ. ಜಂಗಮ ಎಂದರೆ ಜ್ಞಾನಸ್ವರೂಪ. ಇವರ ಸಾನ್ನಿಧ್ಯಬಲದಿಂದ ಮನುಷ್ಯ ಶಿವಜ್ಞಾನಿಯಾಗುತ್ತಾನೆ; ನರ ಹರನಾ ಗುತ್ತಾನೆ. ಇದರಂತೆಯೇ, ಹಂಚುಕಂಥೆ ೧೨,೦೦೦ ಗುರುಸ್ಥಲ; ಅತೀತ ೦೦೦ ಲಿಂಗಸ್ಥಲ; ವಿರಕ್ತಿ ೩,೦೦೦ ಜಂಗಮಸ್ಥಲ-ಎಂಬ ಮುಖ್ಯ ಗಣತ್ರಯ ವುಂಟು. ಈ ವಿರಕ್ತಿಗಣ ಚನ್ನಬಸವಣ್ಣನವರ ಚಿದಂಶ ಪರಿಪೂರ್ಣರು- ಪ್ರಭುಸಂತತಿಯವರು. ಆದ್ದರಿಂದ ಮೂರುಸಾವಿರ ವಿರಕ್ತಿಗಣ ಹನ್ನೆರಡನೆಯ ಶತಮಾನದಲ್ಲಿಯೇ ಧರ್ಮೋದ್ಧಾರ ಕಾರ್ಯದಲ್ಲಿ ತೊಡಗಿತ್ತು. ಇದರ ಮಮುಗುರು ಕುಮಾರಸ್ವಾಮಿ, ಮೂಲಗುರು ಗುಹೇಶ್ವರ-ಅಲ್ಲಮ! ವಿರಕ್ತಿ

ಗಣ ಎಂಬುದು ಸನಾತನ ವೀರಶೈವ ಜಂಗಮ ಪ್ರಭೇದ. ಅದು ಕ್ರಮೇಣ ವಿರಕ್ತಗಣವೆಂದು ರೂಢಿಗೆ ಬಂದಂತಿದೆ. ಈ ಪರಂಪರೆ ಅನಾದಿಯಿಂದ ಬಂದಿದೆ. ದಕ್ಷಿಣಾಮೂರ್ತಿ ಶಿವಾಚಾರ್ಯರು ಹೂಲಿ ಶ್ರೀ ಮಠದ ಅಧಿಕಾರವನ್ನು ಕುಮಾರಸ್ವಾಮಿ ಶಿವಾಚಾರ್ಯರಿಗೆ ವಹಿಸಿಕೊಟ್ಟರೆಂದು ಆ ಮಠದ ಚರಿತ್ರೆಯಿಂದ ತಿಳಿದುಬರುತ್ತದೆ. ಶ್ರೀ ಕುಮಾರಸ್ವಾಮಿಯು ಮೂಲವಂಶ (ಗೋತ್ರ) ದಿಂದ ಬಂದುದರಿಂದ ಅದು ಸ್ಕಂದಗೋತ್ರದ ಮಠವೆಂದು ಪ್ರಸಿದ್ಧಿಯಾಗಿದೆಯೆಂದೂ ಆ ಚರಿತ್ರೆಯಲ್ಲಿ ಹೇಳಿದೆ. ಹೂಲಿಯನ್ನು ಪೂವಲ್ಲಿಯೆಂದೂ ಕರೆಯುತ್ತಾರೆ. ಅಲ್ಲಿ ಬಹು ಪ್ರಾಚೀನಕಾಲದ ಗುರುಸ್ಥಲ ೧೨,೦೦೦ದ ಮಠವೊಂದು ನಿರ್ಮಾಣವಾದಂತೆ, ಅಲ್ಲೊಂದು ೩೦೦೦ ಜಂಗಮಮಠವೂ ಇದ್ದಿರಬೇಕೆಂದು– ಶ್ರೀ ಕಲ್ಲೂರ ಸಂಗಣ್ಣನವರು 'ಹೊಂಬೆಳಗು' ಎಂಬ ಗ್ರಂಥದಲ್ಲಿ ಬರೆದಿರುತ್ತಾರೆ. ಅವರ ಊಹೆ ಸರಿಯಾಗಿರುತ್ತದೆ. ೧೨,೦೦೦ ಗುರುಸ್ಥಲ ಸಂಘವೊಂದು ಪ್ರಾಚೀನಕಾಲದಿಂದಲೂ ವೀರಶೈವಧರ್ಮ ಪ್ರಸಾರಮಾಡುತ್ತಿದೆ. ಅದು ಸ್ಕಂದ ಸಂಪ್ರದಾಯದ ಸಂಘ. ಮುಂದೆ ಪೂವಳ್ಳಿ ಎಂಬ ಹೆಸರಿನಿಂದಲೇ ಈಗಿರುವ ಹುಬ್ಬಳ್ಳಿಯ ಬಯಲಿನಲ್ಲಿ ಮೂರುಸಾವಿರ ಜಂಗಮಸಂಘದ ತಪೋವನವಿದ್ದಿತೆಂದೂ ಹೇಳಬಹುದು. ಅದು ಕಾಲಕ್ರಮದಲ್ಲಿ ಹೂಬಳ್ಳಿ–ಹುಬ್ಬಳ್ಳಿ ಎಂದು ಆಗಿರಬೇಕು. ಈ ಗುರು- ಜಂಗಮ ಸಂಘಗಳು ಪರಸ್ಪರ ಪೋಷಕವಾಗಿಯೇ ಧರ್ಮೋದ್ಧಾರ ಕಾರ್ಯವನ್ನು ನೆರವೇರಿಸುತ್ತಾ ಬಂದಿರಲು ಸಾಧ್ಯ. ಹುಬ್ಬಳ್ಳಿಯಿಂದ ಹೂಲಿಗೆ ಬಹುದೂರವೇನೂ ಇಲ್ಲ. *ಹುಬ್ಬಳ್ಳಿಯ ಪೂರ್ವದ ಹೆಸರು 'ಪೂವಳ್ಳಿ' ಎಂದು ಕಲಚೂರ್ಯರ ೧೨ನೆಯ ಶತಮಾನದ 'ಶಿರಸಿ' ಶಾಸನದಲ್ಲಿ ಕಂಡುಬರುತ್ತದೆಯೆಂದು ಪ್ರೊ|| ವರದರಾಜಉಮ್ಮರ್ಜಿ, ಎಂ.ಎ., ಅವರು ಹೇಳಿರುತ್ತಾರೆ. "ಶಿರಸಿ ಶಾಸನದಲ್ಲಿ ಪೂವಳ್ಳಿ ಎಂಬುದು ಮೂರು ಸಾವಿರ ಮಠದ ಸಂಬಂಧದಲ್ಲಿ ಉಕ್ತವಾದದ್ದರಿಂದ ಅದು ೧೨ನೆಯ ಶತಮಾನದಿಂದಲೂ ಲಿಂಗಾಯತ ಸಮಾಜದ ಕೇಂದ್ರವಾಗಿತ್ತೆಂದು ಸೂಚಿತವಾಗುವುದಿಲ್ಲವೆ ?" ಎಂದು ಬರೆದಿರುತ್ತಾರೆ.

ಆದರೆ, ಹೊಸಹುಬ್ಬಳ್ಳಿ ೧೮ನೆಯ ಶತಮಾನದಲ್ಲಿ ನಿರ್ಮಾಣವಾಯಿತೆಂದೂ ಹಳೆಯ ಹುಬ್ಬಳ್ಳಿ ೧೫ನೆಯ ಶತಮಾನದಲ್ಲಿ ನಿರ್ಮಾಣವಾಯಿತೆಂದೂ ಚರಿತ್ರೆ ತಿಳಿಸುತ್ತದೆ. ಆದ್ದರಿಂದ ೧೨ನೆ ಶತಮಾನದಲ್ಲಿ ಶಿರಸಿಶಾಸನದಲ್ಲಿ ಹೇಳಿರುವಂತೆ

ಪಳ್ಳಿಯೆಂಬುದು ಹೂಲಿಯೇ ಆಗಿರಬಹುದೆಂದೂ, ಅನಂತರ 'ಮೂರುಸಾವಿರ ಜಂಗಮಸಂಘ' ಈಗಿನ ಹುಬ್ಬಳ್ಳಿ ಇರುವ ಸ್ಥಳದಲ್ಲಿದ್ದ ಆರಣ್ಯಪ್ರದೇಶದಲ್ಲಿ ವನವಾಸಿಯಾಗಿದ್ದುಕೊಂಡು ಆ ಪುಣ್ಯಾರಣ್ಯ ಪ್ರದೇಶವನ್ನು ಕೇಂದ್ರವಾಗಿ ಮಾಡಿಕೊಂಡು, ಅಲ್ಲಿಯೇ ಬಹಳಕಾಲ ನೆಲಸಿದ್ದಿರಬಹುದೆಂದೂ, ಆ ತಮ್ಮ ವಾಸ ಪ್ರದೇಶವನ್ನೂ 'ಪೂವಳ್ಳಿ' ಎಂದೇ ಕರೆದಿರಬಹುದೆಂದೂ ತರ್ಕಿಸಬಹುದು. ಆಗಿನ್ನೂ ಚರಜಂಗಮಗಣ ಮಠಗಳನ್ನು ಕಟ್ಟಿಕೊಂಡು ವಾಸ ಮಾಡುವ ಪದ್ಧತಿ ಆಚರಣೆಯಲ್ಲಿರಲಿಲ್ಲವೆಂದು ನಂಬಬಹುದು. ಇವರು ಆಗಾಗ ಹಂಪಿ, ಗೋಕರ್ಣ, ಗೊಹೆ- ಮೊದಲಾದ ಪುಣ್ಯಪ್ರದೇಶಗಳಲ್ಲಿ ಸಂಚರಿಸುತ್ತ, ಹೂಲಿಯನ್ನು 'ಪೂವಳ್ಳಿ' ವಿರಕ್ತಿ ಜಂಗಮ ಆಶ್ರಮವಾಗಿ ಮಾಡಿಕೊಂಡಿರುತ್ತಿರಬಹುದು. ಏನೇ ಆಗಲಿ, ಮೂರುಸಾವಿರ ಜಂಗಮಶ್ರೇಣಿ ಒಬ್ಬ ಗುರುವಿನ ನೇತೃತ್ವದಲ್ಲಿ ಧರ್ಮಪ್ರಸಾರ ಮಾಡುತ್ತಿದ್ದು, ಸುಮಾರು ೧೬ನೆಯ ಶತಮಾನದ ಹೊತ್ತಿಗೆ ಈಗಿರುವ ಹುಬ್ಬಳ್ಳಿಯಲ್ಲಿ ಮೂರುಸಾವಿರ ಮಠ ಎಂಬ ಸಂಸ್ಥೆಯನ್ನು ಮಾಡಿಸಿಕೊಂಡು ಅಲ್ಲಿ ನೆಲೆಸಿರಬಹುದು. ಇಂಥ ಪರಿಪಾಠ ಜೈನ ಮುನಿಗಳಲ್ಲಿಯೂ ಇತ್ತು. ಅವರೂ, ೧೨,೦೦೦ ಮುನಿಸಂಘ, ೬೦೦೦ ಮುನಿಸಂಘ ಮತ್ತು ೩೦೦೦ ಮುನಿಸಂಘ ಎಂಬ ಚಾರಣ ಸಂಘಗಳನ್ನು ಮಾಡಿಕೊಂಡು ಧರ್ಮಪ್ರಸಾರ ಮಾಡುತ್ತಿದ್ದರು. ಉತ್ತರ ದೇಶದಿಂದ ಭದ್ರಬಾಹುಮುನಿ ೧೨,೦೦೦ ಜೈನಯತಿಗಳೊಂದಿಗೆ ದಕ್ಷಿಣ ದೇಶಕ್ಕೆ ಬಂದನೆಂಬ ಸಂಗತಿ ಈ ಪರಿಪಾಠವನ್ನು ಸಮರ್ಥಿಸುತ್ತದೆ. ಇಂಥ ಜೈನ ಸಂಘಗಳನ್ನು 'ಗಣ'ಗಳೆಂದು ಕರೆಯುತ್ತಿದ್ದರು. ನಂದಿಗಣ, ಸೇನಗಣ, ದೇವಗಣ ಮೊದಲಾದ ಗಣಗಳಲ್ಲಿ ಪುರುಷರಂತೆ ಸ್ತ್ರೀಯರೂ ಇರುತ್ತಿದ್ದರು. ಅಂಥ ಮುನಿಸ್ತ್ರೀಯರಿಗೆ ಆರ್ಜಿಕೆ ಎಂದು ಹೆಸರು. ಕಾಲಕ್ರಮದಲ್ಲಿ ಇವರು ನೆಲಸಿದ ಮಂದಿರಗಳನ್ನು 'ಮುನಿವಾಸ'ಗಳೆಂದು ಕರೆದರು. ಜಂಗಮ ಎಂಬ ಪದವೇ ಆ ಸಂಘದ ಸ್ವರೂಪವನ್ನು ನಿರ್ದೇಶಿಸುತ್ತದೆ. ಹನ್ನೆರಡನೆಯ ಶತಮಾನದಲ್ಲಿ ಕನ್ನಡ ನಾಡಿನಲ್ಲಿ 'ಜಂಗಮ' ಪದ ಬಸವಣ್ಣನವರ ಧರ್ಮಪ್ರಸಾರದಲ್ಲಿ ತುಂಬ ಗೌರವ ಸ್ಥಾನವನ್ನು ಪಡೆಯಿತು. ಕಲ್ಯಾಣದಲ್ಲಿಯೇ ಒಂದು ಲಕ್ಷ ತೊಂಬತ್ತಾರು ಸಾವಿರ ಜಂಗಮರಿದ್ದರೆಂದು ವಚನವಾಙ್ಮಯದಿಂದ ತಿಳಿದುಬರುತ್ತದೆ. ಈ

* "ಹೊಂಬೆಳಗು"-ಗ್ರಂಥವನ್ನು ಅವಲೋಕಿಸಿರಿ.

ಜಂಗಮರು ಗ್ರಾಮಪ್ರದೇಶಗಳಲ್ಲಿ ಮಠಗಳನ್ನು ಕಟ್ಟಿಕೊಂಡು ನೆಲಸುವ ಪದ್ಧತಿ ಬರುವುದಕ್ಕಿಂತ ಮುಂಚೆ ಅವರು ಧರ್ಮಸಂರಕ್ಷಕರಾಗಿ 'ತರುತಲವಾಸ, ಕರತಲ ಭಿಕ್ಷಾ' ಮಾರ್ಗದಿಂದ ಸಂಚರಿಸುತ್ತಿದ್ದರು. ಅವರು ಶುದ್ಧ ಸಾತ್ವಿಕರೂ, ನಿರ್ಮಲಚಿತ್ತರೂ, ಆತ್ಮಸಂಯಮಿಗಳೂ ಶಿವಯೋಗತತ್ಪರರೂ ಆಗಿರುತ್ತಿದ್ದರು. ಅವರು ಲೋಕವ್ಯವಹಾರದಿಂದ ನಿರ್ಲಿಪ್ತರಾಗಿರುತ್ತಿದ್ದರು. ಹನ್ನೆರಡನೆಯ ಶತಮಾನದ ವೇಳೆಗೆ, ಈ ಜಂಗಮತಿಂಥಿಣಿಗಳಮೇಲೆ ನಾಥಸಂಪ್ರದಾಯ ತನ್ನ ಪ್ರಭಾವವನ್ನು ಬೀರಿದಂತೆ ನಿರ್ಧರವಾಗಿ ಗುರುತಿಸಬಹುದು. ನಾಥ ಸಂಪ್ರದಾಯ ಬಹಳ ಪುರಾತನವಾದುದು. ಈ ಸಂಪ್ರದಾಯದ ಪ್ರಭಾವ ಈ ಜಂಗಮ ತಿಂಥಿಣಿಗಳಮೇಲೆ ಮೂಡಿತೆಂಬುದು ನಿಜ. ನಾಥ ಸಂಪ್ರದಾಯ ದಲ್ಲಿಯೂ ಗುರು, ಲಿಂಗ, ಜಂಗಮವಿತ್ತು ! ಅದೂ ಶೂನ್ಯವನ್ನು ಆರಿತಿತ್ತು ! ಈ ನಾಥಸಂಪ್ರದಾಯದ ಶಕ್ತಿದೈವೋಪಾಸನೆಯ ಕ್ರಮ ಜಂಗಮದಲ್ಲಿ ಸೇರಿತು. ಮುಂದೆ ಈ ಜಂಗಮವೇ ವಿರಕ್ತಪಂಥವೆಂಬಂತಾಯಿತು; ಶಿವ-ಶಕ್ತಿಯನ್ನು ಆರಾಧಿಸಿತು !

ಚನ್ನಬಸವಣ್ಣನವರ ಕಾಲದಲ್ಲಿ ರೂಪುಗೊಂಡ ಮೂರುಸಾವಿರ ವಿರಕ್ತ ತಿಂಥಿಣಿಯ ಪ್ರಧಾನ ಗುರು, ಅವರ ತರುವಾಯ, ಸಿದ್ಧರಾಮರಾದರೆಂಬುದನ್ನು ನಿರಂಜನವಂಶ ರತ್ನಾಕರ ತಿಳಿಸುತ್ತದೆ. ಇದೇ ಕುಮಾರಪಂಥ! ಇದು ಸಹ್ಯಾದ್ರಿ ಶ್ರೇಣಿಯ ಪ್ರಾಂತಗಳಲ್ಲಿ ವಿಶೇಷವಾಗಿತ್ತು. ಸಂಡೂರು ಈ ಪಂಥದ ಒಂದು ಕೇಂದ್ರವಾಗಿತ್ತು. ನಾಥಪಂಗಡದವರನ್ನು ಯೋಗೀಂದ್ರ, ಯೋಗಿ ನಾಥ, ಸಿದ್ಧೇಂದ್ರ, ಸಿದ್ಧನಾಥ ಎಂದು ಕರೆಯುತ್ತಿದ್ದರು. ಸಿದ್ಧರಾಮಯ್ಯನವರು ಯೋಗಿನಾಥ ಎಂಬ ಅಂಕಿತದಿಂದ 'ವಚನ'ಗಳನ್ನು ಬರೆದಿರುತ್ತಾರೆ. ಕಪಿಲ ಸಿದ್ಧ ಮಲ್ಲಿಕಾರ್ಜುನ ಅವರ ಆರಾಧ್ಯಮೂರ್ತಿ ! ಅವರ ಗುರು ರೇವಣಸಿದ್ಧರು! ಬಸವಣ್ಣನವರ ಗುರು ಸಂಗಮನಾಥರು ! ಇದನ್ನೆಲ್ಲಾ ಪರಿಭಾವಿಸಿದರೆ, ಈ ಮೂರುಸಾವಿರ ಮಠದ ಗುರುವನ್ನೂ ಯೋಗೀಂದ್ರ, ಸಿದ್ಧೇಂದ್ರರೆಂದು ಕರೆಯುತ್ತಿರುವುದರಿಂದ ಈ ಸಂಸ್ಥೆಯಲ್ಲಿ ಅಲ್ಲಮರ ನೇತೃತ್ವದಲ್ಲಿ ಚನ್ನಬಸವಣ್ಣ ನವರ ಕಾಲದಲ್ಲಿ ಪ್ರಮುಖ ವಿರಕ್ತಪಂಗಡವಾಯಿತೆಂದು ನಿಶ್ಚಯಿಸಬಹುದು. ಅಲ್ಲಮರಿಂದ ಚನ್ನಬಸವಣ್ಣನವರಿಗೆ ಎರಡನೆಯ ಶಿವಾನುಭವಪಟ್ಟವಾಯಿತೆಂದು ನಿರಂಜನವಂಶ ರತ್ನಾಕರದಲ್ಲಿ (ಪುಟ ೫) ಸ್ಪಷ್ಟವಾಗಿ ಹೇಳಿದೆ. ಆದ್ದರಿಂದ

ಶಿಖಾಪಟ್ಟವೆಂಬುದು ಚನ್ನಬಸವಣ್ಣನವರಿಗೇ ಆಗಿರಲಿಲ್ಲವೆಂದಾಯಿತು. ಹಾಗಾದರೆ ಮುರಘ ಮಠದವರು ಶಿಖಾಪಟ್ಟವನ್ನು ಯಾರಿಂದ ಯಾವಾಗ ಪಡೆದರೆಂಬುದು ಇತಿಹಾಸದಿಂದ ಸಿದ್ಧವಾಗುವುದಿಲ್ಲ. ಅದೂ, ಚನ್ನಬಸವಣ್ಣ ನವರ ತರುವಾಯ ಸುಮಾರು ಆರುನೂರು ವರ್ಷಗಳಾದಮೇಲೆ ಆ ಶಿಖಾಪಟ್ಟ ಮುರಿಗಿಸ್ವಾಮಿಗಳಿಗಾಯಿತಂತೆ! ಶಿವಾನುಭವಪಟ್ಟದ ನೋಡಾ ಸಿದ್ಧಲಿಂಗ ಸ್ವಾಮಿಗಳಿಂದ ಚಿತ್ರದುರ್ಗದ ವಿರಕ್ತಮಠದ ಮೊದಲನೆಯ ನಿರಾಭಾರಿ ಇಮ್ಮಡಿ ಮುರಿಗಿಸ್ವಾಮಿಗಳಿಗೆ ಶಿಖಾಪಟ್ಟವಾಯಿತೆಂದು ಶ್ರೀ ಮಲ್ಲಿಕಾರ್ಜುನಸ್ವಾಮಿಗಳು ಹೇಳುತ್ತಾರೆ. ಚಿತ್ರದುರ್ಗದ ಮಠ ಸ್ಥಾಪನೆಯಾದುದು ಕ್ರಿ. ಶ. ೧೭೦೩ ರಲ್ಲಿ ಎಂದು ಚರಿತ್ರೆ ನಿರ್ಧರಿಸಿರುತ್ತದೆ. ಅದಕ್ಕಿಂತಲೂ ಹಿಂದೆ, ಮುರುಘಮಠವಿತ್ತು. ಅದು ಆನಂದಪುರಂ ಮುರಘಾಮಠವೆಂಬುದರಲ್ಲಿ ಸಂಶಯವಿಲ್ಲ. ಮುರಘ ಸಂಪ್ರದಾಯ ಶುದ್ಧ ದ್ರಾವಿಡ ಪುರಾತನರ ಸಂಪ್ರದಾಯ. ಶಿವಾನುಭವ ಪಟ್ಟವೇ ಮೂಲ. ಶಿಖಾಪಟ್ಟ ಅದರಿಂದ ಉದಯವಾಯಿತು.

ಹಿಂದೆ ಸುಮಾರು ಹದಿನೈದನೆಯ ಶತಮಾನದ ಉತ್ತರಾರ್ಧದಲ್ಲಿ ಎಡೆಯೂರು ಶ್ರೀ ಸಿದ್ಧಲಿಂಗ ಶಿವಯೋಗಿಗಳ ನೇತೃತ್ವದಲ್ಲಿ ಏಳುನೂರು ಚರಮೂರ್ತಿಗಳೂ, ಮೂರುಸಾವಿರ ವಿರಕ್ತರೂ ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೂ ಸಂಚರಿಸಿ ಧರ್ಮಸಂಸ್ಥಾಪನೆ ಮಾಡಿದರು. ಮೂರು ಸಾವಿರ ಚರಜಂಗಮ ತಿಂಥಿಣಿ ಪ್ರಾಚೀನ ಸಂಪ್ರದಾಯವನ್ನು ಅನುಸರಿಸಿ ನಾಡಿನಲ್ಲಿ ಚರಿಸಿತು. ಇವರು ಧರ್ಮಗ್ಲಾನಿಯಾಗದಂತೆ ಅಲ್ಲಲ್ಲಿ ಕೇಂದ್ರ ಮಠಗಳನ್ನು ನಿರ್ಮಿಸಿಕೊಂಡು, ಆ ಕೇಂದ್ರದ ಆಡಳಿತದಲ್ಲಿ ಅಲ್ಲಲ್ಲಿ ನೂರಾರು ಮಠಗಳನ್ನು ಸ್ಥಾಪಿಸಿ ಧರ್ಮಪ್ರಚಾರ ಮಾಡಿದರು. ಬಸವಣ್ಣನವರ ತರುವಾಯ ಮತ್ತೊಮ್ಮೆ ಶರಣಧರ್ಮ ಹದಿನೈದನೆಯ ಶತಮಾನದಲ್ಲಿ ಪರಿಪುಷ್ಟವಾಗಿ ಬೆಳೆಯಿತು. ಈ ಮೂರುಸಾವಿರ ವಿರಕ್ತರ ವೃಂದ ಹುಬ್ಬಳ್ಳಿಯ ಪ್ರಾಂತದಲ್ಲಿ ಮೊದಲೇ ಸ್ಥಾಪನೆಯಾಗಿದ್ದ 'ಮೂರುಸಾವಿರ ಚರಜಂಗಮ' ಸಂಸ್ಥೆಯನ್ನು ಪುನರುಜ್ಜೀವನಗೊಳಿಸಿತು. ವೀರಶೈವ ಧರ್ಮದಲ್ಲಿ 'ಮೂರುಸಾವಿರ ಜಂಗಮ ಗಣ'ವೆಂಬುದು ಆರ್ಷೇಯ ಜಂಗಮ ಪ್ರಭೇದವೆಂಬುದು ಸ್ವತಃಸಿದ್ಧವಾದುದು. ಆ 'ಜಂಗಮಗಣ'ವೇ ಮಠವೆಂಬ ಹೆಸರಿನಿಂದ ಹುಬ್ಬಳ್ಳಿಯಲ್ಲಿ ನೆಲೆಗೊಂಡಿತು.

*ಶ್ರೀ ಎಸ್. ಡಿ. ಇಂಚಲ, ಬಿ.ಎ.,ಬಿ.ಟಿ., ಅವರು "ಹುಬ್ಬಳ್ಳಿಯ ಶ್ರೀ ಜಗದ್ಗುರು ಮೂರುಸಾವಿರ ಮಠದ ಚರಿತ್ರೆ"ಯನ್ನು ಪ್ರಕಟಿಸಿರುತ್ತಾರೆ. "ಹದಿನೆಂಟನೆಯ ಶತಮಾನದ ಮೊದಲನೆಯ ಕಾಲುಭಾಗ; ಮೊಗಲರ-ಮುಸಲ್ಮಾರ ಮತ್ತು ಮರಾಟರ ಧಗಧಗಿಸುವ ದಬ್ಬಾಳಿಕೆಯ ಕಾಲವದು. ಕನ್ನಡಿಗರು ಕಂಗೆಟ್ಟು ಕಳವಳಗೊಂಡರು; ವೀರಶೈವರು ವಿಪರೀತವಾಗಿ ವಿಹ್ವಲಗೊಂಡರು. ಧರ್ಮಗ್ಲಾನಿ ತಲೆದೋರಿ ತಾಂಡವವಾಡುತ್ತಿತ್ತು. ಅದೇ ಸಮಯಕ್ಕೆ ಕರ್ಣಾಟಕದಲ್ಲಿ ಹನ್ನೆರಡುಸಾವಿರದ ವಿರಕ್ತರದೊಂದು ತಂಡ, ಆರುಸಾವಿರದ ವಿರಕ್ತರದೊಂದು ಗಣ, ಮೂರುಸಾವಿರ ವಿರಕ್ತರದೊಂದು ಗುಂಪು- ಇವು ಧರ್ಮಸಂಘಟನಾ ಕಾರ್ಯಕ್ಕೆ ತೊಡಗಿ ಅಲ್ಲಲ್ಲಿ ಅಲೆದಾಡಹತ್ತಿದವು. ಚಿತ್ರದುರ್ಗದ ಮಾರ್ಗವಾಗಿ ಮೂರುಸಾವಿರ ವಿರಕ್ತರಗುಂಪು ಉತ್ತರಕರ್ಣಾಟಕದ ನಡುಮನೆಯಂತಿರುವ ಹುಬ್ಬಳ್ಳಿಗೆ ಬಂದು ನಿಂತಿತು. ಅದರ ನಾಯಕ–ಅಪ್ಪಣ್ಣನವರು ವಿರಕ್ತರಾಗಿದ್ದಂತೆ, ಅಪೂರ್ವ ಯೋಗಿಗಳೂ, ಅಸಾಧಾರಣ ತ್ಯಾಗಿಗಳೂ ಆಗಿದ್ದರು. ತಮ್ಮ ಮೂರುಸಾವಿರ ವಿರಕ್ತರ ವಾಸ್ತವ್ಯದ ಗುರುತಿನಾಗಿ, ಅವರು ಅಲ್ಲೊಂದು ಮೂರುಸಾವಿರ ಮಠವನ್ನು ಸ್ಥಾಪಿಸಿದರು" ಎಂದು ಶ್ರೀ ಎಸ್. ಡಿ. ಇಂಚಲರು ಬರೆದಿರುತ್ತಾರೆ. ಪ್ರೊ॥ ಎಸ್. ಎಸ್. ಮಾಳವಾಡ, ಎಂ.ಎ., ಅವರು ಹುಬ್ಬಳ್ಳಿಯ ಮೂರುಸಾವಿರ ಮಠದ ಸ್ಥಾಪನೆ ಸುಮಾರು ಎರಡೂಕಾಲು ಶತಮಾನದಿಂದೀಚೆಗೆ ಆಯಿತೆಂದು ಅಭಿಪ್ರಾಯಪಡುತ್ತಾರೆ. ಕ್ರಿ. ಶ. ೧೭೩೭ ರಲ್ಲಿ ಬಸವಪ್ಪಶೆಟ್ಟಿ ಎಂಬ ವೀರಶೈವ ವರ್ತಕ ಹೊಸ ಹುಬ್ಬಳ್ಳಿಯನ್ನು ಕಟ್ಟಿಸಿದನೆಂದು ಶ್ರೀ ಬುದ್ಧಯ್ಯಮಗೆಯ್ಯ ಸ್ವಾಮಿ ಪುರಾಣಿಕರು ಶ್ರೀಮದನಾದಿ ಅಲ್ಲಮಪ್ರಭು ಎಂಬ ಗ್ರಂಥದಲ್ಲಿ ಹೇಳಿರುತ್ತಾರೆ. ಆಗಲೇ ಆ ವರ್ತಕ ಹೊಸಮಠವನ್ನು ಕಟ್ಟಿಸಿ, ಆ ಮಠಕ್ಕೆ ಹುಚ್ಚಗುರುಸಿದ್ಧೇಶ್ವರರೆಂಬ ಸ್ವಾಮಿಗಳಿಗೆ ಪಟ್ಟಗಟ್ಟಿಸಿದನೆಂದೂ ಶ್ರೀ ಪುರಾಣಿಕರು ತಿಳಿಸಿರುತ್ತಾರೆ. ಹುಬ್ಬಳ್ಳಿ ಮೂರುಸಾವಿರ ಮಠದಲ್ಲಿ ಅವರ ಗದ್ದುಗೆ ಇದೆ. ಇದೇ ಕರ್ತೃಗದ್ದುಗೆಯೆಂದು ಪ್ರಸಿದ್ಧವಾಗಿದೆ. ಆದರೆ, ಈ ಮಠವೇ ಮೂರುಸಾವಿರ ಮಠವೆಂದೂ, ಹುಚ್ಚುಗುರುಸಿದ್ಧೇಶ್ವರಸ್ವಾಮಿಯೇ

*೧೯೫೬ನೆಯ ಸೆಪ್ಟಂಬರ್ ತಿಂಗಳು- "ಸುಕುಮಾರ" ಮಾಸಪತ್ರಿಕೆಯನ್ನು ನೋಡಿರಿ.

ಪ ಮಠದ ಮೂಲಗುರುವೆಂದೂ ಒಪ್ಪಲು ಸಾಧ್ಯವಿಲ್ಲ. ಅದು ಇನ್ನೂ ಪ್ರಾಚೀನವಾದುದು. ನಿರಂಜನವಂಶ ರತ್ನಾಕರದ ನಿರಾಭಾರಿ ಪರಂಪರೆಯಲ್ಲಿ ಕಟ್ಟಿಗೆಹಳ್ಳಿ ಸಿದ್ಧವೀರಸ್ವಾಮಿಗಳು ಇಪ್ಪತ್ತನಾಲ್ಕನೆಯವರು. ಅವರ ತರುವಾಯ ನೋಡಾಸಿದ್ಧಲಿಂಗಸ್ವಾಮಿಗಳು ನಿರಾಭಾರಿ ಪಟ್ಟಭದ್ರರಾದರು. ಈ ಕಟ್ಟಿಗೆಹಳ್ಳಿ ಸ್ವಾಮಿಗಳು ಕ್ರಿ. ಶ. ೧೬೨೫ ರಲ್ಲಿ ತಿಳುವಳ್ಳಿಯಲ್ಲಿ ಲಿಂಗೈಕ್ಯರಾದರೆಂದು ಶ್ರೀಭುವನಾದಿ ಅಲ್ಲಮಪ್ರಭು ಗ್ರಂಥದಲ್ಲಿ ಹೇಳಿದೆ. ಈ ಪರಂಪರೆಯಲ್ಲಿ ೧೯ನೆಯ ತೋಂಟದ ಸಿದ್ಧಲಿಂಗ ಯತೀಂದ್ರರ ತರುವಾಯ ಕಟ್ಟಿಗೆಹಳ್ಳಿ ಸ್ವಾಮಿಗಳು ಐದನೆಯವರಾಗಿದ್ದಾರೆ. ತೋಂಟದ ಸಿದ್ಧಲಿಂಗರಕಾಲ ಕ್ರಿ. ಶ. ೧೪೭೦ ರಿಂದ ೧೫೦೦ ಎಂದು ಪಂಡಿತರು ತಿಳಿಸುತ್ತಾರೆ. ಆದ್ದರಿಂದ ಕಟ್ಟಿಗೆಹಳ್ಳಿ ಸ್ವಾಮಿಗಳ ಕಾಲ ಕ್ರಿ. ಶ. ೧೬೦೦ ರಿಂದ ೧೬೨೫ ಎಂದು ಹೇಳಬಹುದು. ಇವರ ಶಿಷ್ಯ ನೋಡಾ ಸಿದ್ಧಲಿಂಗರಕಾಲ ಕ್ರಿ. ಶ. ೧೬೨೫ ರಿಂದ ೧೬೫೦ ಎಂದು ಭಾವಿಸಬಹುದು. ಅವರು ಶ್ರೀವಾಚ್ಯದ ಕುಮಾರದೇಶಿಕೇಂದ್ರರಿಗೆ ಶಿವಾನುಭವ ಚರಂತಿಗೆಯ ಪಟ್ಟವನ್ನು ಮಾಡಿ ಸ್ವಾದಿ ರಾಜ್ಯದ ಇಸಳೂರಿನಲ್ಲಿ ಬಯಲಾದರೆಂದು ನಿರಂಜನವಂಶ ರತ್ನಾಕರದಲ್ಲಿ ಉಕ್ತವಾಗಿದೆ. ಇವರ ಗದ್ದುಗೆ ಶಿವಮೊಗ್ಗಾ ಜಿಲ್ಲೆಯಲ್ಲಿ ಜಡೆ ಎಂಬ ಗ್ರಾಮದಲ್ಲಿದೆ. ಈ ಕುಮಾರ ಸ್ವಾಮಿಗಳೇ ಹುಬ್ಬಳ್ಳಿ ಮೂರುಸಾವಿರಮಠದ ವಿರಕ್ತಪಟ್ಟಭದ್ರರಾದರೆಂದು ತಿಳಿದುಬರುತ್ತದೆ. ಆದ್ದರಿಂದ ಹುಬ್ಬಳ್ಳಿಯಲ್ಲಿ ಮೂರುಸಾವಿರಮಠ ಕ್ರಿ. ಶ. ೧೬೫೦ಕ್ಕಿಂತಲೂ ಹಿಂದೆಯೇ ಇದ್ದಿರಬೇಕೆಂದು ಊಹಿಸಬಹುದು. ಹಾಗಾದರೆ, ಬಸವಪ್ಪಶೆಟ್ಟಿ ಹದಿನೆಂಟನೆಯ ಶತಮಾನದಲ್ಲಿ ಹುಬ್ಬಳ್ಳಿಯಲ್ಲಿ ಮೂಲ ಮೂರು ಸಾವಿರ ಮಠಕ್ಕಾಗಿ ನೂತನ ಭವ್ಯಮಠವನ್ನು ೧೮ ನೆಯ ಶತಮಾನದಲ್ಲಿ ಕಟ್ಟಿಸಿರಬಹುದೆಂಬುದರಲ್ಲಿ ಅನುಮಾನವಿಲ್ಲ. ಮೂರುಸಾವಿರಮಠ ಕುಮಾರ ಪಂಥದ ಜಂಗಮಮಠ. ನಾವು ಮೊದಲೇ ಹೇಳಿರುವಂತೆ ಅಲ್ಲಮರೂ, ಚನ್ನಬಸವಣ್ಣನವರೂ, ಕುಮಾರಪಂಥದ ಜಂಗಮಮೂರ್ತಿಗಳೇ. ವಾಚ್ಯದ ಕುಮಾರ ದೇಶಿಕೇಂದ್ರರು ಹದಿನೇಳನೆಯ ಶತಮಾನದಲ್ಲಿ ಮೂರುಸಾವಿರ ಮಠದ ಸ್ವಾಮಿಯಾದರೆಂದರೆ, ಆ ಮಠ ಮೊದಲೇ ಇದ್ದು, ಇವರ ಕಾಲದಲ್ಲಿ ಕುಮಾರಸಮಯವೆಂದು ಸ್ಪಷ್ಟವಾಗಿ ತಿಳಿಯಬೇಕಾಯಿತು. ಏಕೆಂದರೆ, ಮುರಘಸಮಯವೆಂಬ ಒಂದು ಹೊಸ ಪಂಥ ಸುಮಾರು ಇದೇ ಕಾಲದಲ್ಲಿ

ಅಥಣಿಯಲ್ಲಿ ಉದಯವಾಯಿತು. ತಮಿಳು ಶೈವದಲ್ಲಿ ಮುರಘ ಪುರಾತನನು ತನ್ನ ಸಮಯದ ಮಠಗಳನ್ನು ಏರ್ಪಡಿಸಿ, ತಮಿಳು, ಆಂಧ್ರ, ಕನ್ನಡ ನಾಡುಗಳಲ್ಲಿ ಶೈವ ತತ್ತ್ವಗಳನ್ನು ಪ್ರಸಾರ ಮಾಡಿದ್ದನು. ಆ ಪಂಥ ೧೨ನೆಯ ಶತಮಾನದಲ್ಲಿ ವೀರಶೈವದಲ್ಲಿ ಸೇರಿಹೋಯಿತು. ಕುಮಾರಪಂಥದಲ್ಲಿ ಷಣ್ಮುಖನೇ ಆರಾಧ್ಯಮೂರ್ತಿಯಾಗಿ, ಅದೊಂದು ಪಂಥ ಸ್ಕಾಂದಮತವೆಂದು ಆಚರಣೆಯಲ್ಲಿತ್ತು. ಅದು ವೈದಿಕ ತಾಂತ್ರಿಕ ಮತ. ಮುರಘಮತ ತಾಂತ್ರಿಕ ವೈದಿಕ ಮತ. ಆದರೆ ಕುಮಾರಪಂಥ ಪ್ರಾಚೀನ; ಮುರಘಪಂಥ ಅರ್ವಾಚೀನ.

ಸಿದ್ಧಲಿಂಗೇಶ್ವರರು ಏಳುನೂರು ಚರಮೂರ್ತಿಗಳು ಮತ್ತು ಮೂರು ಸಾವಿರ ವಿರಕ್ತರೊಂದಿಗೆ ಧರ್ಮದಿಗ್ವಿಜಯ ಮಾಡಿದರೆಂದು ನಿರಂಜನವಂಶ ರತ್ನಾಕರದಿಂದ ತಿಳಿದುಬರುತ್ತದೆ. ಕ್ರಿ. ಶ. ೧೫ನೆಯ ಶತಮಾನದಲ್ಲಿಯೂ 'ಮೂರುಸಾವಿರ ಜಂಗಮ ವಿರಕ್ತಗಣ' ಪರಂಪರೆ ಇತ್ತೆಂದು ಗೊತ್ತಾಗುತ್ತದೆ. ಮೂಲ ಮೂರುಸಾವಿರ ಮಠ ಎಂದರೆ ಮೂರುಸಾವಿರ ಚರಜಂಗಮಗಣ-ಎಂಬುದು ಅತಿ ಪ್ರಾಚೀನವಾದುದು ಎಂಬುದರಲ್ಲಿ ಸಂಶಯವಿಲ್ಲ. "ಆ ಮುರಿಗಾ ಸ್ವಾಮಿಗಳು ನಾವು ಉಭಯತರು ಷಟ್‌ಸ್ಥಲಕ್ಕೆ ಅಧಿಪತಿಗಳಾಗಿ ದೇಶ ಮಧ್ಯದಲ್ಲಿರುವ ಮೂರುಸಾವಿರ ವಿರಕ್ತರಿಗೂ ಏಳುನೂರು ಬುಡಕಟ್ಟಿನ ಚರಮೂರ್ತಿಗಳಿಗೂ ಗುರುಗಳಾಗಿ ಇವರುಗಳಕಡೆಯಿಂದ ಈ ವರೆವಿಗೂ ಕಾಣಿಕೆಗಳನ್ನು ತೆಗೆದುಕೊಂಡೆವು" ಎಂದು ನೋಡಾ ಸಿದ್ಧಲಿಂಗಸ್ವಾಮಿಗಳು ಹೇಳಿದರೆಂದು ನಿರಂಜನವಂಶ ರತ್ನಾಕರ ( ಪುಟ ೬೫ ) ದಲ್ಲಿ ಉಕ್ತವಾಗಿದೆ. ನೋಡಾ ಸಿದ್ಧಲಿಂಗ ಸ್ವಾಮಿಗಳು ಶಿವಾನುಭವ ಚರಂತಿಗೆಯ ಸಂಪ್ರದಾಯದವರು. "ಶ್ರೀ ಚನ್ನಬಸವೇಶ್ವರನು ಸಿದ್ಧರಾಮ ಸ್ವಾಮಿಗಳವರಿಗೆ ಬೋಧಿಸಿದ ಶಿವಾನುಭವ ಪುಸ್ತಕದ ಸೂತ್ರವಿಡಿದು ಶಿಖಾಶೈಲವಿಲ್ಲದೆ ಸೊನ್ನಲಾಪುರದ ಸಿದ್ಧರಾಮಸ್ವಾಮಿಗಳವರ ಬಳಿವಿಡಿದು ಕಡೆಗೆ ನಮ್ಮತನಕ ಶಿವಾನುಭವ ಚರಂತಿಗೆ ಪಟ್ಟವು ಇಪ್ಪತ್ತುಮೂರುಪಟ್ಟವಾದವು" ಎಂದು ಇದೇ ಪುಸ್ತಕ (೬೫ನೆಯ ಪುಟ) ದಲ್ಲಿ ಹೇಳಿದೆ. ಆದ್ದರಿಂದ – ಅದುವರೆಗೂ 'ಮೂರು ಸಾವಿರ ವಿರಕ್ತಗಣ' ಅವಿಚ್ಛಿನ್ನವಾಗಿ ಶಿವಾನುಭವ ಚರಂತಿಗೆಯ ಪಟ್ಟಾಧಿಕಾರದಲ್ಲಿಯೇ ನಡೆದುಬಂತೆಂಬುದು ಸಿದ್ಧವಾಗುತ್ತದೆ. ಹದಿನೆಂಟನೆಯ ಶತಮಾನದಲ್ಲಿ ಮುರಗಿಮಠದ ವಿರಕ್ತ ಪರಂಪರೆಯಲ್ಲಿ ಇಮ್ಮಡಿ ಮುರಿಗೀಸ್ವಾಮಿಗಳ

ವಾಯ ಐವನೆಯ ನಿರಕ್ತರು ಮೂರುಸಾವಿರದ ಗುರುಪಾದಸ್ವಾಮಿ ಬುವರೂ ಆರನೆಯವರು ಮೂರುಸಾವಿರದ ಶಿವಲಿಂಗಸ್ವಾಮಿ ಎಂಬುವರೂ ಬುರುತ್ತಾರೆ. ಇವರು ಮೂರುಸಾವಿರ ಮಠದ ಸಂಪ್ರದಾಯದ ಜಂಗಮ ಬುವರಲ್ಲಿ ಸಂಶಯವಿಲ್ಲ. ಮೂರುಸಾವಿರ ಮಠದ ಪ್ರಭಾವ ಎಲ್ಲ ವಿರಕ್ತ ಗಳಮೇಲೆಯೂ ಕಾಣುತ್ತಿತ್ತು. ನೋಡಾ ಸಿದ್ಧಲಿಂಗರ ತರುವಾಯ ಮೂರುಸಾವಿರ ವಿರಕ್ತಗಣ ಸಂಪ್ರದಾಯನ್ಯೂನವಿಲ್ಲದೆ ವಾಚ್ಯದ ಕುಮಾರ ಸ್ವಾಮಿಗಳಿಗೆ ಬಂದು, ಅವರು ಹುಬ್ಬಳ್ಳಿಯ ಮೂರುಸಾವಿರ ಮಠದ ನಿರಾಭಾರಿ ಪಾದರೆಂಬವರಮೇಲೆ, ಈ ಮೂರುಸಾವಿರಗಣ (ಮಠ) ಅಲ್ಲಮರ ಕಾಲದಿಂದಲೂ ಬಂದಿವೆಯೆಂಬುದು ನಿರ್ವಿವಾದ. ಅಷ್ಟೇ ಅಲ್ಲ, ಅಲ್ಲಮರ ಪ್ರಾಚೀನಗಣ ಮಠಪರೆಯಿಂದಲೂ ಬಂದಿದೆಯೆಂಬುದು ಸ್ಪಷ್ಟವಾಗಿದೆ. ಇದು ಅನಾದಿ ನಡಿದು ಬಂದ ಮಠವಾಗಿದೆ.

* "ಶ್ರೀ ಜಗದ್ಗುರು ಮೂರುಸಾವಿರ ಮಠದ ಅಧೀನದಲ್ಲಿ ಹುಬ್ಬಳ್ಳಿ ಯೊಳಗೆ ವಿರೂಪಾಕ್ಷಯ್ಯನ ಮಠ, ಓಲೆ ಮಠ, ಕೌದಿ ಮಠ ಎಂಬ ಮೂರು ಮಠಗಳಿರುತ್ತವೆ. ಪೂವಳ್ಳಿ ಪುಣ್ಯಾಶ್ರಮದಲ್ಲಿದ್ದ ಮೂರುಸಾವಿರ ಮಠವೇ ಮೂಲಮಠ. ಅದು ಲೋಪವಾದಬಳಿಕ, ಅದರ ಸವಿನೆನಹಿಗೆ 'ವಿರೂಪಾಕ್ಷಯ್ಯ' ಎಂಬ ಧರ್ಮಪ್ರವರ್ತಕರು ಕಟ್ಟಿಸಿದ ಮಠವೇ ವಿರೂಪಾಕ್ಷಯ್ಯನ ಮಠ. ಇಲ್ಲಿಯೂ ಕೆಲವು ಜಗದ್ಗುರುಗಳು ಆಗಿಹೋಗಿರಬೇಕು; ಇದು ಪೂರ್ವದ ಹಳೇ ಮೂರುಸಾವಿರದ ಮಠವಾಗಿದ್ದಿರಬೇಕು. ಹಳೇ ಹುಬ್ಬಳ್ಳಿ ಹುಟ್ಟಿದಮೇಲೆ, ಊರಹೊರಗೆ ವಿರಕ್ತಮಠವೊಂದು ನಿರ್ಮಾಣವಾಗಿರಬೇಕು. ಆಗಿನ ಜಗದ್ಗುರುಗಳು ವಿರೂಪಾಕ್ಷಯ್ಯನ ಮಠದಿಂದ ಇಲ್ಲಿಗೆ ಸ್ಥಳಾಂತರಿಸಿರಬೇಕು. ಈ ಮಠದ ಶಾಖೆಯಂತೆ ಕೌದಿಮಠವಿದ್ದಿರಬೇಕು. ಹೊಸ ಹುಬ್ಬಳ್ಳಿ ಹುಟ್ಟಿಬಂದ ಬಳಿಕ, ಈ ಮಠ ಓಲೆ ಮಠವಾಗಿರಬೇಕು; ಇದು ಹಳೇ ಮೂರುಸಾವಿರ ಮಠವಾಗಿದ್ದಿರ ಬೇಕು. ಹೊಸ ಹುಬ್ಬಳ್ಳಿಯ ನೆರೆಗೆ ದೊಡ್ಡ ಹೊಂಡವಿತ್ತು. ಹೊಂಡದ ದಂಡೆಯಮೇಲಿನ ರಮ್ಯಸ್ಥಾನದಲ್ಲಿ ಕರ್ತೃಜಗದ್ಗುರುಗಳವರು ತಪೋನುಷ್ಠಾನ ಮಾಡಿದ್ದರಿಂದೂ, ಆ ಸ್ಥಳದ ಪುಣ್ಯ ಸ್ಮಾರಕವಾಗಿ ಹಿಂದಿನ ಹಿರಿಯರು ಕಲ್ಮಠ

* ಹೊಂಬೆಳಗು- ಗ್ರಂಥ: ಶ್ರೀ ಕಲ್ಲೂರ ಸಂಗಣ್ಣನವರು.

ಹಾಗೂ ಗದ್ದುಗೆಗಳನ್ನು ಕಟ್ಟಿಸಿದರೆಂದೂ, ಕಲ್ಮಠವಿದ್ದ ಸ್ಥಾನದಲ್ಲಿಯೇ ಕರ್ತೃ ಗದ್ದುಗೆ ಹುಟ್ಟಿತೆಂದೂ ಮತ್ತು ಈ ಗದ್ದುಗೆಯಬಳಿ ವಿಶಾಲವಾದ ಹೊಸ ಮಠವನ್ನು ಕಟ್ಟಲಾಯಿತೆಂದೂ ಹೇಳುತ್ತಾರೆ. ಇದು ಈಗಿನ ಮೂರುಸಾವಿರ ಮಠ. ಆಗಿನ ಜಗದ್ಗುರುಗಳು ಹಳೇ ಮೂರುಸಾವಿರ ಮಠದಿಂದ ಇಲ್ಲಿಗೆ ಬಂದೊಡನೆ, ತಮ್ಮ ಮುಂಚಿನ ಮಠವನ್ನು ಕೇವಲ ತಾಳೆಯೋಲೆ ಹೊತ್ತಗೆಗಳ ಸಂಗ್ರಹ, ತಾಡೋಲೆ ಗ್ರಂಥಗಳ ಲೇಖನ- ಈ ಕಾರ್ಯಗಳಿಗಾಗಿ ಉಪಯೋಗಿಸುತ್ತಿದ್ದಿರಬೇಕು. ಅದುವೆ ಓಲೆ ಮಠ" ಎಂದು 'ಹೊಂಬೆಳಗು' ಗ್ರಂಥದಲ್ಲಿ ಶ್ರೀ ಕಲ್ಲೂರ ಸಂಗಣ್ಣನವರು ವಿಚಾರಾತ್ಮಕ ಅಭಿಪ್ರಾಯವನ್ನು ಸೂಚಿಸಿರುತ್ತಾರೆ. ಇವರ ಅಭಿಪ್ರಾಯ ತುಂಬಾ ಸಮಂಜಸವಾಗಿದೆ. ಬಸವಪ್ಪಶೆಟ್ಟರು ಈಗಿರುವ ಹುಬ್ಬಳ್ಳಿ ಮೂರುಸಾವಿರ ಮಠವನ್ನು ನಿರ್ಮಾಣ ಮಾಡಿಸಿದರೆಂದು ಒಪ್ಪಲು ಯುಕ್ತ ಆಧಾರಗಳಿಲ್ಲ.

ಮೂರುಸಾವಿರ ಮಠದ ಶಾಖಾ ಮಠಗಳು ಕನ್ನಡ, ತೆಲುಗು, ತಮಿಳು ಮತ್ತು ಮರಾಟಿ ಪ್ರಾಂತಗಳಲ್ಲಿವೆ. ಅದರಲ್ಲಿಯೂ ಕಾರವಾರ, ಬೆಳಗಾಂವಿ, ಧಾರವಾಡ, ಬಿಜಾಪುರ, ಕೊಲ್ಲಾಪುರ ಮತ್ತು ದಕ್ಷಿಣ ಮೈಸೂರು ಪ್ರದೇಶಗಳಲ್ಲಿ ಹೆಚ್ಚಾಗಿರುತ್ತವೆ.

ಹುಬ್ಬಳ್ಳಿ ಮೂರುಸಾವಿರ ಮಠದ ಗುರುಪರಂಪರೆ ಸಂಪೂರ್ಣವಾಗಿ ಉಪಲಬ್ಧವಾಗಿಲ್ಲ. ನಿರಂಜನವಂಶ ರತ್ನಾಕರದ ನಿರಾಭಾರಿ ಪರಂಪರೆಯೇ ಈ ಮಠದ ಪೂರ್ವ ಗುರುಕುಲವೆಂದು ಭಾವಿಸಬಹುದು. ಈ ಮಠದ ಪರಿಸರದಲ್ಲಿ ಒಟ್ಟು ೧೭ ಗದ್ದುಗೆಗಳು ಕಂಡುಬರುತ್ತಿವೆ. ಆದರೆ ನಮಗೆ ಆರು ಜನ ಜಗದ್ಗುರುಗಳ ಹೆಸರುಗಳು ಮಾತ್ರ ದೊರೆಯುತ್ತವೆ. ಅವರು ಯಾರು ಯಾರೆಂದರೆ: ಗುರುಸಿದ್ಧರಾಜಯೋಗೀಂದ್ರರು, ಸಿದ್ಧಲಿಂಗರಾಜಯೋಗೀಂದ್ರರು, ಗಂಗಾಧರರಾಜಯೋಗೀಂದ್ರರು, ಗುರುಸಿದ್ಧರಾಜಯೋಗೀಂದ್ರರು, ಗಂಗಾಧರ ರಾಜಯೋಗೀಂದ್ರರು, ಗುರುಸಿದ್ಧರಾಜಯೋಗೀಂದ್ರರು.

ಈಗ ಶ್ರೀಮನ್ನಿರಂಜನಜಗದ್ಗುರು ಪೂಜ್ಯ ಶ್ರೀ ಶ್ರೀ ಗಂಗಾಧರರಾಜ ಯೋಗೀಂದ್ರ ಮಹಾಸ್ವಾಮಿಗಳು ಮೂರುಸಾವಿರ ಮಠದ ಅಧಿಕಾರಿಗಳಾಗಿರುತ್ತಾರೆ. ತಾ|| ೧—೫—೧೯೫೮ ನೆಯ ಗುರುವಾರ ಶ್ರೀ ಗಂಗಾಧರರಾಜ ಯೋಗೀಂದ್ರರು ಜಗದ್ಗುರುಗಳಾದರು. ಇವರು ನಿರ್ಮಲಾತ್ಮರು, ಶಿವತತ್ತ್ವ

ಷ್ಠರು, ಶಿವಯೋಗ ನಿರತರು, ವಿದ್ವಾಂಸರು, ಸುಸಂಸ್ಕೃತರು, ತರುಣರು, ಹಸ ಸಂಪನ್ನರು, ಲೋಕಸಂಪೂಜ್ಯರು, ಕವಿವರ್ಯರು, ಸಾಹಿತ್ಯ ಸ್ಥನಿಗಳು ಅಲ್ಲದೆ, ಉದ್ದಾಮ ಲೇಖಕರೂ, ವಾಗ್ಮಿಗಳೂ ಆಗಿರುತ್ತಾರೆ.

"ಶುದ್ಧ ತಪಸ್ವಿಗಳೂ, ಸಿದ್ಧಪುರುಷರೂ ಪ್ರಸಿದ್ಧ ಪಂಡಿತರೂ ಈ ಮಠದ ಪರಂಪರಾವಳಿಯಲ್ಲಿ ಸಮಾವೇಶವಾಗಿರುವುದು ಈ ಪೀಠದ ಒಂದು ವೈಶಿಷ್ಟ್ಯ; ಜಾತಿ, ಮತ, ಪಕ್ಷ, ಪಂಗಡಗಳ ತಾರತಮ್ಯವಿಲ್ಲದೆ, ಸರ್ವಧರ್ಮೀಯರೂ ಈ ಪೀಠಕ್ಕೆ ನಡೆದುಕೊಳ್ಳುತ್ತ, ತಮ್ಮ ತಮ್ಮ ಗೌರವಾದರಗಳನ್ನು ತೋರಿಸುತ್ತಿರುವುದು ಪೀಠದ ಇನ್ನೊಂದು ವೈಶಿಷ್ಟ್ಯ; ಅಲ್ಲದೆ ಸಂಪತ್ತಿನ ಸರ್ವಾಂಗೀಣ ಉತ್ಕರ್ಷಕ್ಕೋಸ್ಕರ ಉದ್ದಾಮ ಉದ್ಯಮಗಳನ್ನು ಸಂಘಟಿಸುತ್ತ, ಸರ್ವಸಂಪತ್ತು ಸದ್ವಿನಿಯೋಗಗೊಳ್ಳುವಂತೆ ಜಗದ್ಗುರುಗಳು ಸಾಹಸಪಡುತ್ತಿರುವುದು ಪೀಠದ ಮತ್ತೊಂದು ವೈಶಿಷ್ಟ್ಯ".

"ಪ್ರಾಚೀನ ಕಾಲದಿಂದ ವೀರಶೈವ ಪರಂಪರೆಯನ್ನು ಕಾಯ್ದುಕೊಂಡು ಉಜ್ವಲ ಚರಿತ್ರೆ ಪಡೆದು, ಭಕ್ತೋದ್ಧಾರ ಕಾರ್ಯದಲ್ಲಿ ನಿರತವಾಗಿದ್ದ ವೀರಶೈವ ಜಗದ್ಗುರು ಪೀಠಗಳ ಶ್ರೇಣಿಯಲ್ಲಿ ರಾರಾಜಿಸುವ ಶ್ರೀ ಜಗದ್ಗುರು ಮೂರು ಸಾವಿರ ಮಠವು ಕರ್ನಾಟಕದಷ್ಟೇ ಅಲ್ಲದೆ, ಭಾರತದ ಉಳಿದ ರಾಜ್ಯಗಳಲ್ಲಿಯೂ ಮಹಾಜನಗಳ ಮೆಚ್ಚುಗೆಗೆ ಪಾತ್ರವಾಗಿದೆ". "ಹೀಗೆ, ಶ್ರೀ ಜಗದ್ಗುರು ಮೂರುಸಾವಿರ ಮಠ ಸಮಾಜ ದೇವಾಲಯದ ಗರ್ಭಗುಡಿ, ದಿವ್ಯಶಕ್ತಿ ನೀಡುವ ಅಮೃತ ಶಕ್ತಿಯ ಕೇಂದ್ರ, ಸಾಹಿತ್ಯ-ಸಂಸ್ಕೃತಿಗಳ ಪುನರುಜ್ಜೀವನದ ಮಂಟಪ, ಜ್ಞಾನ-ಕ್ರಿಯಾ ಸಮನ್ವಯದ ಪುಣ್ಯಕ್ಷೇತ್ರ, ಅಲ್ಲದೆ ಶರಣ ಸಂಸ್ಕೃತಿಯ ಅಮೃತಕಿರಣರೂಪವಾದ ಶಿವಯೋಗಿಗಳ ಸುಪ್ತ ಚೇತನದ ಮಹಮನೆ" ಎಂಬುದಾಗಿ ವೀರಶೈವ ತತ್ತ್ವವೇತ್ತರು ಗೌರವಭಾವದಿಂದ ಪ್ರಶಂಸಿಸಿರುತ್ತಾರೆ.

ಈಗಿನ ಜಗದ್ಗುರು ಶ್ರೀ ಶ್ರೀ ಗಂಗಾಧರರಾಜ ಯೋಗೀಂದ್ರ ಮಹಾಸ್ವಾಮಿಗಳು ತಮ್ಮ ಪೂರ್ವ ಗುರುಪರಂಪರೆಯನ್ನು ಅನುಸರಿಸಿ, ಉದಾರಚಿತ್ತ ವೃತ್ತಿಯಿಂದ ನಾನಾ ವಿದ್ಯಾ ಸಂಸ್ಥೆಗಳನ್ನು ಪರಿಪೋಷಿಸಿಕೊಂಡು ಬರುತ್ತಿದ್ದಾರಲ್ಲದೆ, ಸಾಹಿತ್ಯ, ಸಂಸ್ಕೃತಿ, ಧಾರ್ಮಿಕ ಮತ್ತು ಸಾಮಾಜಿಕ ಕಾರ್ಯ ಕ್ಷೇತ್ರಗಳಲ್ಲಿ ನವಶಕ್ತಿಯನ್ನು ತುಂಬಿ ಹೊಸ ಹೊಸ ಸಂಸ್ಥೆಗಳನ್ನು ಸ್ಥಾಪಿಸಿ, ಕೃಪೆಯುದಾತರಾಗಿ ಹರಸುತ್ತಿದ್ದಾರೆ. ಇವರು ವಿದ್ಯಾರ್ಥಿ ನಿಲಯಗಳನ್ನು

ಸ್ಥಾಪಿಸಿ, ಪ್ರಾಥಮಿಕ, ಮಾಧ್ಯಮಿಕ ಪ್ರೌಢಶಾಲೆಗಳನ್ನೂ ವಾಣಿಜ್ಯ, ವೃತ್ತಿ ಕಲಾ, ವಿಜ್ಞಾನ ವಿಭಾಗಗಳಲ್ಲಿ ಕಾಲೇಜುಗಳನ್ನೂ ಶ್ರೀ ಮಠದ ಆಶ್ರಯದಲ್ಲಿ ಸಂಸ್ಥಾಪಿಸಿರುತ್ತಾರೆ. ಉತ್ತರ ಕರ್ಣಾಟಕದಲ್ಲಿ ಶ್ರೀ ಮಠ ಮಹೋನ್ನತ ಸ್ಥಾನವನ್ನು ಅಲಂಕರಿಸಿರುತ್ತದೆ. ಈ ಪುಣ್ಯಪುರುಷರು ತೇಜಃಪುಂಜರು; ಶಿವಜ್ಞಾನಸಂಪನ್ನರು. ಆಧ್ಯಾತ್ಮಸಿದ್ಧರು; ಸಾಹಿತ್ಯ ಹೃದಯರು. ಈ ಲೇಖಕರು ತಾ|| ೨೭-೧೨-೬೪ ರಲ್ಲಿ ಪೂಜ್ಯ ಶ್ರೀಗಳನ್ನು ಶ್ರೀಮಠದಲ್ಲಿ ಸಂದರ್ಶಿಸಿ ಶ್ರೀ ಮಠದಲ್ಲಿಯೇ ಆ ರಾತ್ರಿ ಇದ್ದು ಮರುದಿನ ಪುನಃ ಶ್ರೀಗಳ ದರ್ಶನ ಪಡೆದು ಅವರು ಆಶೀರ್ವದಿಸಿ ಕೊಟ್ಟ ಅನೇಕ ಅಮೌಲ್ಯ ಗ್ರಂಥಗಳನ್ನು ಹೊತ್ತುಕೊಂಡು ಅದೇ ದಿನ ಶಿವಯೋಗ ಮಂದಿರದಲ್ಲಿ ಪುನಃ ಅವರ ದರ್ಶನ ಮಾಡಿ, ಆಶೀರ್ವಾದವನ್ನು ಪಡೆಯಲು ಅವಕಾಶವಾಯಿತು. ಶಿವಯೋಗ ಮಂದಿರದಿಂದ ಅವರು ಹುಬ್ಬಳ್ಳಿಗೆ ದಯಮಾಡಿಸಿದರು. ಆ ದಿನವೇ ನವಲಗುಂದ ಗವಿಮಠದಲ್ಲಿ ನಮಗೆ ಶ್ರೀ ಬಸವಲಿಂಗ ಸ್ವಾಮಿಗಳ ಸಂದರ್ಶನವಾಗಿತ್ತು. ಅವರ ಪರಿಚಯಪತ್ರದಿಂದ ಶಿವಯೋಗ ಮಂದಿರದಲ್ಲಿ ನನಗೆ 'ಬೆಳಗು' ಸಂಪುಟ ಗ್ರಂಥವೂ ಲಭಿಸಿತು. ಹುಬ್ಬಳ್ಳಿ ಶ್ರೀಗಳವರ ಸಲಹೆಯಂತೆ ಅಂದು ರಾತ್ರಿ ನಾನು ಬಾಗಲಕೋಟೆಯಲ್ಲಿ ಶ್ರೀ ಮಠದ ಬಿಡಾರದಲ್ಲಿ ನನ್ನ ಕುಟುಂಬ ವರ್ಗದವರೊಂದಿಗೆ ತಂಗಿದ್ದು-ಪ್ರಾತಃಕಾಲ ಕೂಡಲಸಂಗಮ ಕ್ಷೇತ್ರದರ್ಶನ ಮಾಡಿ, ಅನಂತರ ಬಿಜಾಪುರದತ್ತ ಪ್ರಯಾಣ ಮಾಡಿದೆನು. ಆದರಿಂದ ಶ್ರೀ ಮಠದ ಮತ್ತು ಅದರ ಎಲ್ಲ ಸಂಸ್ಥೆಗಳ ಚರಿತ್ರೆಯನ್ನು ಕೂಲಂಕಷವಾಗಿ ತಿಳಿಯಲು ಅವಕಾಶವಾಯಿತು. ಆ ಎಲ್ಲ ವಿವರಗಳನ್ನೂ ಇಲ್ಲಿ ಬರೆಯಲು ಸಾಧ್ಯವಿಲ್ಲ.

ಹುಬ್ಬಳ್ಳಿ ಮೂರುಸಾವಿರ ಮಠ ಅತ್ಯಂತ ಪ್ರಾಚೀನವಾದುದು. ಅದು ನಾಥಸಂಪ್ರದಾಯದಮೇಲೆ ವೀರಶೈವ ಮುದ್ರೆಯನ್ನೊತ್ತಿ, ಆ ಸಂಪ್ರದಾಯದ ಪ್ರಾಬಲ್ಯವನ್ನು ತಗ್ಗಿಸಿತು. ಅನೇಕ ನಾಥಸಂಪ್ರದಾಯದ ಮಠಗಳು ವಿರಕ್ತ ಧರ್ಮವನ್ನು ಅವಲಂಬಿಸಿದುವು. ಹುಬ್ಬಳ್ಳಿ ನಾಥಸಿದ್ಧರ ಸುಭದ್ರ ಕೇಂದ್ರ ವಾಗಿತ್ತು. ಮೂರುಸಾವಿರ ಮಠ ಷಟ್‌ಸ್ಥಲ ಜ್ಞಾನತೀರ್ಥದಲ್ಲಿ ನಾಥ ಪಂಥವನ್ನು ಮಜ್ಜನಮಾಡಿಸಿ, ಅಷ್ಟಾವರಣ ಮಾರ್ಗದಲ್ಲಿ ಲಿಂಗತತ್ತ್ವೋಪದೇಶ ಮಾಡಿತೆಂಬುದರಲ್ಲಿ ಸಂಶಯವಿಲ್ಲ. ಈಗಲೂ ಅಲ್ಲಿ ಸಿದ್ಧಾರೂಢ ಮಠವಿದೆ.

ವು ನಾಥಪಂಥದ ಸಂಕೇತವಾಗಿ ನಿಂತಿದೆ. ಮೂರುಸಾವಿರ ಮಠ ಬಸವಣ್ಣನವರ ಶೂನ್ಯ ತತ್ತ್ವವನ್ನು ಲೋಕದಲ್ಲಿ ಹಬ್ಬಿಸಿತು. ಇದು ಬಸವಣ್ಣನವರ ಕಾಲಕ್ಕಿಂತಲೂ ಪೂರ್ವದಲ್ಲಿಯೇ ಸಂಘಟಿತವಾಗಿದ್ದ ಚರಜಂಗಮಗಣವೆಂದು ಹೇಳಬಹುದು. ಚನ್ನಬಸವಣ್ಣನವರ ಕಾಲದಲ್ಲಿ ಈ 'ಜಂಗಮಗಣ' ಶೂನ್ಯ ತತ್ತ್ವ ಪ್ರಚಾರದಲ್ಲಿ ನೆರವಾಯಿತು. ಬಸವಣ್ಣನವರ ಕಲ್ಯಾಣದಲ್ಲಿದ್ದ ಒಂದು ಲಕ್ಷ ತೊಂಬತ್ತಾರುಸಾವಿರ ಜಂಗಮಶ್ರೇಣಿಯಲ್ಲಿ ಇಂಥ ಗುರುಸ್ಥಲ ಜಂಗಮಗಣ, ಲಿಂಗಸ್ಥಲ ಜಂಗಮಗಣ ಮತ್ತು ಸ್ವಯಂಜಂಗಮ ಗಣಗಳು ಸಮಾವೇಶವಾಗಿದ್ದವು. ಇವು ಸನಾತನ ವೀರಶೈವವನ್ನು ಜೀರ್ಣಿಸಿಕೊಂಡು, ನಾಥಪಂಥವನ್ನು ಆಸ್ವಾದಿಸಿ, ನೂತನ ಶರಣಧರ್ಮವನ್ನು ಅವಲಂಬಿಸಿ ವಿರಕ್ತಪಂಥವಾಗಿ ಮಾರ್ಪಟ್ಟವು. ಅದರಿಂದಲೇ, ಹುಬ್ಬಳ್ಳಿ ಮೂರುಸಾವಿರ ಮಠ ಅಲ್ಲಮಸಂಪ್ರದಾಯದ ಶೂನ್ಯಸಿಂಹಾಸನ ಪರಂಪರೆಯಲ್ಲಿ ಪ್ರಪ್ರಥಮ ಪೀಠವಾಯಿತು. ಆದರೆ, ಇದೇ ಮೂಲ ಶೂನ್ಯಸಿಂಹಾಸನ ಮಠವಲ್ಲ. ಅದು ಕಲ್ಯಾಣದಲ್ಲಿಯೇ ಸಂಸ್ಥಾಪಿತವಾಯಿತು. ಇವೆರಡರಲ್ಲಿಯೂ ಅವಿನಾಭಾವ ಸಂಬಂಧವಿದೆ. ಅದರಿಂದಲೇ, ಶ್ರೀ ಜಗದ್ಗುರು ಮೂರುಸಾವಿರ ಮಠದ ನಿರಾಭಾರಿಗಳನ್ನು "ಶ್ರೀಮತ್ಪರಮಪಾವನ-ಚಾರುತರಚರಿತ, ಮದನ ಮರ್ದನ ನಿತ್ಯನಿರಂಜನ, ನಿಗಮಗೋಚರ-ಸಚ್ಚಿದಾನಂದ ನಿತ್ಯಪರಿಪೂರ್ಣ, ಜಗದ್ವಿಸ್ತಾರ-ಮೂಲಸ್ತಂಭಾಯಮಾನ ಶ್ರೀಮತ್ಪರಶಿವಸ್ವರೂಪ-ಶ್ರೀಮದಲ್ಲಮಪ್ರಭು ಸಾಂಪ್ರದಾಯ ಸಮನ್ವಿತ, ಶ್ರೀಮದ್ಪೂ‍್ರಲತಾ (ಹುಬ್ಬಳ್ಳಿ) ಪುರ ಶೋಭಿತ, ಶ್ರೀ ಜಗದ್ಗುರು ಮೂರುಸಾವಿರ ಮಠಾಧ್ಯಕ್ಷ ಶ್ರೀಮದ್ವೀರಶೈವ ಶೂನ್ಯಸಿಂಹಾಸನಾಧೀಶ, ಶ್ರೀ ಮನ್ಮಹಾರಾಜ ನಿರಂಜನಜಗದ್ಗುರು"ಗಳೆಂದು ಉದ್ಘೋಷಿಸುತ್ತಾರೆ. ಇದು ಆನಂದಪುರ ಮುರಘಸಮಯದ ಮಠದಂತೆಯೇ ಪ್ರಾಚೀನವಾದುದು.

ನಿರಂಜನವಂಶ ರತ್ನಾಕರದಲ್ಲಿ ಹೇಳಿರುವ ಇಪ್ಪತ್ತೈದು ನಿರಾಭಾರಿಗಳೂ ಈ ಪೀಠದ ಪೂರ್ವಗುರುಪರಂಪರೆಯೆಂಬುದರಲ್ಲಿ ಅನುಮಾನವಿಲ್ಲ. ಅವರೆಲ್ಲ ಶೂನ್ಯಾನುಭವಪಟ್ಟ ವಿರಕ್ತರೇ. ತೋಂಟದ ಸಿದ್ಧಲಿಂಗೇಶ್ವರರ ಗುರುಪರಂಪರೆಯಂತೆ ಆದಿ ನಿರಾಭಾರಿ ಅನಾದಿಗಣೇಶ್ವರರೇ ಮೂಲಪುರುಷರು. ಇದು ಬಸವಣ್ಣನವರ ಹಿಂದಣ ವೀರಶೈವ ಸಂಪ್ರದಾಯ.

ಇದರಂತೆಯೇ ಗದಗ ತೋಂಟದಾರ್ಯ ವಿರಕ್ತಮಠವೂ ಅತಿಪ್ರಾಚೀನ

ವಾದುದೆಂದು ಕಂಡುಬರುತ್ತದೆ. ಆ ಪೀಠದ ಪ್ರಮುಖ ಗುರು ತೋಂಟದ ಸಿದ್ಧಲಿಂಗೇಶ್ವರರು ತಮ್ಮ ವಚನವೊಂದರಲ್ಲಿ ತಮ್ಮ ಗುರುಪರಂಪರೆಯನ್ನು ಹೇಳಿರುತ್ತಾರೆ (೧೪೩ನೆಯ ಪುಟದಲ್ಲಿ ನೋಡಿರಿ). ವಿರಕ್ತ ತೋಂಟದಾರ್ಯ ವಿರಚಿತ ಶ್ರೀ ಸಿದ್ಧೇಶ್ವರ ಪುರಾಣ, ನಿರಂಜನವಂಶ ರತ್ನಾಕರ ಮತ್ತು ನಿರಂಜನ ಜಂಗಮವಂಶ ದರ್ಪಣಗಳಲ್ಲಿಯೂ ಈ ಗುರುಪರಂಪರೆ ಆ ವಚನದಲ್ಲಿ ಹೇಳಿರುವಂತೆಯೇ ಇದೆ. ಆದರೆ, ನಿರಂಜನ ಜಂಗಮವಂಶ ದರ್ಪಣದಲ್ಲಿ ಮಾತ್ರ ನಿರ್ಮಾಯ ಗಣೇಶ್ವರರ ತರುವಾಯ ಸ್ವಯಂ ಜ್ಯೋತಿರೂಪರೆಂಬ ಗಣೇಶ್ವರರ ಹೆಸರು ಹೆಚ್ಚಿಗೆ ಬಂದಿರುತ್ತದೆ. ಸಿದ್ಧಲಿಂಗ ಶಿವಯೋಗಿಗಳ *ಈ ಗುರುಪರಂಪರೆಯೊಳಗಣ ಮೊದಲಿನ ಎಂಟು ಹೆಸರುಗಳನ್ನು ನೋಡಿದರೆ, ಸಕೃದ್ದರ್ಶನಕ್ಕೆ ಇದು ಬಸವಣ್ಣ ಮತ್ತು ಪ್ರಭುದೇವರು ತಮ್ಮ ಪೂರ್ವಭವಗಳನ್ನು ಹೇಳಿಕೊಳ್ಳುವಂತಿದೆ ಎಂದು ಭಾಸವಾಗಬಹುದು. ತೋಂಟದ ಸಿದ್ಧಲಿಂಗ ಶಿವಯೋಗಿಗಳಲ್ಲದೆ ಬೇರೆಯವರು ಈ ಮಾತನ್ನು ಹೇಳಿದ್ದರೆ ಇಂತಹ ಊಹಾಪೋಹಕ್ಕೆ ಅವಕಾಶವಿದ್ದಿತು. ಆದರೆ, ಸ್ವಯಂ ಅವರೇ ಅನಾದಿ ಹೇಳಿ, ಅವರ ಕರಕಮಲದಲ್ಲಿ ಉತ್ಪತ್ತಿಯಾದ ಶಿಶು ತಾವೆಂದು ಹೇಳಿಕೊಂಡಿರುವುದರಿಂದ ವ್ಯತಿರಿಕ್ತ ಊಹೆಗೆ ಅವಕಾಶವೇ ಇಲ್ಲ. ಸಿದ್ಧೇಶ್ವರ ಪುರಾಣದಲ್ಲಿ ಬರುವ ಕಥೆ ಈ ಗುರುಪರಂಪರೆಯ ವಾಸ್ತವತೆಯನ್ನು ಎತ್ತಿ ತೋರಿಸುತ್ತದೆ; ಸತ್ಯವೆಂದು ಸಾರಿ ಹೇಳುತ್ತದೆ. ಅಲ್ಲಿ ಯಾವ ಸಾಂಕೇತಿಕ ಅರ್ಥವೂ ಇರದೆ ೧೬ ತಲೆಮಾರಿನ ಗುರುಪರಂಪರೆಯ ನಿರೂಪಣವಿದೆ. ಈ ಮೊದಲಿನಂತೆ ತಲೆಗೆ ೨೫ ವರ್ಷಗಳೆಂದು ತಿಳಿದು ಲೆಕ್ಕ ಮಾಡಿದರೆ ತೋಂಟದ ಸಿದ್ಧಲಿಂಗ ಶಿವಯೋಗಿಗಳಿಗಿಂತ ಸುಮಾರು ೪೦೦ ವರ್ಷಗಳಷ್ಟು ಹಿಂದೆಯೇ ಇವರ ಗುರುಪರಂಪರೆ ಆರಂಭವಾಗಿರಬೇಕಷ್ಟೆ. ಮೇಲೆ ವಿವೇಚಿಸಿದಂತೆ ಇವರು (ಕ್ರಿ. ಶ. ೧೪೦೦-೧೪೫೦) ಭುವಿಗೆ ಅವತರಿಸಿದ್ದರೆ ಇವರ ಪರಂಪರೆಯ ಆದಿಗುರು ಅನಾದಿ ಗಣೇಶ್ವರರು ಕ್ರಿ. ಶ. ೧೦೦೦-೧೦೫೦ ರಲ್ಲಿ ಜೀವಿಸಿರಬೇಕು".

"ತೋಂಟದ ಸಿದ್ಧಲಿಂಗ ಯತಿಗಳು ಬಸವಾದಿ ಪ್ರಮಥರ ತತ್ತ್ವಗಳ ಸಾಕಾರಮೂರ್ತಿಯಂತಿದ್ದರೂ, ಆ ಪ್ರಮಥರು ಎತ್ತಿಹಿಡಿದ ಷಟ್ಸ್ಥಲ,

---

* ಡಾ॥ ಆರ್. ಸಿ. ಹಿರೇಮಠ, ಎಂ.ಎ., ಪಿಎಚ್.ಡಿ., ಅವರ "ಷಟ್ಸ್ಥಲಪ್ರಭೆ" ಎಂಬ ಗ್ರಂಥವನ್ನು ನೋಡಿರಿ.

ಸ್ಥಾಪಿಸಿರಣ ಮೊದಲಾದ ವೀರಶೈವ ತತ್ತ್ವಗಳೇ ಮಾನವರೂಪ ತಳೆದಂತಿದ್ದ ರೂ
ಪದ ಗುರುಪರಂಪರೆ ಬಸವಣ್ಣನವರಿಗಿಂತಲೂ ಒಂದು ಶತಮಾನದಷ್ಟು
ಪುರಾತನವಾಗಿದೆ ಎಂಬುದು ಗಮನಾರ್ಹವಾಗಿದೆ".

ಇವನ್ನು ಪರ್ಯಾಲೋಚಿಸಿದರೆ, ಅಲ್ಲಮರು, ಚನ್ನಬಸವಣ್ಣನವರು, ಸಿದ್ಧರಾಮರು ಅನಾದಿ ಗಣನಾಥರಿಗಿಂತ ಈಚಿನವರಾದರು. ಎಂದಮೇಲೆ, ನಿರಂಜನವಂಶ ರತ್ನಾಕರದಲ್ಲಿ ಹೇಳಿರುವ ಸಿರಾಭಾರಿ ಪರಂಪರೆ ಅಸ್ತವ್ಯಸ್ತವಾಯಿತು. ಅವರಲ್ಲಿ ಮೊಟ್ಟಮೊದಲು ಅಲ್ಲಮರು, ತರುವಾಯ ಚನ್ನಬಸವಣ್ಣನವರು, ಅನಂತರ ಸಿದ್ಧರಾಮರು ಬಂದಮೇಲೆ ಅನಾದಿ ಗಣನಾಥರ ಹೆಸರು ಬಂದಿರುತ್ತದೆ ಇವರೆಲ್ಲರಿಗಿಂತಲೂ ಹಿರಿಯರಾದ ಅನಾದಿ ಗಣನಾಥರನ್ನು ಈ ಪರಂಪರೆಯಲ್ಲಿ ನಾಲ್ಕನೆಯವರಾಗಿ ಸೂಚಿಸಿರುವುದನ್ನು ಇತಿಹಾಸ ಪುಷ್ಟಪಡಿಸುವುದಿಲ್ಲ. ನಿರಂಜನವಂಶ ರತ್ನಾಕರ ಕಾಲಮಾನ ದೃಷ್ಟಿಯಿಂದ ಇತಿಹಾಸದ ಒರೆಗಲ್ಲಿಗೆ ನಿಲ್ಲುವುದಿಲ್ಲ. ಸಿದ್ಧಲಿಂಗ ಯತಿವರರು ಬಸವಣ್ಣನವರಿಗಿಂತ ಹಿಂದಣ ವೀರಶೈವದ ಸನಾತನ ಸಂಪ್ರದಾಯದವರೆಂದು ಖಚಿತವಾಗುತ್ತದೆ. ಆ ಗುರುಪರಂಪರೆಯು ಅಗ್ರಭಾಗದಲ್ಲಿ ಅಲ್ಲಮರನ್ನು ಆರಾಧಿಸಿ ಚನ್ನಬಸವಣ್ಣನವರನ್ನು ಪೂಜಿಸಿ, ಸಿದ್ಧರಾಮರನ್ನು ಅರ್ಚಿಸಿ-ಶೂನ್ಯಸಿಂಹಾಸನ ಪರಂಪರೆಯನ್ನು ಶರಣೆಂದಿರುವ ಚಿತ್ರದುರ್ಗದ ಮುರಘಮಠ ಶೂನ್ಯಸಿಂಹಾಸನವಾಗಲಾರದು. ಸಿದ್ಧಲಿಂಗರಿಗೂ ಮುರಘಮಠದ ಮೂಲಪುರುಷರಿಗೂ ಗುರುಶಿಷ್ಯ ಸಂಬಂಧವೇ ಇಲ್ಲ. ಅರ್ಥಾತ್ ಮುರಘಮಠ ಶೂನ್ಯಪರಂಪರೆಯ ಮಠವಲ್ಲ; ಅದೊಂದು ದ್ರಾವಿಡಶೈವ ಸಮಯಾಚಾರದ ವಿರಕ್ತ ಮಠ.

"ತೋಂಟದ ಸಿದ್ಧಲಿಂಗಯತಿಗಳು ಪ್ರಭುದೇವರ ಪರಂಪರೆಯ ವಿರಕ್ತರೆಂಬ ಸಂಚಿಗೆ ರೂಢವಾಗಿದೆ". ತೋಂಟದ ಸಿದ್ಧಲಿಂಗ ಶಿವಯೋಗಿಗಳ ಗುರುಪರಂಪರೆಯು ಪ್ರಭುದೇವರಿಂದಲೇ ಆರಂಭವಾಯಿತೆಂಬುದು "ನಿರಂಜನವಂಶ ರತ್ನಾಕರ"ದ ಅಭಿಮತ. ಪ್ರಭುದೇವರಿಂದ ಮೊದಲಾದ ಪರಂಪರೆ ಐತಿಹಾಸಿಕವಾಗಿ, ಅವಿಚ್ಛಿನ್ನವಾಗಿ ಅನಾದಿಗಣನಾಥರವರೆಗೆ ಬಂದು, ಅನಾದಿಗಣನಾಥರು ಸಿದ್ಧರಾಮೇಶ್ವರದೇವರ ಕರಕಮಲಸಂಜಾತರಾಗಿದ್ದು, ಮುಂದೆ ಆ ಪರಂಪರೆ ತೋಂಟದ ಸಿದ್ಧಲಿಂಗ ಶಿವಯೋಗಿಗಳವರೆಗೆ ಸಾಗಿಬಂದಿದ್ದರೆ, ಸಿದ್ಧಲಿಂಗ ಯೋಗಿಗಳು ತಮ್ಮ ಆ ವಚನದಲ್ಲಿ ನೇರವಾಗಿ ಆ ಪ್ರಭುದೇವರಿಂದಲೇ ಆರಂಭಿಸ

ಬಹುದಾಗಿತ್ತು". ಆ ಯತಿವರ್ಯರೇ ಹಾಗೆ ಮಾಡದಿರುವಾಗ "ನಿರಂಜನವಂಶ ರತ್ನಾಕರ"ವು ಈ ಪರಂಪರೆಗೆ ಪ್ರಭುದೇವರ ಮೂಲವನ್ನು ಹೇಳಿರುವುದು ಆ ಗ್ರಂಥದ ಕರ್ತೃವಿನ ಊಹೆಯಿಂದೇ ತಿಳಿಯಬೇಕಾಗುತ್ತದೆ" ಎಂದು ಡಾ॥ ಆರ್. ಸಿ. ಹಿರೇಮಠರವರು ಅಭಿಪ್ರಾಯಪಡುತ್ತಾರೆ. ಇದು ಸಮಂಜಸವಾಗಿದೆ. ಪರಂಪರೆಯನ್ನು ಈ ಗ್ರಂಥದ ೧೪೩ನೆಯ ಪುಟದಲ್ಲಿ ಸೂಚಿಸುತ್ತದೆ. ನಿರಂಜನ ಜಂಗಮವಂಶದರ್ಪಣದಲ್ಲಿ ಈ ಪೀಠದ ಸಿರಾಭಾರಿ ಶ್ರೇಣಿಯನ್ನು ಇತಿಹಾಸದ ಆಧಾರದಿಂದ ನಿರೂಪಿಸಿರುತ್ತದೆ. ಇದು ಚೇಲಾಳಸಂಪ್ರದಾಯವನ್ನು ವೀರಶೈವದಲ್ಲಿ ಅಳವಡಿಸಿಕೊಂಡಿತು.

ತೋಂಟದ ಸಿದ್ಧಲಿಂಗಶಿವಯೋಗಿಗಳಿಂದ ಇದುವರೆಗೆ ಜಂಗಮ ಪೀಠಾಧಿಕಾರಿಗಳಾಗಿ ೧೭ ಜನ ವಿರಕ್ತರು ಆಗಿರುತ್ತಾರೆ. ಈಗ ಶ್ರೀಮನ್ನಿರಂಜನ ಜಗದ್ಗುರು ಶ್ರೀ ಗುರುಬಸವ ತೋಂಟದಾರ್ಯ ಮಹಾಸ್ವಾಮಿಗಳು ಈ ಪೀಠಾಧೀಶ್ವರರಾಗಿರುತ್ತಾರೆ. ಈ ಎಲ್ಲ ಸಿರಾಭಾರಿಗಳ ವಿರಕ್ತ ಜೀವನ ಪರಿಚಯವನ್ನು ಶ್ರೀ ಪಂಡಿತ ಬಸವಪ್ಪ ವೀರಪ್ಪ ಕೋಟಿ ಅವರು 'ನಿರಂಜನ ಜಂಗಮ ವಂಶದರ್ಪಣ'ದಲ್ಲಿ ವಿವರವಾಗಿ ತಿಳಿಸಿರುತ್ತಾರೆ. ಶ್ರೀ ತೋಂಟದ ಸಿದ್ಧಲಿಂಗೇಶ್ವರರ ಪೀಠದಮಠಗಳಲ್ಲಿ ಎಡೆಯೂರುಮಠ, ಡಂಬಳಮಠ ಮತ್ತು ಗದಗಮಠ ಇವು ಪ್ರಸಿದ್ಧಿಯಾಗಿವೆ. ಈ ಪರಂಪರೆಯಲ್ಲಿ ಎಂಟನೆಯ ಪಟ್ಟದ ಕೌದಿಮಹಾಂತಸ್ವಾಮಿಗಳೂ ಮತ್ತು ಒಂಭತ್ತನೆಯ ಪಟ್ಟದ ಅರ್ಧನಾರೀಶ್ವರ ಸ್ವಾಮಿಗಳೂ ಕೆಳದಿಯ ಅರಸರ ಮನೆತನದ ಗುರುಗಳಾಗಿದ್ದರೆಂದು ಗೊತ್ತಾಗುತ್ತದೆ. ಕೆಳದಿಯ ಬಸವಪ್ಪನಾಯಕ ತನ್ನ ಹೆಸರನ್ನು ಬರೆಯಿಸಿ ರತ್ನಖಚಿತ ಸುವರ್ಣಪಾದುಕೆಗಳನ್ನು ಸ್ವಾಮಿಗಳಿಗೆ ಸಮರ್ಪಿಸಿರುವನು. ಅವನ ತಾಯಿ ಮಲ್ಲಮ್ಮಾಜಿ ತಾನೇ ಮಾಡಿದ ಮತ್ತು ತನ್ನ ಹೆಸರಿರುವ ಸುಂದರವಾದ ಸೂಚಿಕಲಾಪ್ರಪೂರ್ಣ ರೇಷ್ಮೆಯ ಕಂಥೆಯನ್ನು ಸ್ವಾಮಿಗಳಿಗೆ ಕಾಣಿಕೆಯಾಗಿ ಅರ್ಪಿಸಿರುತ್ತಾಳೆ. ಇವು ಈಗಲೂ ಗದಗಿನ ತೋಂಟದಾರ್ಯಮಠದಲ್ಲಿವೆ. ಅಲ್ಲದೆ, ಡಂಬಳ ಸಂಸ್ಥಾನಮಠದ ರಥೋತ್ಸವ ಮೊದಲಾದ ದೇವತಾ ಕೈಂಕರ್ಯಗಳನ್ನು ಶಾಶ್ವತವಾಗಿ ನಡೆಸಿಕೊಂಡುಬರಲು ಸಹಾಯವಾಗುವಂತೆ ಕೆಳದಿಯ ರಾಜರು ಶ್ರೀಮಠಕ್ಕೆ ಭೂದಾನಮಾಡಿ ಶಾಸನಗಳನ್ನು ಬರೆಯಿಸಿರುತ್ತಾರೆ. ಕೆಳದಿಯ ಶಿವಪ್ಪನಾಯಕ ಕ್ರಿ. ಶ. ೧೬೪೫ ರಿಂದ ೧೬೬೦ ರವರೆಗೆ

ಸ್ಥಾಪಿಸಿದನು. ಆದ್ದರಿಂದ ಗದಗ ತೋಂಟದಾರ್ಯಮಠ ಹದಿನಾರನೆಯ ಶತಮಾನಕ್ಕಿಂತಲೂ ಹಿಂದೆಯೇ ಪ್ರಸಿದ್ಧವಾಗಿತ್ತು. ಕೌದಿಮಹಾಂತಸ್ವಾಮಿಗಳು ಆ ಪೀಠದ ಎಂಟನೆಯ ನಿರಾಭಾರಿಯೆಂದರೆ, ತೋಂಟದ ಸಿದ್ಧಲಿಂಗರಿಂದ ಇವರು ಸುಮಾರು ೨೦೦ ವರ್ಷಗಳಾದಮೇಲೆ ಆಮಠದ ಸ್ವಾಮಿಯಾದರೆಂದು ಹೇಳಬಹುದು. ಆದ್ದರಿಂದ ಈ ಮಠ ಹದಿನೈದನೆಯ ಶತಮಾನದಲ್ಲಿ ಕೆಳದಿಯ ರಾಜ್ಯಸ್ಥಾಪನೆಯಾಗುವುದಕ್ಕಿಂತ ಹಿಂದೆಯೇ ಬೃಹನ್ಮಠವಾಗಿತ್ತೆಂದು ಹೇಳಬಹುದು. ಚಿತ್ರದುರ್ಗದ ಮುರಘಮಠ ಆಗಿನ್ನೂ ಹುಟ್ಟಿರಲಿಲ್ಲ. ಆದರೆ ಅದರ ಮೂಲ ಮುರಘಮಠ ಆ ವೇಳೆಗಾಗಲೇ ಉದಯವಾಗಿತ್ತು; ಪ್ರಸಿದ್ಧಿ ಯಾಗಿತ್ತು. ಮೂರುಸಾವಿರ ಸ್ವಯಜಂಗಮಗಣ ಸಂಪ್ರದಾಯದ ಮಠ ವಾದ ಹುಬ್ಬಳ್ಳಿ ಮೂರುಸಾವಿರಮಠ ಸನಾತನ ವೀರಶೈವಧರ್ಮ ಮೂಲದಿಂದ ಹುಟ್ಟುಗೊಂಡದ್ದಾದ್ದರಿಂದ ಇದು ಎಲ್ಲ ವಿರಕ್ತಮಠಗಳಿಗಿಂತಲೂ ಅತ್ಯಂತ ಪುರಾತನವಾದುದು. ಎಡೆಯೂರು ಸಿದ್ಧಲಿಂಗೇಶ್ವರ ಸಂಪ್ರದಾಯವಿಡಿದು ಬಂದ ಗದಗ ವಿರಕ್ತಪೀಠ ಬಸವೇಶ್ವರರ ಹಿಂದಣ ವೀರಶೈವ ಸಂಕೇತವಾಗಿ ನಿರ್ಮಾಣವಾದ ಮಠವಾದ್ದರಿಂದ ಇದು ಸುಮಾರು ಹತ್ತನೆಯ ಶತಮಾನದಷ್ಟು ಪ್ರಾಚೀನವಾದುದು. ಆನಂದಪುರ ಮುರಘಾಮಠ ದ್ರಾವಿಡ ಪುರಾತನ ಸಂಪ್ರದಾಯದ ಮುರಘರಬಳಿವಿಡಿದು ಸಂಸ್ಥಾಪನೆಯಾದ್ದರಿಂದ ಪುರಾತನರ ಯುಗದ ತರುವಾಯ ಸುಮಾರು ಒಂದುನೂರು ವರ್ಷಗಳಾದಮೇಲೆ ಈ ಮಠದ ಉದಯವಾಗಿರಬಹುದಾದ್ದರಿಂದ ಎಷ್ಟೇ ಹಿಂದಕ್ಕೆ ಹೋದರೂ ಕ್ರಿ. ಶ. ಹತ್ತನೆಯ ಶತಮಾನದಷ್ಟು ಹಿಂದಿನದಾಯಿತು. ಸಂಪಾದನೆಯ ವಿರಕ್ತಪೀಠ ಮತ್ತು ಕೆಂಪಿನವಿರಕ್ತಪೀಠ ಇವು ಸುಮಾರು ಹದಿನೈದನೆಯ ಶತಮಾನದಲ್ಲಿ ಮೂಡಿದವು. ಚಿತ್ರದುರ್ಗದ ವಿರಕ್ತಮಠ ಆನಂದಪುರ ಮಠಕ್ಕಿಂತಲೂ ಅರ್ವಾಚೀನದು. ಇದು ಸುಮಾರು ಹದಿನೆಂಟನೆಯ ಶತಮಾನದಲ್ಲಿ ಸ್ಥಾಪನೆ ಯಾಯಿತು. ಇದು ಆನಂದಪುರಂ ಮುರಘಾಮಠದ ಸೂತ್ರವಿಡಿದು ಹುಟ್ಟಿದ ಮಠ. ಮೂಲ ಮುರಘಾಮಠ ಆನಂದಪುರದಲ್ಲಿದೆ. ಆ ಮಠ ಅದಕ್ಕಿಂತಲೂ ಪೂರ್ವದಲ್ಲಿ ಹನ್ನೆರಡನೆಯ. ಶತಮಾನದಲ್ಲಿ ಬೆಕ್ಕಿನಕಲ್ಲು ಮಠವಾಗಿತ್ತು. ಎಡೆಯೂರು ಸಿದ್ಧಲಿಂಗೇಶ್ವರರ ತರುವಾಯ ವಿರಕ್ತರಲ್ಲಿ ಸಮಯ ಭೇದಗಳು ತಲೆದೋರಿದುವು. ಈ ಪುರಾತನ ಮಠಗಳು ಈ ಸಮಯಭೇದದ

ಮಠಗಳಾಗಿ ಪರಿವರ್ತನೆಯಾದುವು. ಶರಣಯುಗದಲ್ಲಿ ಈ ಜಂಗಮ ಮಠಗಳು ಮಹತ್ತರಸೇವೆಯನ್ನು ಸಲ್ಲಿಸಿದ್ದಾದರೂ, ಅವು ಒಂದೆಡೆಯಲ್ಲಿ ನೆಲಸಿ ಕೇಂದ್ರ ಮಠಗಳನ್ನು ಸ್ಥಾಪಿಸಿಕೊಂಡುದು ಬೇರೆ ಬೇರೆ ಕಾಲದಲ್ಲಿಯೇ. ಇವೆಲ್ಲವೂ ಬಸವಣ್ಣನವರ ಶರಣಧರ್ಮ ಗುರುಪೀಠವೆನಿಸಿದ ಶೂನ್ಯಸಿಂಹಾಸನ ಸಂಪ್ರದಾಯವನ್ನು ಅನುಸರಿಸಿ, ಧರ್ಮಕೇಂದ್ರಗಳಾದುವು. ಇವು ಮೂಲ ಶೂನ್ಯ ಸಿಂಹಾಸನದ ಶಾಖೆಗಳಲ್ಲ; ಆದರ ಪ್ರಚಾರಾಂಗ ಸಂಸ್ಥೆಗಳು. ಇವೂ ಶೂನ್ಯ ಸಿಂಹಾಸನಗಳೆಂದು ಹೊಗಳಿಸಿಕೊಂಡವು.

ಸನಾತನ ವೀರಶೈವದ ಎಡೆಯೂರು ತೋಂಟದ ಸಿದ್ಧಲಿಂಗೇಶ್ವರರ ಪ್ರಭಾದಿಂದ ಪ್ರಾಚೀನವೀರಶೈವ ಸಂಪ್ರದಾಯವನ್ನು ಅನುಸರಿಸಿ ಮಠಗಳ ವ್ಯವಸ್ಥೆಯಾಯಿತು. ಶರಣಸ್ಥಲ ಜಂಗಮ ಮಠಗಳೆಲ್ಲವೂ ವಿರಕ್ತಮಠಗಳಾಗಿ ಪರಿವರ್ತನೆಯಾದುವು. ಶ್ರೀ ಸಿದ್ಧಲಿಂಗರು ಅಲ್ಲಿಯ ಸಂಪ್ರದಾಯವನ್ನು ಒಪ್ಪಿ, ವೀರಶೈವ ಸಂನ್ಯಾಸಿವರ್ಗವನ್ನು ಹೊಸದಾಗಿ ನಿರ್ಮಿಸಿದರು. ಇದೇ ಶರಣ ನಿರಾಭಾರಿ ವೀರಶೈವವರ್ಗ. ಪ್ರಾಚೀನ ವೀರಶೈವ ಗುರುವರ್ಗ ಪ್ರತ್ಯೇಕವಾಗಿಯೇ ಉಳಿಯಿತು. ಎಡೆಯೂರು ಕ್ಷೇತ್ರದಲ್ಲಿ ಪುರಾತನ ಗುರುಕುಲ ವಿದ್ದಂತೆ ವೀರಶೈವ ವಾಙ್ಮಯದಿಂದ ಗೊತ್ತಾಗುತ್ತದೆ. ಇವರಂತೆಯೇ ಗುರು ವರ್ಗದ ವ್ಯವಸ್ಥೆಯುಂಟಾಯಿತು.

## ತರಂಗ ೧೭.

### ಅಂದು; ಇಂದು; ಮುಂದು.

" ಆದಿಯನು ಅರಿಯದೆ ಅನಾದಿಯಿಂದತ್ತತ್ತ ತಾನಾರೆಂಬುದ ತಿಳಿದು ವಿಚಾರಿಸದೆ ಮಾಡಿದ ಫಲವೇನಯ್ಯಾ ! ಸಾವನ್ನಕ್ಕರ ಸಾಧನೆಯಮಾಡಿಡಡೆ ಕಾದುವದಿನವಾವುದಯ್ಯಾ; ಬಸವಣ್ಣಾ ! ಬಾಳುವನ್ನಕ್ಕರ ಭಜನೆಯಮಾಡಿಡಡೆ ತಾನಹದಿನವಾವುದಯ್ಯಾ; ಬಸವಣ್ಣಾ ! ಇದು ಕಾರಣಮಿಥ್ಯವನೇಹಿಡಿದು ಮಿಥ್ಯವನೇ ಪೂಜಿಸಿ ಮರ್ತ್ಯಲೋಕದ ಭಕ್ತರೆಲ್ಲ ವ್ಯರ್ಥವಾದರಲ್ಲಾ ! ತಮ್ಮ ತಾವು ಕೆಟ್ಟಕೇಡಿಂಗೆ ಬೆರಗಾದೆ ! ಕಣ್ಣ ಕಳೆದುಕೊಂಡು ಹೊಟ್ಟೆಸೀಳಿ ಮಗನ

ಪ್ರಾಣಸನಮಾಡಿ ಕೈಲಾಸಪುರಕೆ ಹೋದವರೆಲ್ಲರು ಭಕ್ತರೇ! ಅವರಿಗೆ ಶಿವಪಥ ಸಾಧ್ಯವಾಯಿತ್ತೇ! ಭವ ಹಿಂಗಿತ್ತೇ! ಆಸುರಕರ್ಮಿಗಳ ಮಾತಂತಿರಲಿ! ಗುರುಲೋಕದ ನರಗುರಿಗಳೆಲ್ಲಾ ನರಸಂಸಾರಕ್ಕೊಳಗಾದರು! ಸುರಲೋಕದ ಸುರರುಗಳೆಲ್ಲಾ ಸುರಸಂಸಾರಕ್ಕೊಳಗಾದರು! ರುದ್ರಲೋಕದ ರುದ್ರರುಗಳೆಲ್ಲಾ ರುದ್ರಸಂಸಾರಕ್ಕೊಳಗಾದರು! ಮುನಿಜನಂಗಳೆಲ್ಲಾ ತಪಸಂಸಾರಕ್ಕೊಳಗಾದರು! ವ್ರತವಹಿಡಿದವರೆಲ್ಲಾ ಫಲಪದವೆಂಬ ಸಂಸಾರಕ್ಕೊಳಗಾದರು! ಜಂಗಮವ ಅರ್ಚಿಸಿದವರೆಲ್ಲಾ ಸಾಯುಜ್ಯವೆಂಬ ಸಂಸಾರಕ್ಕೊಳಗಾದರು! ಇಂತೀ ಸಂಸಾರಕ್ಕೊಳಗಾದವರೆಲ್ಲ ಮಾಯೆಯ ಹೊಡೆಗಿಚ್ಚು ಗೆಲಬಲ್ಲರೇ! ಅದೆಂತೆಂದಡೆ ನಿತ್ಯ ಪರಮಾತ್ಮತಾನೆಂದರಿಯದೆ ತತ್ವಮಸಿಯೆಂಬ ವಾಕ್ಯತಾನೆಂದರಿಯದೆ ಹೊರ ಹೊರಗೆ ಬಳಸಿಕೆಟ್ಟರಲ್ಲಾ ಹಿರಿಯರು! ಸತ್ತರಲ್ಲಾ ನಾಯಸಾವ! ಸತ್ತವರ ಕೈಪತ್ರವನೋದಿ ಎತ್ತ ಳಮುಕ್ತಿ ಕಾಣಾ ಗುಹೇಶ್ವರಾ!

—ಅಲ್ಲಮಪ್ರಭು.

ಅಂದು ಪುರಾತನ; ಇಂದು ನೂತನ; ಮುಂದು ನವನೂತನ! ಶೂನ್ಯ ಚಕ್ರದಲ್ಲಿ ಈ ಮೂರು ಅರೇಕಾಲು! ಒಂದನ್ನೊಂದು ಮುಟ್ಟುವಂತಿಲ್ಲ! ಅಂದು ಎಂಬುದು ಶಿವ; ಇಂದು ಎಂಬುದು ಅನುಭವ; ಮುಂದು ಎಂಬುದು ಜ್ಞಾನ! ಈ ಅಂದು, ಇಂದು, ಮುಂದು ಸೇರಿಯೇ ಶಿವಾನುಭವಜ್ಞಾನ! ಅಂದುವನ್ನು ಇಂದು ಅರಿಯ ಬಲ್ಲದು! ಇಂದುವನ್ನು ಮುಂದು ತಿಳಿಯಬಲ್ಲದು! ಅದರಂತೆಯೇ ಇಂದುವನ್ನು ಅಂದು ನೋಡಬಲ್ಲದು; ಇಂದುವನ್ನು ಮುಂದು ಕಾಣಬಲ್ಲದು! ಹಾಗೆಯೇ ಮುಂದುವನ್ನು ಅಂದು ಬಗೆಯಬಲ್ಲದು; ಮುಂದುವನ್ನು ಇಂದು ಊಹಿಸಬಲ್ಲದು! ಈ ಅಂದು, ಇಂದು, ಮುಂದು ಈ ಮೂರನ್ನೂ ಬಲ್ಲವನೇ ಅಪರೋಕ್ಷಜ್ಞಾನಿ! ಶಿವಾನುಭವಜ್ಞಾನಿ! ಅವನೇ ಪ್ರಸ್ವಾರ! ಕೇವಲಜ್ಞಾನಿ! ತ್ರಿಕಾಲಜ್ಞಾನಿ! ಇದೇ ಜ್ಞಾನಪ್ರಕಾಶ; ಈ ಜ್ಞಾನ ಪ್ರಕಾಶವನ್ನೇ ಶಿವಾನುಭವಿಗಳು ಶೂನ್ಯವೆಂದು ಕರೆದರು; ಲಿಂಗವೆಂದು ಆರಾಧಿಸಿದರು! ಬ್ರಹ್ಮವೆಂದು ಪರಿಭಾವಿಸಿದರು! ವೀರಶೈವತತ್ತ್ವದಲ್ಲಿ ಅಂದು ಎಂಬುದೇ ಶಿವಎಂದರೆ ಶೂನ್ಯ! ಅನಾದಿ. ಇಂದು ಎಂಬುದೇ ಗುರು ಎಂದರೆ ಅನುಭವ; ಆದಿ; ಮುಂದು ಎಂಬುದೇ ಜಂಗಮ ಎಂದರೆ ಜ್ಞಾನ! ಆದಿಅನಾದಿ; ಶೂನ್ಯವೆಂದರೆ ಲಿಂಗ ಅಥವಾ ಬ್ರಹ್ಮವೆಂದಮೇಲೆ- ಈ ಲಿಂಗದ ಮುಖ

ಧ್ವಯವೇ ಗುರು ಜಂಗಮ; ಗಂಡಭೇರುಂಡ ಪಕ್ಷಿಯಿದ್ದಂತೆ! ಆ ಲಿಂಗದ ಪೂರ್ಣಸ್ವರೂಪವನ್ನು ಅರಿಯಲು ಈ ಗುರು-ಜಂಗಮತತ್ತ್ವಗಳ ಅನುಷ್ಠಾನ ಮುಮುಕ್ಷುವಿಗೆ ಅತಿಮುಖ್ಯ. ಈ ತತ್ತ್ವದ್ವಯ ಲಿಂಗರೂಪವೇ ಹೊರತು ಬೇರೆಯಲ್ಲ. ಗುರುತತ್ತ್ವವೇ ಅನುಭವ ಎಂದರೆ ಆತ್ಮಾನುಭವ ಎಂಬುದು ನಿಜ; ಅದರಂತೆಯೇ ಜಂಗಮತತ್ವವೇ ಜ್ಞಾನ ಎಂದರೆ ಆತ್ಮಜ್ಞಾನ ಎಂಬುದು ಸತ್ಯ. ಆದ್ದರಿಂದ, ಆತ್ಮಾನುಭವ ಮತ್ತು ಆತ್ಮಜ್ಞಾನ ಸಾಮರಸ್ಯವೇ ಲಿಂಗ ಅಥವಾ ಶೂನ್ಯ ಎಂದು ವೀರಶೈವ ಸಿದ್ಧಾಂತ ಸಂಬುತ್ತದೆ. ಈ ಲಿಂಗ ಮಹಾ ಜ್ಯೋತಿಯಿಂದ ಸ್ಫುರಿಸುವ ಚಿತ್ಪ್ರಕಾಶವೇ ಗುರು-ಜಂಗಮತತ್ತ್ವದರ್ಪಣದಲ್ಲಿ ಪ್ರತಿಬಿಂಬಿಸುತ್ತದೆ. ಈ ಗುರು-ಜಂಗಮದ ಎಲ್ಲ ಕಾಂತಿಯೂ ಶೂನ್ಯದಿಂದಲೇ ಎಂದರೆ ಲಿಂಗದಿಂದಲೇ ಹೊರಹೊಮ್ಮುತ್ತದೆ; ಆ ಲಿಂಗದಲ್ಲಿಯೇ ಲಯವಾಗುತ್ತದೆ. ಇದರಿಂದ ಇಂದು ಮತ್ತು ಮುಂದು-ಈ ಎರಡರಮೂಲ ಅಂದು ಎಂಬುದನ್ನು ಒಪ್ಪಬೇಕು. ಈ ಲಿಂಗ, ಗುರು, ಜಂಗಮ ತತ್ತ್ವತ್ರಯವೇ ವೀರಶೈವದ ಪ್ರಸ್ಥಾನತ್ರಯ. ಈ ಪ್ರಸ್ಥಾನತ್ರಯದ ಸಿದ್ಧಿಯನ್ನು ಪಡೆಯಲು ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ ಮತ್ತು ಮಂತ್ರ ಎಂಬ ಪಂಚ ಪ್ರಕ್ರಿಯೆಗಳು ಬೇಕು. ಇವೇ ಅಷ್ಟಾವರಣ ಎಂದು ಪ್ರಾಚೀನ ಅಥವಾ ಸನಾತನವೀರಶೈವ ಅಂಗೀಕರಿಸಿತು. ಶರಣಧರ್ಮವೂ ಇದನ್ನು ಒಪ್ಪಿತು; ಎಂದರೆ ಅಂದು ಇಂದು ಮುಂದು-ಈ ಅಷ್ಟಾವರಣಕ್ರಮವನ್ನು ಅನುಸರಿಸಿದುವು. ಅವು ಗುರು, ಲಿಂಗ, ಜಂಗಮ ಕ್ರಮದಲ್ಲಿ ಪರಿಗಣಿತವಾದುವು. ಆದರೆ, ಇಂದಿನ ಈ ಕ್ರಮವನ್ನು ಲಿಂಗ, ಗುರು, ಜಂಗಮ ಎಂದು ಪರಿಗಣಿಸಬೇಕಾ ದುದು ಸರಿಯೆನ್ನುತ್ತದೆ! ಏಕೆಂದರೆ, ಗುರು, ಜಂಗಮ ಎರಡೂ ಲಿಂಗದಲ್ಲಿಯೇ ಉದಯಿಸಿ, ಲಿಂಗದಲ್ಲಿಯೇ ಲಯವಾಗುತ್ತವೆ. ಅದರಿಂದಲೇ ಜಂಗಮ ಸಂಕೇತ ನಿರಂಜನ ಶೂನ್ಯದಿಂದ ಹುಟ್ಟಿತೆಂದರು! ಗುರು ಸಂಕೇತ ಆಚಾರ್ಯ ಲಿಂಗದಿಂದ ಉದ್ಭವವಾಯಿತೆಂದರು! ಲಿಂಗವೆಂದರೂ ಶೂನ್ಯವೆಂದರೂ ಒಂದೇ ತತ್ತ್ವ. ಪಂಚಾಚಾರ್ಯರು ಲಿಂಗೋದ್ಭವರೆಂದರೆ ಶೂನ್ಯದಿಂದ ಆವಿರ್ಭವಿ ಸಿದರು ಎಂದರ್ಥ. ನಿರಂಜನ ಜಂಗಮ ಶೂನ್ಯದಿಂದ ಉದಯವಾದನೆಂದರೆ ಲಿಂಗದಿಂದ ಉದ್ಭವವಾದನು ಎಂದರ್ಥ! ಆದ್ದರಿಂದ ಗುರುವಾಗಲಿ ಜಂಗಮ ವಾಗಲಿ ಲಿಂಗಕ್ಕಿಂತ ದೊಡ್ಡವರಲ್ಲ. ಗುರು-ಜಂಗಮದ ಶಕ್ತಿಯಲ್ಲಿ ಮಿತಿ

ಟು; ಲಿಂಗಶಕ್ತಿ ಅಮಿತ! ಅದು ಸರ್ವಚೈತನ್ಯಮಯ! ಸೃಷ್ಟಿಶಕ್ತಿ! ಸರ್ವೇಶ್ವರತ್ವ ಮತ್ತು ಸಕಲಶಕ್ತಿ ಪ್ರಭುತ್ವಗಳನ್ನು ಜಗತ್ತಿಗೆ ತೋರಿಸಲು ರು-ಜಂಗಮ ಈ ಎರಡೂ ಸಾಧನಗಳು; ಅಷ್ಟೆ. ಆದ್ದರಿಂದ ಅಷ್ಟಾವರಣ ಲಿಂಗ, ಗುರು, ಜಂಗಮ ಕ್ರಮವೇ ಸಕ್ರಮ ಎಂಬುದನ್ನು 'ಮುಂದು' ಪಾದಿಸುತ್ತದೆ. ಇಲ್ಲಿ ಲಿಂಗವೆಂದರೆ ಗುರುದತ್ತಶಿಲಾ ಲಿಂಗವಲ್ಲ! ಅದು ಹಾಲಿಂಗ! ಪಾದೋದಕ-ಪ್ರಸಾದಗಳಾದರೂ ಲಿಂಗಪಾದೋದಕ; ಲಿಂಗ ಸಾದವೇ ಹೊರತು ಗುರುಜಂಗಮ ಪಾದೋದಕ, ಗುರುಜಂಗಮ ಪ್ರಸಾದ ಂದಲ್ಲ! ಅವು ಕೇವಲ ಗುರುಕುಲಗಳಲ್ಲಿ ಸಾಧಕರಿಗೆ ವಿಧಿಸಿರುವ ಪ್ರಕ್ರಿಯೆ ಗಳಾವು! ಗೃಹಸ್ಥರಿಗೆ ಇವು ಸಲ್ಲವು. ಇವುಗಳ ಪ್ರಯೋಗ ವಿಶೇಷ ದೀಕ್ಷಾ ರಲ್ಲದ ಸಂಸಾರಿಗಳಮೇಲೆ ಉಚಿತವಾಗಲಾರದು. ಯಾವುದೇ ವ್ಯಕ್ತಿಯ ಪಾದೋದಕವನ್ನು ಲಿಂಗದಮೇಲೆ ಎರೆಯುವುದನ್ನಂತೂ 'ಮುಂದು' ಅಂಗೀ ರಿಸಲಾರದು. ಇವು ಕೇವಲ ಆಚಾರವಾಗಿವೆಯೇ ಹೊರತು ವಿಚಾರಗಳಾಗಿಲ್ಲ. ರ್ಮ ಕಾಲ ಕಾಲಕ್ಕೆ ಮಾರ್ಪಾಟಾಗುತ್ತಿರುತ್ತದೆ. ಯಾವಾಗಲೂ ಯಾವ ರ್ಮವೇ ಆಗಲಿ ಮೂಲರೂಪದಲ್ಲಿಯೇ ಇರುವುದಿಲ್ಲ. ವೀರಶೈವಧರ್ಮ ನಾದಿಯಾದುದು. ಇದರಲ್ಲಿರುವ ಗುರು, ಜಂಗಮಸ್ಥಾನಗಳು ಬಹುಶಃ ಪ್ರಾಚೀನ ವೀರಶೈವದಲ್ಲಿದ್ದ ಎರಡು ಪ್ರಮುಖಭೇದಗಳೆಂದು ಭಾಸವಾಗುತ್ತದೆ. ಮಾನಿಯರ್ ವಿಲಿಯಂಸ್ ಎಂಬುವರು ಬರೆದಿರುವ "ಬ್ರಾಹ್ಮಣ ಮತ್ತು ಹಿಂದೂಮತ" ಎಂಬ ಗ್ರಂಥದಲ್ಲಿ ಶಂಕರಾಚಾರ್ಯರ ಕಾಲದಲ್ಲಿ ಅನೇಕ ಶೈವ ಮತಗಳಿದ್ದುವೆಂದು ಹೇಳಿರುತ್ತಾರೆ. 'ಶಂಕರವಿಜಯ' ದಲ್ಲಿ ಆರುಬಗೆಯ ಶೈವಮತಗಳ ಸ್ವರೂಪವನ್ನು ತಿಳಿಸಿದೆ. ಅವುಗಳಲ್ಲಿ ೧. ಲಿಂಗವನ್ನು ನೆತ್ತಿಯ ಮೇಲೆ ಧರಿಸುವ ಭಟ್ಟರು ೨. ತಲೆಯಮೇಲೆ ಒಂದು ತ್ರಿಶೂಲವನ್ನು ಧರಿಸುವ ಜಂಗಮರು. ೩. ನೆತ್ತಿ, ತೋಳುಗಳು ಎದೆ ಮತ್ತು ಹೊಕ್ಕಳು ಇವುಗಳ ಮೇಲೆ ಲಿಂಗದ ಬರೆ ಹಾಕಿಸಿಕೊಳ್ಳುವ ಪಾಶುಪತರು-ಎಂಬ ಮೂರು ಮುಖ್ಯ ಭೇದಗಳೆಂದು ಹೇಳಬಹುದು. ಇವರು ತಮ್ಮ ಮತಾಚಾರಗಳಲ್ಲಿ ಅನೇಕ ಪ್ರಕ್ರಿಯೆಗಳನ್ನು ಬದಲಾಯಿಸಿರುತ್ತಾರೆ. ಆ ಪಾಶುಪತರೇ ಇಂದಿನ ವೀರಶೈವ ಗೃಹಸ್ಥಲದವರೆಂದೂ, ಅಂದಿನ ಜಂಗಮರೇ ಇಂದಿನ ಜಂಗಮ ಪ್ರಭೇದ ವೆಂದೂ ನಿರ್ಧರಿಸಬಹುದು. ಆದರಿಂದಲೇ, ಈ ಪ್ರಭೇದಗಳ ಜನಾಂಗ

ವವರು ತಾವು ಪ್ರಾಚೀನರೆಂದೂ, ಶಿವಸೃಷ್ಟಿಯವರೆಂದೂ ಗುರು-ಜಂಗಮ ವರ್ಗದವರೆಂದೂ ಹೇಳಿಕೊಳ್ಳುತ್ತಾರೆ. ಶಂಕರಾಚಾರ್ಯರ ಕಾಲದ ಈ ಜಂಗಮವರ್ಗದವರನ್ನು ವ್ರಾತ್ಯರೆಂದು ಕರೆದಿರುತ್ತಾರೆ. ಈ ಗುರು, ಜಂಗಮ ವರ್ಗದವರು ಇನ್ನೂ ತಾವು ಉತ್ತಮರೆಂದೂ ಗುರು, ಜಂಗಮರಾಗಲು ತಾವು ಮಾತ್ರವೇ ಅರ್ಹರೆಂದೂ ಭಾವಿಸುತ್ತಾರೆ. ಇದು ಪ್ರಾಚೀನ ವೀರಶೈವದ ಸ್ವರೂಪ. ವೀರಶೈವರಲ್ಲಿ ಗೋತ್ರವುಳ್ಳವರು ಉತ್ತಮ ಜಾತಿಯವರು. ಗುರುಗಳಾಗತಕ್ಕವರು ಇವರೇ. ಕೀಳುಜಾತಿಯವರಿಗೆ ಗೋತ್ರವಿಲ್ಲ. ಗಣಸಂತತಿಯವರೇ ವೀರಶೈವರು. ಶಿವನೇ ಇವರ ಮೂಲ ಪುರುಷ. ಇವರಲ್ಲಿ ಪಂಚ ಆಚಾರ್ಯಪೀಠಗಳಿವೆ ಎಂದೂ ಹೇಳುತ್ತಾರೆ. ಇವುಗಳಲ್ಲಿ ಒಂದೊಂದೂ ಒಂದೊಂದು ಪ್ರಭೇದವನ್ನು ತೋರಿಸುತ್ತದೆ. ಮೂಲಪೀಠಗಳಲ್ಲಿ ಬಾಳೇಹಳ್ಳಿ, ಕಾಶಿ, ಕೇತಾರ ಗುರುಪೀಠಗಳು ಮೂಲಸ್ಥಾನಗಳಲ್ಲಿಯೇ ನೆಲಸಿವೆ. ಉಜ್ಜಯಿನಿ ಪೀಠ ಮೂಲಸ್ಥಾನದಲ್ಲಿಲ್ಲ. ಹನ್ನೊಂದನೆಯ ಶತಮಾನದಲ್ಲಿ ಬಳ್ಳಾರಿ ಪ್ರಾಂತದ ಕೊಟ್ಟೂರು ಬಳಿ ಉಜ್ಜಯಿನಿಯಲ್ಲಿ ಈ ಮಠ ಸ್ಥಾಪಿತವಾಯಿತು. ಇದರ ಇತಿಹಾಸ ಮಸಕು ಮಸಕಾಗಿದೆ. ಉಜ್ಜಯಿನಿ ಮರುಳಾರಾಧ್ಯ ಪೀಠವೆಂಬಂತೆಯೇ ಇದು ಮರುಳಸಿದ್ಧ ಪೀಠವೆಂದೂ ವಾಙ್ಮಯದಿಂದ ಗೊತ್ತಾಗುತ್ತದೆ.

ಈ ಪಂಚಪೀಠಗಳಲ್ಲಿ ಶ್ರೀಶೈಲಪೀಠ ಶಿವಾರಾಧ್ಯವರ್ಗದವರ ಕೈತಪ್ಪಿ ಹೋದಂತಿದೆ. ಅದು ಈಗ ಗುರುಸ್ಥಲದವರ ಅಥವಾ ಜಂಗಮವರ್ಗದವರ ಆಶ್ರಯದಲ್ಲಿದೆ. ಕಾಶೀವಿಶ್ವಾರಾಧ್ಯಪೀಠ ಮೂಲತಃ ಪಂಚಮವೀರಶೈವಪೀಠವಾಗಿದ್ದರೂ, ಅನಂತರ ಅದು ಶಿವಾರಾಧ್ಯ ಪಂಗಡದವರ ಕೈಸೇರಿತು. ವಾಸ್ತವವಾಗಿ ಅದು ಈಗ ಗುರುಸ್ಥಲದವರ ಅಥವಾ ಜಂಗಮರ ಕೈಯಲ್ಲಿದೆ. ಆದರೆ, ಎಲ್ಲ ಪಂಗಡಗಳೂ ವೀರಶೈವದಲ್ಲಿಯೇ ಸೇರಿಹೋದದ್ದರಿಂದ ಪ್ರಾಚೀನ ಮಠಾಧಿಕಾರಿಗಳು ಸನಾತನ ವೀರಶೈವ ವರ್ಗದವರೇ ಆಗಿರುತ್ತಾರೆ. ಈ ಮನೋಭಾವ ಸನಾತನ ಸಂಪ್ರದಾಯದಲ್ಲಿದೆ.

ಬಸವಣ್ಣನವರು ಮಹಾಪುರುಷರು. ಅವರು ಸರ್ವೋತ್ತಮ ಶರಣ ಧರ್ಮವನ್ನು ಬಿತ್ತರಿಸಿದರು. ಲಿಂಗವಂತರೆಲ್ಲ ಒಂದೇ ವರ್ಗವೆಂದು ಅವರು ಸಾರಿಹೇಳಿದರು. ನಾನಾಶೈವ ಪಂಗಡಗಳೂ ಬಸವಣ್ಣನವರ ವೀರಶೈವವನ್ನು

...ಕರಿಸಿದುವು. ಆ ಧರ್ಮಗಳ ಮಠ ಮಹತ್ತುಗಳೂ ಬಸವಪಂಥದ ಮಠ ...ಹತ್ತುಗಳಾಗಿಯೇ ಪರಿವರ್ತನಗೊಂಡವು. ಈ ವಿಶ್ವರೂಪಧರ್ಮದರ್ಶನದಲ್ಲಿ ...ರುದ್ರರಿರುವಂತೆಯೇ ಅಣುಮಾನವರೂ ಕಂಗೊಳಿಸಿದರು. ಹಿಂದಣ ...ಶೈವ ಸಮಾಜ ಪುರುಷನ ಅಂಗೋಪಾಂಗಗಳಲ್ಲಿಯೂ ಹೊಸರಕ್ತ ...ಯಿತು; ನವಚೇತನ ಮಿಂಚಿತು; ಕಲ್ಯಾಣ ಕೈಲಾಸವಾಯಿತು. ಸನಾತನ ...ಶೈವ ಹೊಸವ್ಯವಸ್ಥೆಯಲ್ಲಿ ಪುಟಗೊಂಡಿತು. ಈ ನೂತನ ವೀರಶೈವದಲ್ಲಿ ...ೋಭಾಗ ವೇದೋಪನಿಷತ್ಪ್ರಧಾನವಾಯಿತು; ಹೃದಯ ಆಗಮಪ್ರಧಾನವಾ ...ತು; ಆ ಪಾದ ಕಟಿಭಾಗ ದ್ರಾವಿಡಧರ್ಮ ಪ್ರಧಾನವಾಯಿತು. ಈ ಶರಣರ ...ರ್ಮ ತಾಂತ್ರಿಕ ವೈದಿಕವೆನಿಸಿತು. ಅಂದಿನಿಂದ ಇಂದಿಗೆ ಎಂಟುನೂರು ...ರ್ಷಗಳಕಾಲದಲ್ಲಿ ಎಂಥ ಧರ್ಮವಾದರೂ ಸರ್ವಾಂಗ ಪರಿಪುಷ್ಟವಾಗಿ ಬೆಳೆ ...ಯು ಸಾಕಾದಷ್ಟು ಅವಕಾಶವಾಯಿತೆಂಬುದನ್ನು ಅಲ್ಲಗಳೆಯುವಂತಿಲ್ಲ. ...ಲ್ಯಾಣ ಕ್ರಾಂತಿಯಾದನೇಲೆ ನಿರಾಶ್ರಯರಾದ ಶರಣರು ಅಲ್ಲಲ್ಲಿ ನೆಲಸಿದರು. ...ಲ್ಯಾಣದ ಶಿವಾನುಭವ ಮಂಟಪದಲ್ಲಿ ತತ್ತ್ವವಿಚಾರಗೋಷ್ಠಿಗಳಲ್ಲಿ ತಮ್ಮ ...ಪ್ರತಿಯನ್ನು ಬೆಳಸಿಕೊಂಡಿದ್ದ ಜನರು ತಾವು ನಿಂತಸ್ಥಳಗಳಲ್ಲಿಯೂ ಅದೇ ...ನೋಭಾವದಿಂದ ಬಾಳುತ್ತಬಂದರು. ಆದರಿಂದಲೇ ಊರೂರಿನಲ್ಲಿಯೂ ...ಮ ವಿರಕ್ತಮಠವಾಯಿತು. ಅದರಲ್ಲಿಯೂ ತುಂಗಭದ್ರಾನದಿಯ ಉತ್ತರ ...ಲ್ಲಿ ಗೋದಾವರಿಯವರೆಗೆ ಬಸವನಬಳಗ-ಶಿವಾನುಭವವಲ್ಲರಿ ಹಬ್ಬಿತು. ...ಣರು ಶಿವಾನುಭವ ಪ್ರಚಾರವನ್ನು ಹೆಚ್ಚು ಪರಿಣಾಮಕಾರಿಯಾಗಿ ನಡೆಸಲು ...ಮರ್ಥರಾದರು. ಅಲ್ಲಮರಿಂದ ಪರಿಷ್ಕೃತವಾದ ನಾಥಪಂಥ ಬಸವಣ್ಣನವರ ...ನುಭವ ಮಂಟಪದಲ್ಲಿ ಜಂಗಮತತ್ತ್ವವನ್ನು ಜೀರ್ಣಿಸಿಕೊಂಡು ವಿರಕ್ತಪಂಥ ...ಗಿ ರೂಪುಗೊಳ್ಳುತ್ತಿತ್ತು. ಅವರಿಗೆ ಈ ತತ್ತ್ವಾನುಸಂಧಾನದ ಕ್ರಮ ...ನ್ನಾಗಿ ಗೊತ್ತಿದ್ದುದರಿಂದ, ಅವರು ಪ್ರಮುಖವೀರಶೈವ ಕೇಂದ್ರಗಳಲ್ಲಿ ನೆಲಸಿ ...ನ್ನ ತಮ್ಮ ವಿರಕ್ತಮಠಗಳನ್ನು ಸ್ಥಾಪಿಸಿಕೊಂಡರು. ವಿರಕ್ತರು ಅಲ್ಲಲ್ಲಿ ...ರಾಶ್ರಯವನ್ನೂ ಪಡೆದರು;ತಮ್ಮ ಮಠದ ಗೌರವವನ್ನು ಹೆಚ್ಚಿಸಿಕೊಂಡರು. ...ವು ಆ ಸಂಪ್ರದಾಯದಲ್ಲಿ ಬೃಹನ್ಮಠಗಳಾದುವು ! ಭಕ್ತಕೋಟಿಯ ಆಶ್ರಯ ...ಚ್ಚಿದಂತೆ ಆ ಮಠದ ವಿರಕ್ತರ ಸೌಕರ್ಯಗಳೂ ಹೆಚ್ಚಿದುವು ! ಆ ಮಠಗಳ ...ಲಪುರುಷ ಅಲ್ಲಮನಾದ, ಚನ್ನಬಸವಣ್ಣನಾದ, ಸಿದ್ಧರಾಮನಾದ!

ಬಸವಣ್ಣನಾಗಲಿಲ್ಲ! ಅಷ್ಟೇಕೆ; ಎಲ್ಲ ಶರಣಸಂಪ್ರದಾಯದ ಮಠಗಳೂ ಹುಟ್ಟಿದುವು. ವಿರಕ್ತ ಮತ್ತು ಜಂಗಮ ಒಂದೇ ಎಂಬ ಭಾವನೆ ಸಮಾಜದಲ್ಲಿ ರೂಢಮೂಲವಾಗಿ ಬೆಳೆಯಿತು. ವಿರಕ್ತನೆಂದರೆ ಗುರುಎಂಬ ಪರಿಪಾಠವೂ ಬೆಳೆಯಿತು. "ವೀರಮಾಹೇಶ್ವರರು ತಮ್ಮಿಚ್ಛೆಬಂದಪುರದಲ್ಲಿ ಮಠಕಟ್ಟಿಕೊಂಡು ವಾಸಮಾಡಲು ಅವರ ಶಿಷ್ಯರು ಆ ಪುರದ ಹೆಸರಿನ-ವರ್ಗ-ಇಲ್ಲವೆ 'ಬಗೆ' ಯವರಾದರು. ಚಿನ್ನದ ಕಂಥೆ ಧರಿಸಿದ ವೀರಮಾಹೇಶನೊಬ್ಬನ ಶಿಷ್ಯರು ಚಿನ್ನದ ಕಂಥೆಯ ಬಗೆಯವರೆನಿಸಿದರು. ಇದರಂತೆ ಕಬ್ಬಿನದಕಂಥೆಯಬಗೆ, ಪಟ್ಟೆಗಂಥೆಯಬಗೆ ಪಚ್ಚೆಯಕಂಥೆಯಬಗೆ, ಗೋಣಿಯಕಂಥೆಯಬಗೆ, ಮೇಗಣಗವಿಯಬಗೆ, ಮಳೆಯಬಗೆ, ಹಡಿವಿಡಿಯಬಗೆ, ಕಂಬಾಳಬಗೆ ಮುಂತಾದ ನಾನಾ ಬಗೆಗಳಾದುವು. ದೀಪ ಒಂದೇ ಜ್ಯೋತಿಯೊಂದೇ ನಾಮಒಂದೇ ಜಾತಿಯೊಂದೇ-ಮನೆ ಮನೆಯಲ್ಲಿ ಬೆಳಗಿ ಆಯಾ ಮನೆಯ ಹೆಸರುಗಳನ್ನು ತಳೆದು ಹಲತೆರನಾದಂತೆ ಬೇರೆ ಬೇರೆ ಬಗೆ ಅಥವಾ ವರ್ಗಗಳಾದುವು. ಈ ಬಗೆಗಳನ್ನು ಬೆಡಗು, ಪಟ್ಟೆ ಮತ್ತು ಪ್ರಭೇದಗಳೆಂದೂ ಕರೆಯುತ್ತಾರೆ. ಒಂದೇ ಗುರುಸಂಪ್ರದಾಯದ ವೀರಮಾಹೇಶ್ವರರೇ ಅವರವರ ವೇಷ ಆಚರಣೆಯ ಮೇರೆಗೆ-ಘನಲಿಂಗಚರ, ಅತಿಥಿಚರ, ಉದಾಸಿವೈರಾಗ್ಯಚರ ಮತ್ತು ಷಟ್ಸ್ಥಲ ವಿರಕ್ತಮೂರ್ತಿಗಳೆಂದೆನಿಸಿಕೊಳ್ಳುತ್ತಾರೆ. ಇಂದಿನ ಪಂಡಿತರು ಹೇಳುವ ವರ್ಗವರ್ಗಗಳ ಭಿನ್ನತೆಯೆಲ್ಲ ಪಾಂಡಿತ್ಯದ ಭಿನ್ನಬುದ್ಧಿಯ ಪ್ರದರ್ಶನವಾಗಿದೆ". ಎಂದು ಸಿದ್ಧನಂಜೇಶಕವಿಯ ಗುರುರಾಜ ಚಾರಿತ್ರ ಗ್ರಂಥದ ಪ್ರಸ್ತಾವನೆಯಲ್ಲಿ ಶ್ರೀ|| ಸಂ. ಶಿ. ಭೂಸನೂರಮಠ, ಎಂ.ಎ, ಅವರು ಬರೆದಿರುತ್ತಾರೆ. "ನಿರಂಜನವಂಶರತ್ನಾಕರ" ದಲ್ಲಿ ಏಳನೂರ ಐವತ್ತೊಂದು ಬುಡಕಟ್ಟಿನ ಚರಮೂರ್ತಿಗಳಾವಂತೆ ಹೇಳಿರುತ್ತದೆ. ಎಂದರೆ, ವೀರಶೈವವಲ್ಲಿ ಪ್ರತಿಯೊಬ್ಬರೂ ಯಾವುದಾದರೊಂದು ಬುಡಕಟ್ಟಿಗೆ ಸೇರಿದವರೆಂದು ಹೇಳಿದಂತಾಯಿತು. ಒಂದೊಂದು ಬುಡಕಟ್ಟಿನವರೂ ಆವರವರ ಮಠವಿರುವ ಗ್ರಾಮ, ಪುರ, ಊರು ಅಥವಾ ಹಳ್ಳಿಯ ಮಠದವರೆಂದು ಹೇಳಿಕೊಳ್ಳುತ್ತಾರೆ. ಇದು ವೀರಶೈವದಲ್ಲಿ ಬಗೆಯನ್ನು ಸೂಚಿಸುತ್ತದೆಯೇ ಹೊರತು ಅದೊಂದು ಜಾತಿಯ ಹೆಸರನ್ನು ನಿರ್ದೇಶಿಸುವುದಿಲ್ಲ. ಇಂಥ-ಮಠ-ಎಂದು ಹೇಳಿದರೆ ಅದರಲ್ಲಿ ಯಾವಜಾತಿಯವರಾದರೂ ಇರಬಹುದು. ವೀರಶೈವ ಶರಣರಲ್ಲಿ ಜಾತಿಯನ್ನು ಪರಿಗಣಿಸು

ವಿತಿಲ್ಲ. ಬಸವಣ್ಣನವರ ಕಾಲವಲ್ಲಿಯೇ ಕಲ್ಯಾಣದಲ್ಲಿದ್ದ ಮತಗಳ ಬಗೆಗಳನ್ನು ವಚನಸಾಹಿತ್ಯದಲ್ಲಿ ಸ್ಪಷ್ಟವಾಗಿ ಸೂಚಿಸಿರುತ್ತಾರೆ. ಕೊಲ್ಲಿಪಾಕಿಯಲ್ಲಿ ಅನೇಕ ಸಂಪ್ರದಾಯದ ಮಠಗಳಿದ್ದುವೆಂಬುದನ್ನು ಈಗಲೂ ತಿಳಿಯಬಹುದು. ಎಂದ ಮೇಲೆ ಎಲ್ಲ ಮಠಗಳೂ ಒಂದೇ; ಎಲ್ಲ ಮಠಗಳೂ ಸಮಾಜದಲ್ಲಿರಲು ಅವಕಾಶ ವುಂಟು ಎಂಬುದನ್ನು ಮರೆಯುವಂತಿಲ್ಲ. ಈ ಮಠಗಳೆಲ್ಲಾ ಹನ್ನೆರಡನೆಯ ಶತಮಾನದಲ್ಲಿ ಹುಟ್ಟಲಿಲ್ಲ ಅದರ ಹಿಂದೆಯೂ ಅನೇಕ ಮಠಗಳಿದ್ದುವು; ಮುಂದೆಯೂ ಹುಟ್ಟಿದುವು. ಇತ್ತೀಚೆಗೆ ಬೆಂಗಳೂರು ಕೊಳದಮಠವೂ ಮಹಾ ಸಂಸ್ಥಾನಮಠವಾಯಿತು. ಇದು ಬೆಂಗಳೂರು ನಗರದ ವೀರಶೈವರ ರುದ್ರಭೂ ಮಿಯಲ್ಲಿ ಹಿಂದಿನಿಂದಲೂ ಇರುವ ಮಠ. ಬೇರೆ ಬೇರೆಕಾಲಗಳಲ್ಲಿ ವೀರಶೈವ ಮತ ರಾಜಾಶ್ರಯ ಪಡೆದಂತೆ ಹೊಸ ಹೊಸ ಮಠಗಳು ಹುಟ್ಟಿದುವು. ಅನೇಕ ದೇಸಾಯಿಗಳೂ, ದೇಶಪಾಂಡೆಗಳೂ, ಪಾಳೆಯಗಾರರೂ ರಾಜರೂ ಈ ಮತ ವನ್ನು ಅವಲಂಬಿಸಿ ವಿಶೇಷ ಪ್ರೋತ್ಸಾಹವನ್ನು ನೀಡಿದರು. ಅವರ ಆಶ್ರಯದಲ್ಲಿ ಹೊಸಮಠಗಳು ಹುಟ್ಟಿದುವು. ವಿರಕ್ತಾಶ್ರಮವನ್ನು ಹೊಂದಿ ಯಾರುಬೇಕಾ ದರೂ ಯಾವಾಗಬೇಕಾದರೂ ಎಲ್ಲಿಬೇಕಾದರೂ ಮಠವನ್ನು ಸ್ಥಾಪಿಸಬಹುದು. ಅವಕ್ಕೇನೂ ದೇಶಪರಿಮಿತಿಯಿಲ್ಲ; ಶಿಷ್ಯಪರಿಮಿತಿಯಿಲ್ಲ. ಎಲ್ಲರೂ ಸ್ವತಂತ್ರರು; ಎಲ್ಲರೂ ಸಮಾನರು ! ಬಸವಣ್ಣನವರಂತೂ ಇಂಥ ಸರ್ವಸಮಾನತೆಯನ್ನೇ ಸಾರಿದರು; ಶರಣಧರ್ಮ ಲಿಂಗಯೋಗವನ್ನು ಒಪ್ಪಿತೇ ಹೊರತು ಕೃತಕ ಅಂತ ಸ್ತನ್ನು ಒಪ್ಪಲಿಲ್ಲ. ಬಸವಣ್ಣನವರ ಕಾಲವಲ್ಲಿಯೇ ಆಗಲಿ, ಇಪ್ಪತ್ತನೆಯ ಶತಮಾನದ ಪ್ರಾರಂಭದ ಕಾಲದವರೆಗೇ ಆಗಲಿ ಯಾವ ವಿರಕ್ತಮಠವನ್ನೂ ಜಗದ್ಗುರುಮಠವೆಂದು ಹೇಳಲಿಲ್ಲ. ಅದರ ಕಲ್ಪನೆಯೇ ಇಲ್ಲ. ವಚನಸಾಹಿತ್ಯ ದಲ್ಲಿ ವಿರಕ್ತರ ವಿಚಾರವೇ ಬಂದಿಲ್ಲ.

ಹದಿಮೂರನೆಯ ಶತಮಾನದಲ್ಲಿ ಹರಿಹರ,ರಾಘವಾಂಕ, ಕೆರೆಯಪದ್ಮರಸ ಮೊದಲಾದ ವೀರಶೈವ ಕವಿಗಳು ಬಸವಣ್ಣನವರ ಶೂನ್ಯ ತತ್ತ್ವಸಂಥವನ್ನು ಬೆಳೆಸಲು ವಿಪುಲಭಕ್ತಿಸಾಹಿತ್ಯವನ್ನು ಸೃಷ್ಟಿಸಿದರು. ಬಸವಣ್ಣ, ಅಲ್ಲಮ, ಚನ್ನಬಸವಣ್ಣ, ಸಿದ್ಧರಾಮ ಮೊದಲಾದ ಪ್ರಮುಖ ಶರಣರ ಪವಿತ್ರ ಜೀವನ ವನ್ನು ಕುರಿತು ನಾನಾ ಕಾವ್ಯಗಳನ್ನು ರಚಿಸಿದರು. ಹರಿಹರನಂತೂ ಶಿವಶರ ಣರ ಮತ್ತು ಶರಣೆಯರ ತತ್ತ್ವಜೀವನವನ್ನು ಸರಳ ಸುಂದರ ಶೈಲಿಯಲ್ಲಿ ಕಾವ್ಯ

ವಾಣಿಯಿಂದ ಸಾರಿದನು. ಈ ಮತವನ್ನು ಸುಮಾರು ಒಂದು ಶತಮಾನದ ಹಿಂದೆ ಅವಲಂಬಿಸಿದ್ದ ನಾನಾಜಾತಿ ಮತಸಂಘಗಳ ಶರಣರ ಪವಾಡಗಳನ್ನು ಜನಸಾಮಾನ್ಯರು ಮೆಚ್ಚುವಂತೆ ಆ ಶತಮಾನದ ಕವಿಗಣ ಸಾಹಿತ್ಯರೂಪದಲ್ಲಿ ಹಾಡಿತು. ಕಾವ್ಯರಸಗಂಗೆಯನ್ನು ಹರಿಯಿಸಿತು. ಶರಣಕುಲ ಆ ಕಾವ್ಯ ರಸಗಂಗೆಯಲ್ಲಿ ಮುಳುಗಿ ತೇಲಿತು! ಇಂಥ ಸಂದರ್ಭಗಳಲ್ಲಿ ತತ್ತ್ವಜ್ಞಾನಿಗಳು ಆ ಶರಣಕುಲವನ್ನು ಉದ್ಧರಿಸಲು, ಅನುಕೂಲಕಂಡಂತೆ ತಮ್ಮ ಮತವೊಂದನ್ನು ನಿರ್ಮಿಸುತ್ತ ಬಂದರು; ಶಿವಾನುಭವವನ್ನು ಪ್ರಚಾರಮಾಡುತ್ತ ಬಂದರು. ಹದಿನಾಲ್ಕನೆಯ ಮತ್ತು ಹದಿನೈದನೆಯ ಶತಮಾನಗಳಲ್ಲಿ ವಿಜಯನಗರದ ಸಾರ್ವಭೌಮರ ಆಶ್ರಯದಲ್ಲಿ ವೀರಶೈವದ ಪುನರುಜ್ಜೀವನವಾಯಿತು. ಎಡೆಯೂರು ಸಿದ್ಧಲಿಂಗೇಶ್ವರರು ಈ ಮತವನ್ನು ದಕ್ಷಿಣಭಾರತದಲ್ಲೆಲ್ಲಾ ಹಬ್ಬಿಸಿದರು. ಅವರ ಸಂಗಡ ಮೂರುಸಾವಿರ ಚರಜಂಗಮರು ಏಳುನೂರು ನಿರಾಭಾರಿ ಜಂಗಮರೂ ಇದ್ದರು. ಇವರು ಅನೇಕ ಪವಾಡಗಳನ್ನು ಮೆರೆದರು. ಲಕ್ಷೋಪಲಕ್ಷಜನರು ಲಿಂಗವಂತರಾದರು; ಅವರಲ್ಲಿ ಅನೇಕರು ಜಂಗಮವರ್ಗ ದವರಾದರು. ಅದರಿಂದ ಅನೇಕ ಹೊಸ ಹೊಸಮಠಗಳೂ ಉದಯವಾದವು. ಬಸವಣ್ಣನವರ ಕಾಲದಲ್ಲಿ ತುಂಗಭದ್ರಾನದಿಯ ಉತ್ತರಪ್ರದೇಶದಲ್ಲಿ ಹಬ್ಬಿ, ಪ್ರಚಾರವಾಗಿದ್ದು ಅನಂತರ ಸುಪ್ತವಾಗಿದ್ದ ಲಿಂಗವಂತಧರ್ಮ ಹದಿನೈದನೆಯ ಶತಮಾನದಲ್ಲಿ ಎಡೆಯೂರು ಸಿದ್ಧಲಿಂಗೇಶ್ವರರ ಧರ್ಮಕ್ರಾಂತಿಯಿಂದ ಎಚ್ಚರ ವಾಯಿತು. ತುಂಗಭದ್ರಾನದಿಯ ದಕ್ಷಿಣಾಗ್ರದ ಮೈಸೂರು ಪ್ರಾಂತದಲ್ಲಿ ಬಸವಣ್ಣನವರ ಮತ ಹೆಚ್ಚಿರಲಿಲ್ಲ. ಅದರ ಸುಳುವು ಅಲ್ಲಲ್ಲಿ ಇತ್ತು. ಆದರೆ ಅದು ಅಷ್ಟು ಪ್ರಬಲವಾಗಿರಲಿಲ್ಲ. ಸಿದ್ಧಲಿಂಗೇಶ್ವರರ ಕಾಲದಲ್ಲಿ ವೀರಶೈವ ಸಮಗ್ರ ಕರ್ಣಾಟಕದಲ್ಲಿ ಹಬ್ಬಿತು. ಸನಾತನ ಜಂಗಮತತ್ತ್ವ ಸತ್ತ್ವಪೂರ್ಣ ವಾಯಿತು. ಅದು ವಿರಕ್ತಧರ್ಮದಲ್ಲಿ ಹೊಸಕಾಂತಿಯನ್ನು ಮೂಡಿಸಿತು. ಇಷ್ಟಾದರೂ, ಬಸವಣ್ಣನವರ ಉದಾರ ಧರ್ಮವನ್ನು ವಿರಕ್ತವರ್ಗ ಮೈಗೂಡಿಸಿ ಕೊಳ್ಳಲಿಲ್ಲ. ಶರಣಧರ್ಮದಲ್ಲಿ ಯಾವುದೋ ಒಂದು ವಿಶಿಷ್ಟ ಪ್ರಭೇದ ತನ್ನ 'ಹೇವತ್ವ' ವನ್ನು ಪುನಸ್ಸಾರೆ ತನ್ನ ಮೈಗೆ ಲೇಪಿಸಿಕೊಂಡೇಬಂತು.

" ಪಾಷಾಣಃ ಶಿವಸಂಸ್ಕಾರಾತ್ ಭುಕ್ತಿಮುಕ್ತಿ ಪ್ರದೋಭವೇತ್ ।
ಪಾಷಾಣಃ ಶಿವತಾಂಯಾತಿ ಶೂದ್ರಸ್ತು ನಕಥಂಭವೇತ್ " ॥

ಎಂದರೆ, ಶಿವಸಂಸ್ಕಾರಬಲದಿಂದ ಶಿಲೆ ಶಿವಲಿಂಗವಾಗುತ್ತದೆ. ಅದು ಭೋಗವನ್ನೂ ಮೋಕ್ಷವನ್ನೂ ಕೊಡುತ್ತದೆ. ಶಿಲೆ ಶಿವಸಂಸ್ಕಾರದಿಂದ ಶಿವಲಿಂಗವಾದರೆ, ಸೂಪ್ರಸಾದ ಮನುಷ್ಯ ಶಿವಸಂಸ್ಕಾರದಿಂದ ಶಿವತ್ವವನ್ನು ಏಕೆ ಹೊಂದುವುದಿಲ್ಲ? ಅವನೂ ಶಿವತ್ವವನ್ನು ಪಡೆಯುತ್ತಾನೆಂದು ಅರ್ಥ. ಇದರಿಂದ, ಯಾರುಬೇಕಾದರೂ ಜಂಗಮನಾಗಬಹುದು; ನಿರಂಜನಸಿದ್ಧನಾಗಬಹುದು ಎಂದು ಶರಣಧರ್ಮ ಸಂಬಿತು; ಬಸವವಾಣಿ ಮೊಳಗಿತು! ಶಿವಭಕ್ತರಿಗೆ ತತ್ತ್ವಶಿಕ್ಷಣಲಭಿಸಬೇಕು. ಆ ಶಿಕ್ಷಣ ಯಾವುದೇ ಒಂದು ಪಂಗಡದವರಿಗೆ ಮೀಸಲಾಗಬಾರದು. ದಕ್ಷಿಣಕರ್ಣಾಟಕದಲ್ಲಿ ಈ ವಿಶಿಷ್ಟವರ್ಗ ಪ್ರಬಲವಾಗಿಲ್ಲ. ಎಲ್ಲ ಪ್ರಭೇದದವರೂ ಆಯಾಯ ಪಂಗಡಗಳಲ್ಲಿಯೇ ಗುರುಜಂಗಮಪೀಠಗಳನ್ನು ಏರ್ಪಡಿಸಿಕೊಂಡಿರುತ್ತಾರೆ. ಈ ಗುರುಜಂಗಮರಲ್ಲಿಯೂ ಕೆಲವರು 'ದೇವತ್ವ'ದ ಭಾರವನ್ನು ಹೊತ್ತುಕೊಂಡೇತಿರುಗುತ್ತಾರೆ! ತಾವು ಉತ್ತಮರೆಂಬ ಮನೋಭಾವ ಅಳಿಯುವ ಹೊರತು ಶರಣ ಜೀವನ ಪಂಥ ನೆಲೆಗೊಳ್ಳಲಾರದು. ಬಸವಣ್ಣನವರ ಧರ್ಮ ಉಳಿಯಲಾರದು; ಬೆಳೆಯಲಾರದು! ಈಗಾಗಲೇ ಆ ಮಹಾನುಭಾವರಾದ ಅಲ್ಲಮ,ಬಸವಣ್ಣ,ಚನ್ನಬಸವಣ್ಣ ಸಿದ್ಧರಾಮ, ಮರುಳಸಿದ್ಧ ಮೊದಲಾದ ಶರಣರ ಸತ್ಪಥವನ್ನು ಬಿಟ್ಟು ಸ್ವಚ್ಛಂದವಾಗಿ ನಡೆದಾಯಿತು! ಸತ್ತವರ ಸಮಾಧಿಯಮೇಲೆ ಗುಡಿಗೋಪುರಗಳನ್ನು ಕಟ್ಟಿದ್ದಾಯಿತು! ಮಾಡಬಾರದ್ದನ್ನು ಮಾಡಿ ಮೆರೆದದ್ದಾಯಿತು! ಮಾಡಬೇಕಾದುದನ್ನು ಮಾಡದೇ ಬಿಟ್ಟದ್ದಾಯಿತು! ಭಕ್ತ-ಮಹೇಶ್ವರ ಎಂಬ ಕೃತಕ ವರ್ಗಭೇದವನ್ನು ಬೆಳಸಿದ್ದಾಯಿತು! ಯೋಗ್ಯ ಧಾರ್ಮಿಕ ಶಿಕ್ಷಣಾವಕಾಶ ಲಭಿಸಿದರೆ, ಎಲ್ಲ ಶಿವಭಕ್ತ ಪಂಗಡಗಳವರೂ ಯೋಗ್ಯತಾಸಿದ್ಧಿಸಂಪನ್ನರಾಗಬಲ್ಲರು. ಶರಣಧರ್ಮದ ನೆಲೆಯೇ ಅಂಥದು! ಇಂದಿನ ಪರಿಸ್ಥಿತಿ ಹಿಂದಿನಂತೆಯೇ ಇದೆ. ವಿರಕ್ತಮಠಾಧಿಕಾರಿಯಾದರೆ ಗುರುವರ್ಗವನ್ನು ಕಡೆಗಣಿಸುತ್ತಾನೆ! ಇದು ಸರಿಯಲ್ಲ. ಸನಾತನ ಗುರುವರ್ಗ ಶರಣಧರ್ಮ ವಲಯದಲ್ಲಿಯೂ ಗುರುವರ್ಗವಾಗಿಯೇ ಬರುತ್ತದೆ! ವಿರಕ್ತವರ್ಗ ಸನಾತನ ವೀರಶೈವದಲ್ಲಿ ಗುರುರೂಪದಿಂದ ಬರಲು ಸಾಹಸಪಡುತ್ತದೆ. ಅಲ್ಲಿಯೂ ಅದು ವಿರಕ್ತಸ್ಥಾನದಲ್ಲಿಯೇ ನಿಂತೀತು! ಆದರೆ, ಶರಣ ಧರ್ಮದಲ್ಲಿ ವಿರಕ್ತ ಗುರುವಾಗುತ್ತಾನೆ; ಜಂಗಮನಾಗುತ್ತಾನೆ! ಇದರಿಂದ ಶರಣಧರ್ಮ ದಾರಿತಪ್ಪುತ್ತಿದೆ! ಬಸವಣ್ಣನವರು

ಇಂಥ ಕೃತಕ 'ದೇವತ್ವ' ವನ್ನು ಎಂದೂ ಒಪ್ಪಲಿಲ್ಲ. ಗುರುವರ್ಗ ದೂರದಲ್ಲಿಯೇ ನಿಂತು ಶರಣಧರ್ಮವನ್ನು ಹರಸುತ್ತಿದೆ; ವಿರಕ್ತವರ್ಗ ಶರಣಧರ್ಮವನ್ನು 'ಹಾಸಿಹೊದ್ದರೂ'; 'ಉಂಡುತೇಗಿದರೂ' ಬಸವಣ್ಣನವರ ಉದಾರ ಪಂಥದಿಂದ ದೂರವಾಗಿಯೇ ನಿಂತಿದೆ! ವಿರಕ್ತವರ್ಗವೆಂದರೆ, ಶರಣಧರ್ಮದ ವಿರಕ್ತವರ್ಗ ಮಾತ್ರ ಬಸವಣ್ಣನವರ ಧರ್ಮವನ್ನು ಅನುಸರಿಸುತ್ತಿದೆ. ನಾನು ಯಾವುದೋ ಒಂದು ವಿಶಿಷ್ಟವರ್ಗದ ವಿರಕ್ತನೆಂಬುವನೇ ಬಸವಣ್ಣನವರ ಧರ್ಮದಲ್ಲಿ ದ್ರೋಹ ಚಿಂತನೆಮಾಡುತ್ತಾನೆ! ಈ ಪಾಪದ ಪ್ರಾಯಶ್ಚಿತ್ತಕ್ಕಾಗಿಯೇ ಶ್ರೀಮಠದಿಂದ ಬಸವಣ್ಣನವರ ಹೆಸರಿನಲ್ಲಿ ವಿಪುಲ ದಕ್ಷಿಣೆಯನ್ನು ತೆತ್ತು ಪುನೀತನಾಗುತ್ತೇನೆಂದು ನಂಬುತ್ತಾನೆ! ಶರಣಧರ್ಮದಲ್ಲಿ ಶಿವಲಿಂಗಧರಿಸಿದವರೆಲ್ಲಾ ಒಂದೇ. ಅವರೆಲ್ಲರೂ ಶಿವಸ್ವರೂಪರೇ! ಇದನ್ನು ನಂಬದ ವಿರಕ್ತ ಬಸವದ್ರೋಹಿ! ಇದನ್ನು ನಂಬಿಯೂ ಆಚರಿಸದ ವಿರಕ್ತ ಶರಣದ್ರೋಹಿ!

ಸನಾತನ ವೀರಶೈವ ಸಮಾಜ ಈಗಾಗಲೇ ಶರಣಧರ್ಮದಲ್ಲಿ ಬಹುದೂರ ಬಂದಿದೆ! ಅದು ಹಾರಲಾರದ ಹಂಸಪಕ್ಷಿಯಂತಿದೆ! ಅದು ಪ್ರತ್ಯೇಕ ಸಮಾಜ ವಾಗಿ ಉಳಿದಿಲ್ಲ. ಆದರೆ, ಅದು ತತ್ತ್ವಭಾವನೆಯಲ್ಲಿಯೇ ಉಳಿದು ನಿಂತಿದೆ. ವಿರಕ್ತವರ್ಗ ಶರಣಸಮಾಜದಲ್ಲಿ ಗುರು–ಜಂಗಮಸ್ಥಾನಗಳಲ್ಲಿ ಕುಳಿತಿದೆ. ಸಮಾಜ ಇದನ್ನು ಅರಿತಿದೆ; ಅರಿಯದಂತಿದೆ! ಈ ಗುರು–ವಿರಕ್ತ ಮಧುರ ಮೈತ್ರಿ ಬಹುಶಃ ೧೯೧೯ ರಲ್ಲಿ ಬೀರೂರಿನಲ್ಲಿ ನಡೆದ ವೀರಶೈವ ಮಹಾಸಭೆಯ ಕಾಲದಲ್ಲಿ ವಿಷಮಿಸಿತು; ವಿದ್ವೇಷಮನೋಭಾವ ಅಂಕುರಿಸಿತೆಂದು ಹಿರಿಯರು ಹೇಳುತ್ತಾರೆ. ಈ ಮಹಾಸಭೆಯ ಮೂಲ ಸಂಸ್ಥಾಪಕರಲ್ಲಿ ಹಾನಗಲ್ಲು ಶ್ರೀ ಕುಮಾರಸ್ವಾಮಿಗಳೂ ಚಿತ್ರದುರ್ಗದ ಶ್ರೀ ಜಯದೇವಸ್ವಾಮಿಗಳೂ ಪ್ರಮುಖರು. ಇವರ ನೇತೃತ್ವದಲ್ಲಿಯೇ ಅದುವರೆಗೆ ವೀರಶೈವ ಮಹಾಸಭೆ ಗಳೆಲ್ಲ ನಡೆದುವು. ಸನಾತನವೀರಶೈವ ಗುರುವರ್ಗ ಈ ಮಹಾಸಭೆಗಳ ಕಾರ್ಯಕಲಾಪಗಳಲ್ಲಿ ಆಸಕ್ತಿವಹಿಸಿದಂತೆಯೂ ಕಂಡುಬರುವುದಿಲ್ಲ. ಗುರುವರ್ಗದ ಸಹಕಾರದಿಂದ ವೀರಶೈವ ಮಹಾಸಭೆಯನ್ನು ಸ್ಥಾಪಿಸಿದಂತೆ ಇಲ್ಲ. ಇಂದು ಬಸವಧರ್ಮ ಸಾಧಕರೂ ಗುರುವರ್ಗದ ಸಹಕಾರವನ್ನು ಅಪೇಕ್ಷಿಸಿದಂತಿಲ್ಲ! ಚಿಂತೆಯಿಲ್ಲ. ಇದು ಸಮಾಜದ ದುರ್ದೈವ! ಹಿಂದೆ, ಬಾಳೇಹಳ್ಳಿ ಗುರು ಸಿಂಹಾಸನಕ್ಕೆ ಶ್ರೀ ಜಯದೇವಸ್ವಾಮಿಗಳನ್ನು ಆರಿಸಬೇಕಾಗಿತ್ತು. ಅದು

ಸ್ಥಿತು. ಕೆಲವು ಕಾಲಾನಂತರ ಅವರು ಚಿತ್ರದುರ್ಗದ ವಿರಕ್ತಪೀಠಾಧಿಕಾರಿಗ ಳಾದರು. ಅವರೇ ಗುರುಪೀಠಾಧಿಕಾರಿಯಾಗಿದ್ದರೆ, ವಿರಕ್ತವರ್ಗವನ್ನು ಪುರಸ್ಕ ರಿಸುತ್ತಿರಲಿಲ್ಲವೇನೋ ! ಅವರು ವಿರಕ್ತ ಪೀಠಾರೋಹಣಮಾಡಿದ್ದರಿಂದ, ಗುರು ವರ್ಗವನ್ನು ನಿರ್ಲಕ್ಷಿಸಿದರು. ಇಂಥ ವಿಚಿತ್ರ ಮನೋಧರ್ಮ ವೀರಶೈವದಲ್ಲಿದೆ. ಈಗ ಶ್ರೀಶೈಲ ಪೀಠಾಧೀಶ್ವರರಾಗಿರುವ ಶ್ರೀ ವಾಗೀಶ ಶಿವಾಚಾರ್ಯರು ಅಥಣಿ ವಿರಕ್ತವಾತಾವರಣದಲ್ಲಿ ಶಿಷ್ಯವೃತ್ತಿಯಲ್ಲಿದ್ದರು. ಅವರಲ್ಲಿ ಶರಣ ಮನೋಧರ್ಮ ಮೂಡಿತು. ಕಾಲಕರ್ಮಸಂಯೋಗದಿಂದ ಅವರು ಗುರುಪಟ್ಟಭದ್ರರಾದರು. ವಿರಕ್ತಪೀಠಾಧೀಶ್ವರರನ್ನು ಅವರು ಸಮಾನಂತೆ ಗೌರವಿಸಲು ತಮ್ಮ ಗುರುಧರ್ಮ ಶ್ರೇಷ್ಠತೆಯನ್ನು ತ್ಯಜಿಸಲಾರರು ! ಅವರು ಸನಾತನ ಗುರುಪದವಿ ಪ್ರತ್ಯೇಕವಾ ಗಿಯೇ ನಿಂತಿದೆ ಎನ್ನುತ್ತಾರೆ. ಗೂಳೂರು ನಿಡುಮಾಮಿಡಿ ಗುರು ಪೀಠಾ ಧೀಶ್ವರರಾಗಿರುವ ಶ್ರೀ ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯರು ಪ್ರಕೃತಿ ವಿರಕ್ತಹೃದಯರು. ಇವರು ಶಿವಯೋಗಮಂದಿರದಲ್ಲಿ ಶಿಕ್ಷಣಪಡೆದರು. ಗುರುಪೀಠದಲ್ಲಿ ಪಟ್ಟಗೊಂಡರು. ಇವರದು ಗುರುದೃಷ್ಟಿ ! ಶರಣವಾಣಿ ! ವಿರಕ್ತ ಸಮಯಾಚಾರ ಪ್ರಾಬಲ್ಯ ಗುರುವರ್ಗದ ಹೃದಯದೌರ್ಬಲ್ಯವನ್ನು ಬಿಂಬಿಸುತ್ತಿದೆ ! ಮೇಲುಕೀಳೆಂಬ ಭಾವವನ್ನು ಉಳಿಸುತ್ತಿದೆ ! ಇವರ ಗುರು ಶ್ರೀ ಸದಾಶಿವ ಶಿವಾಚಾರ್ಯರು. ಇವರೂ ಶಿವಯೋಗಮಂದಿರದ ವಿದ್ಯಾರ್ಥಿ ! ಹಾನಗಲ್ಲು ಕುಮಾರಸ್ವಾಮಿಗಳ ಶಿಷ್ಯರು. ಈಗ ಸಖರಾಯಪಟ್ಟಣದ ಗುರುಸ್ವಾಮಿ ಮಠದ ಗುರುವರ್ಯರಾಗಿದ್ದಾರೆ. ಸಂಸ್ಕೃತ ವಿದ್ವಾಂಸರು; ತಪಸ್ವಿಗಳು. ಇವರು ಆನಂದಪುರ ವಿರಕ್ತ ಮುರಘಾಮಠದ ಶ್ರೀ ಲಿಂಗಮಹಾ ಸ್ವಾಮಿಗಳ ಮತ್ತು ಹಾನಗಲ್ಲು ಶ್ರೀ ಕುಮಾರಸ್ವಾಮಿಗಳ ವಿರಕ್ತ ವಾತಾವರಣ ದಲ್ಲಿ ಬೆಳೆದರು. ಇಂಥವರು ಅನೇಕ ಗುರುಪೀಠಾಧಿಕಾರಿಗಳಾಗಿರುತ್ತಾರೆ. ಇಂಥವರ ಸನಾತನ ಗುರುಹೃದಯದಲ್ಲಿ ವಿರಕ್ತಛಾಯೆ ಸುಳಿಯುತ್ತಿದೆ. ಗುರುಸ್ಥಾನದಲ್ಲಿದ್ದರೂ ಹೃದಯದೌರ್ಬಲ್ಯವಿದ್ದೇ ಇರುತ್ತದೆ. ' ಸನಾತನ ಗುರುಕುಲ ' ದಲ್ಲಿ ಶಿಕ್ಷಣ ಪಡೆದವರೇ ಗುರುಪೀಠಾಧಿಕಾರಿಗಳಾದರೆ, ಸನಾತನ ವೀರಶೈವ ಪೂರ್ಣತೇಜಸ್ಸಿನಿಂದ ಬೆಳದೀತು ' ಶಿವಯೋಗಮಂದಿರ ' ವಿರಕ್ತ ವರ್ಗದ ವರಪ್ರಸಾದ ! ಬೆಂಗಳೂರು ಸರ್ಪಭೂಷಣ ಮಠದ ಶ್ರೀ ಶಿವಕುಮಾರ ಸ್ವಾಮಿಗಳು ಹುಬ್ಬಳ್ಳಿ ಮೂರುಸಾವಿರ ಮಠದ ಸಂಸ್ಕೃತ ಪಾಠಶಾಲೆಯ

'ಗುರುಕುಲ'ದ ಅಂತೇವಾಸಿಗಳಾಗಿದ್ದರು. ಕುಮಾರಸಮಯ ವಾತಾವರಣ ದಲ್ಲಿ ಶಿಕ್ಷಣಪಡೆದವರು. ಇವರು ಮುರಗೀಸಮಯದ ಶಿರಾಳಕೊಪ್ಪ ವಿರಕ್ತ ಮಠದ ಸ್ವಾಮಿಯಾದರು. ಇವರು ದೊಡ್ಡ ವಿದ್ವಾಂಸರು. ಹಿಂದೀ ಭಾಷಾ ಉನ್ನತಪದವೀಧರರು. ಸರ್ಪಭೂಷಣ ಶಿವಯೋಗಿಗಳು ಗುರುಸಂಪ್ರದಾಯ ದವರು. ಅದು ಏಕೋ ವಿರಕ್ತಮಠವಾಗಿದೆ. ಶಿವಯೋಗಮಂದಿರ ಮಹಾ ಗುರುಕುಲದಂತಿದೆ. ಅದೊಂದು ಸಿದ್ಧಕೂಟ! ಮಹಾಕೂಟದ ಸಮೀಪದಲ್ಲಿದೆ! ಇಲ್ಲಿ ಶಿಕ್ಷಣಪಡೆದ ಶಿಷ್ಯವೃಂದ ಗುರುಪೀಠಗಳಿಗೂ ಸ್ವಾಮಿಗಳಾಗುತ್ತಾರೆ. ಅವರು ಆಗ ಪ್ರಮುಖ ವಿರಕ್ತಪೀಠಾಧೀಶ್ವರರಿಗೆ 'ಬಿನ್ನಹ' ಪತ್ರಗಳನ್ನು ಸಂದರ್ಭಾನುಸಾರ ಬರೆಯುತ್ತಾರೆ; ಶಿಷ್ಯಭಾವದಿಂದ ವರ್ತಿಸುತ್ತಾರೆ. ಶ್ರೀ ಹಾನಗಲ್ಲು ಕುಮಾರಸ್ವಾಮಿಗಳು ಅನೇಕ ಗುರುಮಠಗಳ ಪಟ್ಟಾಧಿಕಾರ ಸಮಾ ರಂಭಗಳಲ್ಲಿ ಭಾಗವಹಿಸುತ್ತಿದ್ದರು. ಅಲ್ಲಿ ವಿರಕ್ತ ಪ್ರಭಾವ ಸ್ಪಷ್ಟವಾಗಿಯೇ ಇರುತ್ತಿತ್ತು! ಚಿತ್ರದುರ್ಗದ ಶ್ರೀ ಜಯದೇವ ಸ್ವಾಮಿಗಳು ಅನೇಕ ಸಂದರ್ಭ ಗಳಲ್ಲಿ ಶಿವಯೋಗಮಂದಿರದ ಸಾಧಕರು 'ಗುರಪೀಠಾಧಿಕಾರಿ' ಗಳಾದ ಸಮಾ ರಂಭಗಳನ್ನು ಹರಸಿ ಆಶೀರ್ವಾದಪತ್ರಗಳನ್ನು ಕಳಿಸಿರುವುದುಂಟು. ಇಂಥ ಸಂದರ್ಭಗಳಲ್ಲಿ ಪ್ರಾಚೀನ ಗುರುಪಟ್ಟಭದ್ರರು ಮೌನವಾಗಿಯೇ ಇರುತ್ತಿದ್ದರು. ಅವರಿಗೆ ಆಹ್ವಾನವಾದರೂ ಇರುತ್ತಿರಲಿಲ್ಲವೇನೋ! ಶ್ರೀ ಹಾನಗಲ್ಲು ಕುಮಾರ ಸ್ವಾಮಿಗಳೂ ಶ್ರೀ ಜಯದೇವಸ್ವಾಮಿಗಳೂ ಪರಸ್ಪರ ಅಹಿತರಂತಿದ್ದರೂ, ಇಬ್ಬರೂ ವಿರಕ್ತಸಮಯ ಪೋಷಣೆಯನ್ನು ನಿಷ್ಠೆಯಿಂದ ಮಾಡಿದರು. ಗುರು ವರ್ಗ ಹಿಂದುಳಿಯಿತು! "ಗುರತ್ವವೆಂಬುದು ಪರಶಿವನ ಅಪ್ಪಣೆಯಮೇರೆಗೆ ಪೂರ್ವದಲ್ಲಿ ಶ್ರೀ ರೇಣುಕಾಚಾರ್ಯ ಮೊದಲಾದವರು ಅವತರಿಸಿ ಲಿಂಗಧಾರಣೆ ಮುಂತಾದವುಗಳಿಂದ ಭಕ್ತರನ್ನು ಉದ್ಧರಿಸಿ ಶಿವಮತವನ್ನು ಪ್ರಚುರಪಡಿಸಿ ದ್ದಾರೆ. ಈ ಉದ್ಧಾರ ಕಾರ್ಯವು ಅವರ ಶಿಷ್ಯ-ಪುತ್ರಪರಂಪರೆಯಾಗಿ ಅಧಿಕಾರ ರೂಪವಾಗಿ ಯಾರಿಗೆಬಂದಿರುವುದೋ ಅವರೇ ಯೋಗ್ಯರಾದವರು; ಗುರುಗಳಾ ಗಬಲ್ಲರು. ಅವರಿಂದ ಸಮಾಜದಲ್ಲಿ ಏಕರೂಪತೆ ಬರುವುದೆಂಬುದು" ಹಾನಗಲ್ಲು ಶ್ರೀಗಳವರ ವಿಚಾರವಾಗಿದ್ದಿತೆಂದು ಶ್ರೀ ಚೆನ್ನಮಲ್ಲಿಕಾರ್ಜುನರು 'ಬೆಳಗು' ಸಂಪುಟದಲ್ಲಿ ಬರೆದಿರುವ ಲೇಖನದಿಂದ ವ್ಯಕ್ತವಾಗುತ್ತದೆ. ಆದರೆ ಅವರ ಮಾತು ಆಚರಣೆಯಲ್ಲಿಲ್ಲ. ಗುರುಪದಮೀಮಾಂಸೆಯನ್ನು ಮಾಡುವುದ

ವಿರಕ್ತ ಕುಮಾರಸ್ವಾಮಿಗಳು ಶ್ರೀ ರೇಣುಕಾಚಾರ್ಯರತ್ತ ವೃಷ್ಟಿಸಿ, ಣುಕಾಚಾರ್ಯಃ ಪ್ರಸೀದತು' ಎಂದಿರುತ್ತಾರೆ. ಶರಣಧರ್ಮದಲ್ಲಿ ಸಂಸ್ಕಾರ ದಿಂದ ಯಾರುಬೇಕಾದರೂ ಗುರುವಿರಕ್ತರಾಗಬಹುದೆಂಬ ತತ್ತ್ವವನ್ನು ಲಕ್ಷಿಸಿ ಅವರು “ಗುರುಬಸವಲಿಂಗಾಯನಮಃ” ಎಂದು ಏಕೆ ಹೇಳಲಿಲ್ಲವೋ! ಕ್ತರಾದರೂ ಸನಾತನ ವೀರಶೈವ ಮನೋಧರ್ಮದಿಂದ ದೂರವಾಗಿಲ್ಲ. ದಿನ ವಿರಕ್ತಪಂಥವೇ ಇಷ್ಟು. ಸನಾತನಧರ್ಮದಿಂದ ಅಭಿಷೇಕಮಾಡಿಸಿ ಂಡು ಶರಣಧರ್ಮದಿಂದ ಪಾದಪೂಜೆ ಮಾಡಿಸಿಕೊಳ್ಳುತ್ತಿದೆ! ಅತ್ತ ಸನಾತ ವೂ ಅಲ್ಲ; ಇತ್ತ ಶರಣತನವೂ ಅಲ್ಲ! ಬಸವಣ್ಣನವರು ಇಂಥ ಪ್ರತ್ಯೇಕತೆಯನ್ನು ಧಿಸಿಲ್ಲ; ಆಚರಿಸಿಲ್ಲ. ಶರಣಧರ್ಮದಲ್ಲಿ ಅನೇಕ ಗುರು ವಿರಕ್ತಮಠಗಳಿವೆ. ವಣ ಪ್ರಭೇದಗಳಲ್ಲಿಯೂ ದೀಕ್ಷೆಯುಂಟು. ದೀಕ್ಷೆ ಎಂಬುದು ಯಾವುದೇ ತಿಸಿನವರಿಗೆ ಮಾತ್ರವೇ ಮೀಸಲು ಎಂಬ ಭಾವನೆಯಾಗಲಿ, ಯಾವುದೇ ಷ್ಟ ಪ್ರಭೇದದವರು ಮಾತ್ರವೇ ಗುರುವಿರಕ್ತರಾಗಲು ಅರ್ಹರು ಎಂಬ ನಂಬಿಕೆಯಾಗಲಿ “ಇಂದು” ಮತ್ತು “ಮುಂದು” ಸುತರಾಂ ಸರಿಯಲ್ಲ. ವೇ ಗುರುವರ್ಗ; ತಾವೇ ಗುರುಗಳಾಗಲು ಅರ್ಹರು ಎಂಬ ಮಾತು ಬಸವಣ್ಣ ನು ರೂಪಿಸಿದ ವೀರಶೈವಕ್ಕೆ ಅನ್ವಯಿಸುವುದಿಲ್ಲ. ಬಸವಣ್ಣನವರ ವೀರಶೈವ ನ್ನು ವಿರಕ್ತಪಂಥ ವಿರೂಪಗೊಳಿಸಿರುತ್ತದೆ. “ಅಂಗದಮೇಲೆ ಲಿಂಗವಿದ್ದವರನ್ನು ಜಗನ್ನಾಥನೆಂದು ಕಾಂಬೆ–ಎಂಬ ಬಸವಣ್ಣನವರ ವಿಶಾಲ ಭಾವನೆ ಇಂದು ಸಮಾಜದಲ್ಲಿದೆಯೇ? ನಮ್ಮ ಧರ್ಮವನ್ನು ಅಂಗೀಕರಿಸಿ ಗುರುಗಳಾಗಿ ಅದನ್ನು ಪ್ರಚಾರಮಾಡುವವರಿಗೆ ತಡೆಯುಂಟುಮಾಡಲಾದೀತೆ? ತಡೆಯಲು ನಾವಾರು? ಶೈವಗುರುಲಿಂಗ ಜಂಗಮತತ್ತ್ವಗಳು ಇಂತಿಂಥ ವಿಶಿಷ್ಟಜಾತಿಗೆ ಮುಡು ಪಾಗಿರಬೇಕೆಂಬ ಹಕ್ಕುಗಳನ್ನು ಕಾಯ್ದಿರಿಸಲಾಗಿಲ್ಲವಷ್ಟೆ! ಸಾಂಪ್ರದಾಯವು ಸಂಕುಚಿತವಾಗಿದ್ದರೆ ತತ್ತ್ವವು ಸಂಕುಚಿತವೇ?” ಎಂದೂ “ಲಿಂಗತತ್ತ್ವವನ್ನ ತನು ಯಾವಜಾತಿಯವನೇ ಇರಲಿ ಅನ್ಯರಿಗೆ ಉಪದೇಶಕೊಡಲು ಸಮರ್ಥ ನಿದ್ದರೆ ಆತನು ಗುರುವೆಂದೇ ತಿಳಿಯುವುದು ಸತ್ಯ ಹಾಗೂ ಉದಾರಗುಣ. ಲ್ಲಿ, ಆತನು ಶೂದ್ರನು, ಗುರುವು ಹೇಗಾದನೆಂದುಬಿಡುವುದು ಸಂಕುಚಿತ ಣವು. ಇಂಥ ಸಂಕುಚಿತ ಗುಣಧರ್ಮವು ವಿಶ್ವಧರ್ಮವು ಹೇಗಾದೀತು? ಕ್ವಯಿನ್ ಔಷಧಿಯು ಯಾರುಬೇಕಾದವರಿಗೆ ಚಳಿಜ್ವರ ಬಂದರೂ ಗುಣಪ

ಡಿಸುವುದು. ಅದಕ್ಕೆ ಜಾತಿಕುಲಗಳ, ಸ್ತ್ರೀ ಪುರುಷರ ಪ್ರಶ್ನೆಯೇ ಇಲ್ಲ. ಅದು ವಿಶ್ವವ್ಯಾಪಕ ಔಷಧಿಯು. ಅದರಂತೆ, ಗುರುಲಿಂಗ ಜಂಗಮತತ್ತ್ವವು ವಿಶ್ವ ವ್ಯಾಪಕವಾದುದು. ಅದನ್ನು ಅರಿತವರು ಆಚರಿಸಲು ಸ್ವತಂತ್ರರಿದ್ದಾರೆ. ಅರಿಯದವರಿಗೆ ತಿಳಿಸಿಕೊಡಲೂ ಸ್ವತಂತ್ರರಿದ್ದಾರೆ. ಇದೇ ಶರಣಮತ." ಎಂದೂ ಶ್ರೀ ಕಲ್ಯಾಣಪ್ಪಾ ಬ್ಯಾಳಿ, ಹುನಗುಂದ, ಅವರು "ಶ್ರೀ ಅಥಣಿ ಶಿವ ಯೋಗಿಗಳ ಚರಿತ್ರೆ" ಯಲ್ಲಿ ಇಂದಿನ ಪರಿಸ್ಥಿತಿಯನ್ನು ಸೂಕ್ತವಾಗಿ ತಿಳಿಸಿರು ತ್ತಾರೆ. ವೀರಶೈವದಲ್ಲಿ ನೂರಾರು ಪ್ರಭೇದಗಳಿವೆ. ಆಯಾಯ ಪ್ರಭೇದ ದವರು ಆಯಾಯ ಪ್ರಭೇದವನ್ನು ಶ್ರೇಷ್ಠವೆಂದು ಭಾವಿಸುತ್ತಾರೆ. ಅದರಿಂದಲೇ ಮತಭೇದಗಳು ತಾಕಲಾಟವಾಡುತ್ತಿವೆ. ಮತ್ತೊಮ್ಮೆ ಬಸವಣ್ಣನವರು ಭೂಮಿಗಿಳಿದುಬಂದರೂ, ವೀರಶೈವದಲ್ಲಿ ಏಕತೆಯನ್ನು ಮೂಡಿಸಲಾರರು! "ಸಮಾಜ ಒಂದು ಸಂಪ್ರದಾಯ ನೂರು" ಬಸವಣ್ಣನವರ ಶರಣಧರ್ಮತತ್ತ್ವ ಗಳನ್ನು ಅನುಸರಿಸದ ವಿರಕ್ತರಿಂದ ಸಮಾಜದ ಅಭ್ಯುದಯವಾಗಲಾರದು. ಸಮಾಜ ಸಂಘಟಿತವಾಗಬೇಕು. ಬಸವಣ್ಣನವರ ಉದಾರಪಂಥವನ್ನು ಬೆಳಸ ಬೇಕು. ವಿರಕ್ತರಿಗೆ ತಪಸ್ಸುಬೇಕು; ಸಂಯಮಬೇಕು. ಅವರು ಬಹಿರಾಡಂ ಬರದಿಂದ ದೂರವಿರಬೇಕು. ಅಥಣಿ ಶಿವಯೋಗಿಗಳನ್ನು ಒಮ್ಮೆ ಸೌದತ್ತಿಯಲ್ಲಿ ಪಾಲಕಿಯಲ್ಲಿ ಕುಳ್ಳಿರಿಸಿ ಉತ್ಸವಮಾಡಬೇಕೆಂದು ಸಮಾಜದವರು ಪ್ರಯತ್ನಿಸಿ ದರು; ಅವರನ್ನು ಒಪ್ಪಿಸಲು ಎಲ್ಲರೂ ಕಾಡಿದರು; ಬೇಡಿದರು. ಆ ನಿರಂಜನ ಸಿದ್ಧರು ಒಪ್ಪಲಿಲ್ಲವಂತೆ! ಅಂಥ ವೈರಾಗ್ಯಮೂರ್ತಿ! ಅವರು ಪ್ರತಿಯೊಬ್ಬ ಶರಣನನ್ನೂ ಸಾಕ್ಷಾತ್ ಶಿವನೆಂದೂ, ಪ್ರತಿಯೊಬ್ಬ ಶರಣೆಯನ್ನೂ ಪ್ರತ್ಯಕ್ಷ ಪಾರ್ವತಿಯೆಂದೂ ನಂಬಿನಡೆದರು. ಇಂಥ ಸರ್ವಸಮಾನ ಮನೋಭಾವ ನೆಲಸದಹೊರತು ಬಸವಣ್ಣನವರ ಶತಮಾನೋತ್ಸವಗಳನ್ನು ಎಷ್ಟುಮಾಡಿದರೂ ಉಪಯೋಗವಿಲ್ಲ. ಇಂಥ ಶತಮಾನೋತ್ಸವನಿಧಿಗೆ ಹತ್ತಾರು ಸಾವಿರ ರೂಪಾ ಯಿಗಳ ಕಾಣಿಕೆಯನ್ನು ತೆತ್ತು, ತಮ್ಮ ಮೆರವಣಿಗೆಯನ್ನು ಮಾಡಿಸಿಕೊಳ್ಳಲು ವಿರಕ್ತ'ಜಗದ್ಗುರು' ಗಳು ಕಾತುರರಾಗಿದ್ದಾರೆ. ಈ 'ಮರುಳ ಶಂಕರದೇವರು' ಗಳನ್ನು ಕಂಡು ಮುಂದಿನ ಸಮಾಜ 'ಹುಚ್ಚುವೀರ'ರೆಂದು ನಕ್ಕಾರು! ಕಪಟ ಸಂನ್ಯಾಸಿಗಳೆಂದು ಜರಿದಾರು!

"ಅಥಣಿ ಶಿವಯೋಗಿಗಳು ಯಾರಿಂದಲೂ ಪಾದಮುಟ್ಟಿಸಿಕೊಂಡು ನಮಸ್ಕಾರಮಾಡಿಸಿಕೊಳ್ಳುತ್ತಿರಲಿಲ್ಲ. ದೂರದಿಂದ ಸಾಷ್ಟಾಂಗ ಹಾಕಿದವರಿಗೆ ಶರಣು ಶರಣೆನ್ನುತ್ತಿದ್ದರು. ಹರಗುರು ಚರಮೂರ್ತಿಗಳನ್ನು ಕಂಡರೆ ಆನಂದ ಪುಳಕಿತರಾಗಿ ಅವರಿಗೆ ತಾವೇ ಮೊದಲು ಸಾಷ್ಟಾಂಗ ಹಾಕುತ್ತಿದ್ದರು" ಎಂದು ಶ್ರೀ ಅಥಣಿ ಶಿವಯೋಗಿಗಳ ಚರಿತ್ರೆಯಲ್ಲಿ ಹೇಳಿರುತ್ತದೆ. ಎಂಥ ಪರಿಪಕ್ವ ಫಲ! ಆ ಪಂಥದ ವಿರಕ್ತರು ಆ ಶಿವಯೋಗಿಗಳ ಮಾರ್ಗವನ್ನು ಅನುಸರಿಸುತ್ತಿದ್ದಾರೆಯೆ? ಹರಗುರು ಚರಮೂರ್ತಿಗಳಿಗೆ ಈ ಅಪರಿಪಕ್ವ ವಿರಕ್ತರು ತಾವೇ ಮೊದಲು ಸಾಷ್ಟಾಂಗ ಹಾಕುವ ಮಾತಂತಿರಲಿ, ಅವರನ್ನು ತಮ್ಮ 'ಶ್ರೀಪಾದ' ಸನ್ನಿಧಿಯಲ್ಲಿ ಉಚಿತಾಸನಗಳಮೇಲೆ ಕೂರಿಸಿಕೊಂಡು ಗೌರವಿಸುವಷ್ಟು ಸಂಸ್ಕಾರವೂ ಇವರಿಗಿಲ್ಲ. ಆದರೆ, ಹೆಣ್ಣುಮಕ್ಕಳು ತಮ್ಮ 'ಶಿವಚರಣ'ವನ್ನು ಮುಟ್ಟಿ ನಮಸ್ಕಾರ ಮಾಡಲಿ–ಎಂದು ಪಾದಗಳನ್ನು ಮುಂದಿಡುತ್ತಾರೆ! ಎಂಥ ಪಾಪಕಾರ್ಯ! ಯಾವ ವಿರಕ್ತರ ಪಾದಗಳನ್ನೂ ಮುಟ್ಟಿ ಸ್ತ್ರೀಯರು ಸಾಷ್ಟಾಂಗ ನಮಸ್ಕಾರ ಮಾಡಬಾರದು. "ದೇವನೊಬ್ಬ, ನಾಮ ಹಲವು; ಪರಮಪತಿವ್ರತೆಗೆ ಗಂಡನೊಬ್ಬ, ಮತ್ತೊಂದಕ್ಕೆರಗಿದರೆ ಕಿವಿ-ಮೂಗ ಕೊಯ್ವನು! ಹಲವು ದೈವದ ಎಂಜಲ ತಿಂಬವರ ನೇನೆಂಬೆ, ಕೂಡಲಸಂಗಮದೇವಾ"–ಎಂದು ಬಸವಣ್ಣನವರು ನುಡಿದಿರುತ್ತಾರೆ. ಪತಿವ್ರತೆಯಾದ ಹೆಣ್ಣಿಗೆ ಗಂಡನೇ ದೈವ. ಅವಳಿಗೆ ಅನ್ಯದೈವವಿಲ್ಲ. ಅವಳು ಮತ್ತೊಂದು ದೈವಕ್ಕೆ ಎರಗಿದರೆ ದೈವದದೈವ ಮಹಾದೇವ ಅವಳನ್ನು ಮೆಚ್ಚನು! ಅವಳ ದೈವ ಅವಳ ಕಿವಿ-ಮೂಗನ್ನು ಕೊಯ್ದಾನು! ಬಸವಣ್ಣನವರ ತತ್ತ್ವಾರ್ಥವನ್ನು ವಿರಕ್ತರು ಕಲುಷಿತಮಾಡಬಾರದು!

ಮಹಾಮಠದ ವಿರಕ್ತರೊಬ್ಬರು ಯೌವನವತಿಯರನ್ನು ಮಂದಹಾಸದಿಂದ ಹರಸುತ್ತಿದ್ದರಂತೆ! ಆ ಸುಂದರ ತರುಣಿಯರು ಆ ವಿರಕ್ತರ ಪಾದತಳದಲ್ಲಿ ತಮ್ಮ ಎರಡೂ ಹಸ್ತಗಳನ್ನಿಟ್ಟು ನಮಸ್ಕಾರ ಮಾಡುತ್ತಿದ್ದಾಗ, ಕುರ್ಚಿಯಮೇಲೆ ಕುಳಿತಿರುತ್ತಿದ್ದ ಆ ನಿರಂಜನಮೂರ್ತಿ ತನ್ನ ಕಾಲುಬೆರಳಿನಿಂದ ಆ ಯುವತಿಯರ ಕೋಮಲ ಹಸ್ತಗಳನ್ನು ಒತ್ತುತ್ತಿದ್ದರಂತೆ! ಆ ಹೆಣ್ಣುಮಕ್ಕಳು ನಾಚುಗೆಯಿಂದ ತಮ್ಮ ಹಿರಿಯರಿಗಾಗಲಿ, ಗಂಡಂದಿರಿಗಾಗಲಿ ಹೇಳುತ್ತಿರಲಿಲ್ಲ. ಒಮ್ಮೆ ಒಬ್ಬ ನವಯೌವನ ವಿಧವೆ ಆ ವಿರಕ್ತ ಸ್ವಾಮಿಯ ಪಾದಮುಟ್ಟಿ ನಮಸ್ಕಾರ

ಮಾಡಿದಾಗ ಆ ವಿರಕ್ತ ತನ್ನ ಕುಚೇಷ್ಟೆಯನ್ನು ಎಂದಿನಂತೆ ನಡಸಿದ! ಪ್ರಮದೆ ಈ ಕಾಮಹರನ ಚೇಷ್ಟೆಯನ್ನು ಅರಿತಳು! ಮರುಕ್ಷಣದಲ್ಲಿಯೇ ಅವಳು ಮಹಾಕಾಳಿಯಂತೆ ರೇಗಿ ಆ ವಿರಕ್ತನ ಕಪಾಳಕ್ಕೆ ಛಟೀರನೆ ಬಾರಿಸಿದಳಂತೆ! ಇದು ನಡೆದಸಂಗತಿ! ಅಂದಿನಿಂದ ಆ ವಿರಕ್ತನಿಗೆ ಜ್ಞಾನೋದಯವಾಯಿತು! ಈಗಲೂ ಆತನು ದೊಡ್ಡ ವಿರಕ್ತಸ್ವಾಮಿಯಾಗಿದ್ದಾನೆ. ಆತನು ಸಭೆಗಳಲ್ಲಿ ತಲೆತಗ್ಗಿಸಿಕೊಂಡೇ ಪೆಂಗಸರ ಕಡೆಗೆ ತನ್ನ ಕಟಾಕ್ಷವನ್ನು ಬೀರುತ್ತಾನೆಂದು ಜನವು ಆಡಿಕೊಳ್ಳುತ್ತಾರೆ. ಹೆಣ್ಣುಮಕ್ಕಳು ಯಾವ ವಿರಕ್ತರ ಪಾದಗಳನ್ನೂ ಮುಟ್ಟಬಾರದು!

ವೀರಶೈವ ಮತ ಸ್ವಯಂಪರಿಪೂರ್ಣವಾದ ಮತ. ಇದರಲ್ಲಿ ಬ್ರಹ್ಮ ತಪಸ್ಸುಂಟು; ವೇದಜ್ಞಾನವುಂಟು; ಕ್ಷಾತ್ರತೇಜಸ್ಸುಂಟು; ವೀರವೃತ್ತಿಯುಂಟು; ವೈಶ್ಯಧರ್ಮವುಂಟು; ಕಾರ್ಯಕೌಶಲವುಂಟು; ಶೂದ್ರಕಾಯಕವುಂಟು; ಸೇವಾಭಾವವುಂಟು. ಇದು ವಿಶಾಲಧರ್ಮ. ಇಂಥ ಮಹಾ ಸಮಾಜದಲ್ಲಿ ಯಾವುದೇ ತತ್ತ್ವವನ್ನು ಪ್ರಯೋಗದಲ್ಲಿ ತರಲು ತುಂಬ ಎಚ್ಚರಿಕೆಯಿಂದ ವರ್ತಿಸಬೇಕು. ಇಲ್ಲವಾದರೆ, ಜನಮನ ಅಪವಿತ್ರವಾಗುತ್ತದೆ. ಲಿಂಗಕ್ಕಿಂತ ಜಂಗಮವೇ ಹೆಚ್ಚೆಂಬುದು ಲಿಂಗಾಂಗ ಸಾಮರಸ್ಯ ತತ್ತ್ವದಲ್ಲಿ ಒಂದು ಅವಸ್ಥೆಯನ್ನು ಸೂಚಿಸುತ್ತದೆಯೇನೋ! ಆ ತತ್ತ್ವ ಇಂದು ಅಪಮಾರ್ಗದಲ್ಲಿ ನಡೆಯುತ್ತಿದೆ. ಅನೇಕ ವಿರಕ್ತರು ತಾವು ಶಿವನಿಗಿಂತಲೂ ಹೆಚ್ಚೆಂಬ ಭಾವನೆಯಿಂದ ಶಿವರಾತ್ರಿ ಮುಂತಾದ ಪುಣ್ಯ ದಿನಗಳಲ್ಲಿ ದೇವಾಲಯಗಳಲ್ಲಿ ಸ್ಥಾವರ ಲಿಂಗಗಳಮೇಲೆ ತಮ್ಮ 'ಪೂಜ್ಯಪಾದ'ಗಳನ್ನಿಟ್ಟು, ಆ ಲಿಂಗಗಳಿಗೆ ಅಭಿಷೇಕ ಮಾಡಿಸುತ್ತಾರೆ! ದ್ವಿತೀಯ ಶಂಭು ಬಸವಣ್ಣನ ವಿಗ್ರಹದ ತಲೆಯಮೇಲೆಯೂ ಈ ಅದ್ವಿತೀಯ ಶಂಭು ವಿರಕ್ತನ ಪಾದಗಳಿಗೆ ಅಭಿಷೇಕವಾಗುತ್ತದೆ! ಬಹುಶಃ ಸ್ಥಾವರಲಿಂಗಪೂಜೆಗಿಂತಲೂ ಈ 'ಪರಮನಿರಂಜನ'ನ ಪಾದಪೂಜೆಯೇ ಮುಖ್ಯವೆಂಬುದನ್ನು ಈ ಪದ್ಧತಿಯಿಂದ ಪ್ರಚಾರಮಾಡುತ್ತಾರೆಯೇನೋ! ಇದು ಅನಾರ್ಯ ಪದ್ಧತಿಯೆಂಬುದರಲ್ಲಿ ಸಂಶಯವಿಲ್ಲ. ಆದರೆ ಈ 'ಪೂಜ್ಯ ಪಾದ'ರೆಲ್ಲಾ ಲಿಂಗೈಕ್ಯರಾಗುತ್ತಾರೆ! ಅವರ ಸಮಾಧಿಯಮೇಲೆ ಪುನಃ ಲಿಂಗ ಸ್ಥಾಪನೆಮಾಡುತ್ತಾರೆ! ಅನೇಕ ಕಡೆಗಳಲ್ಲಿ ಈ ಮಹಾ ಮೂರ್ತಿಗಳ ಶಿಲಾ ವಿಗ್ರಹಗಳನ್ನೂ ನಿಲ್ಲಿಸುತ್ತಾರೆ! ಮುಂದೆ, ಈ ಸಮಾಧಿಲಿಂಗಗಳ ಮೇಲೆ ಮತ್ತು

ಶಿಲಾವಿಗ್ರಹಗಳಮೇಲೆ ಈ ಪರಂಪರೆಯ ಪ್ರಶಿಷ್ಯರ ಪಾದಾಭಿಷೇಕ ನಡೆಯು ತ್ತದೆಯೇನೋ! ಶಿವನೇ ಬಲ್ಲ! ಇಂಥ ಪದ್ಧತಿಗಳಿಂದ ಪಾಮರಕೋಟಿಯ ಮೂಲ ಮನಸ್ಸಿನಮೇಲೆ ಎಂಥ ಘೋರಪರಿಣಾಮವಾಗಬೇಕು! ಈ ಧರ್ಮದ ರ್ಯೇನು! ಚಿತ್ರದುರ್ಗದ ಮುರಘಾ ವಿರಕ್ತ ಮಠದಲ್ಲಿಯೂ ಇಂಥ ಪದ್ಧತಿ ಚರಣೆಯಲ್ಲಿದ್ದಿತೆಂದು ತಿಳಿದುಬರುತ್ತದೆ. * "ಪೂಜೆಗಾಗಿ ಸ್ಥಾಪಿತವಾದ ವತಾ ವಿಗ್ರಹಗಳಿಗಿಂತಲೂ ವಿರಕ್ತಸ್ವಾಮಿಗೆ ಹೆಚ್ಚು ಗೌರವ ಸಲ್ಲುತ್ತದೆ. ಮಹೋತ್ಸವಕಾಲದಲ್ಲಿ, ರಥದಲ್ಲಿ ವಿಗ್ರಹವನ್ನು ಕೂಡಿಸಿದಾಗ ಮುರಿಗಿಮಠದ ಸ್ವಾಮಿ ಆ ದೇವತಾ ವಿಗ್ರಹದ ತಲೆಯಮೇಲೆ, ತನ್ನ ಬಲಪಾದವನ್ನು ಇಟ್ಟು ಕೊಂಡು ಮೇಲ್ಗಡೆ ಕುಳಿತುಕೊಳ್ಳುತ್ತಾನೆ. ಆದರೆ, ಈ ಪದ್ಧತಿಯನ್ನು ಸರ್ಕಾರದವರು ನಿಲ್ಲಿಸಿರುತ್ತಾರೆ." –ಎಂದು 'ಮೈಸೂರು ದೇಶದ ಪಂಗಡಗಳು ಮತ್ತು ಜಾತಿಗಳು' ಎಂಬ ಪುಸ್ತಕದಲ್ಲಿ ಬರೆದಿರುತ್ತಾರೆ. ಇದು ಅಕ್ಷಮ್ಯ ಅಪರಾಧವೇ ಸರಿ. ದೇವ ದೇವನಿಗಿಂತಲೂ ಆ ವಿರಕ್ತ ಹೆಚ್ಚೆಂಬ ಭಾವನೆ ಯನ್ನು ಆ ಪಂಗಡದವರು ಪಾಮರಕೋಟಿಯ ಮನಸ್ಸಿನಮೇಲೆ ಬಿತ್ತಿಬೆಳಸಿ ದರು. ಈ ಅನಿಷ್ಟ ಪದ್ಧತಿಯನ್ನು ಸರ್ಕಾರದವರು ನಿಷೇಧಿಸಿದರೆಂದಮೇಲೆ, ಆ ಪದ್ಧತಿಯಿಂದ ಪವಿತ್ರ ಹಿಂದೂಧರ್ಮಕ್ಕೇ ಅಪಚಾರವಾಗುತ್ತಿತೆಂದು ನಿರ್ಧ ರವಾದಂತಾಯಿತು. ಇದನ್ನು ಪರ್ಯಾಲೋಚಿಸಿದರೆ ವಿರಕ್ತ ಪಾದಪೂಜೆಯೂ, ಪಾದತೀರ್ಥವನ್ನು ಇಷ್ಟಲಿಂಗದಮೇಲೆ ಎರೆಯುವುದೂ ಸಲ್ಲದ ಪದ್ಧತಿಯೆಂದು ಹೇಳಬಹುದು. ಮುಮುಕ್ಷು ಸಾಧಕ ಗುರುಕುಲದಲ್ಲಿ ಅದನ್ನು ಆಚರಿಸಬಹು ದೇನೋ! ಗೃಹಸ್ಥವೀರಶೈವನಿಗೆ ಇದು ಸರಿಯಲ್ಲ. ಪ್ರಾಪ್ತವಯಸ್ಕಳಾಗದ ಸ್ತ್ರೀ ಗೃಹಿಣಿಯಾಗಲು ಸಾಧ್ಯವಿಲ್ಲ! ಸಾಧಕ ಮನಃಪ್ರವೃತ್ತಿಯೇ ಇಲ್ಲದ

---

* "The Viraktaswami is revered more than the idols installed for worship. When the idol was installed in a Car procession, the swami of Murugi matha is seated above the idol placing his right foot on its head. But this practice has been stopped by the Government. (Vide the Mysore Tribes and castes–volume IV)

ಲೌಕಿಕರಿಗೆ ಇದು ಫಲದಾಯಕವಲ್ಲ. ಇಷ್ಟಲಿಂಗಪೂಜೆಯೇ ಸರ್ವಾರ್ಥ ಸಿದ್ಧಿಪ್ರದಾಯಕ. ಸತ್ತವರ ಸಮಾಧಿಯಮೇಲೆ ಜಂಗಮ ಎಂಬ ವ್ಯಕ್ತಿಯನ್ನು ನಿಲ್ಲಿಸಿ ಅವನ ಪಾದಪೂಜೆಮಾಡುವ ಪದ್ಧತಿಯೂ ನಿಷಿದ್ಧ. ಕೀಳುಜಾತಿಯ ವರನ್ನು ಲಿಂಗಧಾರಣೆಯಿಂದ ಈ ಮತಕ್ಕೆ ಸೇರಿಸಿಕೊಂಡಮೇಲೆ, ಅವರಿಗಿಂತ ತಾವು ಶ್ರೇಷ್ಠರೆಂಬ ಭಾವನೆಯನ್ನು ವ್ಯಕ್ತಪಡಿಸಲು ವಿಶಿಷ್ಟ ಪಂಗಡದವರೆಂಬ ಜನ ಹೂಡಿದ ಆಟವಿದಾಗಿದೆ. ಸತ್ತವರನ್ನು ಸಮಾಧಿಮಾಡಿ, ಆ ಶ್ಮಶಾನದ ಲ್ಲಿಯೇ ಬಂಧುವರ್ಗದವರು ಪ್ರಸಾದ ಸ್ವೀಕರಿಸುವುದಂತೂ ಊಹಾತೀತವಾದ ಪದ್ಧತಿ ! ಇದು ತಮಿಳು ಶೈವದಿಂದ ಬಂದ ಪ್ರಕ್ರಿಯೆ. ಇವೆಲ್ಲಾ ಮುಂದೆ ಮಾರ್ಪಾಟಾಗಲೇಬೇಕು ! ಯಜ್ಞದಲ್ಲಿ ಪಶುಬಲಿಯನ್ನು ಕೊಟ್ಟರೆ, ಮೋಕ್ಷ ಪ್ರಾಪ್ತಿಯೆಂಬ ನಂಬುಗೆಯಿತ್ತು. ಆ ಪದ್ಧತಿಯೇ ನಿಂತುಹೋಯಿತೆಂದಮೇಲೆ, ಮುಂದೆ ಯಾರಿಗೂ ಮೋಕ್ಷವೇ ಇಲ್ಲದಂತಾಯಿತೇನು ! ಆ ಪದ್ಧತಿಯನ್ನೇ ಆಚರಿಸದಿದ್ದ ಅನ್ಯಮತೀಯರೆಲ್ಲಾ ನರಕಭಾಜನರಾಗುತ್ತಿದ್ದರೇನು? ಸಹಗಮನ ಪದ್ಧತಿಯನ್ನು ನಿಲ್ಲಿಸಿದಮೇಲೆ,ಸ್ತ್ರೀಯರಿಗೆ ಸ್ವರ್ಗಪ್ರಾಪ್ತಿಯಿಲ್ಲದಂತಾಯಿತೇನು? ಸಹಗಮನ ಸಾರ್ವತ್ರಿಕವಾಗಿತ್ತೇನು ? ಹತ್ತುಮಕ್ಕಳಾಗಲಿ ಎಂದು ಹರಸುತ್ತಿದ್ದ ಕಾಲವೊಂದಿತ್ತು ! ಇದು ಮಿತಸಂತಾನಯುಗ ! ಮನೋಧರ್ಮ ಬದಲಾಯಿ ಸುತ್ತಿಲ್ಲವೆ ? " ರಾಜಾ ಪ್ರತ್ಯಕ್ಷದೇವತಾ " ಎಂದರೆ, ರಾಜನೇ ಸಾಕ್ಷಾತ್ ದೇವರು ಎಂಬ ಶಾಸ್ತ್ರವಚನವೇನಾಯಿತು ? ಒಂದು ಕಾಲದಲ್ಲಿ ಆಚರಣೆಯಲ್ಲಿ ರಬಹುದಾದ ಎಲ್ಲ ಮತ ಪ್ರಕ್ರಿಯೆಗಳಾಗಲಿ, ಸಂಪ್ರದಾಯಗಳಾಗಲಿ, ಪದ್ಧತಿ ಗಳಾಗಲಿ, ಆಚಾರಗಳಾಗಲಿ ಯಾವಾಗಲೂ ಸಮಾಜದಲ್ಲಿ ಹಿತಕರವಾಗಿರುತ್ತವೆ ಯೆಂಬುದನ್ನು ಒಪ್ಪಲು ಸಾಧ್ಯವಿಲ್ಲ. ವೀರಸಾವರ್ಕರ್ ಯಾವುದೊಂದು ಅಪರಕ್ರಿಯೆಗಳೂ ತಮಗೆ ನಡೆಯಕೂಡದೆಂದು ಹೇಳಿದ್ದರಂತೆ! ಇಷ್ಟಲಿಂಗವನ್ನೇ ಧರಿಸುತ್ತಿಲ್ಲವೆಂದು ನಾಡಿನ ವೀರಶೈವ ಧುರೀಣರೊಬ್ಬರು ಬಹಿರಂಗಸಭೆಯೊಂ ದರಲ್ಲಿ ಘೋಷಿಸಿದರೆಂಬುದನ್ನು ಕೇಳಿದಮೇಲೆ, ಅದನ್ನು ಯಾವ ಗುರುವಾಗಲಿ, ವಿರಕ್ತನಾಗಲಿ ಪ್ರತಿಭಟಿಸಿದನೇನು ? ಇದರಿಂದ ಇಷ್ಟಲಿಂಗವನ್ನು ಧರಿಸುವುದು ವ್ಯಕ್ತಿಯ ಇಷ್ಟವೆಂದು ಒಪ್ಪಿದಂತಾಯಿತಲ್ಲವೆ ? ಶಿವಭಕ್ತ ಸದಾ ಇಷ್ಟಲಿಂಗ ಧಾರಿಯಾಗಿರಬೇಕೆಂಬ ನಿಯಮವೇನಾಯಿತು ? ಇದರಿಂದ ಧರ್ಮ ಲೋಪ ವಾಯಿತೇನು ? ಇದರಂತೆಯೇ, ಗೃಹಸ್ಥ ಬೇರೊಬ್ಬ ವ್ಯಕ್ತಿಯ ಪಾದಪೂಜೆ

ಮಾಡುವುದೂ, ಅವನ ಪಾದೋದಕವನ್ನು ತನ್ನ ಇಷ್ಟಲಿಂಗದಮೇಲೆ ಅಭಿಷೇಕ ಮಾಡುವುದೂ ಅಸಂಬದ್ಧವೆಂದು ಹೇಳಿದರೆ ತಪ್ಪೇನು ? ಹಿಂದೆ,ಯಾವನಾದರೂ ಸ್ಥಳದ ಮಠದ ಸ್ವಾಮಿಯೊಬ್ಬನಿಗೆ ಕಾಣಿಕೆ ಕೊಡದಿದ್ದರೆ, ಅವನ ಇಷ್ಟಲಿಂಗ ವನ್ನೇ ಕಿತ್ತುಕೊಳ್ಳುತ್ತಿದ್ದನಂತೆ ! ಸಮಾಜ ಅವನನ್ನು ಕುಲದಲ್ಲಿ ಕೂಡುತ್ತಿರ ಲಿಲ್ಲನಂತೆ ! ಈಗ ಆ ಪದ್ಧತಿಯನ್ನು ಪ್ರಯೋಗಿಸಲು ಯಾವ ಮಠಾಧೀಶನಿಗೇ ಆಗಲಿ ಧೈರ್ಯವಿದೆಯೆ ? ಕಾನೂನಿನ ಅಂಕುಶ 'ಜಗದ್ಗುರು' ವಿಗೂ ಇದೆ ! ಪ್ರತಿಯೊಬ್ಬ ಮನುಷ್ಯನಲ್ಲಿಯೂ ದೇವರಿದ್ದಾನೆ. ಪ್ರತಿಯೊಬ್ಬನೂ ಆತ್ಮಗೌರ ವದಿಂದ ಬಾಳಲು ಸ್ವಾತಂತ್ರ್ಯವಿದೆ. ಆದರೆ, ಧರ್ಮದಾಸ್ಯಸಲ್ಲದು. ಬಸವಣ್ಣನವರ ಧರ್ಮದಲ್ಲಿ ವ್ಯಕ್ತಿಯ ಆತ್ಮಸಿದ್ಧಿಗೆ ಬೆಲೆಯುಂಟು. ಅಲ್ಲಿ ವರ್ಣಪ್ರಾಶಸ್ತ್ಯವಿಲ್ಲ. ಶರಣತತ್ತ್ವದಲ್ಲಿ ಪರಿಪೂರ್ಣತೆಯಿದೆ. "ಸತ್ವದಲ್ಲಿ ನಮ್ಮ ಶರಣಮಾರ್ಗ; ಮೇಲುಕೀಳೆಂಬ; ಉಚ್ಚನೀಚ ಎಂಬ ಭಾವನೆಗೆ ಎಡೆ ಕೊಡದ ಭಕ್ತಿಮಾರ್ಗ; ಅಲ್ಲಿ ಭಕ್ತಮಹೇಶರೆಂಬ ಭೇದಭಾವವಿಲ್ಲ; ಆಚಾರ್ಯ ಗುಣರೆಂಬ ತಾರತಮ್ಯವಿಲ್ಲ; ಭಕ್ತಿಜ್ಞಾನ ಕ್ರಿಯೆಗಳು ಮುಪ್ಪುರಿಗೊಂಡ ಸಮ ನ್ವಯಮಾರ್ಗ." ಎಂದು ಪದ್ಮರಾಜ ಪುರಾಣದ ಪ್ರಸ್ತಾವನೆಯಲ್ಲಿ ಡಾ॥ ಆರ್. ಸಿ. ಹಿರೇಮಠರವರು ಹೇಳಿರುತ್ತಾರೆ. ಇದು ಅತ್ಯಂತ ಸಮಂಜಸವಾಗಿದೆ. ಎಷ್ಟೋ ಹಿಂದಣ ಪದ್ಧತಿಗಳು ಯಾರೊಬ್ಬರ ಪ್ರಯತ್ನಗಳೇ ಇಲ್ಲದೆ ಬದಲಾವ ಣೆಯಾಗುತ್ತಿವೆ. ಕಾಲಧರ್ಮವನ್ನು ಅನುಸರಿಸಿ ಎಲ್ಲ ಮಠಗಳಲ್ಲಿಯೂ ಮಾರ್ಪಾಟುಗಳಾಗುತ್ತಿರುತ್ತವೆ. ಒಮ್ಮೆ ಸಮುದ್ರಯಾನವನ್ನು ಹಿಂದೂ ಧರ್ಮ ನಿಷೇಧಿಸುತ್ತಿತ್ತು ! ಈಗ ಆ ನಿಷೇಧವನ್ನು ಸಮಾಜ ನಿಷೇಧಿಸುತ್ತದೆ ! ಹಿಂದು ಗುರುಗಳು ಯಾವುದೊಂದು ಯಂತ್ರವಾಹನದಲ್ಲಿಯೂ ಕುಳಿತು ಸಂಚಾರಮಾಡುತ್ತಿರಲಿಲ್ಲ. * ಬಾಳೇಹಳ್ಳಿ ಜಗದ್ಗುರು ಅಭಿನವ ಪ್ರಸನ್ನ ರೇಣುಕ ವೀರಗಂಗಾಧರ ಶಿವಾಚಾರ್ಯ ಸ್ವಾಮಿಗಳು ವಿಮಾನದಲ್ಲಿ ಕುಳಿತು ಪ್ರಯಾಣಮಾಡಿ ಹಿಮವತ್ಕೇದಾರದಲ್ಲಿ ಆ ಪೀಠದ ಜಗದ್ಗುರು ಪಟ್ಟಾಭಿಷೇಕ ಸಮಾರಂಭದಲ್ಲಿ ಭಾವಗಹಿಸಿದರು. ಮುತ್ತನಾಳ ಹಿರೇಮಠದ ಶ್ರೀ ಶಾಂತಲಿಂಗ ಶಿವಾಚಾರ್ಯರು ಹಿಮವತ್ಕೇತಾರಾದಲ್ಲಿ ತಾ॥ ೧೦-೬-೧೯೬೬ ರಂದು ಓಖಿ ಮಠದ ಜಗದ್ಗುರು ಪಟ್ಟಾಂಕಿತರಾದರು. ಜಗದ್ಗುರುಗಳ ವಿಮಾನಯಾನ

* ತಾ॥ ೨೨-೬-೧೯೬೬ ನೆಯ ಸಂಯುಕ್ತ ಕರ್ನಾಟಕವನ್ನು ಅವಲೋಕಿಸಿರಿ.

ಪ್ರಾಚೀನ ಅಂಧಶ್ರದ್ಧೆಯನ್ನು ಹರಿಸಿತು. ಕಾಶೀಪೀಠದ ಶ್ರೀ ಶ್ರೀ ವಿಶ್ವೇಶ್ವರ ಶಿವಾಚಾರ್ಯ ಸ್ವಾಮಿಗಳೂ ಈ ಸಮಾರಂಭದಲ್ಲಿ ಭಾಗಿಗಳಾಗಿದ್ದರು. ವಿರಕ್ತರು ನಾಟಕ, ನೃತ್ಯ, ಅಥವಾ ಯಾವುದೇ ಮನೋರಂಜನೆಯ ಅಭಿನಯಗಳನ್ನು ನೋಡುತ್ತಿರಲಿಲ್ಲ! ಸಂಗೀತ ಸಭೆಗಳಲ್ಲಿ ಸೇರುತ್ತಿರಲಿಲ್ಲ. ಈಚೆಗೆ ಅನೇಕ ವಿರಕ್ತರೂ ಈ ನಿಯಮವನ್ನು ಪಾಲಿಸುತ್ತಿಲ್ಲ. ಇದು ಯುಗಧರ್ಮ! "ಗುಡ್ಡದ ಮಲ್ಲಾಪುರದಲೊಮ್ಮೆ ನಮ್ಮ ಬಸವೇಶ್ವರ ನಾಟಕದಲ್ಲಿ ಅನುಭವ ಮಂಟಪದ ದೃಶ್ಯ ಪ್ರಾರಂಭವಾಗಿತ್ತು. ಆಮಂತ್ರಿತರಾಗಿ ಚಿತ್ತೈಸಿದ್ದ ಮುರುಘಾಮಠದ ಶ್ರೀ ಮೃತ್ಯುಂಜಯಸ್ವಾಮಿಗಳು ಒಮ್ಮೆಲೇ ಭಾವಾವೇಶ ಹೊಂದಿ ಇದು ನಾಟಕವೆಂದು ಮರೆತು ಸಾಷ್ಟಾಂಗ ಹಾಕಿಬಿಟ್ಟರು. ಎಲ್ಲಿ ಬಸವಣ್ಣ, ಎಲ್ಲಿ ಅಲ್ಲಮ,ಎಲ್ಲಿ ಏಣಗಿಬಾಳಪ್ಪನ ಮಂಡಲಿಯ ಹುಲುಮನುಜರು? ಆದರೆ ಇಂಥ ಮಹಾಮಹಿಮರ ಪಾತ್ರವನ್ನಾಡಿ ಇಂಥ ಜ್ಞಾನವೃದ್ಧರನ್ನು ಭಾವಾವಿಷ್ಟರಾಗಿ ಮಾಡಿದ ನಾವೇ ಪುಣ್ಯವಂತರು ಎನಿಸುತ್ತದೆ" ಎಂದು ಶ್ರೀ ಏಣಗಿ ಬಾಳಪ್ಪನವರು ೧೯೬೬ ನೆಯ ಸೆಪ್ಟೆಂಬರ್ 'ಕಸ್ತೂರಿ' ಮಾಸಪತ್ರಿಕೆಯಲ್ಲಿ ನನ್ನ ಜೀವನ ನಾಟಕ-ಲೇಖನದಲ್ಲಿ ಹೇಳಿದ್ದಾರೆ. ಶ್ರೀ ಮೃತ್ಯುಂಜಯ ಸ್ವಾಮಿಗಳು ಪೂರ್ವಾಶ್ರಮದಲ್ಲಿ ನಾಟಕದಲ್ಲಿ ಪಾತ್ರವಹಿಸುತ್ತಿದ್ದರೆಂದೂ ತಿಳಿದುಬರುತ್ತದೆ.

* ಧಾರವಾಡದ ವಿರಕ್ತಮಠದ ಶ್ರೀ ಮಹಾಂತಪ್ಪನವರು ಗದಗಿನಲ್ಲಿ ನಡೆದ ನಾಟಕ ಸಮಾರಂಭದಲ್ಲಿ ಅಧ್ಯಕ್ಷರಾಗಿದ್ದರೆಂದು ವೃತ್ತಪತ್ರಿಕೆಯಲ್ಲಿ ಅಚ್ಚಾಗಿದೆ.

ಇತ್ತೀಚೆಗೆ ವಿರಕ್ತ ಬೃಹನ್ಮಠದ ಸ್ವಾಮಿಗಳೊಬ್ಬರು ಆ ಮಠವಿರುವ ಊರಿನಲ್ಲಿಯೇ ಸಮಾಜ ಸೇವೆಯಲ್ಲಿ ದುಡಿದಳೆಂಬ ಕಾರಣದಿಂದ ಮಹಿಳೆಯೊಬ್ಬಳ ಭಾವಚಿತ್ರವನ್ನು ಅನಾವರಣಮಾಡಿದ ಸಭೆಯಲ್ಲಿ ಭಾಗವಹಿಸಿ, ಆ ಮಹಿಳೆಯನ್ನು ಆತ್ಮೀಯತೆಯಿಂದ ಪ್ರಶಂಸಿಸಿದರು!

"ಜನಿತಕ್ಕೆ ತಾಯಾಗಿ ಹೆತ್ತಳು ಮಾಯೆ;
ಮೋಹಕ್ಕೆ ಮಗಳಾಗಿ ಹುಟ್ಟಿದಳು ಮಾಯೆ;
ಕೂಟಕ್ಕೆ ಸ್ತ್ರೀಯಾಗಿ ಕೂಡಿದಳು ಮಾಯೆ;

* ತಾ॥ ೪-೯-೧೯೬೭ರ 'ವಿಶಾಲಕರ್ನಾಟಕ' ಪತ್ರಿಕೆಯನ್ನು ನೋಡಿ.

ಇದಾವಪಪರಿಯಲ್ಲಿ ಕಾಡಿತ್ತು ಮಾಯೆ;
ಈ ಮಾಯೆಯ ಕಳೆವೊಡೆಯೆನ್ನಳವಲ್ಲ!
ನೀವೇಬಲ್ಲರಿ ಕೂಡಲಸಂಗಮದೇವಾ"

ಬಸವಣ್ಣನವರ ಶಿವಾನುಭವ ವಾಣಿಯನ್ನು ಆ ವಿರಕ್ತ ಪುಂಗವರ ಹೃದಯ ಸುಡಿದಿರಬೇಕು ! ಇಂಥ ಪ್ರಸಂಗಗಳು ಅದೆಷ್ಟೋ ನಡೆಯುತ್ತಿವೆ ಇಂದು ಸಮಾಜದಲ್ಲಿ ! ಇವು ಕಾಲಧರ್ಮವನ್ನು ಸೂಚಿಸುತ್ತವೆ. ಅದರಂತೆ ಹಿಂದಿನಿಂದ ಎಷ್ಟೋ ಕಟ್ಟುಕಟ್ಟಳೆಗಳು ಈಗ ಶಿಥಿಲವಾಗಿವೆ; ನಿರರ್ಥಕವಾಗಿವೆ. ಶಾನಾಗಿಯೇ ಜಾರಿಬೀಳುತ್ತಿವೆ. ಹೊಸದೃಷ್ಟಿ, ಹೊಸ ಭಾವನೆ ಈಗ ಸಮಾಜಕ್ಕೆ ಹಿತಕರವಾಗಿವೆ.

ಬ್ರಹ್ಮಚರ್ಯ ಪರಿಪಾಲನೆಯೇ ಮಾನವ ದೇವನಾಗಲು ಸಿದ್ಧಮಾರ್ಗ. ಬ್ರಹ್ಮಚರ್ಯೆ ಎಂದರೆ ಕಠಿಣ ತಪಸ್ಸು. ಇಂಥ ಸಾಧಕ ಏಕಾಂತದಲ್ಲಿ ಆತ್ಮಾನುಸಂಧಾನನಿರತನಾಗಬೇಕು. ಅವನು ತನ್ನ ಹತ್ತಿರ ಸ್ತ್ರೀಯರು ಸುಳಿಯದಂತೆ ಜಾಗರೂಕನಾಗಿರಬೇಕು. ಅವನು ತನ್ನ ಏಕಾಂತ ವಲಯದಲ್ಲಿ ಸ್ತ್ರೀ ಚಿತ್ರಪಟವನ್ನು ಇರಿಸಿಕೊಂಡಿರಬಾರದು." ಎಂದು ರಾಮಕೃಷ್ಣ ಪರಮಹಂಸರು ಬೋಧಿಸಿದರು; ಆಚರಿಸಿದರು. ವಿರಕ್ತರು ಸ್ತ್ರೀಯರ ಬೆಡಗು ಬಿನ್ನಾಣಗಳಿಂದ ದೂರವಿರಬೇಕು. ಕುಟಿಲೆಯರು ಆ ವಿರಕ್ತ ಸ್ವಾಮಿಯನ್ನು ದಾರಿತಪ್ಪಿಸುತ್ತಾರೆ. ಹಾಗೆಯೇ ಬ್ರಹ್ಮನಿಷ್ಠರಾದ ಸಂನ್ಯಾಸಿಗಳು ಸ್ತ್ರೀವಲಯದಿಂದ ದೂರವಿರಬೇಕೆಂದೂ ಸ್ತ್ರೀಯರ ಭಾವಚಿತ್ರಗಳನ್ನು ಅವಲೋಕಿಸಬಾರದೆಂದೂ ಹೇಳಿರುತ್ತಾರೆ. ಆದರೆ, ಈಗ ವಿರಕ್ತರು 'ಸಿನಿಮಾ' ಗಳನ್ನು ತಯಾರಿಸಲೂ ಸಿದ್ಧರಾಗುತ್ತಿದ್ದಾರೆ!

ಅಕ್ಕಮಹಾದೇವಿ

೭೧. "ಬಿಟ್ಟೆನೆಂದರೆ ಬಿಡದೀ ಮಾಯೆ. ಬಿಡದಿದ್ದರೆ ಬೆಂಬತ್ತಿತ್ತು ಮಾಯೆ. ಯೋಗಿಗೆ ಯೋಗಿಣಿಯಾಯಿತ್ತು ಮಾಯೆ. ಸವಣಗೆ ಸವಣಿಯಾಯಿತ್ತು ಮಾಯೆ. ಯತಿಗೆ ಪರಾಕಿಯಾಯಿತ್ತು ಮಾಯೆ. ನಿನ್ನ ಮಾಯೆಗೆ ನಾನಂಜುವಳಲ್ಲ. ಚನ್ನಮಲ್ಲಿಕಾರ್ಜುನದೇವಾ ನಿಮ್ಮಾಣೆ." ಎಂದು ದೇವ ದೇವನಸಾಕ್ಷಿಯಿಟ್ಟು ಶಪಥಮಾಡಿದಳು. ಆದರೆ, ಇಂದು ವಿರಕ್ತ 'ನಿನ್ನ ಮಾಯೆಗೆ ನಾನಂಜುವನಲ್ಲ !' ಎಂದು ಆ ದೇವನನ್ನು ನೋಡಿ ಹುಬ್ಬು ಹಾರಿಸುತ್ತಾನೆ ! ವಾಸ್ತವವಾಗಿಯೂ ಮಾಯೆಗೆ ಅವನು ಅಂಜುತ್ತಿಲ್ಲ!

ಅಕ್ಕ ಈ ವಚನವನ್ನು ಹಾಡಿ ೮೦೦ ವರ್ಷವಾಯಿತು ! ಅಂದು ಅದು ಅವಳ ವೀರಗೀತೆ ! ಇಂದು ಅದು ವಿರಕ್ತನ ಶೃಂಗಾರಗೀತೆ ! ಅಂದು ವಿರಕ್ತ ಏಕಾಂತ ಜೀವಿ ! ಇಂದು ಆವನು ಅನೇಕಾಂತಜೀವಿ ! ಅಂದಿನಂತೆಯೇ ಇಂದೂ ಇರಲು ಸಾಧ್ಯವಿಲ್ಲ; ಅವಕಾಶವಿಲ್ಲ ! ಅನೇಕ ಮಠಗಳು ತಪೋವನಗಳಂತೆ ಪ್ರಶಾಂತ ವಾಗಿರುತ್ತವೆ. ಅಲ್ಲಿ ಶಿವಾನುಭವ ವಾತಾವರಣವೇ ತಾಂಡವವಾಡುತ್ತಿರುತ್ತದೆ. ಇನ್ನು ಕೆಲವು ಮಠಗಳಲ್ಲಿ ವ್ಯವಹಾರ ಜೀವನ ವ್ಯಾಪಿಸಿರುತ್ತದೆ !

"ಸ್ವತಂತ್ರ ಪ್ರಜಾಸತ್ತೆ ಭಾರತದ ಜನಜೀವನದಲ್ಲಿ ಬಳಕೆಗೆ ಬಂದು ೩೦ ವರ್ಷಗಳು ಕಳೆದರೂ ನಮ್ಮ ಪ್ರಜಾಪ್ರಭುತ್ವದ ಮೌಲ್ಯಗಳ ಆಚಾರ ವಿಚಾರದಲ್ಲಿ ಕಟ್ಟುಸಿಟ್ಟಾದ ಪ್ರಜಾಸತ್ತಾತ್ಮಕ ಮನೋಭಾವನೆ ಬೆಳೆಯದಿರುವುದು ಶೋಚ ನೀಯ. ಇನ್ನೂ ದಾಸ್ಯಪ್ರವೃತ್ತಿಯ ಸೂಚಕವಾದ ರಾಜ, ಮಹಾರಾಜರುಗಳ ದರ್ಬಾರು, ಜಂಬೂಸವಾರಿ, ಮಠಾಧಿಪತಿಗಳ, ಜಗದ್ಗುರುಗಳ ಅಡ್ಡಪಲ್ಲಕ್ಕಿ, ಉದ್ದಪಲ್ಲಕ್ಕಿ ಮೆರವಣಿಗೆಗಳು ಸಾರ್ವಜನಿಕವಾಗಿಯೇ ನಡೆಯುತ್ತಿವೆ" "ಈ ಪ್ರಶ್ನೆಯ ಬಗ್ಗೆ ವಿಚಾರವಂತ ಓದುಗರ ಗಮನಹರಿಯಲಿ ಎಂದು ಆಶಿಸುತ್ತೇನೆ" ಎಂಬುದಾಗಿ-ಮೈಸೂರು ಶ್ರೀ ಕೆ. ರಾಮದಾಸ್ ಎಂಬುವರು ತಾರೀಖು ೨೦-೭-೧೯೬೭ ನೆಯ ಪ್ರಜಾವಾಣಿ ದಿನಪತ್ರಿಕೆಯ 'ವಾಚಕರವಾಣಿ' ಯಲ್ಲಿ ಪ್ರಜಾಸತ್ತೆಯ ಅವಹೇಳನವಲ್ಲವೆ? ಎಂಬ ಅವರ ಪತ್ರದಲ್ಲಿ ಮುಂದಿನ ಯುವಜನಾಂಗವನ್ನು ಕೇಳಿದ್ದಾರೆ. ಮುಂದೆ, ಈ ಮನೋಭಾವ ಸಮಾಜದಲ್ಲಿ ಮಾನ್ಯವೆನಿಸೀತು !

ವಿದ್ಯಾವಂತ ತರುಣರು ನೂತನ ಸಮಾಜ ರಚನೆಗೆ ಸಂಸಿದ್ಧರಾಗಬೇಕು! ಆದರೆ, ನಾಡಿನಲ್ಲಿ ಕೆಲವು ಮಠಗಳು ಮಾತ್ರ ಸಮಾಜ ನೀಡುವ 'ಗುರುಧರ್ಮ ಕಾರುಣ್ಯಭಿಕ್ಷಾ' ಬಲದಿಂದ ಪವಿತ್ರಜೀವನ ತಪೋಮಂದಿರಗಳಾಗಿವೆ. ಅವು ಅಗಾಧ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ, ಪೋಷಿಸಿ, ಸಾವಿರಾರು ವಿದ್ಯಾರ್ಥಿಗ ಳಿಗೆ ಅನ್ನದಾನ, ವಿದ್ಯಾದಾನ, ಕರುಣಪ್ರಸಾದಗಳನ್ನು ಅನುಗ್ರಹಿಸಿ ಶರಣ ಧರ್ಮಪರಿಪಾಲಕರಂತಿವೆ. ಅಂಥ ಮಹಾಮಠಾಧೀಶ್ವರರಿಗೆ 'ನಮೋನ್ನಮಃ' ಇಂಥ ಮಠಗಳು ಬಹಳವಿಲ್ಲ. ಸುತ್ತೂರು, ಸಿರಿಗೆರೆ, ಸಿದ್ಧಗಂಗಾ ಮುಂತಾದ ಕೆಲವು ಮಠಗಳು ಈ ವಿಚಾರದಲ್ಲಿ ಆದರ್ಶ ಸ್ವರೂಪವಾಗಿವೆ.

ಸಮಾಜ 'ಅಂದು' ಇದ್ದಂತೆ 'ಇಂದು' ಇಲ್ಲ; ಅದು 'ಮುಂದು' ಇಂದಿ

ಎಲ್ಲಿಯೂ ಮಾಡಿಲ್ಲ. ನಿರಾಭಾರಿ ನಿರಂಜನ–ಇವೆಲ್ಲಾ ಸನಾತನ ಜಂಗಮ ತತ್ತ್ವ ಸ್ವರೂಪಗಳೇ ಹೊರತು ವಿರಕ್ತ ಲಕ್ಷಣಗಳಲ್ಲ. ವಿರಕ್ತಪಂಥ ಪ್ರತ್ಯೇಕ ಪಂಥ. ಅದು ವೀರಶೈವ ಜಂಗಮಲಕ್ಷಣಗಳನ್ನೆಲ್ಲಾ ಧಾರಾಳವಾಗಿ ಬಳಸಿ ಕೊಂಡು ತನ್ನ ವಿಶಿಷ್ಟ ಪಂಥವನ್ನು ವೀರಶೈವದಲ್ಲಿ ಬೆಳಸಿಕೊಂಡಿದೆ. ಅದು ಋಮಾಂಸ ನ್ಯಾಯದಂತೆ ವೀರಶೈವದಲ್ಲಿ ಹೊಂದಿಕೊಂಡಿದೆ; ತನ್ನ ಪೋಷಣೆ ಯನ್ನು ಶರಣಧರ್ಮದಿಂದ ಪಡೆದುಕೊಂಡಿದೆ. ಇದು ತಾನು ವೀರಶೈವದಲ್ಲಿ ಗುರುವರ್ಗವಲ್ಲವೆಂದು ಹೇಳುತ್ತದೆ; ಆದರೆ ತಾನೂ ಗುರು ಎಂದು ಹೇಳಿಕೊ ಳ್ಳುತ್ತದೆ. ಗುರುವರ್ಗವೀರಶೈವದಲ್ಲಿ ತಾನು ವಿರಕ್ತವರ್ಗವಲ್ಲವೆಂದು ಹೇಳುತ್ತದೆ ಇಲ್ಲದೆ ತಾನು ಎಂದೂ ವಿರಕ್ತ ಎಂದು ಹೇಳುವುದಿಲ್ಲ. ವಚನಸಾಹಿತ್ಯದಲ್ಲಿ ಜಂಗಮವನ್ನು ವರ್ಣಿಸುವ ವಚನಗಳಲ್ಲಿ–"ಹೊಳೆವಜಡೆಯಮೇಲೆ ಎಳೆವೆಳದಿಂ ಗಳು, ಫಣಿಮಣಿ, ಕರ್ಣಕುಂಡಲಪವನೋಡವ್ವಾ" ಎಂದೂ "ಹೊಳೆವಕೆಂಜೆಡೆ ಗಳ, ಮಣಿ ಮಕುಟ, ಒಪ್ಪುವ ಸುಲಿಪಲ್ಲ, ನಗೆಮೊಗದ ಕಂಗಳಕಾಂತಿಯಿಂ ಈರೇಳು ಭುವನವುಂಬೆಳಗುವ ದಿವ್ಯ ಸ್ವರೂಪನಕಂಡೆ ನಾನು"—ಎಂದೂ ಅಕ್ಕಮಹಾದೇವಿ ತನ್ನ ಜಂಗಮಮೂರ್ತಿಯನ್ನು ವರ್ಣಿಸಿದ್ದಾಳೆ. "ಹೊನ್ನ ಹಾವುಗೆಯಮೆಟ್ಟಿದವನ, ಮಿಡಿಮುಟ್ಟಿದ ಕೆಂಜಡೆಯವನ" ಎಂದೂ, "ಅಡ್ಡ ಕಿರೀಂಡ್ರುದ ಮಣಿಮುಕುಟದ ವೇಷದ ಶರಣರಕಂಡರೆ" ಎಂದೂ ಬಸವಣ್ಣನ ವರು ಶಿವನನ್ನು ಜಂಗಮರೂಪದಲ್ಲಿ ನಿರೂಪಿಸಿದ್ದಾರೆ. ಹರಿಹರಕವಿ ತನ್ನ ರಗಳೆಗಳಲ್ಲಿಯೂ ಇದೇರೀತಿಯ ಜಟಾಮುಕುಟ, ಫಣಿಕುಂಡಲಭೂಷಿತ ಮಾಹೇಶ್ವರ ಮೂರ್ತಿಯನ್ನು ಚಿತ್ರಿಸಿದ್ದಾನೆ. ವಚನ ಋಷಿಗಳು ಎಲ್ಲಿಯೂ ವಿರಕ್ತ ಚಿತ್ರವನ್ನು ರೂಪಿಸಿದಂತೆ ಕಂಡುಬರುವುದಿಲ್ಲ. ಬಸವಣ್ಣನವರು ಕೋರಿ ಕ್ಷತ್ರಿಯವೇಷದಿಂದ ಹೋಗಿ ಕಾಶ್ಮೀರದಿಂದ ಜಂಗಮರನ್ನು ಕರೆತಂದನೆಂದು ಪುರಾಣವಾಙ್ಮಯದಲ್ಲಿ ಉಕ್ತವಾಗಿದೆ. ಅವರು ವಿರಕ್ತರನ್ನು ಅಲ್ಲಿಂದ ಕರೆದು ಕೊಂಡು ಬರಲಿಲ್ಲ! ಬಸವಣ್ಣನವರ ರಾಣಿವಾಸಕ್ಕೆ ಬಂದ ಅತಿಥಿ ಜಂಗಮನೇ ಹೊರತು ವಿರಕ್ತನಲ್ಲ! 'ಶಾಂತಂಪಾಪಂ' ವಿರಕ್ತ ಅಂಥ ಬಯಕೆಯನ್ನು ಕನಸಿನ ಲ್ಲಿಯೂ ಕಾಣಲಾರ! ಇದೊಂದು ವಿನೂತನಪಂಥ! ಇದರ ಪ್ರಭಾವಕ್ಕೆ ಜಂಗಮ ಮಠಗಳೆಲ್ಲಾ ಮಾರ್ಪಟ್ಟವು. ಯಾವುದೇ ಮಠದಲ್ಲಿ ಗುರುಪ್ರಧಾನ– ಪ್ರಧಾನನಿಗಿಂತಲೂ ಅಧಿಕರಿಲ್ಲ. ಶಿವಪಥವನರಿವೊಡೆ ಗುರುಪಥವೇ ಮೊದಲು–

ಎಂದು ಬಸವಣ್ಣನವರು ಹೇಳಿದ್ದಾರೆ. ವೀರಶೈವದಲ್ಲಿಮಾತ್ರ ಗುರುಸ್ಥಾನವನ್ನು ಪ್ರತಿಸ್ಪರ್ಧಿಸುವ ಮತ್ತು ಗುರುವಿಗಿಂತ ತಾನುಮೇಲು ಎಂಬ ಸ್ಥಾನವೊಂದಿರಲು ಕಾರಣವಿಲ್ಲ. ಅಂಥ ಪ್ರತಿಸ್ಪರ್ಧಿಸ್ಥಾನವೊಂದಿದ್ದರೆ ಬಹುಶಃ ಅದು ವೀರಶೈವದಿಂದ ಭಿನ್ನವಾದ ಒಂದು ಪ್ರತ್ಯೇಕ ಪಂಥವಾಗಿರಬಹುದು! ಸಮಾಜ ವಿರಕ್ತರನ್ನು ಜಂಗಮದಿಂದ ಪ್ರತ್ಯೇಕವೆಂಬುದನ್ನು ಅರಿಯಲು ಇಪ್ಪತ್ತೊಂದನೆಯ ಶತಮಾನದಲ್ಲಿ ಸಾಧ್ಯವಾದೀತು! ಶರಣಧರ್ಮದ ಮಹಾಚಾರ್ಯರೆಂದು ಪರಿಗಣಿತರಾಗಿರುವ ಚನ್ನಬಸವಣ್ಣನವರೂ ವಿರಕ್ತಧರ್ಮದ ಮಾತನ್ನೇ ಆಡಿಲ್ಲವೆಂಬುದು ಗಮನಾರ್ಹವಾಗಿದೆ. ಈ ವಿರಕ್ತ ಪಂಥ ಅವರಕಾಲದಲ್ಲಿಯೇ ವೀರಶೈವದಲ್ಲಿ ಬೆಳೆಯುತ್ತಿತ್ತೆಂದು ವಚನವಾಙ್ಮಯದಿಂದ ತಿಳಿಯಬಹುದು. ಅದನ್ನು ಅನುಲಕ್ಷಿಸಿಯೇ ಚನ್ನಬಸವಣ್ಣನವರು:— "ಮಸಣವೈರಾಗ್ಯರು ಲಕ್ಷಲಕ್ಷ; ಪುರಾಣ ವೈರಾಗ್ಯರು ಲಕ್ಷಲಕ್ಷ; ಪ್ರಸೂತಿವೈರಾಗ್ಯರು ಲಕ್ಷ ಲಕ್ಷ; ಪಿತ್ತವೈರಾಗ್ಯರು ಲಕ್ಷ ಲಕ್ಷ; ಸ್ವಾನುಭವಸಮ್ಯಕ ಜ್ಞಾನವೈರಾಗ್ಯರ ನೊಬ್ಬರನೂ ಕಾಣೆ ಕೂಡಲ ಚನ್ನಸಂಗಮದೇವಾ!" ಎಂದು ಹೇಳಿದರೆಂದು ಭಾಸವಾಗುತ್ತದೆ. ವಚನಸಾಹಿತ್ಯವೆಂದರೆ ವಚನಶಾಸ್ತ್ರವೂ ಹೌದು. ಇದರಲ್ಲಿ ಸನಾತನ ವೀರಶೈವದ ಗುರುಜಂಗಮ ತತ್ತ್ವ ನಿರೂಪಣೆಯಿದೆಯೇ ಹೊರತು, ವಿರಕ್ತಪಂಥದ ನೆರಳೂ ಸಹ ವಚನಶಾಸ್ತ್ರದಲ್ಲಿ ಸುಳಿದಿಲ್ಲ! ಸನಾತನ ವೀರಶೈವ ಜಗದ್ಗುರುವರ್ಗದವರು ವೇದಾಗಮಗಳಂತೆಯೇ ವಚನಶಾಸ್ತ್ರವನ್ನೂ ಗೌರವಿಸಬೇಕಾದುದೇ ಧರ್ಮ. ಬಸವಣ್ಣನವರು ಆಗ ಮೋಕ್ತಸನಾತನ ವೀರಶೈವವನ್ನು ಉದಾರಭಾವದಿಂದ ಜನಕೋಟಿಯ ಉದ್ಧಾರಕ್ಕಾಗಿ ಬಳಸಿದರೇ ಹೊರತು ಅವರು ವಿರಕ್ತಪಂಥವನ್ನು ಸೃಷ್ಟಿಸಲಿಲ್ಲ; ಮನ್ನಿಸಲಿಲ್ಲ! ಆದರೆ, ಅವರ ಕಾಲದಲ್ಲಿಯೇ ಈ ಪಂಥ ಕನ್ನಡನಾಡಿನಲ್ಲಿ ಹಬ್ಬುತ್ತಿತ್ತು! ಅದು ವೀರಶೈವದಲ್ಲಿ ಒಂದು ಪ್ರಭೇದವಾಯಿತು! ಗೃಹಸ್ಥಧರ್ಮದಲ್ಲಿ ಗುರು, ಜಂಗಮಸ್ಥಲಗಳ ಕುಟುಂಬಗಳಿರುವಂತೆ ವಿರಕ್ತ ಸ್ಥಲ ಗೃಹಸ್ಥ ಕುಟುಂಬಗಳಿಲ್ಲ. ಅದು ಸಮಾಜವನ್ನು ಹೊಗಲು ಸಾಧ್ಯವಾಗಲಿಲ್ಲ! ಆದು ಕೇವಲ ಒಂದು ಪರಮಹಂಸ ಸಂನ್ಯಾಸಿ ವರ್ಗವಾಗಿಯೇ ಉಳಿಯಿತು! ಅದ್ವೈತ ಧರ್ಮದಲ್ಲಿ ರಾಮಕೃಷ್ಣಪರಮಹಂಸ ಸಂಘ (Mission) ಇರುವಂತೆ ವಿರಕ್ತಪಂಥ ವೀರಶೈವದಲ್ಲಿ ಪ್ರಚಾರದಲ್ಲಿದೆ! ಆದರೆ ಇದು ವೀರಶೈವದಲ್ಲಿ ಒಂದು ಧಾರ್ಮಿಕ ವಿಶಿಷ್ಟಸ್ಥಾನವನ್ನು ಗಳಿಸಿಕೊಂ

ತಿವೆ! ಇವರ ಹಿನ್ನೆಲೆಯಲ್ಲಿ ಪ್ರತ್ಯೇಕ ಧರ್ಮ, ಸಾಹಿತ್ಯ, ಸಂಸ್ಕೃತಿಗಳಿಲ್ಲ. ಪುರಾತನ ವೀರಶೈವ ಧರ್ಮ. ಸಂಸ್ಕೃತಿ, ಸಾಹಿತ್ಯಗಳೇ ವಿರಕ್ತಪಂಥದ ಹಿನ್ನೆಲೆ! ಹದಿನಾರನೆಯ ಶತಮಾನದಲ್ಲಿ ವಿರಕ್ತ ಸಮಯ ವೀರಶೈವದಲ್ಲಿ ನೆಲೆಯಾಯಿತು. ಹದಿನೆಂಟನೆಯ ಶತಮಾನದಲ್ಲಿ ಚಿತ್ರದುರ್ಗದ ವಿರಕ್ತಮಠ ದಕ್ಷಿಣ ಕರ್ನಾಟಕ ದಲ್ಲಿ ಸ್ಥಾಪನೆಯಾಯಿತು.

ಈ ವಿರಕ್ತ ಸಂಪ್ರದಾಯ ಹದಿನೈದನೆಯ ಶತಮಾನದಲ್ಲಿ ರೂಪುಗೊಂಡಿ ತೆಂಬುದನ್ನು 'ನಿರಂಜನ ವಂಶರತ್ನಾಕರ' ಸ್ಪಷ್ಟವಾಗಿ ಉಲ್ಲೇಖಿಸುತ್ತಿದೆ. ವಿರಕ್ತಾಶ್ರಮ ಪ್ರದಾನಕಾಲದಲ್ಲಿ "ಗೋಹೇಶ್ವರನ ವಚನ, ಕರಣಹಸಿಗೆ, ಮಿಶ್ರಾರ್ಪಣ, ಸಿದ್ಧರಾಮೇಶ್ವರ, ಮಂತ್ರಗೋಪ್ಯ, ಅಕ್ಕಗಳ ಸೃಷ್ಟಿಯವಚನ, ಪ್ರಭುದೇವರ ಸೃಷ್ಟಿಯವಚನ, ಸಿದ್ಧೇಶ್ವರವಚನ, ಹಿರಿಯಮಂತ್ರ ಗೋಪ್ಯ, ಶೂನ್ಯ ಸಂಪಾದನೆ ಮುಂತಾದವುಗಳ ಸಂಗ್ರಹಿಸಿದ ಪುಸ್ತಕವ ಸಭಾಮಧ್ಯದಲ್ಲಿ ಆ ಶಿವಾನುಭವಚರಂತಿಗೆ ತೆಗೆದುಕೊಂಡ ಗುರುವರನ ಕಡೆಯಿಂದ ಆ ಶಾಸ್ತ್ರವಂ ಶ್ರೋತ್ರಮನು ಶಿವಮಂತ್ರ ಗುರುಪ್ರಸಾದ ಮುಖನಾದ ಅಂಗಲಿಂಗ ಸಾಮರಸ್ಯ ಮುಂತಾಗಿ ಅಂಗತತ್ವ ೨೫ ಲಿಂಗತತ್ವ ೧೧ ಅಂತು ಕೂಡಿ ೩೬ ತತ್ವಂಗಳಂ ತಿಳಿದಾತನು ಶಾಸ್ತ್ರವಂ ಗುರುಗಳಿಂದ ಶ್ರವಣಗೊಂಡಾತನಾದ ಈ ವಿರಕ್ತನೆ ಶಾಸ್ತ್ರದ ಕಟ್ಟು ಹಿಡಿಯಬೇಕು." ಎಂದು ವಿರಕ್ತಾಶ್ರಮ ಸ್ವೀಕಾರ ವಿಧಾನವನ್ನು ತೋಂಟದ ಸಿದ್ಧಲಿಂಗೇಶ್ವರರು ನಿರೂಪಿಸಿದಂತೆ "ನಿರಂಜನವಂಶ ರತ್ನಾಕರ"ದಲ್ಲಿ ಹೇಳಿದೆ. (ಪುಟ ೪೧-೪೪) ಆದ್ದರಿಂದ ವಿರಕ್ತ ಸಂಪ್ರದಾಯ ಅರ್ವಾಚೀನವಾದುದು. ಬಸವಣ್ಣನವರ ಹಿಂದೆಯೇ ಈ ವಿರಕ್ತಪಂಥವಿದ್ದರೆ, ಆಗ ವಿರಕ್ತಾಶ್ರಮ ಸ್ವೀಕಾರಕಾಲದಲ್ಲಿ ಯಾವ ಶಾಸ್ತ್ರದ ಕಟ್ಟನ್ನು ವಿರಕ್ತಶಿಷ್ಯ ಹಿಡಿಯುತ್ತಿದ್ದನೆಂಬುದನ್ನು ನಿರಂಜನವಂಶರತ್ನಾಕರ ತಿಳಿಸುವುದಿಲ್ಲ. ಆದ್ದರಿಂದ ಎಡೆಯೂರು ಸಿದ್ಧಲಿಂಗ ಶಿವಯೋಗೀಶ್ವರರು ವಿರಕ್ತವರ್ಗ ಸಂಸ್ಥಾಪಕರು ಮತ್ತು ವಿರಕ್ತ ಪಂಥದ ಗುರುಸಾರ್ವಭೌಮರು. ಇವರು ಸನಾತನ ವೀರಶೈವ ಸಂಪ್ರದಾಯದವರು; ದಕ್ಷಿಣ ಕರ್ನಾಟಕಪ್ರಾಂತದವರು; ಬಸವಧರ್ಮವನ್ನು ಮತ್ತೆ ಕಾಂತಿಗೂಡಿಸಿದವರು. ಈಗಲೂ ವೀರಶೈವ ಧರ್ಮಜ್ಯೋತಿ ದಕ್ಷಿಣ ಕರ್ನಾಟಕದಲ್ಲಿ ಬೆಳಗುತ್ತಿದೆ; ದಶದಿಕ್ಕುಗಳಿಗೂ ವ್ಯಾಪಿಸುತ್ತಿದೆ; ವಿರಕ್ತಪಂಥ ಹದಿನೈದನೆಯ ಶತಮಾನದಲ್ಲಿ ರೂಪುಗೊಂಡಿದ್ದರಿಂದ 'ನಿರಂಜನವಂಶರತ್ನಾಕರ'

ಪಟ್ಟಾವಳಿಯ ಎಲ್ಲ ನಿರಂಜನರೂ ಸನಾತನ ವೀರಶೈವ ನಿರಂಜನರೆಂದಂತಾಯಿತು. ಎಡೆಯೂರು ಸಿದ್ಧಲಿಂಗರು ವಿರಕ್ತರ ಮೂಲಗುರುವೆಂದು ಹೇಳಿದಂತಾಯಿತು! ಸಿದ್ಧಲಿಂಗರು ವಿರಕ್ತರಲ್ಲ! ವಿರತರು!

ದಕ್ಷಿಣ ಕರ್ಣಾಟಕ ಪ್ರಾಂತದಲ್ಲಿ ಚಿತ್ರದುರ್ಗ ವಿರಕ್ತಮಠ ಸಮಾಜಸೇವೆಯಲ್ಲಿ ನಿತಾಂತ ಶ್ರದ್ಧೆಯನ್ನು ವಹಿಸಿತು. ಗುರುವರ್ಗದ ಮಠಗಳು ಕೇವಲ ತಪೋಭೂಮಿಯಂತಿದ್ದುವು! ಅವು ಸಮಾಜದ ಪಾರಮಾರ್ಥಿಕ ಜ್ಞಾನವನ್ನು ಬೆಳಸಲು, ಆಚಾರ ವಿಚಾರಗಳನ್ನು ನಿರ್ದೇಶಿಸಲು ದುಡಿಯುತ್ತಿದ್ದುವು. ಸಮಾಜದ ಲೌಕಿಕ ಸುಖಸಾಧನೆಗೆ ಅವು ಅಷ್ಟಾಗಿ ಗಮನಕೊಡಲಿಲ್ಲ. ದಕ್ಷಿಣ ಕರ್ಣಾಟಕದಲ್ಲಿ ಬಾಳೇಹಳ್ಳಿ ವೀರಸಿಂಹಾಸನಮಠ, ಉಜ್ಜಯಿನಿ ಸದ್ಧರ್ಮ ಸಿಂಹಾಸನಮಠ, ಪೂರ್ವ ದಿಗ್ಭಾಗದಲ್ಲಿ ಶ್ರೀಶೈಲಮಠ,ಸಿರಿಗೆರೆ ಮರುಳಸಿದ್ಧಮಠ, ಸಿದ್ಧಗಂಗಾಮಠ ಸುತ್ತೂರುಮಠ- ಇವು ಸಮಾಜದಮೇಲೆ ತಮ್ಮ ಪ್ರಭಾವವನ್ನು ಬೀರುತ್ತಿದ್ದುವು. ಇವೆಲ್ಲಾ ಚಿತ್ರದುರ್ಗದ ಮುರಘಾ ಮಠಕ್ಕಿಂತಲೂ ಪ್ರಾಚೀನಮಠಗಳು. ಇದರ ನೆರೆಯಲ್ಲಿಯೇ ಸಿರಿಗೆರೆ ಮರುಳಸಿದ್ಧ ಗುರುಪೀಠ ಸಮಾಜದಲ್ಲಿ ಪರಮೋನ್ನತ ಗೌರವಸ್ಥಾನದಲ್ಲಿತ್ತು. ಚಿತ್ರದುರ್ಗ, ಬಳ್ಳಾರಿ, ಶಿವಮೊಗ್ಗ, ಚಿಕ್ಕಮಗಳೂರು, ಧಾರ್ವಾಡ ಪ್ರಾಂತಗಳಲ್ಲಿ ಈಗಲೂ ಸಿರಿಗೆರೆಯ ಪೀಠದ ಪ್ರಭಾವ ಅಜೇಯ! ಅದು ಬಸವ ಧರ್ಮವನ್ನು ಪರಿಪೋಷಿಸುವುದರಲ್ಲಿ ಅದ್ವಿತೀಯ! ಚಿತ್ರದುರ್ಗದ ವಿರಕ್ತಮಠ ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ಸಾಹಸಪಡುತ್ತಿತ್ತು. ಶ್ರೀ ಜಯದೇವಸ್ವಾಮಿಗಳು ಸಾಮದಾನ ಭೇದೋಪಾಯಗಳಿಂದ ಈ ಗುರು ಚಕ್ರವ್ಯೂಹವನ್ನು ಭೇದಿಸಿ ನಿಂತರು! ಅವರಿಗೆ ವಿರಕ್ತ ಪಟ್ಟವಾದ ಕೆಲವು ದಿನಗಳಲ್ಲಿಯೇ ಮಠದ ಆಸ್ತಿಪಾಸ್ತಿಗಳ ಮೇಲ್ವಿಚಾರಣೆಗಾಗಿ ಸಮಿತಿಯೊಂದನ್ನು ನೇಮಿಸಬೇಕೆಂಬ ಪ್ರಯತ್ನ ನಡೆಯಿತು. ಆಗ ಶ್ರೀ ಜಯದೇವ ಸ್ವಾಮಿಗಳು * ನೀವು ಮಾಡುತ್ತಿರುವ ಕೆಲಸ ಕುದುರೆಮುಂದೆ ಗಾಡಿಇಟ್ಟಂತಾಗಿದೆ ಎಂದು ಹೇಳಿ ಮಠದಲ್ಲಿ ನಗದು ಹಣವಂತೂ ಇಲ್ಲ. ಮುದಿಯಾದ ನಾಲ್ಕಾರು ಕುದುರೆಗಳೂ ಹತ್ತಾರು ದನ ಕರುಗಳೂ; ಐದು ಉಂಬಳಿ ಗ್ರಾಮಗಳು ಮಾತ್ರ ಇವೆ ಎಂದು ತಿಳಿಸಿ, ಸಮಿತಿ

---

* ಆಧಾರ: "ಶ್ರೀ ಜಯದೇವ ದಿಗ್ವಿಜಯ"

ರುವುದಿಲ್ಲ, ಇಪ್ಪತ್ತೊಂದನೆಯ ಶತಮಾನದ ಹೊಂಬೆಳಗು ಪೂರ್ವದಿಗಂತ ಕಾಣುತ್ತಿದೆ! ಹಳೆಯ ಶತಮಾನ ಮುಗಿಯುತ್ತಿದೆ! ಸಮಾಜೋಪಜೀವಿ ದ ಉಪಯೋಗವಿಲ್ಲ. ಬಸವಣ್ಣನವರ ಶರಣಧರ್ಮ ನಿರ್ಮಲವಾಗಬೇಕು. ಕ್ತರೆಲ್ಲಾ ಒಂದೇ ಶಿವಕುಲವೆಂಬಂತಾಗಬೇಕು. ಶರಣ ಸಮಾಜವನ್ನು ಸಿದ ಬಸವಣ್ಣನವರ ಮನೋಧರ್ಮವನ್ನು ವಿರಕ್ತ ಇನ್ನೂ ಅರಿತಿಲ್ಲ; ನು ಅದನ್ನು ಅರಿತು ಆಚರಿಸಲಾರನು! ಬಸವಣ್ಣನವರು ಸಮಾಜದಲ್ಲಿ ಕ್ತರೆಲ್ಲಾ ಸರ್ವಸಮಾನರೆಂಬ ತಮ್ಮ ನಿರ್ಮಲ ಮನೋಧರ್ಮವನ್ನು ದರು; ಅದರಂತೆ ಸಮಾಜವನ್ನು ರೂಪಿಸಲು ಪ್ರಯತ್ನಿಸಿದರು. ಜಗದ ನ್ನು ಉತ್ತಮ–ಅಧಮರೆಂದು ಹೇಳಲು ಆ ಜೀವಾತ್ಮರಲ್ಲಿ ಪ್ರಕಾಶಿಸುವ ಕಾಂಕ್ಷೆಯೇ ಮುಖ್ಯ. ಅವರು ಹುಟ್ಟಿದ ಜಾತಿಪಂಗಡಗಳಲ್ಲ, ಶಿವನಿಷ್ಠೆ ವ ಶ್ವಪಚನು ಶಿವನಿಷ್ಠೆಯಿಲ್ಲದ ಬ್ರಾಹ್ಮಣನಿಗಿಂತ ಶ್ರೇಷ್ಠನೆಂದು ಬಸವಣ್ಣ ನು ಹೇಳಿದರು. ಇದು ಅಂದಿನ ಧರ್ಮ. ಇಂದು ಆ ಬಸವಣ್ಣನವರ ಸಂಜಾತ ವಿರಕ್ತ ಜನಜೀವನದಲ್ಲಿ ಇಂಥ ಶಿವನಿಷ್ಠೆಯನ್ನು ಕಂಡು ಗೌರವಿಸು ನೆಯೆ! ಅಂಥ ಶಿವನಿಷ್ಠೆ ತನ್ನಲ್ಲಿಲ್ಲದಿದ್ದರೂ ತಾನು ಮಾತ್ರ ಶ್ರೇಷ್ಠನೆಂದು ಪಾಲಕಿಯಲ್ಲಿ ಮೆರೆಯುತ್ತಾನಲ್ಲಾ! ಎಂಥ ಧರ್ಮದ್ರೋಹ! ಎಲ್ಲ ಶಿವ ರೂ ವಿರಕ್ತ ಪಟ್ಟಾಧಿಕಾರಿಗಳಾಗಬಲ್ಲರು. ಅಂಥ ಸಂಸ್ಕಾರ ಅವರಲ್ಲಿರ ಕು, ಅಷ್ಟೆ. ಯಾವುದೇ ಒಂದು ವಿಶಿಷ್ಟ ಪಂಗಡದವರು ಮಾತ್ರವೇ ರಾಗಲಾರರು. ಈ ಮನೋಭಾವ ಸಮಾಜದಲ್ಲಿ ಮೂಡಬೇಕು. ಕ್ತಮಠಾಧಿಕಾರಿಗಳನ್ನು ನೇಮಕಮಾಡುವಾಗ ಸಮಾಜ ಎಚ್ಚರಿಕೆಯಿಂದ ಮಿಸಬೇಕು. ಬಸವಣ್ಣನವರ ಈ ಮನೋಧರ್ಮವನ್ನು ಪಾಲಿಸುತ್ತೇನೆಂದು ವಿರಕ್ತ ಪಟ್ಟಾಧಿಕಾರ ಸಮಯದಲ್ಲಿ ಪ್ರಮಾಣವಚನವನ್ನು ನುಡಿಯಬೇಕು. ನು ಆ ಮನೋಧರ್ಮವನ್ನು ಅನುಸರಿಸದಿದ್ದರೆ, ಅವನನ್ನು ಆ ಪಟ್ಟದಿಂದ ಗಿಳಿಸಲು ಸಮಾಜ ಸಂಸಿದ್ಧವಾಗಬೇಕು, ಅವನು ಮಲಗುವ ಮಠ, ಅವನು ಣ್ಣುವ ಅನ್ನ, ಕುಡಿಯುವ ನೀರು ಸಮಾಜದ ಸ್ವತ್ತು. ಅವನು ಸಮಾಜ ಧರ್ಮಪ್ರಚಾರಕ; ಅಷ್ಟೆ; ಯಾವುದೇ ಒಂದು ಮಠ ಸಮಾಜದಲ್ಲಿ ಷ್ಠವಲ್ಲ; ಯಾವನೇ ಒಬ್ಬ ವಿರಕ್ತ ಸಮಾಜದಲ್ಲಿ ಶ್ರೇಷ್ಠನಲ್ಲ; ವಿರಕ್ತಧರ್ಮ ನ್ನು ಸಮಾಜ ಗೌರವಿಸಬೇಕು; ವ್ಯಕ್ತಿಯನ್ನಲ್ಲ! ಅವನು ಸಮಾಜವನ್ನು

ಆ ದಾರಿಯಲ್ಲಿ-ಆ ಅಚ್ಚಿನಲ್ಲಿ ರೂಪಿಸುತ್ತಿಲ್ಲ ವಿರಕ್ತ. ಅಂದು ಬ್ರಾಹ್ಮಣ ಧರ್ಮದ ಶಿವಭಕ್ತ ಮಧುವರಸನ ಮಗಳನ್ನು ಶಿವಭಕ್ತ ಮಾದಿಗರ ಹರಳಯ್ಯನ ಮಗನಿಗೆ ಮದುವೆಮಾಡಿಸಿದ ಬಸವಣ್ಣನವರ ಮನೋಭಾವವನ್ನು ಇಂದು ಸಮಾಜ ಆಚರಿಸಲು ಸಿದ್ಧವಾಗಿದೆಯೆ? ಬಸವಣ್ಣನವರ ಔರಸಸಂತಾನವೆಂಬ ವಿಶಿಷ್ಟ ವರ್ಗದ ವಿರಕ್ತ ಇಂಥ ಒಂದು ಪ್ರಯೋಗವನ್ನಾದರೂ ಕಳೆದ ೮೦೦ ವರ್ಷಗಳಿಂದ ನಡಸಿರುತ್ತಾನೆಯೆ? ಅದು ಸಾಧ್ಯವೇ! ಸಮಾಜದಲ್ಲಿ ಅನೇಕ ಶರಣ ಕುಲದ ಒಳಪಂಗಡಗಳಲ್ಲಿ ಅಲ್ಲೊಂದು ಇಲ್ಲೊಂದು ಅಂತರ್ಜಾತೀಯ ವಿವಾಹಗಳಾಗುತ್ತಿವೆ. ಇದು ಶುಭೋದಯ ಸಂಕೇತ. ಸಮಾಜ ಬಸವಣ್ಣನವರ ಧರ್ಮವನ್ನು ಅನುಸರಿಸಲು ಸಾಕಾದಷ್ಟು ಪ್ರಯತ್ನಿಸುತ್ತಿದೆ. ಆದರೆ ಈ ವಿಶಿಷ್ಟ ವಿರಕ್ತಜಾತಿಯವರ ಪೂರ್ವಾಶ್ರಮ ಪಂಗಡಗಳವರು ಇಂಥ ಅಂತರ್ವಿವಾಹಗಳನ್ನೇಕೆ ನಡಸಲಾರರು! ಬಸವಣ್ಣನವರ ಶೂನ್ಯಸಿಂಹಾಸನಕ್ಕೆ ಮಾತ್ರ ಇವರು ವಾರಸುದಾರರು! ಬಸವಣ್ಣನವರ ಧರ್ಮಕ್ಕೆ ಇವರು ದಾಯಾದಿಗಳು! ಸಮಾಜ ಇಂಥವರನ್ನು ಪೋಷಿಸುತ್ತಿದೆ! ಬಸವಣ್ಣನವರ ಧರ್ಮಕನ್ಯೆ ಹುಟ್ಟಿದಮನೆಯಲ್ಲಿಯೇ ಕಾಂತಿಯುತಳಾಗಿ ಬೆಳೆಯದಮೇಲೆ, ಅವಳು ಯಾವ ಉಡುಗೆ ಉಟ್ಟರೇನು! ಯಾವತೊಡುಗೆ ತೊಟ್ಟರೇನು! ಯಾವ ಮಾತು ಕಲಿತರೇನು! ಯಾವ ನಾಡಿನಲ್ಲಿ ಸುತ್ತಾಡಿದರೇನು! ತನ್ನ ಧರ್ಮವನ್ನೇ ಅರಿಯದ ಹೆಣ್ಣು ಅನ್ಯಧರ್ಮೀಯರ ಬಾಳನ್ನು ಬೆಳಗಬಲ್ಲಳೇ! ಬಸವಧರ್ಮವನ್ನು ದಾರಿತಪ್ಪಿಸಿದವರು ಶಿವಭಕ್ತ ಶರಣನಲ್ಲ; ಶರಣ ಧರ್ಮದ ವಿರಕ್ತರಲ್ಲ! ಈ ವಿಶಿಷ್ಟವರ್ಗದ ಬಸವಮಾನಸಪುತ್ರರು! ಆರ್ಯಧರ್ಮದ ವರ್ಣಾಶ್ರಮ ಪದ್ಧತಿಯನ್ನು ದೂರವಿಟ್ಟು ಅತಿವರ್ಣಾಶ್ರಮಿಯಾಗಿ ನಿಂತ ಸಮಾಜದಲ್ಲಿ ಪುನಃ ಭಕ್ತ, ಮಾಹೇಶ್ವರ ಎಂಬ ಕೃತಕ ಪಂಗಡಗಳೇಕೆ? ಈ ಮಾಹೇಶ್ವರ ಉಚ್ಚವರ್ಗದವನಂತೆ! ಈ ಭಕ್ತ ನೀಚವರ್ಗದವನಂತೆ! * ಆ ಮಹಾನುಭಾವ ಬಸವಣ್ಣನವರ ಶತಮಾನೋತ್ಸವವನ್ನು ಆಚರಿಸಲು ಈ ಮಾಹೇಶ್ವರನ ಪಾದಯಾತ್ರೆ! ಆ ಭಕ್ತನ ಹೃದಯ ಯಾತ್ರೆ! ಹೃದಯಯಾತ್ರೆ ಮುಂದು! ಪಾದಯಾತ್ರೆ ಹಿಂದು! ವಿರಕ್ತ ಕಲ್ಯಾಣದತ್ತ ಹೃದಯಯಾತ್ರೆ ಮಾಡಬೇಕು!! ಅಂದು ಬಸವಣ್ಣನವರು :

* ನಿರಂಜನ ಗ್ರಂಥವನ್ನು ಅವಲೋಕಿಸಿರಿ.

"ಬ್ರಹ್ಮಪದವಿಯನೊಲ್ಲೆ ! ವಿಷ್ಣುಪದವಿಯನೊಲ್ಲೆ; ರುದ್ರ ಪದವಿಯನೊಲ್ಲೆ ! ನಾನು ಮತ್ತಾವ ಪದವಿಯನೊಲ್ಲೆನಯ್ಯಾ ! ಕೂಡಲಸಂಗಮದೇವ, ನಿಮ್ಮ ಸದ್ಭಕ್ತರ ಪಾದವನರಿದಿಪ್ಪ ಮಹಾಪದವಿಯನೆ ಕರುಣಿಸಯ್ಯ !"

ಎಂದು ಹೇಳಿದರು. ಸದ್ಭಕ್ತರ ಪಾದಸೇವೆಗಿಂತ ಬೇರೊಂದು ಪದವಿಯನ್ನು ಅವರು ಬಯಸಲಿಲ್ಲ. ಅವರು ಭಕ್ತೋತ್ತಮರು. ಲಿಂಗ, ಗುರು, ಜಂಗಮ ಪಾದಸೇವೆಗಿಂತ ಭಕ್ತಪಾದಸೇವೆಯೇ ಅವರಿಗೆ ಮಿಗಿಲು. ಎಂಥ ಉದಾತ್ತಚಿತ್ತವೃತ್ತಿ ! ಇಂದು ಯಾವ ವಿರಕ್ತನಾದರೂ ಈ ಮಾತನ್ನು ಹೇಳುವಷ್ಟು 'ಸ್ಥಿತಪ್ರಜ್ಞ' ನಾಗಿದ್ದಾನೆಯೇ ! ಇಲ್ಲ; ಅವನು ಮುಂದೆ ಹೀಗೆ ಹೇಳಬಲ್ಲನೇನೋ !

"ಬ್ರಹ್ಮಪದವಿಯನೊಲ್ಲೆ ! ವಿಷ್ಣುಪದವಿಯನೊಲ್ಲೆ; ರುದ್ರಪದವಿಯನೊಲ್ಲೆ! ನಾನು ಮತ್ತಾವ ಪದವಿಯನೊಲ್ಲೆನಯ್ಯ ! ಕೂಡಲಸಂಗದೇವ, ನಿಮ್ಮ ಸದ್ಭಕ್ತರ ಹಸ್ತವನರಿದಿಪ್ಪ ವಿರಕ್ತಪದವಿಯನೆ ಕರುಣಿಸಯ್ಯ".—ಎಂದು ಹಾಡುತ್ತಾನೆ! ಇಂದು ಬಸವಣ್ಣನವರ ಧರ್ಮ ಕಾಡುಪಾಲಾಗಿದೆ. ಆ ಮಹಾತ್ಮರ ಸರ್ವಸಮಾನ ಧರ್ಮವನ್ನು ಪುನಶ್ಚೇತನಗೊಳಿಸಲು ಅನೇಕ ಪ್ರಭಾವಿತರು ಸುವ್ಯವಸ್ಥೆಯಿಂದ ಮುನ್ನಡೆಯುತ್ತಿದ್ದಾರೆ. ಅವರು ಸಮಾದತ್ತ ದೃಷ್ಟಿಯಿಡಬೇಕು; ಮಠಮಾನ್ಯಗಳನ್ನು ಸಮಾಜ ಸೇವೆಗೆ ಅಣಿಮಾಡಬೇಕು. ಸಮಾಜಸೇವಾದೀಕ್ಷೆಯನ್ನು ತೊಟ್ಟವನೇ ಮಠಾಧಿಕಾರಿಯಾಗಬೇಕು. ಎಲ್ಲ ವರ್ಗಗಳಲ್ಲಿಯೂ ಅರ್ಹರಾದವರು ಮಠಾಧಿಕಾರಿಗಳಾಲು ಅವಕಾಶವಿರಬೇಕು. ಮಠವೆಂದರೆ ಸಮಾಜದ ಸಾರ್ವಜನಿಕ ಸಂಸ್ಥೆ. ಕನ್ನಡನಾಡಿನಲ್ಲಿ ಅಸಂಖ್ಯಾತ ಮಠಗಳಿವೆ. ಅನೇಕ ಮಠಗಳು ದಾಸೋಹಮಠಗಳೂ ಇವೆ; ಕೆಲವು ಮಠಗಳಲ್ಲಿ ವಿದ್ಯಾರ್ಥಿಗಳಿಗೆ ಪ್ರಸಾದನಿಲಯಗಳೂ ಇವೆ. ಇವೆಲ್ಲಾ ಸಮಾಜದ ಬಲದಿಂದಲೇ ನಡೆಯುತ್ತಿವೆ. ಇಷ್ಟೊಂದು ಮಠಗಳಲ್ಲಿ ಕೇವಲ ಒಂದು ಕೈಬೆರಳುಗಳಲ್ಲಿ ಎಣಿಸಬಹುದಾದಷ್ಟು ಮಠಗಳಲ್ಲಿ ಮಾತ್ರ ವಿದ್ಯಾರ್ಥಿಗಳಿಗೆ ಉಚಿತ ಪ್ರಸಾದನಿಲಯಗಳಿವೆ. ಅದರಲ್ಲಿಯೂ ಒಂದೆರಡು ಮಠಗಳಲ್ಲಿ ಮಾತ್ರ ಸಾವಿರಗಟ್ಟಲೆ ವಿದ್ಯಾರ್ಥಿಗಳಿಗೆ ಉಚಿತ ಪ್ರಸಾದನಿಲಯಗಳಿವೆ. ಅಂಥ ಮಠಾಧೀಶ್ವರರೇ ಸಮಾಜ ಚಿರಮಣಿ. ಅಂಥವರನ್ನು ಸಮಾಜ ಅಡ್ಡಪಲ್ಲಕ್ಕಿಯಲ್ಲಿ ಮೆರೆಯಿಸುವುದಿಲ್ಲ ! ಇದು ಸಮಾಜದ ದುರದೃಷ್ಟ ! ಕೆಲವು ಮಠಗಳು ಹೆಸರಿಗೆ

ಮಾತ್ರ ವಿದ್ಯಾರ್ಥಿ ಪ್ರಸಾದನಿಲಯಗಳನ್ನು ಏರ್ಪಡಿಸಿವೆ. ರಾಜಮಾರ್ಗದಲ್ಲಿ ಶ್ರೀಮಠದ ನಾಮಾಂಕಿತದ 'ಬೋರ್ಡು' ಆ ಪ್ರಸಾದನಿಲಯಗಳ ಮುಂಭಾಗ ದಲ್ಲಿ ನಿಂತಿರುತ್ತದೆ. ಪ್ರತಿಯೊಬ್ಬ ವಿದ್ಯಾರ್ಥಿಯೂ ತಿಂಗಳಿಗೆ ಸುಮಾರು ೪೦ ರೂ. ಭೋಜನವೆಚ್ಚವನ್ನು ತೆರುತ್ತಾನೆ. ಇದರಲ್ಲಿ ಎಳ್ಳಷ್ಟು ಉತ್ಪ್ರೇಕ್ಷೆಯಿಲ್ಲ. ಅಂಥ ಮಠಗಳು ಕರ್ಣಾಟಕದಲ್ಲಿ ಹಲವಾರು ಇವೆ. ಆ ಮಠಗಳ ವರಮಾನ ಸಾಕಾಷ್ಟಿದೆ. ಇಂಥ ಮಠಾಧಿಕಾರಿಗಳು ಭೋಗಲಾಲಸರಾಗಿರುತ್ತಾರೆ. ಇವರು ಮಠದ ಹಣವನ್ನು ನೀರಿನಂತೆ ವ್ಯಯಮಾಡಿ ಅಡ್ಡಪಲ್ಲಕ್ಕಿಉತ್ಸವಗಳನ್ನು ಮಾಡಿಸಿಕೊಳ್ಳುತ್ತಾರೆ! ಸಂಭಾವಿತರು ಇಂಥ ಮಠಗಳನ್ನು ಸಮಾಜದ ಆಡಳಿತದಲ್ಲಿಟ್ಟುಕೊಂಡು 'ವಿಶ್ವಾಸ ಸಮಿತಿ'ಗಳಮೂಲಕ ಸಮಾಜಾಭ್ಯುದಯ ಸಾಧನೆಮಾಡಲು ಆಲೋಚಿಸಬಹುದು. ಇಪ್ಪತ್ತೊಂದನೆಯ ಶತಮಾನದ ಉದಯಕಾಲದವೇಳೆಗೆ ಇಂಥ ಎಲ್ಲ ಮಠಗಳೂ ಸೇವಾ ಸಂಸ್ಥೆಗಳಾಗಿ ಪರಿವರ್ತ ನೆಗೊಳ್ಳಬೇಕು. ಪ್ರತಿಯೊಬ್ಬ 'ಸ್ವಾಮಿ'ಯೂ ತಪಸ್ಸುಮಾಡುತ್ತಿರಬೇಕು! ಪ್ರತಿಯೊಂದು ಮಠದ ಆಸ್ತಿಯನ್ನೂ ಸಮಾಜ ಕಂಡುಹಿಡಿದಿರಬೇಕು. ಇದರಿಂದ ಧರ್ಮಕ್ಕೇನೂ ಚ್ಯುತಿಯಿಲ್ಲ! ಇದರಿಂದ ಆ 'ಸ್ವಾಮಿ' ಪೂರ್ಣಕಾಲ ತಪೋನಿರತನಾಗಿರಲು ಅವಕಾಶವಿರುತ್ತದೆ! ಇದು ಪ್ರಜಾಯುಗದಲ್ಲಿ ಯೋಗ್ಯ ವ್ಯವಸ್ಥೆಯಾಗಿರುತ್ತದೆ. ಅದರಿಂದಲೇ ಬಸವಣ್ಣನವರು—

'ಹೊನ್ನಿನೊಳಗೊಂದೊರೆಯ, ಸೀರೆಯೊಳಗೊಂದೆಳೆಯ, ಇಂದಿಂಗೆ ನಾಳಿಂಗೆ ಬೇಕೆಂದೆನಾದರೆ, ನಿಮ್ಮಾಣೆ ನಿಮ್ಮ ಪ್ರಮಥರಾಣೆ! ನಿಮ್ಮ ಶರಣರಿಗ ಲ್ಲದೆ ಮತ್ತೊಂದಕ್ಕೆ ಮಾಡೆನು. ಕೂಡಲ ಸಂಗಮದೇವ' ಎಂದು ಅಂದೇ 'ಮುಂದ'ನ್ನು ಹೇಳಿದ್ದಾರೆ. ವಿರಕ್ತ ಹೊನ್ನಿನ ಆಶೆಯನ್ನು ಬೆಳೆಸಬಾರದು! ಸೀರೆಯ ಎಳೆಯನ್ನು ನೆನೆಯಬಾರದು! ಅವನು ತಪಸ್ಸು ಮಾಡಬೇಕು; ಸಮಾಜ ಮಠದ ವ್ಯವಸ್ಥೆ ಮಾಡಬೇಕು. ವಿರಕ್ತಧರ್ಮ ಹಾಲಿನಂತೆ ಪವಿತ್ರ! ಮಧುರ! ಆದರೆ ಕವಾಡಿಗ ಆ ಹಾಲಿಗೆ ನೀರುಬೆರಸುತ್ತಾನೆ! ಅದರಿಂದ ಪಾವಿತ್ರ್ಯ ಅಳಿಯುತ್ತದೆ; ಮಾಧುರ್ಯ ಕುಗ್ಗುತ್ತದೆ! 'ವಿಶ್ವಾಸಸಮಿತಿ' ಇಂಥ ಕವಾಡಿಗನಂತಿರಬಾರದು! ವಚನಸಾಹಿತ್ಯವನ್ನು ಅವಲೋಕಿಸಿದರೆ ಬಸವಣ್ಣನ ವರೇ ಮೊದಲಾದ ಎಲ್ಲ ವಚನ ಬ್ರಹ್ಮರೂ ಗುರುಜಂಗಮ ತತ್ತ್ವ ವಿವೇಚನೆ ಯನ್ನು ಮಾಡಿದ್ದಾರೆಯೇ ಹೊರತು ವಿರಕ್ತಧರ್ಮ ಮೀಮಾಂಸೆಯನ್ನು ಅವರು

ನ್ನು ಏರ್ಪಡಿಸಬೇಕಾಗಿಲ್ಲವೆಂದು ನಿಲ್ಲಿಸಿದರು. ಅವರಕಾಲದಲ್ಲಿ ವಿರಕ್ತಮಠ ಸ್ಥಿತಿಯಲ್ಲಿತ್ತೆಂದಾಯಿತು. ಆಗ ಮಠದ ವಹಿವಾಟನ್ನು ನೋಡಿಕೊಳ್ಳಲು ಧ್ಯ ಸಂಪ್ರದಾಯದವರೊಬ್ಬರನ್ನು ನೇಮಕಮಾಡಲು ಮಠದ ಹಿತೈಷಿಗಳು ಹೆಮಾಡಿದರು. ಆಚಾರ್ಯ ಪೀಠಗಳ ಅಭಿಮಾನಿ ಆರಾಧ್ಯರನ್ನು ನೇಮಕ ಡಿಕೊಳ್ಳಲು ವಿರಕ್ತ ಶ್ರೀ ಜಯದೇವಸ್ವಾಮಿಗಳು ಸಮ್ಮತಿಸಲಿಲ್ಲ! ಇದು ದ ಮನಃ ಪ್ರವೃತ್ತಿ. "ಮಠದ ಆಸ್ತಿ, ಅಡವು, ನಗದು ಹಣ, ಶಿಲ್ಕು ಈ ಪಟ್ಟಿಮಾಡಿ ಅದರ ವಿನಿಯೋಗ ಹೇಗಾಗುತ್ತದೆಂದು ನೋಡಿಕೊಳ್ಳಲು ಮಿತಿ ಇರಬೇಕಾದುದು ಸಹಜ. ಆಗ ಗಾಡಿಯಮುಂದೆ ಕುದುರೆ ಇಟ್ಟಂತಾ ತ್ತದೆ. ಇದು ಕಾರ್ಯರೂಪಕ್ಕೆ ಬರಲು ಅನುಕೂಲವಾಗುತ್ತದೆ." ಎಂದೂ ಗ ಶ್ರೀ ಜಯದೇವಸ್ವಾಮಿಗಳು ಹೇಳಿದರಂತೆ! ಈಗ ಮಠ ಉಚ್ಛ್ರಾಯ ಸ್ಥಿತಿಯಲ್ಲಿದೆ. ಇದು ಅವರ ಪರಿಶ್ರಮದಫಲ! ಈಗ ಈ ಮಠದ ಆಸ್ತಿ, ಡವು, ನಗದು ಹಣ, ಶಿಲ್ಕು-ಇವುಗಳನ್ನು ಪಟ್ಟಿಮಾಡಿ ಅದು ಹೇಗೆ ವಿನಿಯೋ ಗವಾಗುತ್ತದೆಂದು ನೋಡಿಕೊಳ್ಳಲು ಅವರು ಒಪ್ಪಿದ್ದರೆಂಬುದರಲ್ಲಿ ಸಂಶಯವಿಲ್ಲ! ಮಾಜ ಈ ಅಂಶವನ್ನು ಪರ್ಯಾಲೋಚಿಸಬಹದು! ಯಾವ ಮಠವೇ ಆಗಲಿ ಮು ಸಮಾಜದಸ್ವತ್ತು!

ಶ್ರೀ ಜಯದೇವ ಸ್ವಾಮಿಗಳ ಕಾಲದಲ್ಲಿ ಚಿತ್ರದುರ್ಗ ವಿರಕ್ತಮಠ ಸ್ಮರ್ತವಾಯಿತು! ಅವರು ತುಂಬ ವ್ಯವಹಾರ ಕುಶಲರು! ಚಾಣಾಕ್ಷರು! ಮು ಸಮಾಜಾಭ್ಯುದಯವನ್ನೂ ವಿರಕ್ತ ಪಂಥ ಪ್ರಚಾರವನ್ನೂ ಜೊತೆ ಡಿಸಿಯೇ ಸಾಧಿಸಿದರು! ಇವರು ಬೆಂಗಳೂರಲ್ಲಿ ವೀರಶೈವ ವಿದ್ಯಾರ್ಥಿ ಲಯವನ್ನು ಸ್ಥಾಪಿಸಲು ಆಗ ವಿದ್ಯಾ ಇಲಾಖೆಯ ಮೊಖ್ತೇಸರಾಗಿದ್ದ ಶ್ರೀ . ಆರ್. ರೆಡ್ಡಿಯವರ ವಶಕ್ಕೆ ಇಪ್ಪತ್ತುಸಾವಿರ ರೂಪಾಯಿಗಳನ್ನು ಕೊಟ್ಟು ಮಾಜವನ್ನು ಹರಸಿದರು. (ಕ್ರಿ. ಶ. ೧೯೧೯). ಆಗ ಅವರು ಬೆಂಗಳೂರಲ್ಲಿ ಬ್ಬಿ ತೋಟವಪ್ಪನವರ ಛತ್ರದಲ್ಲಿ ಬಿಡಾರಮಾಡಿದ್ದರು. ಇವರ ಉತ್ಸವವನ್ನು ಗ ಬೆಂಗಳೂರಲ್ಲಿ ನಡೆಸಲು ಗುರುವರ್ಗದವರೂ ಬ್ರಾಹ್ಮಣರೂ ವಿರೋಧಿ ದರು. ವೀರಶೈವರಲ್ಲಿ ಎರಡು ಪಂಗಡಗಳಿಪ್ಪುದರಿಂದ, ಬ್ರಾಹ್ಮಣರ ವಿರೋಧ ಪ್ರಬಲವಾಗಿತ್ತು. ಆಗ ಶ್ರೀ ಜಯದೇವಸ್ವಾಮಿಗಳು ತೋರಿಸಿದ ಔದಾರ್ಯ ನ್ನು ತಿಳಿದು ವೀರಶೈವರಲ್ಲಿದ್ದ ಎರಡು ಪಂಗಡಗಳವರೂ ಪರಸ್ಪರ ಸಮಾ

ಲೋಚಿಸಿ, ಉತ್ಸವಕಾರ್ಯದಲ್ಲಿ ಒಂದಾದರು ! ಶ್ರೀ ಸ್ವಾಮಿಗಳ ದಾನೋಪಾಯ ಫಲಿಸಿತು ! ಅವರು ಆ ಹಣವನ್ನು ವೀರಶೈವ ಸಮಾಜದ ಪ್ರಮುಖರ ವಶಕ್ಕಾಗಲಿ ಅಥವ ಸಮಾಜದ ಮುಖಂಡರ ಸಮಿತಿಯ ವಶಕ್ಕಾಗಲಿ ಕೊಡಲಿಲ್ಲ! ಏನೇ ಆಗಲಿ, ಆಗ ವಿದ್ಯಾಭ್ಯಾಸದಲ್ಲಿ ತೀರ ಹಿಂದುಳಿದಿದ್ದ ವೀರಶೈವ ಸಮಾಜಕ್ಕೆ ಇದೊಂದು ವರಪ್ರಸಾದವಾಯಿತೆಂಬುದರಲ್ಲಿ ಸಂಶಯವಿಲ್ಲ ! ಇದು 'ನಿಂತ ನೆಲದಗುಣವೊ ಬಂದ ಕಾಲದಗುಣವೊ!. ಅವರು ಮುರಘ ಮಠದ ವಿರಕ್ತಪಟ್ಟಭದ್ರರಾದಮೇಲೆ,ಗುರುವರ್ಗದ ಪ್ರಭಾವವನ್ನು ತಗ್ಗಿಸಲು ಸಾಹಸಪಡುತ್ತಿದ್ದರು. ಎಲ್ಲಕ್ಕಿಂತಲೂ ಮಿಗಿಲಾಗಿ, ಮೈಸೂರು ಸಂಸ್ಥಾನದ ರತ್ನಸಿಂಹಾಸನಾಧೀಶ್ವರರಾಗಿದ್ದ ರಾಜರ್ಷಿ ನಾಲ್ವಡಿ ಕೃಷ್ಣರಾಜ ಒಡೆಯರ ಪ್ರೀತಿವಿಶ್ವಾಸಗಳನ್ನು ಗಳಿಸಲು ಶ್ರೀ ಜಯದೇವಸ್ವಾಮಿಗಳ ದಾನನಿಧಿ ಅಂಕುರಾರ್ಪಣಮಾಡಿತು! ಮುರಿಗಿಮಠ ಜಗದ್ಗುರು ಪೀಠವೆಂದು ಹೊಗಳಿಸಿಕೊಳ್ಳಲು ಮಾರ್ಗ ಸುಗಮವಾಯಿತು ! ಶ್ರೀ ಯುವರಾಜ ಕಂಠೀರವನರಸಿಂಹರಾಜ ಒಡೆಯರು ' ಶ್ರೀ ಜಯದೇವ ಮುರಘರಾಜೇಂದ್ರ ವೀರಶೈವ ಹಾಸ್ಟೆಲ್ - ಕಟ್ಟಡದ ಶಂಕುಸ್ಥಾಪನೆಯನ್ನು ನೆರವೇರಿಸಿದರು. * ಆದರೂ ಈ ವಿದ್ಯಾರ್ಥಿ ನಿಲಯದ ಮುಂಭಾದಲ್ಲಿ ಗೋಡೆಯಲ್ಲಿ ಸ್ಥಾಪಿಸಿರುವ ಶಿಲಾಶಾಸನದಲ್ಲಿ—ಜಗದ್ಗುರು—ಪದವನ್ನು ಬರೆದಿರುವುದಿಲ್ಲ ! ಮೇಲುಭಾಗದಲ್ಲಿಯೂ ' ಶ್ರೀ ಜಯದೇವ ಮುರುಘರಾಜೇಂದ್ರ ವೀರಶೈವ ಹಾಸ್ಟೆಲ್ ' ಎಂದು ಮಾತ್ರ ಬರೆದಿರುತ್ತದೆ.

ಆಗ ಬೆಂಗಳೂರಲ್ಲಿ ನಡೆದ ಉತ್ಸವಕಾಲದಲ್ಲಿ 'ಜಗದ್ಗುರು' ಪದವನ್ನು ಮುರಿಗಿಮಠದವರು ಉಪಯೋಗಿಸಿಕೊಳ್ಳಲು ಪ್ರಬಲವಾದ ವಿರೋಧ ವ್ಯಕ್ತಪಟ್ಟಿತು. ಆ ಸಮಯದಲ್ಲಿಯೇ ಬೆಂಗಳೂರಲ್ಲಿ ವಿದ್ಯಾರ್ಥಿ ನಿಲಯದ ಶಂಕುಸ್ಥಾಪನೆ ನಡೆಯಿತು ! ಈ ಸಂದರ್ಭದಲ್ಲಿ ಎಂ. ಬಸವಯ್ಯನವರು ತೋರಿಸಿದ ಜಾಣ್ಮೆ ಮತ್ತು ಸಲ್ಲಿಸಿದ ಸೇವೆ ಶ್ರೀ ಜಯದೇವಸ್ವಾಮಿಗಳ ಪ್ರಭಾವವನ್ನು ಹೆಚ್ಚಿಸಿದುವು. ಆಗ ಸರ್ಕಾರದ ಉತ್ನತ ಪದವಿಯಲ್ಲಿದ್ದ ಶ್ರೀ ಕೆ. ಪಿ. ಪುಟ್ಟಣ್ಣ ಶೆಟ್ಟರು ಸರ್ವರೀತಿಯಿಂದಲೂ ಸಹಕರಿಸಿದರಾದರೂ, ಅವರು ಆಗಿನ ಪರಿಸ್ಥಿತಿಯಲ್ಲಿ ಮತ್ತು ರಾಜಕೀಯ ವಾತಾವರಣದಲ್ಲಿ ಈ ವಿರಕ್ತ ಮಠಾಧೀಶ್ವ

* ಈಗಲೂ ಆ ಶಿಲಾಶಾಸನವನ್ನು ನೋಡಬಹುದು. ಅನುಬಂಧವನ್ನು ಓದಿ.

ಸಮಾತಿನಂತೆ ಏಕಾಏಕಿ ಏನನ್ನೂ ಮಾಡಲಾರದಂತಿದ್ದರು! ಅಂಥ ಸಂಧಿಗ್ಧ ಪರಿಸ್ಥಿತಿಯಲ್ಲಿದ್ದ ಸರ್. ಪುಟ್ಟಣ್ಣಶೆಟ್ಟರ ವ್ಯಕ್ತಿ ಚಿತ್ರವನ್ನು ರೂಪಿಸುವುದರಲ್ಲಿ 'ಶ್ರೀ ಜಗದ್ಗುರು ಜಯದೇವ ದಿಗ್ವಿಜಯ' ವಿಫಲಗೊಂಡಿರುತ್ತದೆ.

ಶ್ರೀ ಜಯದೇವಸ್ವಾಮಿಗಳು ದೇಶ ಸಂಚಾರದಿಂದ ವಿರಕ್ತ ಪೀಠದ ಗೌರವವನ್ನು ಹೆಚ್ಚಿಸಿದರು. ದೇಶದ ನಾನಾ ಭಾಗಗಳಲ್ಲಿ ಅನೇಕ ವಿದ್ಯಾರ್ಥಿ ನಿಲಯಗಳನ್ನು ಕಟ್ಟಿಸಲು ನೆರವಾದರು; ಅನೇಕ ವಿದ್ಯಾರ್ಥಿಗಳಿಗೆ ಸಹಾಯ ಮಾಡಿದರು. ಸಮಾಜ ಅವರಿಗೆ ಚಿರಋಣಿ. ಆದರೆ, ಅವರು ಸದಾ ವಿರಕ್ತ ಧರ್ಮವನ್ನು ತುಂಬ ಎಚ್ಚರಿಕೆಯಿಂದ ಹಬ್ಬಿಸಿದರು. ಸಮಾಜದಿಂದ ಬಂದ ಹಣವನ್ನು ಸಮಾಜದ ಅಭ್ಯುದಯಕ್ಕೇ ಧಾರೆಯೆರೆದರು! ಇವರ ಮಠದಲ್ಲಿ ಲಕ್ಷ್ಮಿಯ ಭಂಡಾರವೇನೂ ಇರಲಿಲ್ಲ. ಇವರು ತಮ್ಮ ಪಂಥವನ್ನು ಬೆಳಸಲು ಅಸ್ಪೃಶ್ಯಾತ ಅನ್ಯ ಜಾತಿಯ ಜನರಿಗೆ ಲಿಂಗಧಾರಣ ಮಾಡಿದರು. ಇದರಿಂದ ಆ ಮಠದ ಶಿಷ್ಯವರ್ಗ ಹೆಚ್ಚಿತು; ಆದರೆ ಆ ಶಿಷ್ಯರಿಗೆ ಬಸವಣ್ಣನವರ ಉದಾರ ಧರ್ಮಾಮೃತ ಪಾನಲಭಿಸಲಿಲ್ಲ! ಇದರಿಂದ ಕುಲಗಳು ಹೆಚ್ಚಿದವು; ಜಾತಿಗಳು ಬೆಳೆದುವು. ಸಮಾಜ ಸಮನ್ವಯ ಕಾರ್ಯವಾಗಲಿಲ್ಲ. ಅಂಥ ಸಮನ್ವಯ ಕಾರ್ಯವನ್ನು ಸಾಧಿಸಲು ಆಗ ಯಾವುದೊಂದು ಪ್ರಯತ್ನವೂ ನಡೆಯಲಿಲ್ಲ. ವಿರಕ್ತ ಸಮಯ ಹಾನಗಲ್ಲಿನಿಂದ ಅಥಣಿಯವರೆಗೂ, ಕೊಲ್ಲಾಪುರದಿಂದ ಕೊಲ್ಲಾಪುರದವರೆಗೂ, ಗೋಕರ್ಣದಿಂದ ಶ್ರೀಶೈಲದವರೆಗೂ, ಕಕುದ್ಗಿರಿಯಿಂದ ಸಿದ್ಧಗಿರಿಯವರೆಗೂ, ಚಿತ್ರದುರ್ಗದಿಂದ ಕಲ್ಯಾಣದವರೆಗೂ ಹಬ್ಬಿತು. ವಿರಕ್ತ ಸಮಯದವರು ಬಸವಣ್ಣನವರ ಉದಾರ ತತ್ತ್ವಗಳನ್ನು ಸುವ್ಯವಸ್ಥೆಯಿಂದ ವಿರಕ್ತಪಂಥದಲ್ಲಿ ಸಮಾವೇಶಗೊಳಿಸಿದರು. ವಿರಕ್ತಪಂಥ ಬಸವಣ್ಣನವರ ತರುವಾಯ ಸುಮಾರು ಮುನ್ನೂರು ವರ್ಷಗಳಾದಮೇಲೆ ರೂಪುಗೊಂಡಿದ್ದರಿಂದ ಸಮ ಬಸವಪುರಾಣ, ಶಿವಾನುಭವ ಶಾಸ್ತ್ರ, ವಚನಶಾಸ್ತ್ರಗಳ ಕಟ್ಟು ವಿರಕ್ತಾಶ್ರಮ ಪ್ರದಾನಕಾಲದಲ್ಲಿ ಆಯಾ ಮಠದ ಶಿಖಾಮುದ್ರೆಗಳೊಂದಿಗೆ ಶಿಷ್ಯರಿಗೆ ವಿರಕ್ತ ಧರ್ಮ ಸ್ವೀಕಾರ ಸಂಕೇತವಾಗಿ ಬರುತ್ತಿವೆ. ಈ ಪಂಥ 'ಶ್ರೀ ಗುರುಬಸವ ಲಿಂಗಾಯನಮಃ' ಎಂದು ಜಪಮಾಡುತ್ತದೆ; ತಪಮಾಡುತ್ತದೆ. ಅದರಿಂದಲೇ ಇದೊಂದು ಪಂಥವಾಗಿಯೇ ಬೆಳೆದುಬಂದಿದೆ. ವಿರಕ್ತಸಮಯದ ಮುರಘ ಸಂಪ್ರದಾಯ ಸುಮಾರು ಹದಿನಾರನೆಯ ಶತಮಾನದಲ್ಲಿ ಉದಯವಾಯಿತೆಂದು

ವಾಙ್ಮಯದಿಂದ ನಿರ್ಧರವಾಗುತ್ತದೆ. ಚಿತ್ರದುರ್ಗದ ವಿರಕ್ತರು ಶ್ರೀ ಮಲ್ಲಿಕಾರ್ಜುನಸ್ವಾಮಿಗಳೂ ಇದೇ ಅಭಿಪ್ರಾಯವನ್ನು ಅವರು ಇತ್ತೀಚೆಗೆ ಬೆಂಗಳೂರಲ್ಲಿ ಮಾಡಿದ ಭಾಷಣದಲ್ಲಿಯೂ ಹೇಳಿದ್ದಾರೆ. ಈ ವಿರಕ್ತಪಂಥ ಪ್ರಾಚೀನ ವೀರಶೈವ ತತ್ತ್ವವನ್ನು ಬಿಡಲೂ ಆರದು; ಶರಣಧರ್ಮದ ಉದಾರ ವೃತ್ತಿಯನ್ನು ಹಿಡಿಯಲೂ ಆರದು! ಅದರಿಂದಲೇ ಈ ಪಂಥದಲ್ಲಿ ಗುರುಧರ್ಮದ ಪ್ರಪತ್ತಿಯಿಲ್ಲ; ಶರಣ ಧರ್ಮದ ನಿವೃತ್ತಿಯಿಲ್ಲ! ಚಿತ್ರದುರ್ಗದ ಮಠ ಉದಯವಾಗುವುದಕ್ಕಿಂತ ಹಿಂದೆಯೇ ಅನೇಕ ಮಠಗಳು ನಾಡಿನಲ್ಲಿ ಪ್ರಬಲವಾಗಿದ್ದುವು. ಅವುಗಳಿಗೆ ರಾಜಾಶ್ರಯವಿತ್ತು. ಕೊಡಗಿನಲ್ಲಿದ್ದ ಯಡವನಾಡಿನ ಅಬ್ಬಿಮಠ ಮತ್ತು ಕೊಡಲಿಮಠ ಇವು ಶಿವಗಂಗೆ ಮೇಲಣದ ಗವಿಮಠದ ಸಂಪ್ರದಾಯದ ಸಿದ್ಧಾಪುರಮಠದ ಪಟ್ಟದದೇವರ ಮಠಗಳಾಗಿದ್ದುವು. ಇವು ಕಂಬಾಳು ಬುಡಕಟ್ಟಿನ ಗುರುಮಠಗಳೆಂದು ನಿರ್ಧರವಾಗಿ ತಿಳಿದುಬರುತ್ತದೆ. ಈ ಮಠಸ್ಥರಾದ ತೋರಣಗಟ್ಟ ಶ್ರೀ ಚನ್ನಬಸವಯ್ಯನವರು ಚಿತ್ರದುರ್ಗದಲ್ಲಿದ್ದಾರೆ. ಅವರು ವಯೋವೃದ್ಧರು. ಅವರಿಂದ ವಿವರಗಳು ಲಭಿಸುತ್ತವೆ. ಈ ಮಠಗಳು ಶ್ರೀ ಜಯದೇವ ಸ್ವಾಮಿಗಳ ಕಾಲದಲ್ಲಿ ಮುರಘ ಮಠದ ಅಧೀನಕ್ಕೆ ಬಂದವು. ಈ ಮಠದ ಐಶ್ವರ್ಯ ಹೆಚ್ಚಿತು! ಇದೆಲ್ಲಾ ಶ್ರೀ ಜಯದೇವ ಸ್ವಾಮಿಗಳ ಸಾಹಸಫಲ! ಇವರ ಕಾಲದಲ್ಲಿ ಚಿತ್ರದುರ್ಗದ ವಿರಕ್ತಮಠ ಮೂಲ ಆನಂದಪುರ ಮುರಘಾ ಮಠದಿಂದ ಸ್ವತಂತ್ರ ಮಠವಾಗಿಯೇ ನಿಂತಿತು!

ಶ್ರೀ ಜಯದೇವ ಸ್ವಾಮಿಗಳು ಚಿತ್ರದುರ್ಗದ ವಿರಕ್ತ ಮಠಾಧೀಶ್ವರರಾದ ಮೇಲೆ, ಸರ್ಕಾರದಿಂದ ಮಠಕ್ಕೆ ಅನೇಕ ಬಿರುದುಬಾವಲಿಗಳನ್ನು ಪಡೆದರು. ತಾವು ಜಗದ್ಗುರು ಎನಿಸಿಕೊಂಡರು. ಇವರು ಮೈಸೂರು ನಗರದಲ್ಲಿ ಕೃಷ್ಣರಾಜೇಂದ್ರ ಆಸ್ಪತ್ರೆಯ ಆವರಣದಲ್ಲಿ ರೋಗನಿದಾನ ಮಂದಿರವೊಂದನ್ನು ಕಟ್ಟಿಸಲು ೪೦ ಸಾವಿರ ರೂಪಾಯಿಗಳನ್ನು ಕೊಟ್ಟರು. ಅದರಮೇಲೆ 'ಮುರಘರಾಜೇಂದ್ರ ರೋಗನಿದಾನ ನಿಲಯ' ಎಂಬ ಅಂಕಿತವನ್ನು ಹಾಕಿಸಿರುತ್ತಾರೆ. ಆ ಅಂಕಿತದಲ್ಲಿ 'ಜಗದ್ಗುರು' ಎಂಬ ಪದವಿಲ್ಲವೆಂಬುದನ್ನು ಗಮನಿಸಬಹುದು. ಆದರೆ, ಶ್ರೀಮಠದ ಆಶ್ರಯದಲ್ಲಿ ಪ್ರಕಟವಾಗಿರುವ-ಶ್ರೀ ಜಯದೇವಲೀಲೆ-ಕಾವ್ಯದಲ್ಲಿ ಆ ಚಿಕಿತ್ಸಾಮಂದಿರಕ್ಕೆ "ಜಗದ್ಗುರು ಜಯದೇವ ಪೆಥಲಾಜಿಕಲ್ ಲ್ಯಾಬೋರೇಟರಿ" ಎಂಬ ಹೆಸರನ್ನಿಟ್ಟು ಕೃತಾರ್ಥರಾದರು

...ವು ಬರೆದಿರುತ್ತದೆ. ಅಲ್ಲಿ 'ಜಗದ್ಗುರು' ಪದವಿಲ್ಲ. ಈ ಗ್ರಂಥವನ್ನು ಶ್ರೀ ...ಯುದೇವ ಸ್ವಾಮಿಗಳು ಅವಲೋಕಿಸಿಯೇ ಇರಬೇಕು. ಅವರು ಅಲ್ಲಿ ಇಲ್ಲದು ...ನ್ನು ಇದೆಯೆಂದು ಒಪ್ಪಿಕೊಂಡಂತಾಯಿತು. ಎಂದಮೇಲೆ, ಇವರ ಆಶ್ರಯ ...ಸಿದ್ಧವಾದ ಎಲ್ಲದಾಖಲಾತಿಗಳಲ್ಲಿಯೂ ನಿಜಸಂಗತಿಗಳೇ ಇರುತ್ತವೆಯೆಂದು ...ಳಲು ಸಾಧ್ಯವಿಲ್ಲ. ಆ ರೋಗನಿದಾನ ಶಾಸ್ತ್ರೀಯ ಪ್ರಯೋಗ ಪರೀಕ್ಷಾ ...ದಿರವನ್ನು ತಾ||೨೪-೨-೧೯೩೮ ರಂದು ಶ್ರೀಮನ್ಮಹಾರಾಜ ಶ್ರೀಕೃಷ್ಣರಾಜ ...ಡೆಯರ್ ಬಹಾದ್ದೂರ್ ಅವರು ಶ್ರೀ ಜಯದೇವಸ್ವಾಮಿಗಳ ಸಮಕ್ಷದಲ್ಲಿ ...ಸೂರು ನಗರದಲ್ಲಿ ನೆರವೇರಿಸಿದರು. ಆಗ ಮಹಾರಾಜರು ಮಾಡಿದ ಭಾಷಣ ...ಘೋಷವಾದುದು. ಅವರು "ಪ್ರಾಚೀನಮಠಗಳಲ್ಲೊಂದರ ಪೀಠಾಧಿಪತಿಗ ...ದ ಶ್ರೀ ಜಯದೇವ ಮುರುಘರಾಜೇಂದ್ರ ಸ್ವಾಮಿಗಳವರು... ಎಂದೂ,........ ...ಶ್ರೀಗಳು...ಎಂದೂ...ಶ್ರೀ ಜಯದೇವ ಮುರುಘರಾಜೇಂದ್ರಸ್ವಾಮಿಗಳವರ ...ನಾಂಕಿತದಲ್ಲಿ........ಎಂದೂ, ಮೂರುಸಾರಿ ತಮ್ಮ ಭಾಷಣದಲ್ಲಿ ಮುರಘ ...ಠದ ಸ್ವಾಮಿಗಳನ್ನು ಕುರಿತು ಮಾತನಾಡಿರುತ್ತಾರೆ. ಅವರು ತಮ್ಮ ...ಷಣದಲ್ಲಿ ಶ್ರೀ ಜಯದೇವಸ್ವಾಮಿಗಳನ್ನು 'ಜಗದ್ಗುರು' ಎಂದು ಎಲ್ಲಿಯೂ ...ಚಿಸಿಲ್ಲವೆಂಬುದು ಗಮನಾರ್ಹವಾಗಿದೆ. ಶ್ರೀಜಯದೇವಸ್ವಾಮಿಗಳು ತಮ್ಮ ...ತರ ಪರಿಶ್ರಮದಿಂದ ವಿರಕ್ತಮಠದ ಕೀರ್ತಿ ಪ್ರತಿಷ್ಠೆಗಳನ್ನು ಸಾಧಿಸಿದರು; ...ಾಜದ ಘನತೆಗೌರವಗಳನ್ನು ಹೆಚ್ಚಿಸಿದರು. ಅವರ ತಪಃಪ್ರಭಾವದಿಂದಲೇ ...ದು ಚಿತ್ರದುರ್ಗದ ವಿರಕ್ತಮಠ ಜಗದ್ಗುರು ಪೀಠವಾಯಿತು! ಆ ಪೀಠದ ...ತ್ತರು 'ಜಗದ್ಗುರು'ಗಳಾದರು. ಮುರಘಮಠದವರು 'ಜಗದ್ಗುರು'ಗಳೆಂದು ...ಳಿಕೊಳ್ಳುವುದರಲ್ಲಿ ಪ್ರಮಾದವೇನೂ ಇಲ್ಲ. ಪಂಚಸಮುಯದವರೂ ...ದ್ಗುರುಗಳೇ ಆಗಿದ್ದಾರೆ. ಅವರೆಲ್ಲರೂ ಪೂಜ್ಯರೇ. ಹಿಂದೆ ಗುರುವಿರಕ್ತರು ...ಸ್ಪರ ಮಿತ್ರರಾಗಿದ್ದರು. ಅಂದಿನ ಪತ್ರವ್ಯವಹಾರಗಳನ್ನು ನೋಡಿದರೆ ...ವುಗಳಲ್ಲಿ ಪರಸ್ಪರ ಸೌಹಾರ್ದತೆಯೇ ಕಂಡುಬರುತ್ತದೆ. ಇತರ ಮಠಗಳಲ್ಲಿರತಕ್ಕ ...ಸನಪತ್ರಗಳನ್ನು ಅವಲೋಕಿಸಿದರೆ ಗುರುವಿರಕ್ತರಲ್ಲಿ ಯಾರಿಗೆಯಾರೂ ...ಧೀನರಲ್ಲವೆಂಬುದು ವ್ಯಕ್ತವಾಗುತ್ತದೆ. ವಿರಕ್ತನೆಂದರೆ ವ್ಯಷ್ಟಿಜೀವನ; ಗುರು ...ದರೆ ಸಮಷ್ಟಿಜೀವನ! ಇಬ್ಬರೂ ಸಮಾಜ ಹಿತೈಷಿಗಳು; ಸಮಾಜ ...ಪೂಜ್ಯರು! ಗುರುವಿರಕ್ತರಲ್ಲಿ ಯಾರಿಗೆ ಯಾರೂ ಅಧೀನರಲ್ಲ; ಯಾರಿಗೆ

ಯಾರೂ ಅಧೀಶ್ವರರಲ್ಲ ! ಗುರುವರ್ಗದ ಸತ್ವ ಮತ್ತು ತೇಜಸ್ಸು ಎಂದಿನಂತೆಯೇ ದೇದೀಪ್ಯಮಾನವಾಗಿವೆ; ವಿರಕ್ತರೂ ಗೌರವಾರ್ಹರಾಗಿರುತ್ತಾರೆ. ವೀರಶೈವದಲ್ಲಿ ಯಾರು ಯಾವಾಗಬೇಕಾದರೂ ತಮ್ಮ ಸ್ವಸಾಮರ್ಥ್ಯದಿಂದ,ಸಮಯ ಸಂಧಾನ ಚಾತುರ್ಯದಿಂದ ಮಠಗಳನ್ನು ಸ್ಥಾಪಿಸಬಹುದು;'ಜಗದ್ಗುರು'ವಾಗಬಹುದು ಎಂಬ ಪರಿಪಾಠ ಕಂಡುಬರುತ್ತದೆ. ಇದನ್ನು ನಿರ್ದಿಷ್ಟವಾಗಿ ರೂಪಿಸಲು ಸಮಾಜ ಯಾವಕಟ್ಟು ಕಟ್ಟಳೆಯನ್ನೂ ಮಾಡಿದಂತಿಲ್ಲ. ಶ್ರೀ ಜಯದೇವ ಸ್ವಾಮಿಗಳ ವಿರಕ್ತ ಪುಣ್ಯಜೀವನ ಚಿತ್ರದುರ್ಗ ವಿರಕ್ತಮಠದ ಬೆಳವಣಿಗೆಯನ್ನು ಸೂಚಿಸುತ್ತದೆ. ಅವರ ಜೀವನ ದರ್ಪಣದಲ್ಲಿ ಆ ಮಠದ ಪ್ರತಿಬಿಂಬ ಕಾಣುತ್ತಿದೆ. ಬಸವಣ್ಣನವರ ನಿಜಧರ್ಮವನ್ನು ಸಮಾಜ ಆಚರಿಸಿದರೆ ಧರ್ಮ ವಿಶ್ವಧರ್ಮವಾದೀತು. ಗುರುವರ್ಗದವರು ಬಸವಣ್ಣನವರನ್ನು ಅರ್ಥ ಮಾಡಿಕೊಳ್ಳಲು ಸಾಕಾದಷ್ಟು ಪ್ರಯತ್ನಮಾಡಿದಂತಿಲ್ಲ. ಆತನು ವಿಶ್ವಪ್ರೇಮಿ; ಸನಾತನವೀರಶೈವ ಧರ್ಮೋದ್ಧಾರಕ; ಪಂಚಗೋತ್ರ ಸಂಜಾತವರ್ಗದವರೆಂಬ ಪ್ರತಿಷ್ಠಾನಿಷ್ಠರಾದ ವಿರಕ್ತರು ಬಸವಧರ್ಮೋಪದೇಶಕರೆಂದು ತಿಳಿದುಕೊಂಡಿದ್ದಾರೆ. ಆದರೆ, ಅವರು ಬಸವತತ್ತ್ವಪ್ರತಿಪಾದಕರಾಗಿಲ್ಲ. ಅವರಲ್ಲಿ ಶರಣ ಧರ್ಮದ ಸರ್ವಸಮಾನತೆಯ ಮನೋಭಾವ ಸಾಕಾದಷ್ಟು ಕಂಡುಬರುತ್ತಿಲ್ಲ. ಶರಣಧರ್ಮದ ಗುರು ವಿರಕ್ತರು ಬಸವಧರ್ಮವನ್ನು ನಿಷ್ಠೆಯಿಂದ ಪರಿಪಾಲಿಸುತ್ತಿದ್ದಾರೆ. ಶರಣಧರ್ಮದಲ್ಲಿ ವರ್ಗಭೇದ ಮತ್ತು ನೀಚೋಚ್ಚಭಾವನೆ ಇರಬಾರದು. ಆಗಲೇ ಅಂದು, ಇಂದು, ಮುಂದು–ಒಂದಾಗುತ್ತದೆಯೆಂಬುದನ್ನು ಮರೆಯಬಾರದು.

ಜ್ಯೋತಿರ್ಮಯ ಶೂನ್ಯಸಿಂಹಾಸನ ಎಂದೆಂದೂ ವಿಶ್ವಧರ್ಮಸಿಂಹಾಸನವಾಗಿ ಮೆರೆಯಲಿ.

—೦—

# ತರಂಗ ೧೯.

## ನವಕಲ್ಯಾಣೋದಯ: ಶೂನ್ಯಸಿಂಹಾಸನಾಭ್ಯುದಯ



೭೭ " ವಿರಕ್ತನಾದಡೆ ಮನೆಯಹೊಂದಿ ಎಲ್ಲರಲ್ಲಿರಬೇಕು. ವಿರಕ್ತನಾದಡೆ ಊರನಾಶ್ರಯಿಸಿ ಮನೆ ಮನೆ ಭಿಕ್ಷವಬೇಡಬೇಕು. ವಿರಕ್ತನಾದಡೆ ಅರಣ್ಯಪರ್ವತ, ಕಳಮಳಸರೋವರ ನದಿಗಳಲ್ಲಿರಬೇಕು. ವಿರಕ್ತನಾದಡೆ ದೇಶಬಿಟ್ಟು ಪರದೇಶಕ್ಕೆ ಹೋಗಬೇಕು. ವಿರಕ್ತನಾದಡೆ ಮಂಡೆಬೋಳಾಗಿ ವಿಭೂದಿಯ ಧರಿಸಿ ಅಂಗದಮೇಲೆ ಲಿಂಗವಕಟ್ಟಿ ತಿರುಗಬೇಕು. ಇಂತೀ ಭೇದವ ತಿಳಿಯಬಲ್ಲರೆ ವಿರಕ್ತನೆಂಬೆ ಕಾಡನೊಳಗಾದ ಶಂಕರಪ್ರಿಯ ಚೆನ್ನಕದಂಬ ಲಿಂಗನಿರ್ಮಾಯ ಪ್ರಭುವೇ"

—ಕಾಡಸಿದ್ಧೇಶ್ವರವಚನ.

ನಾಥಪಂಥ ಹನ್ನೆರಡನೆಯ ಶತಮಾನದಲ್ಲಿಯೇ ತನ್ನ ಮೂಲ ತತ್ತ್ವವನ್ನು ಬಿಟ್ಟು, ವೀರಶೈವ ಗುರುಜಂಗಮ ತತ್ತ್ವಗಳನ್ನು ಬಳಸಿಕೊಳ್ಳಲು ಮೊದಲಿಸುತ್ತಿತ್ತೆಂದು ಊಹಿಸಬಹುದು. ಕಾಡಸಿದ್ಧೇಶ್ವರರು ಮೇಲೆಕಂಡ 'ವಚನ'ದಲ್ಲಿ ಅಂದಿನ ವಿರಕ್ತ ಚಿತ್ರವನ್ನು ನಿರೂಪಿಸಿದ್ದಾರೆಂದು ಭಾವಿಸಲು ಅವಕಾಶವುಂಟು. ಬಸವಣ್ಣನವರ ತರುವಾಯ ವಿಜಯನಗರದ ಪ್ರೌಢದೇವ ರಾಯನಕಾಲವಲ್ಲಿ ಎಂದರೆ, ಹದಿನೈದನೆಯ ಶತಮಾನದ ಪ್ರಾರಂಭದಲ್ಲಿಯೇ ವೀರಶೈವಧರ್ಮ ತುಂಗಭದ್ರಾನದಿಯ ದಕ್ಷಿಣಪ್ರಾಂತದಲ್ಲಿ ಪುನಶ್ಚೇತನ ಗೊಂಡಿತು. * ಕ್ರಿ. ಶ. ೧೫೮೦ ರಲ್ಲಿ ಅಧೃಶ್ಯಕವಿ ಪ್ರೌಢರಾಯನ ಕಾವ್ಯವನ್ನೂ ಕ್ರಿ. ಶ. ೧೫೮೪ ರಲ್ಲಿ ವಿರೂಪಾಕ್ಷ ಪಂಡಿತಕವಿ ಚನ್ನಬಸವ ಪುರಾಣವನ್ನೂ ಕ್ರಿ. ಶ. ೧೭೩೬ ರಲ್ಲಿ ಮೋದಿಯ ರುದ್ರಕವಿ ನೂರೊಂದು ವಿರಕ್ತರ ಕಾವ್ಯವನ್ನೂ ಬರೆದಂತೆ ಕವಿಚರಿತೆಯಿಂದ ಗೊತ್ತಾಗುತ್ತದೆ. ಈ ಮೂರು ಗ್ರಂಥಗಳಲ್ಲಿ ಮಾತ್ರ ನೂರೊಂದು ವಿರಕ್ತರ ವಿಚಾರವನ್ನು ಕುರಿತು ಪ್ರಸ್ತಾಪಿಸಲಾಗಿದೆ.

* ಆಧಾರ:— ಡಾ|| ಆರ್. ಸಿ. ಹಿರೇಮಠ, ಎಂ.ಎ., ಪಿಎಚ್.ಡಿ., ಅವರು ಬರೆದಿರುವ 'ಷಟ್‌ಸ್ಥಲಪ್ರಭೆ' ಎಂಬ ಗ್ರಂಥ.

ಪ್ರೌಢರಾಯನ ಕಾವ್ಯದಲ್ಲಿ ಕೇವಲ ನಾಲ್ವರು ವಿರಕ್ತರ ಹೆಸರುಗಳನ್ನು ಕವಿ ಸೂಚಿಸಿರುತ್ತಾನೆ. ವಿರೂಪಾಕ್ಷ ಪಂಡಿತ ತನ್ನ ಚನ್ನಬಸವ ಪುರಾಣದಲ್ಲಿ ಹದಿಮೂರು ಮಂದಿ ವಿರಕ್ತರ ನಾಮಾವಳಿಯನ್ನು ಕೊಟ್ಟಿದ್ದಾನೆ. ಮೋದಿಯ ರುದ್ರಕವಿ ಮಾತ್ರ ತನ್ನ 'ನೂರೊಂದು ವಿರಕ್ತರ ಕಾವ್ಯ'ದಲ್ಲಿ ನೂರೊಂದು ವಿರಕ್ತರ ಹೆಸರುಗಳನ್ನೂ, ಅವರ ಪವಾಡಗಳನ್ನೂ ಚಿತ್ರಿಸಿರುತ್ತಾನೆ. ಈ ವಿರಕ್ತರೆಲ್ಲರೂ ವಿಜಯನಗರದ ಪ್ರೌಢದೇವರಾಯನ ಸಮಕಾಲೀನರು. ಆದರೆ, ಈ ಕಾಲದಲ್ಲಿಯೇ 'ಶಿವತತ್ತ್ವಚಿಂತಾಮಣಿ' ಕಾವ್ಯವನ್ನು ಬರೆದ ಲಕ್ಕಣ್ಣ ದಂಡೇಶನು ನೂರೊಂದು ವಿರಕ್ತರ ಮಾತನ್ನಾಗಲಿ, ಅವರ ಹೆಸರನ್ನಾಗಲಿ ಅವರಲ್ಲಿ ಹೇಳಿಲ್ಲ. ಇದರಂತೆಯೇ, ಅದೇಕಾಲದಲ್ಲಿದ್ದ ಚಾಮರಸ, ಮಗ್ಗೆಯ ಮಾಯಿದೇವ, ಜಕ್ಕಣಾರ್ಯ, ಕಲ್ಮಠದ ಪ್ರಭುದೇವ-ಇವರೇ ಮೊದಲಾದವರ ಕಾವ್ಯಕೃತಿಗಳಲ್ಲಿಯೂ ನೂರೊಂದು ವಿರಕ್ತರು ಸುಳಿದುಬಂದಿಲ್ಲ. ೧೦೧ ಎಂಬ ಸಂಖ್ಯೆ ವೀರಶೈವದ ಸ್ಥಲಕಟ್ಟುಗಳ ಒಂದು ವಿಭಜನಾಕ್ರಮವನ್ನು ಸೂಚಿಸುತ್ತದೆ. ಏಕೋತ್ತರ ಶತಸ್ಥಲಎಂಬ ಗ್ರಂಥವೊಂದಿದೆ. ಈಗಲೂ ಸಮಾಜದಲ್ಲಿ ನೂರೊಂದಯ್ಯನವರೆಂಬ ಮಾತು ಬಳಕೆಯಲ್ಲಿದೆ. ಈ ಸಂಖ್ಯೆಯನ್ನು ಗಮನದಲ್ಲಿಟ್ಟುಕೊಂಡು ಈ ವಿರಕ್ತರು ಲಿಂಗೈಕ್ಯರಾದಮೇಲೆ ಅವರಲ್ಲಿ ೧೦೧ ಜನರನ್ನು ಆರಿಸಿ 'ನೂರೊಂದು ವಿರಕ್ತರು' ಎಂಬ ಪದ ರೂಢಿಗೆ ಬಂದಿದೆಯೆಂದು ಭಾವಿಸಬಹುದು. ವೀರಶೈವಾಮೃತ ಮಹಾಪುರಾಣದಲ್ಲಿ (ಕ್ರಿ. ಶ. ೧೫೧೩) ಕವಿಮಲ್ಲಣಾರ್ಯನು ತೇರಸರು, ಷೋಡಶರು, ಅರುವತ್ತುಮೂವರು ಪುರಾತನರು ಇವರ ಒಂದೊಂದು ಗುಂಪನ್ನು ನಿರ್ದಿಷ್ಟವಾಗಿ ಹೇಳಿರುವಂತೆ ನೂರೊಂದು ವಿರಕ್ತರ ಗುಂಪನ್ನು ಅದರಲ್ಲಿ ಹೇಳಿರುವುದಿಲ್ಲ. ಆದ್ದರಿಂದ ಕ್ರಿ. ಶ. ೧೫೧೩ ರಿಂದ ಕ್ರಿ. ಶ. ೧೫೮೦ ರ ಮಧ್ಯಕಾಲದಲ್ಲಿ ನೂರೊಂದು ವಿರಕ್ತರ ಸಂಖ್ಯೆ ನಿರ್ಣಯವಾಗಿರಬಹುದೆಂದು ವಿದ್ವಾಂಸರು ತರ್ಕಿಸುತ್ತಾರೆ. ಸುಮಾರು ೧೬ ನೆಯ ಶತಮಾನದಲ್ಲಿ ವಿರಕ್ತಪಂಥ ಕನ್ನಡನಾಡಿನಲ್ಲಿ ಸ್ಥಾನ ಗೌರವವನ್ನು ಪಡೆಯಲು ಸಾಧ್ಯವಾಯಿತೆಂದು ತರ್ಕಿಸಬಹುದು. ವಿರಕ್ತರೇನೂ ಸಾಮಾನ್ಯರಲ್ಲ! ಅವರು ಕಲ್ಯಾಣಮಂಡಲದ ಶಿವಭಕ್ತರ ಸಂತಾನವೆನಿಸಿದವರು; ಕಲ್ಯಾಣದ ಶಿವಶರಣರ ಆದರ್ಶವನ್ನು ಜೀವಿಸಿದವರು; ಲಿಂಗಾಂಗ ಸಾಮರಸ್ಯವನ್ನು ಹೊಂದಿದವರು; ಜಂಗಮಸ್ಥಲವನ್ನೈದಿ, ಜೀವನದ ಅಸಾರತೆಯನ್ನು

ಡು, ಪರಮವೈರಾಗ್ಯಶೀಲರಾಗಿ ಪ್ರಭುವಿನ ಬೆಳಗನುಂಡು ಬೆಳಗಾದವರು ದು ಸಮಾಜ ಗೌರವಿಸುತ್ತಿತ್ತು. ವಿರೂಪಾಕ್ಷಪಂಡಿತನು—

"ಸುರಪನ ನಿಮಿತ್ತದಿಂದಿಳೆಯೊಳಗೆ ನೂರೊಂದು
ವರಗಣೇಶ್ವರರುದಿಸಿ ಜಂಗಮಸ್ಥಲವಾಂತು
ಪರಮ ಷಟ್ಸ್ಥಲವನುದ್ಧರಿಸಿ ಬಳಿಕವರಿರದೆ ನಿರವಯವನೈದಲೀಗ"

ದು ಚೆನ್ನಬಸವಪುರಾಣದಲ್ಲಿ ವಿರಕ್ತರಸ್ಥಾನಮಾನವನ್ನು ತಿಳಿಸಿರುತ್ತಾನೆ. ರೊಂದು ವಿರಕ್ತರೆಂದರೆ ಶಿವಭಕ್ತರ ಸಂತಾನ; ಜಂಗಮಸ್ಥಲವನ್ನು ಹೊಂದಿ ಟ್ಸ್ಥಲವನ್ನು ಉದ್ಧಾರಮಾಡಿದವರು ಎಂದು ವಿರೂಪಾಕ್ಷಪಂಡಿತ ಬಿಡಿಸಿ ಡಿಸಿ ಹೇಳಿರುತ್ತಾನೆ. ನೂರೊಂದು ವಿರಕ್ತರೂ ಕಲ್ಯಾಣಮಂಡಲದ ವಭಕ್ತರ ಸಂತಾನವೆನಿಸಿ ಜಂಗಮಸ್ಥಲವನ್ನು ಪಡೆದವರೇ ಹೊರತು ಜನ್ಮತಃ ಗಮ ವಂಶಜರಲ್ಲ; ವಿರಕ್ತವರ್ಗ ಪ್ರಾಚೀನ ಜಂಗಮವರ್ಗದಿಂದ ಪ್ರತ್ಯೇಕ ಥವಾಗಿಯೇ ಉದಯವಾಯಿತೆಂಬುದು ನಿರ್ವಿವಾದ! ಈ ನೂರೊಂದು ಕ್ತರ ತರುವಾಯ ಏಳನೂರು ವಿರತರು ಕನ್ನಡನಾಡಿನಲ್ಲಿ ಹುಟ್ಟಿ, ಧರ್ಮ ಸಾರಮಾಡಿದರೆಂದು ವಾಙ್ಮಯದಿಂದ ಗೊತ್ತಾಗುತ್ತದೆ. ಇವರಲ್ಲದೆ, ವಣ್ಣನವರಕಾಲದಲ್ಲಿಯೇ ಏಳುನೂರ ಎಪ್ಪತ್ತು ಅಮರಗಣಂಗಳು ಉದಯ ಗಿದ್ದರು. ಇವರನ್ನು ಪ್ರಮಥರೆಂದೂ ಕರೆಯುತ್ತಿದ್ದರು. ಬಸವಣ್ಣನವರ ಕಾಲೀನರಾದ ಏಳನೂರ ಎಪ್ಪತ್ತು ಅಮರಗಣಗಳಿಗೂ ತೋಂಟದ ದ್ಧಲಿಂಗಶಿವಯೋಗಿಯ ಶಿಷ್ಯರೆನಿಸಿದ ಏಳುನೂರು ವಿರತರಿಗೂ ಯಾವ ಬಂಧವೂ ಇಲ್ಲವೆಂಬುದನ್ನು ಮರೆಯಬಾರದು. ಪಾಲ್ಕುರಿಕೆಯ ಮನಾಥ ಮತ್ತು ಪಂಡಿತಾರಾಧ್ಯರು ತಮ್ಮ ತಮ್ಮ 'ಗಣಸಹಸ್ರನಾಮಾವಳಿ' ಲ್ಲಿ ಪ್ರಥಮಗಣ, ರುದ್ರಗಣ, ಯೋಗಾಚಾರ್ಯಗಣ, ತ್ರಿಷಷ್ಟಿಪುರಾತನಗಣ, ಡಶಗಣ, ತೇರಸಗಣ, ದಶಗಣ ಮತ್ತು ಅಮರಗಣ ಎಂದು ವಿವಿಧಗಣ ಂದಗಳನ್ನೂ ಆಯಾಗಣದ ಸಂಖ್ಯೆಯನ್ನೂ ಕೊಟ್ಟಿರುತ್ತಾರೆ. ಅದರಲ್ಲಿ ರೊಂದು ವಿರಕ್ತರು ಗಣವೃಂದವೆಂದು ಪರಿಗಣಿತರಾಗಿಲ್ಲ. ಬಸವಣ್ಣನವರ ಲದಲ್ಲಿ ವಿರಕ್ತಪಂಥ ರೂಪುಗೊಂಡಿರಲಿಲ್ಲವೆಂದು ನಿರ್ಧರವಾಗಿ ಹೇಳಬಹುದು. ರೊಂದು ವಿರಕ್ತರೇ ಬೇರೆ; ಏಳುನೂರಾಒಂದು ವಿರತರೇಬೇರೆ. ಏಳುನೂರಾ ದು ವಿರತರಲ್ಲಿ ತೋಂಟದ ಸಿದ್ಧಲಿಂಗರೇ ಪ್ರಮುಖರು. ಈ ವಿರತರ

ಹೆಸರುಗಳ ಸಂಪೂರ್ಣಪಟ್ಟಾವಳಿ ಎಲ್ಲಿಯೂ ದೊರೆಯುವುದಿಲ್ಲ. ಪ್ರೌಢದೇವರಾಯನಕಾಲವಾದಮೇಲೆ ಎಂದರೆ ಕ್ರಿ. ಶ. ೧೪೫೦ ರಿಂದ ಈ ಏಳುನೂರೊಂದು ವಿರತರ ಉದಯವಾಯಿತೆಂದು ಹೇಳಬಹುದು. ಪ್ರೌಢದೇವರಾಯನ ಅನಂತರ ವಿರೂಪಾಕ್ಷರಾಯನ ಆಳಿಕೆ ಕ್ರಿ. ಶ. ೧೪೮೦ ರಲ್ಲಿ ಮುಗಿಯಿತು. ಆಮೇಲೆ ಯಾವ ವಿರತರೂ ಉದಯವಾದಂತಿಲ್ಲ. ಆದ್ದರಿಂದ ಈ ಏಳುನೂರೊಂದು ವಿರತರಕಾಲ ಕ್ರಿ. ಶ. ೧೪೫೦ ರಿಂದ ೧೪೮೦ ಎಂದು ಊಹಿಸಬಹುದು. 'ನಿರಂಜನವಂಶರತ್ನಾಕರ' ದಂತೆ, ನೂರೊಂದು ವಿರಕ್ತರೂ ಗೋಸಲಸಿದ್ಧೇಶ್ವರರ ಕರಕಮಲ ಸಂಜಾತರೆಂದೂ, ಅವರ ಶಿಷ್ಯ ಶಂಕರಸ್ವಾಮಿಗಳು ವಿಜಯನಗರದ ಪ್ರೌಢರಾಯನಿಗೂ ನೂರೊಂದು ವಿರಕ್ತರಿಗೂ ಷಟ್ಸ್ಥಲ ಉಪದೇಶಮಾಡಿದರೆಂದೂ ಗೊತ್ತಾಗುತ್ತದೆ. ನಿರಂಜನ ವಂಶಾವಳಿಯಂತೆ ಗೋಸಲಸಿದ್ಧೇಶ್ವರರು ಹನ್ನೆರಡನೆಯವರು; ಶಂಕರಸ್ವಾಮಿಗಳು ಹದಿಮೂರನೆಯವರು. ಇವರು ತಮ್ಮ ಮೂಲವನ್ನು ಅನಾದಿಯೆಂದು ಸಾಧಿಸುತ್ತ ಬಂದರು. ಎಲ್ಲರೂ ಅನಾದಿಯೇ, ಎಲ್ಲವೂ ಅನಾದಿಯೇ. ಬಸವಣ್ಣನವರ ಕಾಲದಲ್ಲಿಯೇ ವಿರಕ್ತ ಪಂಥ ರೂಪುಗೊಂಡಿರಲಿಲ್ಲವೆಂಬುದನ್ನು ವಚನವಾಙ್ಮಯ ಸಮರ್ಥಿಸುತ್ತದೆ. ಈ ವಿರಕ್ತಪಂಥ ಪ್ರಾಚೀನ ಜಂಗಮ ಮಠಗಳನ್ನು ತಮ್ಮ ಕೇಂದ್ರಸ್ಥಾನಗಳನ್ನಾಗಿ ಮಾರ್ಪಡಿಸಿಕೊಂಡಿತು. ಈಗ ವಿರಕ್ತಪೀಠಗಳೆನಿಸಿರುವ ಆನಂದಪುರ ಮುರಘಾಮಠ, ಹುಬ್ಬಳ್ಳಿ ಮೂರುಸಾವಿರಮಠ, ಗದಗ ತೋಂಟದಾರ್ಯಮಠ ಇವು ಪ್ರಾಚೀನ ಜಂಗಮಪೀಠಗಳೆಂಬುದನ್ನು ಮರೆಯುವಂತಿಲ್ಲ. ಹದಿನೆಂಟನೆಯ ಶತಮಾನದಲ್ಲಿ ನೊಡಾಸಿದ್ಧಲಿಂಗದೇಶೀಕೇಂದ್ರ ಸ್ವಾಮಿಗಳು ತಮ್ಮ ನಿರಂಜನ ಪಟ್ಟವನ್ನು ಕುಮಾರದೇಶಿಕೇಂದ್ರ ಸ್ವಾಮಿಗಳಿಗೆ ವಹಿಸಿದರು. "ಆಗ ಭಕ್ತಜನರು ಇಮ್ಮಡಿ ಮುರುಗೇಂದ್ರ ದೇಶಿಕಸ್ವಾಮಿಗಳು ಕಾರಣತ್ವಕ್ಕೆ ಗುರುಗಳು, ಕುಮಾರದೇಶಿಕೇಂದ್ರಸ್ವಾಮಿಗಳು ಕಾರ್ಯತ್ವಕ್ಕೆ ಗುರುಗಳು ಎಂದು ಹೇಳಿ ಇಬ್ಬರನ್ನೂ ಸಿಂಹಾಸನಾರೂಢರನ್ನಾಗಿ ಮಾಡಿಸಿದರು. ಮೇಲೆ ನಿರ್ದೇಶಿಸಿದ ಚಿತ್ರದುರ್ಗದ ಶಾಖೆಗೆ ಸ್ವತಂತ್ರ ಅಸ್ತಿತ್ವ ಇಲ್ಲಿಂದ ಬಂದಿರಬಹುದೇ ? " ಎಂದು ಡಾ|| ಆರ್. ಸಿ. ಹಿರೇಮಠರವರು "ಷಟ್‌ಸ್ಥಲ ಪ್ರಭೆ" ಎಂಬ ಗ್ರಂಥದಲ್ಲಿ ತರ್ಕಿಸಿರುತ್ತಾರೆ. ಅವರ ಊಹೆ ಸರಿಯಾಗಿದೆ. ಆವರು ಚಿತ್ರದುರ್ಗದ ಮುರಘಾಮಠಕ್ಕಿಂತಲೂ ಪ್ರಾಚೀನವಾದ ಆನಂದಪುರ

ಮುರಘಾಮಠದ ವಿಚಾರವನ್ನೇ 'ಷಟ್‌ಸ್ಥಲಪ್ರಭೆ'ಯಲ್ಲಿ ಪ್ರಸ್ತಾಪಿಸಿರುವುದಿಲ್ಲ. ಭಕ್ತಜನರು ಇಮ್ಮಡಿ ಮುರಿಗೇಸ್ವಾಮಿಗಳನ್ನು ಕಾರಣಗುರುವೆಂದು ಅಂಗೀಕರಿಸಿದಂತೆ ನಿರಂಜನ ವಂಶರತ್ನಾಕರದಲ್ಲಿ ಉಕ್ತವಾಗಿರುವುದನ್ನು ಡಾ|| ಹಿರೇಮಠರವರು ಅವರ ಗ್ರಂಥದಲ್ಲಿ ಬಹುಶಃ ಉಲ್ಲೇಖಿಸಿರುತ್ತಾರೆಂದು ಊಹಿಸಬಹುದು. ಭಕ್ತಜನರು ಇಮ್ಮಡಿ ಮುರಿಗೇಸ್ವಾಮಿಗಳನ್ನು ಕಾರಣಗುರುವೆಂದು ಮನ್ನಿಸಲು ಕಾರಣವೇ ಇಲ್ಲ. ಮುರಿಗೇಸ್ವಾಮಿಗಳು ಕಟ್ಟಿಗೇಹಳ್ಳಿ ಸ್ವಾಮಿಗಳಿಗೆ ವಿರುದ್ಧವಾಗಿ ಹಠಮಾರಿತನದಿಂದ ಹೊರಟುಬಂದವರೆಂಬುದು ನಿಜವಾಗಿ ಕಾಣುತ್ತದೆ. ಒಂದು ಶಾಖೆಗೆ ಇಬ್ಬರು ಗುರುಗಳಾಗಿರಬೇಕಾದ ಪ್ರಮೇಯವೇ ಇರಲಿಲ್ಲ. ಇವರು ತಾವಾಗಿಯೇ ತಮ್ಮ ಮಠವನ್ನು ಚಿತ್ರದುರ್ಗದಲ್ಲಿ ನಿರ್ಮಿಸಿಕೊಂಡರು. ಇವರೂ ಮುರಘಾ ಸಮುದಾಯದವರಾದ್ದರಿಂದ ತಮ್ಮ ಮಠವನ್ನು ಮುರಘಾಮಠವೆಂದು ಕರೆದರು. ಇಪ್ಪತ್ತನೆಯ ಶತಮಾನದಲ್ಲಿ ಇದು ಮೂಲ ಮಠವನ್ನು ಮರೆಯಿಸಿ ಸ್ವತಂತ್ರಪೀಠವೆಂಬಂತೆ ವರ್ತಿಸಲು ಪ್ರಾರಂಭಿಸಿತು. ತನ್ನ ಪೀಠದ ಪ್ರಾಶಸ್ತ್ಯವನ್ನು ರೂಪಿಸಲು ಅಸಮರ್ಥನೀಯ ಕಥಾಜಾಲವನ್ನು ಹೆಣೆಯಿತು. ವಿರಕ್ತ ಪರಂಪರೆ ಹದಿನೈದನೆಯ ಶತಮಾನದಲ್ಲಿ ಬೆಳೆಯಿತೆಂದಮೇಲೆ ಇದು ಶರಣ ವೀರಶೈವದ ಅರ್ವಾಚೀನ ಶಾಖೆಯಾಯಿತೆಂಬುದನ್ನು ಒಪ್ಪಬೇಕಾಗಿದೆ. ವೀರಶೈವದ ಪಂಚಪೀಠಾಚಾರ್ಯ ಪರಂಪರೆ ಅನಾದಿ ಸಂಸಿದ್ಧವಾದುದು. ಆ ಪಂಚಪೀಠಗಳು ಇಂದಿಗೂ ನಿರ್ಬಾಧಿತವಾಗಿ ರಾರಾಜಿಸುತ್ತಿವೆ. ಮಹಾಕಾಳ ಉಜ್ಜಯಿನಿಪೀಠ ಈಗ ಅಸ್ತಿತ್ವದಲ್ಲಿರುವುದಿಲ್ಲ. ಹನ್ನೊಂದನೆಯ ಶತಮಾನದಲ್ಲಿ ಸಂಸ್ಥಾಪಿತವಾದ ಸದ್ಧರ್ಮ ಸಿಂಹಾಸನವೇ ಮಹಾಕಾಳ ಉಜ್ಜಯಿನಿ ಪೀಠದ ಪ್ರತಿರೂಪವೆಂದು ಹೇಳಬಹುದು. ಮರುಳಸಿದ್ಧಪೀಠ ಬಳ್ಳಾರಿ ಜಿಲ್ಲೆಯ ಉಜ್ಜಯಿನಿಯಲ್ಲಿ ಸ್ಥಾಪನೆಯಾಯಿತೆಂಬುದನ್ನು ಅಲ್ಲಗಳೆಯುವಂತಿಲ್ಲ ಆ ಪೀಠ ಕಾಲಾಂತರದಲ್ಲಿ ಸಿರಿಗೆರೆಯಲ್ಲಿ ನೆಲಸಿತು. ಆ ಪೀಠಕ್ಕೆ ಸೇರಿದ ಮಠದ ನೆಲ ಈಗಲೂ ಉಜ್ಜಯಿನಿಯಲ್ಲಿದೆಯೆಂದು ತಿಳಿದುಬರುತ್ತದೆ. ಆ ಪೀಠಾಚಾರ್ಯರೂ ಜಗದ್ಗುರುಗಳೆಂದು ಗೌರವಾನ್ವಿತರಾಗಿದ್ದಾರೆ.

ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನವರೂ ಚನ್ನಬಸವಣ್ಣನವರೂ ವೀರಶೈವವನ್ನು ನಾನಾಮುಖವಾಗಿ ಬೆಳಸಿದರು. ಅನಂತರ ನೂರೊಂದು ವಿರಕ್ತರ ಕಾಲದಲ್ಲಿ ಈ ಧರ್ಮ ಮತ್ತಷ್ಟು ಪುಷ್ಟಿಗೊಂಡಿತು. ಹದಿನೈದನೆಯ

ಶತಮಾನದಲ್ಲಿ ತೋಂಟದ ಸಿದ್ಧಲಿಂಗರಕಾಲದಲ್ಲಿ ವೀರಶೈವಧರ್ಮ ಪರಿಪೂರ್ಣ ಸ್ಥಿತಿಯನ್ನು ಪಡೆಯಿತು. ನಿರಂಜನವಂಶರತ್ನಾಕರವೆಂಬ ಹೆಸರಾಗಲಿ, ನಿರಂಜನ ವಂಶದರ್ಪಣ ಎಂಬ ಹೆಸರಾಗಲಿ ವಿರಕ್ತಪರಂಪರೆಯನ್ನು ಸೂಚಿಸುವುದಿಲ್ಲ. ಅವು ಪ್ರಾಚೀನ ಜಂಗಮ ಪರಂಪರೆಯನ್ನು ಉಲ್ಲೇಖಿಸುತ್ತಿವೆ. ಈ ಜಂಗಮ ಪರಂಪರೆಯನ್ನೇ ಹದಿನೈದನೆಯ ಶತಮಾನದಲ್ಲಿ ರೂಪುಗೊಂಡ ವಿರಕ್ತಪಂಥ ತನ್ನ ಪೂರ್ವ ಗುರುಪರಂಪರೆಯೆಂದು ಹೇಳಿಕೊಂಡುಬಂದಂತೆ ಕಾಣುತ್ತದೆ. ಬಸವಣ್ಣನವರ ಮಹಮನೆಯಲ್ಲಿದ್ದವರು ಲಕ್ಷತೊಂಬತ್ತಾರು ಸಾವಿರ ಜಂಗಮ ಗಣವೇ ಹೊರತು ವಿರಕ್ತಗಣವಲ್ಲವೆಂಬುದನ್ನು ನೆನಪಿನಲ್ಲಿಡಬಹುದು. ಈ ವಿರಕ್ತಪಂಥ ಶರಣಧರ್ಮವನ್ನು ಮೈಗೂಡಿಕೊಂಡು ತೋಂಟದ ಸಿದ್ಧಲಿಂಗರ ಕಾಲದಲ್ಲಿ ವೀರಶೈವದಲ್ಲಿ ಐಕ್ಯವಾಯಿತು. ವಿರಕ್ತ ಪಂಚಸಮಯಾಚಾರಗಳೂ ತಮ್ಮ ತಮ್ಮಲ್ಲಿಯೇ ಕಿತ್ತಾಡಿದುವು. ಇವು ತಮ್ಮ ತಮ್ಮ ಪೀಠಗಳನ್ನು ಸ್ಥಾಪಿಸಿಕೊಂಡವು; ಇಲ್ಲವೇ, ಪ್ರಾಚೀನ ಜಂಗಮ ಮಠಗಳನ್ನು ಅಥವಾ ಶರಣ ಮಠಗಳನ್ನು ಸೇರಿಕೊಂಡವು. ಅವು ತಾನು ಹೆಚ್ಚು ನಾನು ಹೆಚ್ಚು ಎಂದು ಸ್ಪರ್ಧಿಸಿದುವು. ಒಂದೊಂದು ಸಮಯಾಚಾರವೂ ಕುಲಹದಿನೆಂಟು ಜಾತಿ ಗಳನ್ನು ಲಿಂಗಧಾರಿಗಳನ್ನಾಗಿ ಮಾಡಿಕೊಂಡು ತನ್ನ ಶಿಷ್ಯವಲಯವನ್ನು ನಿರ್ಮಿಸಿತು! ಇವು ಸುಲಭವಾಗಿಯೇ ವೀರಶೈವವನ್ನು ಅವಲಂಬಿಸಲು ಬಸವಣ್ಣನವರ ಶರಣ ಧರ್ಮ ಸಿದ್ಧವಾಗಿತ್ತು. ಸನಾತನ ಪಂಚಮ ವೀರಶೈವ ಆಚಾರ್ಯ ಪೀಠಗಳು ಈ ಅತಿ ಜಾತಿಸಾಂಕರ್ಯವನ್ನು ಅಂಗೀಕರಿಸಿದಂತಿಲ್ಲ! ಲಿಂಗಧಾರಿಯಾದ ಯಾವ ಜಾತಿಯವರೇ ಆಗಲಿ ಆಯಾ ಜಾತಿಯ ಲಿಂಗಧಾರಿ ಗಳಾಗಿಯೇ ವೀರಶೈವದಲ್ಲಿಯೂ ನಿಲ್ಲುತ್ತಾರೆಂಬುದು ಆಚಾರ್ಯ ಸಂಪ್ರದಾಯ; ಲಿಂಗಧಾರಿಯಾದ ಯಾವಜಾತಿಯವರೇ ಆಗಲಿ ಪೂರ್ವ ಜಾತಿಯನ್ನುಳಿದು ಲಿಂಗವಂತನಾಗಿರುತ್ತಾನೆಂದು ಶರಣಧರ್ಮದ ನಂಬುಗೆ. ಇದು ಉದಾತ್ತ ಭಾವನೆ. ಆದರೆ, ಶರಣಧರ್ಮವನ್ನು ಅವಲಂಬಿಸಿದ ವಿರಕ್ತಪಂಥ ಬಸವಣ್ಣ ನವರ ಈ ಉದಾತ್ತ ತತ್ತ್ವವನ್ನು ಮನ್ನಿಸುತ್ತಿಲ್ಲವೆಂಬುದೇ ಪರಮಾಶ್ಚರ್ಯ! ಈ ವಿಚಾರದಲ್ಲಿ ವಿರಕ್ತರೂ ಗುರುವರ್ಗದವರ ದಾರಿಯಲ್ಲಿಯೇ ನಡೆಯುತ್ತಿ ದ್ದಾರೆ! ಇದು ಸರಿಯಲ್ಲ. ಬಸವಧರ್ಮಪರಿಪೋಷಕರು ಇದನ್ನು ಗಮನಿಸಿದರೆ ಸಮಾಜಕ್ಕೆ ಹಿತವಾದೀತು! ವಚನವಾಙ್ಮಯದಲ್ಲಿಯೂ ಪೂರ್ವಾಶ್ರಮ ನಿರಶನ

ಷ್ಟಂತೆ ಕಂಡುಬರುವುದಿಲ್ಲ. ಮಡಿವಾಳ ಮಾಚಯ್ಯ, ಅಂಬಿಗರ ಚೌಡಯ್ಯ, ಮಾದಾರಚನ್ನಯ್ಯ ಇವರೇ ಮೊದಲಾದವರನ್ನು ಶರಣರು 'ಅಯ್ಯ' ಎಂದು ಗೌರವಿಸಿದ್ದರೂ ಅವರವರ ಪೂರ್ವದ ಜಾತಿಯನ್ನು ಹಿಡಿದೇ ಕರೆದಿರುತ್ತಾರೆ! ಆ ಮನೋಧರ್ಮ 'ಅಂದೂ' ಇತ್ತೇನೋ! ಅದು 'ಇಂದೂ' ಕಾಣುತ್ತಿದೆ! ಇದು ಬಿಡಿಸಲಾರದ ಕಗ್ಗಂಟು!

ಬ್ರಾಹ್ಮಣಂ ತ್ರೀಣಿವರ್ಷಾಣಿ ಕ್ಷತ್ರಿಯಂ ವರ್ಷಷಟ್ಸು ಚ
ವೈಶ್ಯಂತು ನವವರ್ಷಾಣಿ ಶೂದ್ರಂದ್ವಾದಶವರ್ಷಾಣಿ ॥

ಎಂದರೆ, ಬ್ರಾಹ್ಮಣನನ್ನು ಮೂರುವರ್ಷ ಪರ್ಯಂತವೂ, ಕ್ಷತ್ರಿಯನನ್ನು ಆರುವರ್ಷ ಕಾಲವೂ, ವೈಶ್ಯನನ್ನು ಒಂಬತ್ತು ವರ್ಷಗಳ ವರೆಗೂ, ಶೂದ್ರನನ್ನು ಹನ್ನೆರಡು ವರ್ಷಗಳ ಅವಧಿಯುತನಕವೂ ಪರೀಕ್ಷಿಸಿ, ವೀರಶೈವೋಕ್ತಲಿಂಗ ಧಾರಣೆಯನ್ನು ಮಾಡಬಹುದೆಂದು ಶಿವಾಗಮಗಳಲ್ಲಿ ಹೇಳಿದೆ. ಅಂದು ಉತ್ತಮವರ್ಗದವರನ್ನು ಆಚಾರ್ಯ ಪಂಥ ತನ್ನಲ್ಲಿ ಸೇರಿಕೊಂಡು ಶಿವದೀಕ್ಷೆ ಮೊದಲಾದ ಸಂಸ್ಕಾರಮಾಡಿತು. ಇಂದು ವಿರಕ್ತಪಂಥ ಕೀಳುಜಾತಿಗಳನ್ನು ತನ್ನಲ್ಲಿ ಸೆಳೆದುಕೊಂಡು ಲಿಂಗಧಾರಣೆಯಿಂದ ಪವಿತ್ರಗೊಳಿಸಿತು. ಒಂದರಲ್ಲಿ ಸಂಸ್ಕಾರ ಬಲವಿದೆ; ಇನ್ನೊಂದರಲ್ಲಿ ಸಂಸ್ಕಾರಬಲವಿಲ್ಲ. ವಿರಕ್ತ ಸಂಪ್ರದಾಯದಲ್ಲಿ ಬೆಳೆದು ಗುರುಪಟ್ಟಾಂಕಿತರಾಗಿರುವ ಗುರುವರ್ಗದವರೂ ಶಿವಾಗಮ ಕಟ್ಟಳೆಯನ್ನು ಮೀರಿ ವರ್ತಿಸುತ್ತಿದ್ದಾರೆ! ಯಾರು ಬೇಕಾದರೂ ಲಿಂಗಧಾರಣೆಯಿಂದ ಪುನೀತರಾಗಬಹುದು. ಆದರೆ ಈ ಆಗಂತುಕ ಬಂಧುಗಳನ್ನು ಈ "ಗುರು ಸ್ವಾಮಿಗಳು" ತಮ್ಮ ಶಿಷ್ಯರಾಗಿಸಿಕೊಳ್ಳುತ್ತಾರೆಯೇ ಹೊರತು ಅವರನ್ನು ತಮ್ಮ 'ಸ್ವಾಮಿಗಳು' ಎಂದು ಗೌರವಿಸಲು ಅವಕಾಶ ಕೊಡುತ್ತಿಲ್ಲ! ಇದು ಬಸವಣ್ಣನವರ ಶರಣಧರ್ಮದಲ್ಲಿ ಕಳಂಕವಾಗಿ ನಿಂತಿದೆ. ನೂರೊಂದು ಶೂನ್ಯಸಿಂಹಾಸನಗಳಾದರೂ ಈ ಮೇಲು ಕೀಳು ಆಳವಾಗಿ ಸಮಾಜದಲ್ಲಿ ಬೇರುಬಿಡುತ್ತಿರುವುದೇ ದುರದೃಷ್ಟಕರ! ವೀರಶೈವದಲ್ಲಿ ಜಾತಿಗಳಿಲ್ಲವೆಂಬುದನ್ನು ಸಾಧಿಸುವುದಕ್ಕಾಗಿಯೇ ಶೂನ್ಯಸಿಂಹಾಸ ಹುಟ್ಟಿತು! ಬಸವಣ್ಣನವರು ಬೌದ್ಧರ ಶೂನ್ಯತತ್ತ್ವವನ್ನು ಮಾರ್ಪಡಿಸಿ, ನಾಸ್ತಿಕತೆಯಿಂದ ಸಮಾಜವನ್ನು ಉದ್ಧಾರಮಾಡಿದರು. ಶೂನ್ಯವೆಂದರೆ ಸಕಲ ಸೃಷ್ಟಿಶಕ್ತಿಯ ಮೂಲ ಮತ್ತು ಆಸೃಷ್ಟಿಶಕ್ತಿಯ ಅಂತ್ಯವೆಂಬುದನ್ನು ಕನ್ನಡನಾಡಿನಲ್ಲಿ ಕನ್ನಡ ನುಡಿಯಲ್ಲಿ ಬೋಧಿಸಿ ಶರಣರು

ಸಮಾಜದಲ್ಲಿ ಆಸ್ತಿಕಮನೋಭಾವವನ್ನು ಬೆಳಸಿದರು. ಈ ತತ್ತ್ವ ಪ್ರಚಾರ ವ್ಯವಸ್ಥೆಯಲ್ಲಿ ನಿರತರಾದವರೇ ಜಂಗಮರು. ಅವರು ನೆಲಸಿದ ಕೇಂದ್ರಗಳೇ ಮಠಗಳು. ಅವರು ಬೋಧಿಸಿದ ತತ್ತ್ವವೇ ಶೂನ್ಯತತ್ತ್ವ; ಆ ಮಠಗಳೇ ಶೂನ್ಯ ಪೀಠಗಳು. ಬಸವಣ್ಣನವರ ಹಿಂದಿನಕಾಲದಿಂದಲೂ ಈ ಶೂನ್ಯತತ್ತ್ವ ವಿಚಾರವೇತ್ತರ ಶ್ರೇಣಿ ಬೆಳೆದುಬಂದಿದೆ. ಅವರೇ ನಿರಂಜನ ವಂಶಜರು. ಬಸವಣ್ಣನವರಿಗಿಂತಲೂ ಹಿಂದೆ ಪ್ರಮಥಗಣ, ರುದ್ರಗಣ, ಯೋಗಾಚಾರ್ಯ ಗಣ, ತ್ರಿಷಷ್ಟಿ ಪುರಾತನಗಣ, ಷೋಡಶಗಣ, ತೇರಸಗಣ ಮತ್ತು ದಶಗಣ-ಎಂಬ ವಿವಿಧ ವರ್ಗದ ಜಂಗಮ ಗಣಗಳು ಈ ಶೂನ್ಯ ತತ್ತ್ವಜ್ಞಾನವನ್ನು ಅರಿತು, ಆಚರಿಸಿ, ಬೋಧಿಸಿದರು. ಏಳನೂರಾ ಎಪ್ಪತ್ತು ಅಮರಗಣ ಬಸವಣ್ಣನವರ ಕಾಲದಲ್ಲಿತ್ತು.

ಆಗ ವಿರಕ್ತಗಣ ರೂಪುಗೊಂಡಿರಲಿಲ್ಲ ಹದಿನೈದನೆಯ ಶತಮಾನದಲ್ಲಿ ನೂರೊಂದು ವಿರಕ್ತರೆಂಬ ಸಂಕೇತ ಪ್ರಚಾರದಲ್ಲಿ ಬಂತು. ವಿರಕ್ತರು ಜಂಗಮ ಸ್ಥಲವನ್ನು ಪಡೆದರು; ವಿರತರು ಜನ್ಮತಃ ಕಾರಣ ಜಂಗಮರು. ಎಡೆಯೂರು ಸಿದ್ಧಲಿಂಗರು ಗುರುಜಂಗಮಸ್ಥಲ ಮಠಗಳಿಂದ ಪ್ರತ್ಯೇಕವಾಗಿರುವಂತೆ ವಿರಕ್ತ ಮಠಗಳನ್ನು ವ್ಯವಸ್ಥೆಗೊಳಿಸಿದರು. ಅಂದಿನಿಂದ ವಿರಕ್ತಮಾರ್ಗ ವೀರಶೈವದಲ್ಲಿ ಒಂದು ವಿಶಿಷ್ಟ ಪಂಥವಾಯಿತು. ಶೂನ್ಯ ತತ್ತ್ವವೆಂದರೆ ಎಡೆಯೂರು ಸಿದ್ಧಲಿಂಗ ಶಿವಯೋಗೀಶ್ವರರೆಂದೂ, ಸಿದ್ಧಲಿಂಗೇಶ್ವರರೆಂದರೆ ಸರ್ವಶೂನ್ಯ ನಿರಾಲಂಬ ಶೂನ್ಯ ತತ್ತ್ವವೆಂದೂ ವೀರಶೈವ ಸಾಧಕರು ಅರಿತರು; ವಿರಕ್ತರು ಒಪ್ಪಿದರು. ಈ ಶೂನ್ಯ, ನಿರಾಲಂಬ ಶೂನ್ಯ ಸಿಂಹಾಸನ ಪರಂಪರೆಯಲ್ಲಿ ಎಲ್ಲ ವಿರಕ್ತಮಠಗಳೂ ಸೇರಿರುತ್ತವೆ. ಸಿದ್ಧಗಂಗೆ, ಶಿವಗಂಗೆ, ಹರದನಹಳ್ಳಿ ವಿರಕ್ತ ಮಠಗಳು ದಕ್ಷಿಣ ಮೈಸೂರು ಪ್ರಾಂತದಲ್ಲಿ ಅತಿ ಪ್ರಾಚೀನ ಶೂನ್ಯಸಿಂಹಾಸನ ಮಠಗಳಾಗಿರುತ್ತವೆ. ಹದಿನಾರನೆಯ ಶತಮಾನದಲ್ಲಿ ಆನಂದಪುರಮಠ ಮುರಘ ಸಂಪ್ರದಾಯದ ವಿರಕ್ತ ಪೀಠವಾಯಿತು. ಅನಂತರ ಹದಿನೆಂಟನೆಯ ಶತಮಾನದಲ್ಲಿ ಚಿತ್ರದುರ್ಗದ ಮುರಘ ವಿರಕ್ತಮಠ ಆನಂದಪುರ ವಿರಕ್ತಮಠದ ಪ್ರತಿ ಮಠವಾಗಿ ಸ್ಥಾಪನೆಯಾಯಿತು. ಜಗದ್ಗುರು ಪಂಚಾಚಾರ್ಯರೂ ಶೂನ್ಯ ತತ್ತ್ವ ಪ್ರತಿಪಾದಕರೇ ಆಗಿರುತ್ತಾರೆ. ಬಸವಣ್ಣನವರು ಅಂಥ ಆಗಮೋಕ್ತವೀರಶೈವ ಧರ್ಮೋದ್ಧಾರಕರಾಗಿರುತ್ತಾರೆ. ಅವರು ಕ್ರಿಯಾಜ್ಞಾನ

ಸಂಸ್ಕಾರದಿಂದ ಪರಿಶುದ್ಧನಾದ ಶ್ವಪಚನನ್ನೂ ಶರಣನೆಂದು ಮನ್ನಿಸಿದರು. ಅಂಥವರೊಂದಿಗೆ ಭಿನ್ನಭೇದವಿಲ್ಲದೆ ವ್ಯವಹರಿಸಿದರು. ಅಂಥವರಲ್ಲಿಯೂ ಗುರುಗಳುಂಟು, ಜಂಗಮರುಂಟು; ವಿರಕ್ತರುಂಟು; ಮಠಗಳುಂಟು. ಎಂದ ಮೇಲೆ ವೀರಶೈವದಲ್ಲಿ ಬಸವಣ್ಣನವರು ಕೆಲವರನ್ನು ಶುದ್ಧರೆಂದೂ, ಕೆಲವರನ್ನು ಅಶುದ್ಧರೆಂದೂ ಪರಿಗಣಿಸಲಿಲ್ಲ. ಅವರು ಶಿವಾಚಾರದಲ್ಲಿ ಸಹ ಪಂಙ್ತಿಭೋಜನ, ವಿವಾಹ ಮತ್ತು ಗುರುಜಂಗಮ ಪಟ್ಟ ಮೊದಲಾದ ಎಲ್ಲ ಧಾರ್ಮಿಕ ವ್ಯವಹಾರ ಗಳೂ ಭೇದವಿಲ್ಲದೆ ನಡೆಯುವಂತೆ ಸಂಯೋಜಿಸಿದರು. ಇದು ಶರಣಧರ್ಮದ ಸಂಪ್ರದಾಯ. ಹೊಲೆಯನಾದರೂ ಜ್ಞಾನಿಯಾದರೆ ಅವನನ್ನು ಗುರುವೆಂದು ಸೇವಿಸುತ್ತೇನೆಂದು ಶ್ರೀ ಶಂಕರಾಚಾರ್ಯರು ಹೇಳಿರುತ್ತಾರೆ. ಮಹಾತ್ಮರು ಯಾವುದೇ ಒಂದು ಜಾತಿಯಲ್ಲಿ ಹುಟ್ಟುವುದಿಲ್ಲ. ಅವರು ಯಾವ ಜಾತಿಯಲ್ಲಿ ಯೂ ಹುಟ್ಟುತ್ತಾರೆ. ಅವರವರ ಸಂಸ್ಕಾರಬಲದಿಂದ ಅವರವರು ಸಂಪೂಜ್ಯ ರೆನಿಸಿಕೊಳ್ಳುತ್ತಾರೆ. ಹಾನಗಲ್ಲು ಶ್ರೀ ಕುಮಾರಸ್ವಾಮಿಗಳಂಥ ಜಂಗಮ ಪುಣ್ಯರಾಗಲಿ, ಚಿತ್ರದುರ್ಗದ ವಿರಕ್ತಪಟ್ಟ ಭದ್ರರಾದ ಶ್ರೀ ಜಯದೇವ ಸ್ವಾಮಿಗಳಂಥ ವಿರಕ್ತವರ್ಯರಾಗಲಿ ಬಸವಣ್ಣನವರ ಈ ದಿವ್ಯ ತತ್ತ್ವವನ್ನು ಅವರ ದಿವ್ಯಜೀವನವನ್ನು ಅರಿಯದಾದುದು ದುರದೃಷ್ಟಕರ! ಈ ಆಧುನಿಕ ಕಾಲದಲ್ಲಿಯೂ ತಾನೇ ಶ್ರೇಷ್ಠನೆಂಬ ಅಹಂಕಾರದಿಂದ ಬೀಗುವ ವಿರಕ್ತರೂ ಇದ್ದಾರೆ. ಇದು ಅವರ ಪೂರ್ವಜನ್ಮ ಸಂಸ್ಕಾರದ ಫಲ! ಅನೇಕ ವಿರಕ್ತಮಠ ಗಳಲ್ಲಿ ಶರಣಧರ್ಮ ವಾತಾವರಣವಿಲ್ಲ. ಅಂಥ ವಿರಕ್ತರಸ್ಥಿತಿ 'ಅಲ್ಪರಸಂಗ ಅಭಿಮಾನಭಂಗ' ಎಂಬಂತಾಗಿದೆ! ಅಂಥ ಮಠದ ಗದ್ದುಗೆ ಅಲ್ಲಾಡುತ್ತಿದೆ! ಜಾತ್ಯಭಿಮಾನದಬಲ ಬಲವಲ್ಲ! ಅಲ್ಪರ ನೆರವು ರಕ್ಷಣೆಯಲ್ಲ! ಅದು ಮಣ್ಣಿನ ಕೋಟೆಯಿದ್ದಂತೆ! ಕಲ್ಲಿನ ಪೌಳಿಯಿದ್ದಂತೆ! ಇದು ವಿಜ್ಞಾನಯುಗ! ವಿಮಾನ ಯುಗ! ಅಣುಶಕ್ತಿಯುಗ! ಕಲ್ಲುಮಣ್ಣಿನ ಕೋಟೆಯಾಗಲಿ, ನೀರುತುಂಬಿದ ಕಂದಕವಾಗಲಿ ರಕ್ಷಣಾಸಾಧನಗಳಲ್ಲ! ಸಮಾಜ ಪುರುಷ ವಿರಾಡ್ರೂಪದಿಂದ ಮೆರೆಯುತ್ತಿರುತ್ತಾನೆ. ಅವನಲ್ಲಿ ಆತ್ಮಶಕ್ತಿ ಬೆಳೆದಿದೆ; ಅಧ್ಯಾತ್ಮಬಲ ತುಂಬಿದೆ! ಅವನು ಎಗ್ಗನಲ್ಲ! ಶಾಸ್ತ್ರಗಳನ್ನು ಬಲ್ಲ! ಶಸ್ತ್ರಗಳನ್ನೂ ಬಲ್ಲ! ನೀತಿಯನ್ನು ಬಲ್ಲ! ನಿಯಮವನ್ನೂ ಬಲ್ಲ! ಅವನು ಆತ್ಮಲಿಂಗವನ್ನು ಅರಿತಿದ್ದಾನೆ! ಭಾವಲಿಂಗವನ್ನು ನೋಡಿದ್ದಾನೆ! ಇಷ್ಟಲಿಂಗವನ್ನು ಕಂಡಿದ್ದಾನೆ! ಅವನ

ಮನಸ್ಸಂಕಲ್ಪವೇ ಅವನ ವಿಮಾನ! ಅವನ ಆತ್ಮಶಕ್ತಿಯೇ ಅವನ ಅಣುಶಕ್ತಿ! ಅವನ ವಿದ್ಯಾಬಲವೇ ಅವನ ರಾಕೆಟ್! ಅವನು ಕಲ್ಲು ಮಣ್ಣಿನ ಕೋಟೆಯನ್ನು ಮೀರಿನಿಂತಿದ್ದಾನೆ! ಸಮಾಜದಲ್ಲಿ ಆ ಪಂಗಡ, ಈ ಪಂಗಡ ಎಂಬ ಭೇದವನ್ನು ಬಿತ್ತಿ, ತಾನು ಸರ್ವೋತ್ತಮನೆಂದು ಯಾವ ವಿರಕ್ತನೂ ತರುಣ ಜನಾಂಗವನ್ನು ಹಾದಿತಪ್ಪಿಸಲಾರ! ಹಿರಿಯರನ್ನು ವಂಚಿಸಲಾರ! ನಿಜ ವಿರಕ್ತನ ಶ್ರೀಪಾದವನ್ನು ಸಮಾಜ ಪೂಜೆಮಾಡೀತು! ತಪಶ್ಶಕ್ತಿಯಿಲ್ಲದ ವಿರಕ್ತ ಎಷ್ಟು ದೊಡ್ಡಮಠದಲ್ಲಿ ದ್ದರೇನು! ಎಷ್ಟು ಧನವಂತನಾದರೇನು! ಎಂಥ ಉನ್ನತಾಸನದಲ್ಲಿ ಕುಳಿತರೇನು! ಸತ್ಪುರುಷರೂ, ಶಾಸ್ತ್ರವಿದರೂ ಅವನನ್ನು ಮೆಚ್ಚರು! "ಕೋತಿ ಕೊಟಕೊಟ ಕೊಮ್ಮಲನುಂಟೆನೇಮಿ! ಸಿಂಹ ಶಾರ್ದೂಲಂಬುಲು ದಿಗವನುಂಟನೇಮಿ! ಅಲ್ಪಡುದ್ದಂಡ ಮಂಚಮೆಕ್ಕಿತೆನೇಮಿ! ಪಂಡಿತಡ್ಡೈನವಾಡು ದಿಗವನುಂಟೆ ನೇಮಿರಾ ವಿಶ್ವತಾಭಿರಾಮ ವಿನರವೇಮಾ!"

ಎಂದು ಮಹಾತ್ಮವೇಮನಯೋಗಿ ದುರಭಿಮಾನಿಗಳನ್ನು ಕುರಿತು ತೆಲುಗಿನಲ್ಲಿ ಹೇಳಿದ್ದಾನೆ. "ಕೋತಿ ಮರದ ಕೊಂಬೆಯ ಕೊನೆಯಲ್ಲಿ ಕುಳಿತಿದ್ದರೇನು? ಅದು ಶಾಖಾಮೃಗವೇ; ಸಿಂಹಶಾರ್ದೂಲಗಳು ಕೆಳಗಿದ್ದ ರೇನು? ಅವು ವೀರಜೀವಿಗಳೇ; ಅಲ್ಪರು ಯಾವ ಸಿಂಹಾಸನದಮೇಲೆ ಕುಳಿ ತರೇನು? ಅವರು ಅಲ್ಪರೇ; ಪ್ರಾಜ್ಞರು ನೆಲದಮೇಲೆ ಮಂಡಿಸಿದರೇನು? ಅವರು ಪ್ರಾಜ್ಞರೇ." ಎಂದು ಆ ಯೋಗಿವರೇಣ್ಯ ಸುಂದರವಾಗಿ ಹೇಳಿದ್ದಾನೆ. ಬಸವಣ್ಣನವರ ಧರ್ಮ ಸರ್ವಸಮಾನತೆಯನ್ನು ಪ್ರತಿಪಾದಿಸುತ್ತದೆ. ಅಂಥ ಧರ್ಮಪುರುಷನೇ ಅಂದು ಶೂನ್ಯ ಸಿಂಹಾಸನದಮೇಲೆ ಮಂಡಿಸಿದನು. ಆ ಧರ್ಮ ಪುರುಷ ಗುರುವೇ ಆಗಲಿ, ಜಂಗಮನೇ ಆಗಲಿ, ವಿರಕ್ತನೇ ಆಗಲಿ, ಭಕ್ತನೇ ಆಗಲಿ ಅವನು ಪಡೆದ ಸಂಸ್ಕಾರಬಲದಿಂದ ಅವನು ಪೂಜಾರ್ಹ! ಇದು ಬಸವಧರ್ಮ ಹೃದಯ. ಆ ದೃಷ್ಟಿಯಿಂದಲೇ ಬಸವಣ್ಣನವರು ಸಂಸ್ಥಾಪಿಸಿದ ಶೂನ್ಯ ಸಿಂಹಾಸನಪಟ್ಟ ಯಾರೊಬ್ಬರ ಅಥವಾ ಯಾವುದೊಂದು ಪಂಗಡದ ಲೀಲಾರಂಗವಲ್ಲ. ಶೂನ್ಯ ಸಿಂಹಾಸನದಲ್ಲಿ ಮಂಡಿಸಿದ ಸಿರಾಭಾರಿ ಪರಂಪರೆ ಯೆಲ್ಲಾ ಯಾವುದೋ ಒಂದು ವಿಶಿಷ್ಟ ಪ್ರಭೇದ ಸಂಜಾತರಲ್ಲ. ಅಲ್ಲಮರು ಮದ್ದಳೆಬಾರಿಸುವ ಕಾಯಕದ ಕುಲದವರು; ಅವರನ್ನು ನಟವರಜಾತಿಯವ ನೆಂದೂ ಹೇಳುತ್ತಾರೆ; ಅವರು ಕುಲಜಾತಿಗಳಿಲ್ಲದ ನಾಥಸಿದ್ಧನೆಂದೂ ಭಾವಿಸು

ತ್ತಾರೆ. ಚನ್ನಬಸವಣ್ಣನವರಂತೂ ವೈದಿಕ ಕುಲದ ಬ್ರಾಹ್ಮಣನೂ ಅಲ್ಲ; ಪ್ರಮಥಕುಲದ ವೀರಶೈವನೂ ಅಲ್ಲ. ಅವರು ಹೇಳಿಕೇಳಿ ಶರಣಕುಲಸಂಜಾತ! ತಾಯಿ ಅಕ್ಕನಾಗಮ್ಮ ಕಮ್ಮೆ ಕುಲದ ಬ್ರಾಹ್ಮಣಿತಿ! ತಂದೆ ಶಿವಸ್ವಾಮಿ ಶರಣ ವಂಶಜ! ಡೋಹರ ಕಕ್ಕಯ್ಯನ ಪ್ರಸಾದದ ಅಂಶದಿಂದ ಆವನು ಹುಟ್ಟಿದವ ನೆಂದೂ ನಂಬುತ್ತಾರೆ. ಕಕ್ಕಯ್ಯನಜಾತಿ ಯಾವುದು? ಶರಣರಜಾತಿ! ಸಿದ್ಧರಾಮರಂತೂ ಕುಡು ಒಕ್ಕಲಿಗರಜಾತಿ. ಚಿತ್ರದುರ್ಗದ ಮುರಘಾಮಠದ ಮೂಲ ಪುರುಷ ಎಂದರೆ ಪೂರ್ವಾಶ್ರಮದ ರುದ್ರಪ್ಪ ಎಂಬುವನು ಶಿವಭಕ್ತ ಸಂತಾನ. ಆತನೇ ಚಿತ್ರದುರ್ಗ ವಿರಕ್ತಮಠದ ಎರಡನೆಯ ಮುರಿಗೀಸ್ವಾಮಿ ಗಳಾದರು. ಈಮಠದ ವಿರಕ್ತ ಪರಂಪರೆಯಲ್ಲಿ ಹದಿನೆಂಟನೆಯ ರಾಚೋಟಸ್ವಾಮಿ ಎಂಬುವರು ಹೊಳಲಕೆರೆ ಪ್ರಾಂತದ ವೀರಶೈವ ಸಾದರ ಪಂಗಡದವರೆಂದು ಖಚಿತವಾಗಿ ತಿಳಿದುಬರುತ್ತದೆ. ಇನ್ನುಳಿದವರೆಲ್ಲಾ ಪಂಚಮ ವೀರಶೈವದ ಭಿನ್ನ ಪ್ರಭೇದದವರಾಗಿರುತ್ತಾರೆ ಈ ಪ್ರಭೇದಗಳವರನ್ನು ಗುರುಸ್ಥಲದವ ರೆಂದು ಕರೆಯುತ್ತಾರೆ. ಇವರಲ್ಲಿ ಜಂಗಮ ಪ್ರಭೇದವೂ ಒಂದು. ಇವರಲ್ಲಿ "ಅಯ್ಯಾಚಾರ" ದವರು ಜಂಗಮರಾದರು; "ಅಪ್ಪಾಚಾರದವರು" ಗುರುಸ್ಥಲದವರಾದರು! ಈ 'ಅಯ್ಯ' 'ಅಪ್ಪ' ಸಹಜಾತರೇ. ಅಯ್ಯಾಚಾರ ಅಪ್ಪಾಚಾರಕ್ಕಿಂತ ಹೆಚ್ಚಿನದೆಂದು ಹೇಳುವುದು ಆಧಾರ ರಹಿತವಾದುದು.

'ಅಯ್ಯಾಚಾರ' ಬಂಗಾರದ ಉಂಗುರವಾದರೆ 'ಅಪ್ಪಾಚಾರ' ಬಂಗಾರದ ಮುದ್ರಾರವಾಗಿದೆ; ಅಷ್ಟೇ. ಎರಡೂ ಸುವರ್ಣಮೂಲದಿಂದ ರೂಪುಗೊಂಡ ಆಭರಣಗಳೇ. ವೃತ್ತಿಭೇದವೇ ಹೊರತು ಜಾತಿ ಭೇದವಿಲ್ಲ. ಶರಣಪಂಥ ಸ್ಥಾಪಕರೂ ಬಸವಣ್ಣನವರು ಇದೇ ತತ್ತ್ವವನ್ನು ಪ್ರತಿಪಾದಿಸಿದರು. ಹೀಗಿದ್ದರೂ ಕೆಲವರು ಅಮರಕೋಶ ಪಂಡಿತರು ಸಮಾಜದಲ್ಲಿ ಭಕ್ತ-ಮಾಹೇಶ್ವರ ಎಂಬ ಎರಡು ವರ್ಗಗಳನ್ನು ಕಲ್ಪಿಸಿಕೊಂಡು ಮಾತನಾಡುತ್ತಾರೆ. ಶರಣಧರ್ಮ ವನ್ನು ಒಪ್ಪುವುದಿಲ್ಲ. ಸಮಾಜದ ಪಂಚಮ ವೀರಶೈವರು 'ಆರಾಧ್ಯ' ಎಂಬ ಪ್ರತ್ಯಯವನ್ನು ತಮ್ಮ ಹೆಸರಿಗೆ ಸೇರಿಸಿಕೊಳ್ಳುವುದರಿಂದ ಅವರಿಗೆ ಯಾವ ಶ್ರೇಷ್ಠತ್ವವೂ ಬರುವುದಿಲ್ಲ. ಅದೊಂದು 'ಫ್ಯಾಷನ್' ಆಗಿದೆ; ಅಷ್ಟೆ. ಆರಾಧ್ಯ ಪಂಗಡವೇ ಪ್ರತ್ಯೇಕ. ಅವರು ಆಗಂತುಕರು;ವಂಶ್ಯ ವೀರಶೈವರಲ್ಲ. ಶರಣಧರ್ಮದಲ್ಲಿ ಈ ಬಗೆಯ ವ್ಯತ್ಯಾಸಗಳಿಗೆ ಎಡೆಯಿಲ್ಲ. ಪಂಚಮವೀರಶೈವ

ವನ್ನು ಪ್ರಾಚೀನಕಾಲದಲ್ಲಿ ಜಂಗಮರೆಂದೇ ಕರೆಯುತ್ತಿದ್ದರೆಂದು ಸಾಹಿತ್ಯದಿಂದ ತಿಳಿದುಬರುತ್ತದೆ. ಜಾತಿಸೂಚಕ 'ಜಂಗಮ' ಪದ ಒಂದು; ಸ್ಥಲಸೂಚಕ 'ಜಂಗಮ' ಪದ ಒಂದು. ಈ ಎರಡು ಪದಗಳು ಆಯಾಸ್ಥಾನ ಗೌರವಗಳನ್ನು ಬೇರೆ ಬೇರೆಯಾಗಿಯೇ ಹೊಂದುತ್ತವೆ. ಜಂಗಮ ಪ್ರಭೇದದವರೂ ಭಕ್ತರೇ. ಅವರೂ ಷಟ್‌ಸ್ಥಲ ಸಾಧನೆಯಲ್ಲಿ ನಿಲ್ಲಬೇಕು. ಜಂಗಮಸ್ಥಲ ಸಾಧನೆಯಿಂದ ಸಿದ್ಧಿ ದೊರಕ್ಕುದು. ಯಾವ ಪಂಗಡದವರಾದರೂ ಜಂಗಮಸ್ಥಲವನ್ನು ಪಡೆಯ ಬಹುದು. ಈ ಜಂಗಮ ಪ್ರಭೇದವೇ ಬೇರೆ; ಜಂಗಮಸ್ಥಲವೇ ಬೇರೆ. ಈ ಜಂಗಮ ಪ್ರಭೇದದಲ್ಲಿ ಹಲವಾರು ಜಾತಿಗಳಿವೆ. ಘಡಿಮರಿ, ಎಂದರೆ ಶವಸಂಸ್ಕಾರದ ಕಾಯಕದವರು, ಅರ್ಚಕರು, ಕಂಬಿಹೊರುವವರು, ಮಠಪತಿ, ಗಣಾಚಾರಿ, ತಮ್ಮಡಿಗಳು, ಕಂತೆಧರಿಸುವ ಕಾರ್ಯಕದವರು, ಮುಳ್ಳಾವುಗೆ ಕಾಯಕದವರು, ಶಿವಾಲಯಗಳಲ್ಲಿ ಶಿವಲಿಂಗ ಪೂಜೆಗೆ ನೀರು ಹೂ ಪತ್ರೆಗಳನ್ನು ತರುವ ಕಾಯಕದವರು, ಜಂಗುಧಂಸಿ 'ಕೋರಾಣ್ಯ' ಮಾಡುವವರು-ಇವರೇ ಮೊದಲಾದ ಅನೇಕ ವರ್ಗಗಳಿವೆ. ಶ್ರೀಶೈಲಪ್ರಾಂತದಲ್ಲಿ ಜಂಗಾಲರೆಂಬ ಭವಿಗಳಿದ್ದಾರೆ. ಅವರು ಭಿಕ್ಷಾಟನೆಯಿಂದಲೂ ಜೀವಿಸುತ್ತಾರೆ. ಅವರು ತಮ್ಮನ್ನು 'ಜಂಗಮ' ರೆಂದು ಹೇಳಿಕೊಳ್ಳುತ್ತಾರೆ. ಭಿಕ್ಷಾವರ್ತಿ ಪಂಗಡದವರು ಶ್ರೀಶೈಲಮಲ್ಲಿಕಾರ್ಜುನ ಸ್ವಾಮಿಯ ಅರ್ಚಕರು; ಸಾರಂಗಮಠದವರು ಕೂಡಲ ಸಂಗಮ ಕ್ಷೇತ್ರದಲ್ಲಿ ಶಿವಲಿಂಗಪೂಜೆಗೆ ಮಡಿನೀರು ತರುತ್ತಿದ್ದ ಮೋಳ್ಬಾವುಡ ಪ್ರಭೇದದವರು. ಅವರೇ ಮಳೆಯುಬಗೆಯುವರಾದರು. ನಾಗರಿಕತೆ ಬೆಳೆದಂತೆ ಈ ಪಂಗಡಗಳವರೆಲ್ಲಾ ಸುಧಾರಿಸಿದರು. ಗುರುವಿರಕ್ತಮಠಗಳಿಗೆ ಸ್ವಾಮಿಗ ಳಾದರು. "ಜಂಗಮಕ್ಕೆ ಕುಲವಿಲ್ಲ; ಲಿಂಗಕ್ಕೆ ಹೊಲೆಯಿಲ್ಲ" ಎಂಬ ಲೋಕೋಕ್ತಿಯಿದೆ. ಜಂಗಮ ಪ್ರಭೇದದವರಲ್ಲಿ ಎಲ್ಲ ಕುಲಜಾತಿಗಳವರೂ ಇದ್ದಾರೆ.

ಇಂದು ಸಮಾಜದಲ್ಲಿ "ಬೇಸಾಯಮಾಡಿದರೆ ಭದ್ರಪ್ಪಗೌಡ; ಅಂಗಡಿ ಇಟ್ಟರೆ ಭದ್ರಪ್ಪಶೆಟ್ಟಿ; 'ವಚನ' ಕಲಿತರೆ ಭದ್ರಪ್ಪಯ್ಯ 'ಕೋರಾಣ್ಯ' ಮಾಡಿದರೆ ಭದ್ರಪ್ಪದೇವರು; ಅಮರ ಓದಿದರೆ ಭದ್ರಪ್ಪಾರಾಧ್ಯ; ಎಲ್ಲಾ ಬಿಟ್ಟು ಮಠಸೇರಿದರೆ ಶ್ರೀಮನ್ನಿರಂಜನ ಭದ್ರರಾಜೇಂದ್ರ ಮಹಾಸ್ವಾಮಿ "ಎಂಬ ಪರಿಪಾಠ ಕಂಡು ಬರುತ್ತಿದೆ. ಇವೆಲ್ಲಾ ಒಂದೇ ಮರದ ಕೊಂಬೆರೆಂಬೆ! ಅದೇ ಮೂಲವೃಕ್ಷ!

ಕ್ತಕಲ್ಪದ್ರುಮ ! ಆದ್ದರಿಂದ ಯಾವುದೇ ಒಂದು ಪ್ರಭೇದ ಇತರ ಎಲ್ಲ ಪ್ರಭೇದಗಳಿಗಿಂತಲೂ ಮಿಗಿಲಾಗಲಾರದು. ಆದರಿಂದಲೇ ಬಸವಣ್ಣನವರೂ "ಕಾಸಿಕಮ್ಮಾರನಾದ ಬೀಸಿ ಮಡಿವಾಳನಾದ" ಎಂದು ವೃತ್ತಿಯಿಂದ ಪ್ರಭೇದ ಬುದನ್ನು ಒಪ್ಪಿದ್ದಾರೆ. ಜಂಗಮ ಪ್ರಭೇದದವರೂ ಎಲ್ಲ ಪ್ರಭೇದಗಳವ ತೆಯೇ ಜಂಗಮಸ್ಥಲವನ್ನು ಸಾಧನೆಯಿಂದ ಪಡೆಯಬೇಕು. ಇದು ಚಮ ವೀರಶೈವದ ಸ್ವರೂಪ. ಶರಣಧರ್ಮದಲ್ಲಿಯೂ ಯಾವುದೇ ಪಂಗಡ ಗಲಿ, ಜಂಗಮ ಪ್ರಭೇದವಾಗಲಿ ವಿಶಿಷ್ಟ ಸ್ಥಾನದಲ್ಲಿರಲು ಕಾರಣವಿಲ್ಲ. ಲ್ಲ ಪ್ರಭೇದಗಳೂ ಸ್ವಯಂಪೂರ್ಣ ವೀರಶೈವ ಸಮಾಜವೇ ಆಗಿವೆ. ಶಿವನು ಕ್ತರೂಪದಲ್ಲಿ ಜಂಗಮನಂತೆ ತೋರಿವನೆಂದರೆ, ಅದು ಜೀವರು ಪಡೆದ ಆತ್ಮದ ಶ್ವೈಶ್ವರ್ಯ ಸ್ವರೂಪವೇ ಹೊರತು ಜಂಗಮ ಪ್ರಭೇದದವರ ಸ್ವರೂಪವಲ್ಲ ಬುದನ್ನು ಮರೆಯಬಾರದು. ಬಸವಣ್ಣನವರ ಮಹಮನೆಯ ದಾಸೋಹ ಲ್ಲಿ ಒಂದು ಲಕ್ಷದ ತೊಂಬತ್ತಾರು ಸಾವಿರ ಜಂಗಮರಿದ್ದರೆಂದರೆ ಅವರೆಲ್ಲರೂ ಗಮಪ್ರಭೇದದವರೆಂದು ಮಾತ್ರ ಅರ್ಥ. ಅವರು ಶಿವನ ವ್ಯಕ್ತರೂಪೀ ಗಮರಲ್ಲವೆಂಬು ಸ್ಪಷ್ಟವಾಗಿದೆ. ಆದ್ದರಿಂದ ಈ ಜಂಗಮಪದ ವೀರಶೈವದಲ್ಲಿ ಮ ಪ್ರಭೇದವನ್ನು ಸೂಚಿಸುತ್ತದೆಯೇ ಹೊರತು, ಶಿವನವ್ಯಕ್ತ ಜಂಗಮ ಪವನ್ನು ಪ್ರತಿನಿಧಿಸುವುದಿಲ್ಲ ಜಂಗಮವೃತ್ತಿಯೇ ಬೇರೆ; ಜಂಗಮತತ್ವ ರೂಪವೇ ಬೇರೆ. ಬಸವಣ್ಣನವರ ಮಹಮನೆಯಲ್ಲಿದ್ದ ಜಂಗಮರಲ್ಲಿಯೂ ಕಾದಷ್ಟು ವೃತ್ತಿಜ್ಞಾನವಿರಲಿಲ್ಲವೇನೋ ! ಅವರೆಲ್ಲಾ ಮುಸುರೆಗಡಿಗೆಗೆ ಮುತ್ತುವ ನೊಣಗಳಂತಿದ್ದರೆಂದು ವೀರಶೈವ ಕವಿ ಸಂದರ್ಭೋಚಿತವಾಗಿ ಹಿಂದೆಯೇ ಹೇಳಿದ್ದಾನೆ. ಯಾರುಬೇಕಾದರೂ ಜಂಗಮ ಸ್ಥಿತಿಯನ್ನು ಯಬಹುದೆಂಬುದು ಶರಣಸಿದ್ಧಾಂತ. ಶರಣಧರ್ಮವನ್ನು ಪರಿಪಾಲಿಸಲು ಷ್ಟಿದ ಶೂನ್ಯ ಸಿಂಹಾಸನ ಈ ತತ್ತ್ವವನ್ನು ಆಚರಿಸುತ್ತಿಲ್ಲವೆಂಬುದೇ ಶ್ಚರ್ಯ ! ಪಂಚ ಸಿಂಹಾಸನಗಳು ಶರಣಸಿಂಹಾಸನಗಳಲ್ಲ. ಅವು ಬಸವಣ್ಣ ದ ತತ್ತ್ವದಿಂದ ನಿರ್ಲಿಪ್ತವಾಗಿಯೇ ನಿಂತಿವೆ ! ಇಂಥ ಪಂಚ ಸಿಂಹಾಸನಗಳ ತೆಯಲ್ಲಿ ಶೂನ್ಯಸಿಂಹಾಸನ ಪ್ರತ್ಯೇಕವಾಗಿಯೇ ಇರುತ್ತದೆ. ಅವು ದ್ಧಾಂತ ಸಿಂಹಾಸನಗಳು; ಇದು ವೇದಾಂತ ಸಿಂಹಾಸನ. ಕೆಲವರು

*ಅಮರ ಪಂಡಿತರು ಪ್ರಾಚೀನ ಪಂಚಸಿಂಹಾಸನಗಳನ್ನೂ ಅರ್ವಾಚೀನ ಶೂನ್ಯ ಸಿಂಹಾಸನವನ್ನೂ ತಾಕಲಾಡಿಸುತ್ತಾರೆ. ಸಮಾಜದಲ್ಲಿ ಇದೇ ಗೊಂದಲ! ಶರಣಧರ್ಮ ವಿಶಾಲಮಾನವಧರ್ಮ. ಅವರಲ್ಲಿ ಭಿನ್ನಭೇದಗಳಿರುವಂತಿಲ್ಲ. ಪ್ರಾಚೀನ ವೀರಶೈವ ಮಹಾರ್ಣವವನ್ನೂ ಅರ್ವಾಚೀನ ಶರಣಧರ್ಮ ಪಾರಾವಾರವನ್ನೂ ಒಂದುಗೂಡಿಸುವ ಮಹಾ ಸೇತುವೆಸಂತಿದೆ ಶೂನ್ಯ ಸಿಂಹಾಸನ ಪಂಥ! ಅದು ಉತ್ತರದಿಕ್ಕಿಗೆ ತಲೆಯಿಟ್ಟು ದಕ್ಷಿಣಕ್ಕೆ ಕಾಲುನೀಡಿ ಮಲಗಿದೆ. ಶೈವಬ್ರಾಹ್ಮಣರಲ್ಲಿ ಸುಮಾರು ಅರುವತ್ತು ಪ್ರಭೇದಗಳುಂಟು. ಅವರೆಲ್ಲರಿಗೂ ಬ್ರಾಹ್ಮಣರೆಂದೇ ಹೆಸರು. ಅವರ ಪ್ರಭೇದಗಳು ಅವರ ವೃತ್ತಿಯನ್ನು ಅವಲಂಬಿಸಿರುವುದಿಲ್ಲ. ಶೃಂಗೇರಿಯಲ್ಲಿ ಶೈವಬ್ರಾಹ್ಮಣರ ಜಗದ್ಗುರು ಪೀಠವಿದೆ. ಬ್ರಾಹ್ಮಣರಲ್ಲಿ ಯಾವ ಪಂಗಡದವನಾದರೂ ಕುಲಶೀಲಗುಣ ವಿದ್ಯಾಸಂಪನ್ನನಾಗಿದ್ದರೆ ಅವನು ಶೃಂಗೇರಿಯ ಜಗದ್ಗುರು ಪೀಠಾಧಿಕಾರಿಯಾಗಬಹುದು. ಅದು ಯಾವುದೇ ಒಂದು ಪ್ರಭೇದದವರ ಸ್ವತ್ತಲ್ಲ. ಬ್ರಾಹ್ಮಣರಲ್ಲಿ ಭಕ್ತಬ್ರಾಹ್ಮಣ, ದೇವಬ್ರಾಹ್ಮಣ ಎಂಬ ಭೇದಗಳಿಲ್ಲ. ಕೆಲವರು ವೈದಿಕವೃತ್ತಿಯನ್ನು ಅವಲಂಬಿಸಿರುತ್ತಾರೆ; ಉಳಿದವರೆಲ್ಲಾ ಲೌಕಿಕರು.

ಈ ವೈದಿಕ-ಲೌಕಿಕ ಬ್ರಾಹ್ಮಣರಲ್ಲಿ ಪರಸ್ಪರ ವಿವಾಹ ಸಂಬಂಧವೂ ಉಂಟು. ಪ್ರತಿಯೊಂದು ಪ್ರಭೇದದಲ್ಲಿಯೂ ವೈದಿಕ ಬ್ರಾಹ್ಮಣರುಂಟು. ಇಬ್ಬರಿಗೂ ಒಂದೇ ಬ್ರಹ್ಮೋಪದೇಶ! ವೈದಿಕರನ್ನು ಪುರೋಹಿತ, ಶಾಸ್ತ್ರೀ, ಆಚಾರ್ಯ ಎಂದು ಕರೆಯುತ್ತಾರೆ. ಲೌಕಿಕರಲ್ಲಿಯೂ ಇದೇ ಪರಿಪಾಠವಿದೆ. ಜೈನರಲ್ಲಿ ಪುರೋಹಿತ ಪಂಗಡವಿದೆ. ಅವರೇ ಜೈನಬ್ರಾಹ್ಮಣರು. ಇತರರನ್ನು ಶ್ರಾವಕರೆಂದು ಕರೆಯುತ್ತಾರೆ. ಈ ಶ್ರಾವಕರೂ ಜಿನದೀಕ್ಷೆಯನ್ನು ಹೊಂದಿ ಮುನಿಗಳಾಗುತ್ತಾರೆ. ಅವರನ್ನು ಸಾಧುಗಳೆಂದು ಹೇಳುತ್ತಾರೆ. ಅವರಲ್ಲಿ ೨೪ ಜನ ತೀರ್ಥಂಕರರು ಪ್ರಖ್ಯಾತರಾಗಿದ್ದಾರೆ. ಅವರು ಮುಕ್ತಾತ್ಮರು. ಅವರೆಲ್ಲರೂ ಶ್ರಾವಕರೇ; ಕ್ಷತ್ರಿಯವರ್ಗದವರು. ಜೈನಬ್ರಾಹ್ಮಣರಿಗೂ ಅವರು ಸಂಪೂಜ್ಯರಾಗಿದ್ದಾರೆ. ಮುನಿಧರ್ಮವನ್ನು ಅವಲಂಬಿಸಿ ಸಾಧುವರ್ಯರಾಗುವವರೆಂದರೆ ಬಹಳಮಟ್ಟಿಗೂ ಶ್ರಾವಕರೇ ಹೆಚ್ಚು. ಜೈನಸಾಧುವೆಂದರೆ ವೀರಶೈವ

---

* ಅಮರ ಕೋಶವನ್ನು ಓದಿ ಧರ್ಮಶಾಸ್ತ್ರ ಪಂಡಿತನಾದಂತೆ ತಿಳಿದುಕೊಂಡಿರುವವರು ಅಮರ ಪಂಡಿತರು.

ಚಕ್ರಾಶ್ರಮದ ನಿರಾಭಾರಿಯಿದ್ದಂತೆ ! ವೀರಶೈವ ವಿರಕ್ತನಿಗಿಂತಲೂ ಜೈನಸಾಧು ಅನುವಿರಕ್ತ ! ಜೈನರಲ್ಲಿ ಆಚಾರ್ಯಪೀಠಗಳೂ ಇವೆ. ಆ ಆಚಾರ್ಯರೆಲ್ಲಾ ಪುರೋಹಿತಕ ಜೈನಬ್ರಾಹ್ಮಣರೆಂಬ ಇಂದ್ರವರ್ಗದವರೇ ಆಗಿರುತ್ತಾರೆ. ಶ್ರಾವಕರು ಆಚಾರ್ಯಪೀಠಗಳಲ್ಲಿ ಪಟ್ಟಗೊಳ್ಳುವುದಿಲ್ಲ. ಶರಣಧರ್ಮದಲ್ಲಿ ವಿರಕ್ತನೆಂದರೆ ಯಾವ ಪ್ರಭೇದದವನಾದರೂ ವಿರಕ್ತನಾಗಬಹುದು; ಶೂನ್ಯ ಸಿಂಹಾಸನಾಧಿಕಾರಿಯಾಗಬಹುದು. ಬಸವಣ್ಣನವರು ಅದರಿಂದಲೇ ಶೂನ್ಯ ಸಿಂಹಾಸನವನ್ನು ನಿರ್ಮಿಸಿ, ಶರಣವಂಶಜರನ್ನು ನಿರಾಭಾರಿ ಪಟ್ಟದಲ್ಲಿ ಮೆರೆಯಿಸಿದರು. ಆದರೆ, ಇದು ಶೂನ್ಯ ಸಿಂಹಾಸನ ಯಾವುದೋ ವಿಶಿಷ್ಟ ಪ್ರಭೇದದವರೆಂಬಂತೆ ಭಾವಿಸುತ್ತಾರೆ. ಇದು ಶರಣಧರ್ಮಪೀಠ. ಆದರಿಂದಲೇ ಈ ಪೀಠದ ನಿರಾಭಾರಿಗೆ ಕುಲಗೋತ್ರಗಳಿರುವುದಿಲ್ಲ. ಶೂನ್ಯ ತತ್ತ್ವ ದಾರಿತಪ್ಪುತ್ತಿದೆ. ಶೂನ್ಯವನ್ನು ಶೂನ್ಯರೂಪದಲ್ಲಿಯೇ ಸಾಧಿಸಬೇಕೆಂಬುದೇ ಇದರ ಅರ್ಥ. ಅದಕ್ಕೆ ಭೌತರೂಪವನ್ನು ಕಲ್ಪಿಸುವಂತಿಲ್ಲ. ಇಸ್ಲಾಂ ಧರ್ಮವೂ ಶೂನ್ಯ ತತ್ತ್ವವನ್ನೇ ಪ್ರತಿಪಾದಿಸುತ್ತದೆ. ಅದು ಎಂದೂ ಭೌತರೂಪದಲ್ಲಿ ಶೂನ್ಯವನ್ನು ಆರಾಧಿಸುವುದಿಲ್ಲ. ಆದರೆ, ಲಿಂಗವಂತರ ಶೂನ್ಯತತ್ತ್ವ ಭೌತರೂಪದಿಂದ ಪೂಜೆಗೊಳ್ಳುತ್ತದೆ. ಇದು ಸರಿಯಲ್ಲ. ಶೂನ್ಯ ಸಿಂಹಾಸನದಲ್ಲಿ ಮಂಡಿಸಿದ ವಿರಕ್ತ ಇಷ್ಟಲಿಂಗ ಪೂಜೆಯನ್ನು ಮಾಡಬೇಕಾಗಿಲ್ಲ. ಅವನು ಆರೂಢಸ್ಥಿತಿಯಲ್ಲಿರುತ್ತಾನೆ. ಅವನು ಭಾವಲಿಂಗಾರಾಧನೆಯಲ್ಲಿ ಲೀನನಾಗಿರುತ್ತಾನೆ. ಅದರಿಂದಲೇ ಶೂನ್ಯ ಸಿಂಹಾಸನವೆಂದರೆ ಭಾವಭದ್ರಾಸನ ! ವಿರಕ್ತನೆಂದರೆ ಭಾವಲಿಂಗಿ ! ಇಂಥ ಕಠಿಣ ತಪಸ್ಸನ್ನು ವಿರಕ್ತ ಆಚರಿಸಲಾರನೇನೋ ! ಅದರಿಂದಲೇ ಅವನು ಪ್ರವೃತ್ತಿಯಲ್ಲಿ ನಿವೃತ್ತಿಯನ್ನು ಅರಸುತ್ತಿದ್ದಾನೆ ! ಅದರಿಂದಲೇ ಶೂನ್ಯ ಸಿಂಹಾಸನ ಭೌತರೂಪದಲ್ಲಿ ಒಂದೆಡೆ ಇರುವಂತಿಲ್ಲ ! ಅದು ಎಲ್ಲ ಶರಣರ ಹೃದಯದಲ್ಲಿ ಭಾವಭದ್ರಾಸನವಾಗಿರುತ್ತದೆ ! ಅದನ್ನು ಯಾರೂ ಒಂದೆಡೆಯಿಂದ ಇನ್ನೊಂದೆಡೆಗೆ ಒಯ್ಯುವುದಿಲ್ಲ; ಅದು ತಾನಾಗಿಯೇ ವಿಶ್ವಪರ್ಯಟನ ಮಾಡುತ್ತದೆ. ಮುಮುಕ್ಷು ಅದನ್ನು ಆರೋಹಣಮಾಡುತ್ತಾನೆ ! ಆ ನಿರಂಜನ ತತ್ತ್ವವನ್ನು ಭಕ್ತಕೋಟಿಗೆ ಬಿತ್ತರಿಸಲು ಪ್ರಧಾನಕೇಂದ್ರಗಳಲ್ಲಿ ಪಂಚಸಮಯಗಳ ವಿರಕ್ತಮಠಗಳಿವೆ. ಅವುಗಳಿಗೆ ಅನೇಕ ಶಾಖಾಮಠಗಳೂ ಇವೆ.

ವಿರಕ್ತಧರ್ಮ ತನ್ನ ನಿವೃತ್ತಿಧರ್ಮವನ್ನು ಪರಿತ್ಯಜಿಸಿ ಸಮಾಜದಲ್ಲಿ ಶೂನ್ಯ ತತ್ತ್ವಜ್ಞಾನ ಪ್ರಚಾರಮಾಡಲು ಸಾಹಸಪಡುತ್ತಿದೆ. ಸಮಾಜ ಈ ಧಾರ್ಮಿಕ ಸಂಸ್ಥೆಗಳಿಂದ ಜ್ಞಾನೋಪದೇಶಪಡೆಯುಲು ಅವಕಾಶವಿಲ್ಲ. ಏಕೆಂದರೆ ಅವು ಪ್ರವೃತ್ತಿಮಾರ್ಗದಲ್ಲಿಯೇ ಆಸಕ್ತವಾಗಿರುತ್ತವೆ. ಚಿತ್ರದುರ್ಗ ವಿರಕ್ತ ಮಠಾಧೀಶರಾಗಿರುವ ಶ್ರೀ ಮಲ್ಲಿಕಾರ್ಜುನಸ್ವಾಮಿಗಳು ಮೊನ್ನೆ ಮೊನ್ನೆ ಮೈಸೂರು ನಗರದ ಪುರಭವನದಲ್ಲಿ ಸೇರಿದ್ದ ಸಭೆಯೊಂದರಲ್ಲಿ ಮಾತನಾಡುತ್ತ * "ರಾಜಕೀಯ ಕುಟಿಲತೆಯಾಗಲಿ, ವರ್ಗೀಯ ಭೇದವಾಗಲಿ ಧರ್ಮಪೀಠಗಳ ಬಳಿಸುಳಿಯುವಂತೆ ಒಂದು ಪರಿಶುದ್ಧ ವಾತಾವರಣವನ್ನು ಸೃಷ್ಟಿಸಿ, ಮಠಗಳಿಂದ ಹೆಚ್ಚು ಕೆಲಸ ನಡೆಯುವಂತೆ ಸಮಾಜ ನೋಡಿಕೊಳ್ಳಬೇಕು" ಎಂಬ ವಿಚಾರ ಧಾರೆಯನ್ನು ಹರಿಯಿಸಿದ್ದಾರೆ. ಅವರ ಅಭಿಪ್ರಾಯ ಸರ್ವಮಾನ್ಯವಾಗಿದೆ. ಅವರೂ ತಮ್ಮ ಮಠದಲ್ಲಿ ಪರಿಶುದ್ಧ ವಾತಾವರಣವನ್ನು ನಿರ್ಮಿಸಲು ಕಾತುರ ರಾಗಿದ್ದಾರೆಂದೂ, ಇಂಥ ಪವಿತ್ರಸೇವೆಯನ್ನು ಸಲ್ಲಿಸಲು ಸಮಾಜವನ್ನು ಆಹ್ವಾನಿಸಿದ್ದಾರೆಂಮೂ ಧ್ವನಿತವಾಗುತ್ತದೆ. ಈಗ ಶ್ರೀಮಠದಲ್ಲಿ ಪರಿಶುದ್ಧ ವಾತಾವರಣವಿಲ್ಲವೆಂದು ಶ್ರೀ ಸ್ವಾಮಿಗಳು ಸೂಚಿಸಿದಂತಿದೆ. ಅದೇ ಭಾಷಣಲ್ಲಿ ಅವರು "ಮಗ ದೊಡ್ಡವನಾದಮೇಲೆ ತಂದೆ-ತಾಯಿಗಳನ್ನೇ ಹಳಿಯುವಂತೆ ಈ ವಿಜ್ಞಾನಯುಗದಲ್ಲಿ ಮಠ ಹಾಗೂ ಮಹಂತರನ್ನು ಬೈಯ್ಯುವುದು ಒಂದು "ಫ್ಯಾಷನ್" ಆಗಿಬಿಟ್ಟಿದೆ." ಎಂದು ಹೇಳಿರುತ್ತಾರೆ. "ಪುತ್ರಾದಿಚ್ಛೇತ್ ಪರಾಜಯಂ" ಎಂಬಂತೆ, ಕುಲಪುತ್ರ ತಂದೆಯ ಕೀರ್ತಿಯನ್ನು ಸಂವರ್ಧಿಸು ತ್ತಾನೆ. ಆಗ ತಂದೆ ಸಂತೋಷಿಸುತ್ತಾನೆ. ಇದೇ ಧರ್ಮ. ಅದರಂತೆಯೇ "ಶಿಷ್ಯಾದಿಚ್ಛೇತ್ ಪರಾಜಯಂ" ಎಂಬಂತೆ ಗುರು ತನಗಿಂತ ಸಂಪನ್ನನಾದ ಶಿಷ್ಯನ ಶಕ್ತಿಯನ್ನು ಕಂಡು ಆನಂದಿಸುತ್ತಾನೆ. ಇದು ಸದ್ಗುರುಧರ್ಮ! ಇಂಥ ಪುತ್ರ, ಇಂಥ ಶಿಷ್ಯ ಸಮಾಜಭೂಷಣರಲ್ಲವೆ! ಮಠಗಳಲ್ಲಿ ಪರಿಶುದ್ಧ ವಾತಾವ ರಣವಿರಬೇಕಾದರೆ ಇಂಥ ಸತ್ಪುತ್ರ, ಇಂಥ ಸಚ್ಛಿಷ್ಯ ಇರಬೇಕೆಂಬುದನ್ನು ಶ್ರೀ ಮಲ್ಲಿಕಾರ್ಜುನಸ್ವಾಮಿಗಳು ಮನಗಾಣಬಲ್ಲರೆಂದು ಸಮಾಜ ನಿರೀಕ್ಷಿಸುತ್ತಿದೆ!

---

* ತಾ| ೧–೧೨–೧೯೬೭ ನೆಯ ಪ್ರಜಾವಾಣಿ ಪತ್ರಿಕೆಯನ್ನು ಪರಿಯಿಟ್ಟು ಓದಿರಿ.

ವರು ಅದೇ ಭಾಷಣದಲ್ಲಿ "ಮಠಗಳಿಂದ ಸಮಾಜಕ್ಕೆ ಮಾರ್ಗದರ್ಶನ ಗುತ್ತಿತ್ತು ಒಂದು ಕಾಲದಲ್ಲಿ; ಆದರೆ ಇಂದು ಸಮಾಜ ಹಾಗೂ ಸದ್ಭಕ್ತರುಗಳೇ ಮಠಗಳಿಗೆ ಮಾರ್ಗದರ್ಶನ ಮಾಡಹೊರಟಿದ್ದಾರೆ. ಈ ಮಾರ್ಗದರ್ಶನಪಲ್ಲಟ ಂದಲೇ ಮಠಗಳಿಗೆ ಈ ಶೋಚನೀಯ ಸ್ಥಿತಿ ಬಂದೊದಗಿತು" ಎಂದೂ ನುಡಿದಿರುತ್ತಾರೆ. ಇದು ಅವರ ಮನಸ್ಸಿನ ಕಳವಳ. ಸಮಾಜ ವಿದ್ಯೆಯಲ್ಲಿ ಂದುಳಿದಿದ್ದಾಗ ಮಠಗಳಿಂದ ಸಮಾಜಕ್ಕೆ ಮಾರ್ಗದರ್ಶನ ಲಭಿಸುತ್ತಿತ್ತು. ಆಗ ಮಠಗಳ ಸ್ವಾಮಿಗಳು ಪೂರ್ಣ ವಿದ್ವಾಂಸರೂ, ಸುಸಂಸ್ಕೃತರೂ ಆಗಿರು ತ್ತಿದ್ದರು. ಅವರ ಜ್ಞಾನಪ್ರದೀಪ ಎಲ್ಲ ಸದ್ಭಕ್ತರ ಹೃದಯಗಳಲ್ಲಿಯೂ ಬೆಳಗಿತು. ಈಗ ಸಮಾಜದಲ್ಲಿ ನಾಗರಿಕತೆ, ಸಂಸ್ಕೃತಿ, ವಿದ್ಯಾಭ್ಯಾಸ, ಜ್ಞಾನಶಕ್ತಿ ಸರ್ವತೋ ಮುಖವಾಗಿ ಬೆಳೆದಿವೆ. ಇದಕ್ಕೆ ಶ್ರೀಮಠಗಳ ಆಶೀರ್ವಾದವೂ ಒಂದು ಕಾರಣ ವಿರಬಹುದು. ಎಲ್ಲಿ ಮಠಗಳ ಸ್ವಾಮಿಗಳು ಅಶಕ್ತರಾಗಿರುತ್ತಾರೆಯೋ ಅಲ್ಲಿ ಮಾತ್ರ ಸಮಾಜ ಅಂಥ ಮಠಗಳಿಗೆ ಮಾರ್ಗದರ್ಶನಮಾಡುತ್ತದೆ. ಊರಿಗೆ ದಾರಿ ಯಾರುತೋರಿಸಿದರೇನು ? ಇದಾಗಬಾರದೇನು ? ಇದರಲ್ಲಿ ಮಾರ್ಗ ದರ್ಶನ ಪಲ್ಲಟವೇನು ಬಂತು ? ಹಾಗಾದರೆ, ಮಠಗಳಲ್ಲಿ ಪರಿಶುದ್ಧವಾತಾವರಣ ವನ್ನು ನಿರ್ಮಿಸಿ ಮಠಗಳಿಂದ ಇನ್ನೂ ಹೆಚ್ಚು ಕೆಲಸ ನಡೆಯುವಂತೆ ಸಮಾಜ ನೋಡಿಕೊಳ್ಳುವುದಾದರೂ ಹೇಗೆ ? ಶ್ರೀ ಮಲ್ಲಿಕಾರ್ಜುನಸ್ವಾಮಿಗಳ ಮೈಸೂರು ಭಾಷಣದಲ್ಲಿ ವಿರೋಧಾಭಾಸವಿಲ್ಲವೆಂದೇ ನಮ್ಮ ನಂಬುಗೆ. ಶ್ರೀ ಸ್ವಾಮಿಗಳು ಸಮಾಜದತ್ತ ತಮ್ಮ ಕೃಪಾದೃಷ್ಟಿಯನ್ನು ಬೀರಿರುದು ಅಭಿನಂದನಾರ್ಹವಾಗಿದೆ. ಮಾರ್ಗದರ್ಶನಪಲ್ಲಟದಿಂದ ಮಠಗಳಿಗೆ ಶೋಚನೀಯಸ್ಥಿತಿಯು ಬರಲಾರದು; ಬಂದಿಲ್ಲ. "ಸಹವಾಸದಿಂದ ಸಂನ್ಯಾಸಿ ಕೆಟ್ಟ" ಎಂಬ ಗಾದೆಯಂತೆ, ಸಹವಾಸ ದೋಷದಿಂದ ಕೆಲವು ಮಠಗಳ ಸ್ಥಿತಿ ಶೋಚನೀಯವಾಗಬಹುದು ! ಸಮಾಜ ಮತ್ತು ಸದ್ಭಕ್ತರು ಯಾರೂ ಅನಾವಶ್ಯಕವಾಗಿ ಪೂಜ್ಯ ಮಠಗಳ ವಿಚಾರದಲ್ಲಿ ಬುಸಿರೆತ್ತುವುದಿಲ್ಲ; ಕೈ ಹಾಕುವುದಿಲ್ಲ. ಏನೇಆಗಲಿ, ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಮಠಗಳ ಪರಿಶುದ್ಧವಾತಾವರಣ ನಿರ್ಮಾಣ ವಿಚಾರದಲ್ಲಿ ಗಾಢ ವಾದ ಚಿಂತನೆ ಮಾಡುತ್ತಿರುವಂತಿದೆ. ಅವರು ಸುಲಭವಾಗಿ ದಾಟನಿಲ್ಲಲಾರದ ಯಾವುದೋ ಇಕ್ಕಟ್ಟಿನಲ್ಲಿರುವಂತೆ ಭಾಸವಾಗುತ್ತದೆ. ಅವರು ಸಮಾಜವನ್ನೂ ಸದ್ಭಕ್ತರನ್ನೂ ಸದುಪಯೋಗಪಡಿಸಿಕೊಳ್ಳಬೇಕು ! ಸಮಾಜ-ಮಠಗಳ ಮಧುರ

ಬಾಂಧವ್ಯ ನಿತ್ಯನೂತನವಾಗಿರಬೇಕೆಂದು ಸಮಾಜ ಬಯಸುತ್ತದೆ. ಯಾವುದೇ ಸಂಸ್ಥೆಯಾಗಲಿ, ವ್ಯಕ್ತಿಯಾಗಲಿ, ಟೀಕಾತೀತವಾಗಿರಲು ಸಾಧ್ಯವಿಲ್ಲ. ರಚನಾತ್ಮಕ ಟೀಕೆಯನ್ನು ಜಾಣರು ಸಂತೋಷದಿಂದ ಆಹ್ವಾನಿಸುತ್ತಾರೆ. ಧರ್ಮಕ್ಷೇತ್ರಗಳೆನಿಸಿದ ಮಠಗಳಿಗೂ ಈ ಮಾತು ಅನ್ವಯಿಸುತ್ತದೆ. ಚಿತ್ರದುರ್ಗದ ಮುರಿಗೀಮಠ ಹದಿನೆಂಟನೆಯ ಶತಮಾನದಲ್ಲಿ ಉದಯವಾಯಿತು; ಇದರ ಮೂಲಮಠ ಆನಂದಾಪುರ ಮುರಘಮಠ; ಚಿತ್ರದುರ್ಗದ ಹನ್ನೆರಡನೆಯ ಪಾಳೆಗಾರ ಭರಮಪ್ಪನಾಯಕನ ಕಾಲದಲ್ಲಿ ಈ ಮಠ ಸ್ಥಾಪನೆಯಾಯಿತು. ಸರ್ಪಯೋಗಘಟನೆ ಒದಗಿದುದು ಈ ಭರಪ್ಪನಾಯಕನಿಗೇ. ಅವನ ಕಾಲ ಶಾ. ಶ. ೧೬೧೧ ಎಂದರೆ ಕ್ರಿ. ಶ. ೧೬೮೯. ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳೂ ಅವರ ಬೆಂಗಳೂರು ಭಾಷಣದಲ್ಲಿ ಬಿಚ್ಚುಗತ್ತಿ ಭರಪ್ಪನಾಯಕನ ಕಾಲದಲ್ಲಿಯೇ ಮುರಿಗಿಮಠ ಸ್ಥಾಪನೆಯಾಯಿತೆಂದು ಹೇಳಿರುತ್ತಾರೆ. ಅವರು ಮುರಿಗಿಮಠದ ಸಮಗ್ರ ಚರಿತ್ರೆಯನ್ನು ಬರೆಯಿಸುವುದಾಗಿಯೂ ಆ ಭಾಷಣದಲ್ಲಿ ಹೇಳಿದ್ದಾರೆ. ಬಹುಶಃ ಡಾ|| ಟಿ. ಜಿ. ಸಿದ್ಧಪ್ಪಾರಾಧ್ಯ ಎಂಬುವರು ಇತ್ತೀಚೆಗೆ ಬರೆದಿರುವ "ಶೂನ್ಯ ಪೀಠದ ಪ್ರಭಾವ" ಎಂಬ ಪುಸ್ತಕವನ್ನು ಚಿತ್ರದುರ್ಗ ವಿರಕ್ತಮಠದವರು ಬರೆಯಿಸಿರಬಹುದು! ಆ ಭಕ್ತ ಸಿದ್ಧಪ್ಪಾರಾಧ್ಯರು ಸಂಸ್ಕೃತ ವಿದ್ವಾಂಸರು; ಅವರು ಇತಿಹಾಸದ ಪರಿಚಯವನ್ನು ಅವರ ಮಿತ್ರ ಡಾ|| ಮುದ್ದಾಚಾರ್ ಎಂಬುವರಿಂದ ಪಡೆದುಕೊಂಡಂತೆ ಹೇಳಿದ್ದಾರೆ. ಅವರೂ ಅವರ ಮಿತ್ರರೂ ಚಿತ್ರದುರ್ಗ ವಿರಕ್ತಮಠದ ಮತ್ತು ಚಿತ್ರದುರ್ಗದ ಪಾಳೆಯಗಾರರ ಸಂಬಂಧವಾದ ಇತಿಹಾಸವನ್ನು ಕೂಲಂಕಷವಾಗಿ ಅಭ್ಯಾಸ ಮಾಡಿದರೆ ಒಳ್ಳೆಯದು. ಚಿತ್ರದುರ್ಗದ ಪಾಳೆಯಗಾರರ ವಂಶಾವಳಿಯಲ್ಲಿ ಹನ್ನೆರಡನೆಯ ಪಾಳೆಯಗಾರ ಬಿಚ್ಚುಕತ್ತಿ ಭರಮಪ್ಪನಾಯಕನ ಕಾಲ ಶಾಲಿವಾಹನ ಶಕ ೧೬೧೧ ರಿಂದ ೧೬೪೨ ಎಂದರೆ ಕ್ರಿ. ಶ. ೧೬೮೯ ರಿಂದ ೧೭೨೦ ಎಂದು ಚರಿತ್ರೆಯಿಂದ ನಿರ್ಧರವಾಗಿ ತಿಳಿದುಬರುತ್ತದೆ. "ಚಿತ್ರದುರ್ಗದ ದೊರೆತನ ಮೂರು ತಿಂಗಳಲ್ಲಿ ನಿನಗೆ ಆಗುವುದು" ಎಂದು ಮುರಿಗಿ ಅಯ್ಯನವರು ಸರ್ಪಯೋಗಘಟನೆಯನ್ನು ಕಂಡಮೇಲೆ ಈ ಭರಮಪ್ಪನಾಯಕನಿಗೆ ಹೇಳಿದರೆಂದು ಶ್ರೀ ಎಂ. ಎಸ್. ಪುಟ್ಟಣ್ಣನವರು 'ಚಿತ್ರದುರ್ಗದ ಪಾಳೆಯಗಾರರು' ಎಂಬ ಪುಸ್ತಕದಲ್ಲಿ ೩೮ ನೆಯ ಪುಟದಲ್ಲಿ ಹೇಳಿದ್ದಾರೆ. ಅಲ್ಲಿಂದ ಮುರಿಗಿ

ಸ್ವಾಮಿಗಳು ಮೈಸೂರು ರಾಜರ ಆಸ್ಥಾನಕ್ಕೆ ಹೋದರೆಂದು ಶ್ರೀ ಜಯದೇವ ಲೀಲೆ ಮತ್ತು 'ಗಜಕೇಸರಿ' ಗ್ರಂಥಗಳಲ್ಲಿ ಹೇಳಿದೆ. ಅವರು ಅಲ್ಲಿಂದ ದೆಹಲಿಗೆ ಹೋದರೆಂದು ಈ ಗ್ರಂಥಗಳು ತಿಳಿಸುತ್ತವೆ. ಆ ಕಾಲದಲ್ಲಿ ಮೈಸೂರು ರಾಜರು ಚಿಕ್ಕದೇವರಾಜ ಒಡೆಯರು; ದೆಹಲಿಯ ಬಾದಷಹ ಔರಂಗಜೇಬ್ ಎಂದು ಇತಿಹಾಸ ದೃಢಪಡಿಸುತ್ತದೆ. ಆದರೆ ಭಕ್ತ ಸಿದ್ಧಪ್ಪಾರಾಧ್ಯರು ಹದಿನಾರನೆಯ ಶತಮಾನದ ಭರಮಪ್ಪನಾಯಕನೆಂದು ಅವರ ಪುಸ್ತಕದ ೪೩ನೆಯ ಪುಟದಲ್ಲಿ ಹೇಳಿದ್ದಾರೆ (ನಮ್ಮ ಈ ಗ್ರಂಥದ ೧೧, ೧೪ ಮತ್ತು ೧೫ನೆಯ ತರಂಗಗಳನ್ನು ದಯಮಾಡಿ ಅವಲೋಕಿಸಿರಿ) ತಮಗೆ ಆಶ್ರಯದಾತರಾದ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳಿಗೆ ವಿರುದ್ಧವಾಗಿಯೇ ಈ ಪಂಡಿತ ಭಕ್ತರು ಹೇಳಿದಂತಾಯಿತು! ಶ್ರೀ ಸಿದ್ಧಪ್ಪಾರಾಧ್ಯರ ಈ ಅವಿವೇಕದಿಂದ ಇತಿಹಾಸಕ್ಕೇನೂ ಚ್ಯುತಿಯಿಲ್ಲ. ಇವರು ನಮ್ಮ 'ಶೂನ್ಯಸಿಂಹಾಸನ' ಗ್ರಂಥದಿಂದ ಅನೇಕ ಉಲ್ಲೇಖನಗಳನ್ನು ಎತ್ತಿ 'ಶೂನ್ಯಪೀಠದ ಪ್ರಭಾವ' ಎಂಬ ಅವರ ಪುಸ್ತಕದಲ್ಲಿ ಸೂಚಿಸಿರುತ್ತಾರೆ. ನಮ್ಮ ಗ್ರಂಥ ಇನ್ನೂ ಚಿತ್ರದುರ್ಗ ಸಹಕಾರ ಮುದ್ರಣಾಲಯದಲ್ಲಿ ಅಚ್ಚಾಗುತ್ತಲೇ ಇದೆ. ಅದು ಪ್ರಕಟವಾಗಿಲ್ಲ. ಆದರೂ ಈ ಗುರು-ಶಿಷ್ಯರು ಅಪ್ರಕಟಿತ ಗ್ರಂಥದಿಂದ ಉಲ್ಲೇಖನಗಳನ್ನು ಬಳಸಿಕೊಂಡಿರುವುದು ಸೌಜನ್ಯವಲ್ಲ. 'ಶೂನ್ಯಪೀಠದ ಪ್ರಭಾವ' ಮುರಿಗಿಮಠದ ಶ್ರೀ ಮಲ್ಲಿಕಾರ್ಜುನಸ್ವಾಮಿಗಳ ಪ್ರೋತ್ಸಾಹದಿಂದ ಬೆಳಕಿಗೆ ಬಂದಿದೆಯೆಂಬುದು ಈ ಪುಸ್ತಕದ ಮುನ್ನುಡಿಯಿಂದ ಗೊತ್ತಾಗುತ್ತದೆ. ಯಾರ ಕುತಂತ್ರದಿಂದಲೋ ಶೂನ್ಯಸಿಂಹಾಸನ ಗ್ರಂಥದ ಮುದ್ರಿತ ಪುಟಗಳು ವಿರಕ್ತಸ್ವಾಮಿಗಳ ದಿವ್ಯದೃಷ್ಟಿಗೆ ಬಂದಿರಬೇಕೆಂಬ ಅನುಮಾನವನ್ನು ಆ ಮಠದ ಭಕ್ತ ಸಿದ್ಧಪ್ಪಾರಾಧ್ಯರು ದೃಢಪಡಿಸಿರುತ್ತಾರೆ. ಶ್ರೀ ಮಲ್ಲಿಕಾರ್ಜುನಸ್ವಾಮಿಗಳ ಬೆಂಗಳೂರು ಭಾಷಣವನ್ನು ಓದಿದಾಗಲೇ ನಮಗೆ ಈ ಅನುಮಾನ ಅಂಕುರಿಸಿತು. ಅದನ್ನು ಶೂನ್ಯಸಿಂಹಾಸನ ಗ್ರಂಥದ ೨೩೭ನೆಯ ಪುಟದಲ್ಲಿ ಸೂಚಿಸಿರುತ್ತೇವೆ. ಗ್ರಂಥಚೌರ್ಯ ವಿದ್ವಾಂಸರಾದ ಡಾ|| ಎಸ್. ಜಿ. ಸಿದ್ಧಪ್ಪಾರಾಧ್ಯರ ಘನತೆಯನ್ನು ಮತ್ತು ಶ್ರೀ ಮಠದ ಪ್ರಭಾವವನ್ನು ತಗ್ಗಿಸುತ್ತದೆಂದು ನಾವು ವಿಷಾದಿಸುತ್ತೇವೆ. ಶ್ರೀ ವಿರಕ್ತಪ್ರಭು ಮಲ್ಲಿಕಾರ್ಜುನ ಸ್ವಾಮಿಗಳ ವಿಚಾರದಲ್ಲಿ ನಾವು ಏನನ್ನೂ ಹೇಳುವಂತಿಲ್ಲ! ಅವರು ಟೀಕಾತೀತರು! ಅದೇಕೆ ಅವರು ಇಂಥ ಸುಳಿಯಲ್ಲಿ ಸಿಕ್ಕಿದರೋ ಮುರಘೇಶನೇ ಬಲ್ಲ!

ಈ 'ಶೂನ್ಯಪೀಠದ ಪ್ರಭಾವ'ದಲ್ಲಿ ಯಾವ ಅಂಶವೂ ಸರಿಯಿಲ್ಲ. ಅದು ಶೂನ್ಯ ಸಿಂಹಾಸನದ ಅಭಾವವನ್ನು ತೋರಿಸುತ್ತದೆ. ಅದರಲ್ಲಿ ಮಂತ್ರಕ್ಕಿಂತ ಉಗುಳು ಹೆಚ್ಚು, ತಂತ್ರಕ್ಕಿಂತ ಕುತಂತ್ರ ಹೆಚ್ಚು. ಭಕ್ತ ಸಿದ್ಧಪ್ಪಾರಾಧ್ಯರು ಶ್ರೀ ಮಠದ ಸೇವೆಯನ್ನು ಈ ಅಪಮಾರ್ಗದಿಂದ ಸಲ್ಲಿಸಬಾರದಾಗಿತ್ತು! ವಿರಕ್ತ ಮೂರ್ತಿ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು 'ಶೂನ್ಯಪೀಠದ ಪ್ರಭಾವ'ವನ್ನು ಅವಲೋಕಿಸಿದಮೇಲಾದರೂ 'ಶೂನ್ಯಸಿಂಹಾಸನ' ಗ್ರಂಥ ಮುದ್ರಣವಾಗಿದೆಯೇ ಎಂದು ಕೇಳಬಹುದಾಗಿತ್ತು! ಆ ಗ್ರಂಥದ ಮುದ್ರಿತ ಪುಟಗಳನ್ನು ಒದಗಿಸಿದ "ಸ್ವಾಮಿಘಾತುಕ" ಕಿರಾತನಾದರೂ ಹೇಳಲಿಲ್ಲವೇನೋ! 'ಶೂನ್ಯಪೀಠದ ಪ್ರಭಾವ' ಎಂಬ ಪುಸ್ತಕ ಕೂಸು ಹುಟ್ಟುವುದಕ್ಕಿಂತ ಮುಂಚೆ ಕುಲಾವಿ ಹೊಲಿಸಿ ದಂತಾಗಿದೆ. ಮಗುವಿಗೆ ದೊಡ್ಡದು ಅಜ್ಜನಿಗೆ ಚಿಕ್ಕದು! ಈ ಕುಲಾವಿಯಲ್ಲಿ ಕಲೆಯಿಲ್ಲ; ನೆಲೆಯಿಲ್ಲ! ಹರಕು ಚಿಂದಿಯ ಕಂತೆಯಂತಿದೆ ಅದು. ಸಂತೆ ಹೊತ್ತಿಗೆ ಮೂರು ಮೊಳ ನೇಯ್ದಂತಿದೆ! ಶ್ರೀ ಸಿದ್ಧಪ್ಪಾರಾಧ್ಯರು ಅರ್ಹ ಗ್ರಂಥವನ್ನು ಬರೆಯಲು ಸಮರ್ಥರೆಂದು ಶ್ರೀ ಸ್ವಾಮಿಗಳು ಭಾವಿಸಿದ್ದು ಸರಿಯಲ್ಲ. ಸಿದ್ಧಪ್ಪಾರಾಧ್ಯರು ಪ್ರಶಾಂತಚಿತ್ತರಲ್ಲ. ಅವರ ಕುಟುಂಬ ಜೀವನದಲ್ಲಿ ಗೊಂದಲ! ಅವರ ವೃತ್ತಿ ಜೀವನದಲ್ಲಿ ಗೊಂದಲ! ಅವರ ವ್ಯವಹಾರ ಜೀವನದಲ್ಲಿ ಗೊಂದಲ! ಇಂಥ ಗೊಂದಲದ ಜೀವನದಲ್ಲಿ ಅವರು ಪಂಡಿತರು ಬರೆಯಬಹುದಾದ ಸಂಶೋಧನಾತ್ಮಕ ಗ್ರಂಥವನ್ನು ಬರೆಯಲು ಸಮರ್ಥ ರಾಗಿಲ್ಲ. ಅವರು ತಮ್ಮ ಒಣ ಪಾಂಡಿತ್ಯವನ್ನೆಲ್ಲಾ ಇದರಲ್ಲಿ ತೋಡಿಕೊಂಡಿ ದ್ದಾರೆ. ಶೂನ್ಯಸಿಂಹಾಸನದ ವಿಚಾರ ಅವರಿಗೆ ಏನೇನೂ ತಿಳಿಯದೆಂದು ನಮ್ಮ ನಂಬುಗೆ. ನಾನು ತಾ॥ ೧೬—೨—೧೯೬೭ ರಲ್ಲಿ ಬೆಂಗಳೂರು ಶ್ರೀ ಗುರುವಣ್ಣದೇವರ ಮಠದಲ್ಲಿ ಮಾಡಿದ ಭಾಷಣದ ವಿಚಾರವನ್ನೂ ಶ್ರೀ ಆರಾಧ್ಯ ಬಿರುದಾಂಕಿತರಾದ ಈ ಭಕ್ತ ಸಿದ್ಧಪ್ಪಾರಾಧ್ಯರು ಅವರ ಗ್ರಂಥದಲ್ಲಿ ಪ್ರಸ್ತಾಪಿಸಿರುತ್ತಾರೆ. ಅವರು ಆ ಭಾಷಣದ ಗಹನತತ್ತ್ವವನ್ನು ಅರಿಯ ಲಾರದೆ ತಿಪ್ಪರಲಾಗ ಹಾಕಿದ್ದಾರೆ! ಆ ಭಾಷಣವನ್ನು ಅವರು ಶಾಂತ ಮನಸ್ಸಿ ನಿಂದ ಓದಬೇಕು; ಪುನಃ ಓದಬೇಕು. ಅದರ ಸುಂದರ ಶೈಲಿಯನ್ನೂ, ಬಂಧುರ ತತ್ತ್ವಪ್ರತಿಪಾದನೆಯನ್ನೂ, ಶೂನ್ಯನಿರೂಪಣೆಯ ವೈಖರಿಯನ್ನೂ ಅವರು ಅರಿಯಬೇಕು; ಅರಿತು ಮಾತನಾಡಬೇಕು. ಅವರ ಮನಸ್ಸಿನ

ಗೊಂದಲವೇ ಆವರಸ್ನು ಸದಾ ಕಾಡುತ್ತಿದೆ. ಚಿತ್ರದುರ್ಗದ ವಿರಕ್ತ ಮಠಕ್ಕಿಂತ ಪ್ರಾಚೀನವಾದ ಸಿದ್ಧಗಂಗಾ ಮಠ, ಸುತ್ತೂರು ಮಠ, ದೇಗುಲಮಠ, ಬೇಲಿಮಠ, ಸುಮಾಮಿಡಿ ಮಠ, ಉರವಕೊಂಡ ಮಠ, ಸಿರಿಗೆರೆ ಮಠ ಮೊದಲಾದ ಶ್ರೀ ಮಠಗಳ ಸ್ವಾಮಿಗಳನ್ನೂ, ಆ ಮಠಗಳ ಪೂರ್ವಾಚಾರ್ಯರನ್ನೂ ಲಘುವಾಗಿ ಟೀಕಿಸಿದ್ದಾರೆ. ಚಿತ್ರದುರ್ಗ ವಿರಕ್ತ ಮಠದ ಶ್ರೀ ಮಲ್ಲಿಕಾರ್ಜುನಸ್ವಾಮಿಗಳನ್ನು ಬೈಸಿದ್ದಾರೆ. ಇದು ಇವರ ದುಷ್ಟ ಮನೋವೃತ್ತಿ! "ಕೆಲವು ಭಕ್ತರು ಅಯ್ಯ ಎಂಬ ಹೆಸರಿನಲ್ಲಿ ಕೊನೆಯಾಗುವಂತೆ ನಾಮಕರಣ ಮಾಡಿಕೊಂಡು ಇತರರಿಗೆ ಜಂಗಮರೆಂಬ ಭ್ರಮವನ್ನು ಹುಟ್ಟಿಸಿರುವರು" ಎಂದು ಸಿದ್ಧಸ್ವಾರಾಧ್ಯರು ಹೇಳಿರುವುದು ನಿಜ. ನಾವೂ ಈ ಮಾತನ್ನು ಒಪ್ಪುತ್ತೇವೆ. ಅಯ್ಯ ಎಂಬುದು ಮಾದಿಗ ಹೊಲೆಯ (ಈಗ ಹರಿಜನರು) ಅಗಸ, ಬ್ರಾಹ್ಮಣ, ಜೈನ, ಲಿಂಗಾಯಿತ- ಎಲ್ಲರ ಹೆಸರುಗಳಲ್ಲಿಯೂ ಇರುತ್ತದೆ. ಅನೇಕ ಭಕ್ತಕುಲ ಸಂಜಾತರು ಆರಾಧ್ಯ, ಶರ್ಮ, ಶಾಸ್ತ್ರೀ, ಒಡೆಯ, ದೇವರು ಎಂದು ಹೇಳಿಕೊಳ್ಳುತ್ತಾರೆಂಬುದೂ ಅಷ್ಟೇ ನಿಜ. ಗುರುಸ್ಥಲದಲ್ಲಿ ಜಂಗಮ ಪ್ರಭೇದವೂ ಒಂದು. ಆದರಂತೆ ಹಲವು ಪ್ರಭೇದಗಳು ಗುರುಸ್ಥಲದಲ್ಲಿರುತ್ತವೆ. ಇವರೆಲ್ಲಾ ಅಯ್ಯ, ಶಾಸ್ತ್ರೀ, ಆರಾಧ್ಯ, ಮಠ ಎಂದು ನಾಮಕರಣ ಮಾಡಿಕೊಳ್ಳುವುದೇ ಸಂಪ್ರದಾಯ. ಅನೇಕ ಗುರುಸ್ಥಲ ಪ್ರಭೇದದವರೂ ಅಪ್ಪ, ಅಣ್ಣ ಎಂದೇ ಹೆಸರಿಟ್ಟುಕೊಂಡಿರುತ್ತಾರೆ. ಆರಾಧ್ಯ ಎಂಬ ಹೆಸರಿರುವವರೆಲ್ಲಾ 'ಜಂಗಮ ಪ್ರಭೇದ'ದವರೆಂಬ ಭ್ರಮೆ ಇರಬೇಕಾಗಿಲ್ಲ. ಜಂಗಮಪ್ರಭೇದದವರೇ ಹೆಚ್ಚೆಂಬ ಭಾವನೆಯನ್ನು ಸಿದ್ಧಸ್ವಾರಾಧ್ಯರು ಹೊಂದಿರುವಂತಿದೆ. ಜಂಗಮಪ್ರಭೇದದವರು ಗುರುಸ್ಥಲದ ಇನ್ನುಳಿದ ಹಲವಾರು ಪ್ರಭೇದಗಳವರನ್ನೂ ಭಕ್ತರೆಂದು ತಿಳಿದಿರುವುದೇ ಈ ಪ್ರಮಾದಕ್ಕೆ ಕಾರಣ ಎಂಬುದನ್ನು ಸಂಸ್ಕೃತ ವಿದ್ವಾಂಸರಾದ ಸಿದ್ಧಸ್ವಾರಾಧ್ಯರು ಇನ್ನಾದರೂ ತಿಳಿದುಕೊಳ್ಳಲಿ. (ಈ ಗ್ರಂಥದ ೨೯-೩೦ನೆಯ ಪುಟಗಳನ್ನು ಓದಿರಿ) ಆರಾಧ್ಯರೆಂಬುವರು ಶೈವ ಬ್ರಾಹ್ಮಣ ಸಂಗಡದಿಂದ ಬಂದವರು. ಆಗಂತುಕರು. ವೀರಶೈವರಲ್ಲಿ ಅನೇಕ ವರ್ಗದವರೂ ಈಗ ಆರಾಧ್ಯರೆಂದು ಹೆಸರಿಟ್ಟುಕೊಳ್ಳುತ್ತಾರೆ. ಈ 'ದಶರಾಮಶರ'ವನ್ನು ಈ ಪ್ರತಿಷ್ಠಾಕಾಂಕ್ಷಿಗಳು ಬಿಡಬೇಕು.

ನಿರಂಜನವಂಶ ರತ್ನಾಕರದ ೨೧ನೆಯ ಪಟ್ಟದ ವೀರೇಶ ಸ್ವಾಮಿಗಳು

ದೇಶಸಂಚಾರ ಮಾಡುತ್ತ ಶಾಸ್ತ್ರವಿಧಿಯಂತೆ ೧೨ ಸಾವಿರ ಜನರಿಗೆ ಲಿಂಗ ಧಾರಣವನ್ನು ಮಾಡಿಸಿ ಧೂಳಪಾವುಡ ಮುಂತಾದ ಶೀಲವಂತರನ್ನು ಮಾಡಿಸಿ ಗುಮ್ಮಾಳಪುರದಲ್ಲಿ ನೆಲಸಿದರು. :ಇವರಿಗೆ ಮಧುಗಿರಿಯಲ್ಲಿ ಆಶ್ರಮ ಸ್ವೀಕಾರ ವಾಯಿತು. ಇವರ ಕಾಲ ಸುಮಾರು ಕ್ರಿ.ಶ. ೧೫೨೫ ರಿಂದ ೧೫೫೦ ಎಂದು ನಿರ್ಧರಿಸಬಹುದು. ಅದೇ ಕಾಲದಲ್ಲಿ ಗುಮ್ಮಣ್ಣ ಸೆಮ್ಮಣ್ಣಯ್ಯಗಳೆಂಬ ಶಿವಶರಣರು ಕಲ್ಯಾಣವನ್ನು ಬಿಟ್ಟು ಶಿವಗಂಗೆಯ ಶೂನ್ಯಸಿಂಹಾಸನ ಮಠಕ್ಕೆ ಬಂದು ನಿಂತರು. ಅವರು ಈಗಿನ ಗುಮ್ಮಳಪುರವನ್ನು ಕಟ್ಟಿಸಿ ಅಲ್ಲಿ ನೆಲೆಸಿದರು. ಇದು ಶಿವಗಂಗೆಯ ಆಗ್ನೇಯ ದಿಕ್ಕಿನಲ್ಲಿ ಬೆಂಗಳೂರು ನಗರದ ದಕ್ಷಿಣಕ್ಕೆ ಆನೆಕಲ್ಲು ಗ್ರಾಮದಿಂದ ಸುಮಾರು ಎರಡು ಹರಿದಾರಿ ವಾಯುವ್ಯಭಾಗದಲ್ಲಿದೆ. ಆ ಶರಣರು ಹಸಿಯ ಮಣ್ಣಿನ ಗಡಿಗೆಯಲ್ಲಿ ಜಂಗಮದ ಧೂಳಪಾದೋದಕ ವನ್ನು ತುಂಬಿ ಗ್ರಾಮ ಪ್ರದಕ್ಷಿಣೆ ಮಾಡಿ ಆ ಮಣ್ಣಿನ ಬಿಂದಿಗೆಯನ್ನು ಗ್ರಾಮ ಮಧ್ಯದಲ್ಲಿ ಸ್ಥಾಪನೆ ಮಾಡಿದರು. ಆ ಊರಿನಲ್ಲಿ ಲಿಂಗಾಂಗಿ ಶಿವಭಕ್ತರಲ್ಲದೆ ಇತರರು ಯಾರೇ ಭವಿಗಳು ನೆಲಸಿದರೆ ಅವರು ನಾಶವಾಗಲಿ ಎಂದು ಸಂಕಲ್ಪ ಮಾಡಿದರು. ಇದು ಮಹಿಮಾಸ್ಥಳ. ಆ ಶರಣರು ಇಲ್ಲಿಯೇ ಮುಕ್ತರಾದರು. ಇಲ್ಲಿಯೇ ಸಿದ್ಧವೀರಸ್ವಾಮಿಗಳ ಗದ್ದುಗೆಯಿದೆ. ಆ ತರುವಾಯ ೨ನೆಯ ನಿರಾಭಾರಿ ಗುರುಸಿದ್ಧ ದೇಶಿಕೇಂದ್ರರು ಅಲ್ಲಿದ್ದ ಶಿವಭಕ್ತರಿಗೆ ಶಿವದೀಕ್ಷೆಯನ್ನು ಮಾಡಿಸಿ ಅವರನ್ನು ಶೀಲವಂತರೆಂಬ ಪ್ರಭೇದದವರನ್ನಾಗಿ ವಿಂಗಡಿಸಿದರು. ಇವರ ಕಾಲ ಕ್ರಿ.ಶ. ೧೫೭೫. ಇವರು ತುಮಕೂರು ಬಳಿಯಿರುವ ಗೂಳೂರಿನಲ್ಲಿ ಬಯಲಾದರು. ಈ ಶೀಲವಂತ ಸಂಗಡದವರೂ, ಧೂಳುಪಾವುಡ ವರ್ಗದವರೂ ತಮ್ಮನ್ನು ಆರಾಧ್ಯರೆಂದು ಹೇಳಿಕೊಳ್ಳುತ್ತಾರೆ. ಈ ಪ್ರಭೇದದವರು ಆನೆಕಲ್, ಬೆಂಗಳೂರು, ಕಾರ್ಕಾರಹಳ್ಳಿ, ಮಾಗಡಿ, ಕುಣಿಗಲ್, ಗುಬ್ಬಿ, ತುಮಕೂರು, ಕೊರಟಗೆರೆ ಮತ್ತು ರಾಮನಗರ ತಾಲ್ಲೂಕುಗಳಲ್ಲಿ ವಿಶೇಷವಾಗಿದ್ದಾರೆ. ಇವರು ಶಿವಾರಾಧ್ಯ ಸಂಗಡದ ಶೈವಬ್ರಾಹ್ಮಣ ಸಂಗಡದ ಆರಾಧ್ಯರಲ್ಲ. ಚಿತ್ರದುರ್ಗ, ಹರಪನಹಳ್ಳಿ, ರಾಯಚೂರು, ಶಿವಮೊಗ್ಗ, ಧಾರವಾಡ ಮುಂತಾದ ಪ್ರಾಂತಗ ಳಲ್ಲಿ ಜೈನಬ್ರಾಹ್ಮಣರೂ ವೀರಶೈವವನ್ನು ಅವಲಂಬಿಸಿ ಜಂಗಮರಾದರು. 'ಜೈನ ಕಟ್ಟು ಜಂಗಮನಾದ'ಎಂಬ ಮಾತು ಅರ್ಥಪೂರ್ಣವಾಗಿದೆ. ಇವರೂ ತಮ್ಮನ್ನು ಆರಾಧ್ಯರೆಂದು ಹೇಳಿಕೊಳ್ಳುತ್ತಾರೆ. ಇವರು ಪಂಡಿತಾರಾಧ್ಯ

ಸಂಗಡದವರಾಗಿರುತ್ತಾರೆ. ವೀರಶೈವ ಸಾದರ ಸಂಗಡದಲ್ಲಿ 'ಹಿರೇಮಠ'ದವರಿ ದ್ದಾರೆ. ಅವರು 'ಹಿರೇಮಠ' ಎಂದು ಹೆಸರಿಟ್ಟುಕೊಳ್ಳುತ್ತಾರೆ. ವೀರಶೈವದಲ್ಲಿ ನೊಣಬ ವೀರಶೈವ ಸಂಗಡದವರಿದ್ದಾರೆ. ಅವರನ್ನು ಸಾಮಾನ್ಯವಾಗಿ ನೊಣಬಾ ರಾಧ್ಯರೆಂದೇ ಕರೆಯುತ್ತಾರೆ. ಕುರುಬರು ಲಿಂಗವಂತ ಧರ್ಮವನ್ನು ಅವಲಂಬಿಸಿ ಲಿಂಗಾಂಗಿಗಳಾದಮೇಲೆ ಅವರು ತಮ್ಮನ್ನು ಒಡೇರು ಎಂದು ಹೇಳಿಕೊಳ್ಳುತ್ತಾರೆ. ಬಗಳೂರು ಬಳಿ ಬಿಳಚೋಡಿನಲ್ಲಿ ಶ್ರೀ ಚನ್ನಯ್ಯ ಒಡೆಯರೆಂಬ ಲಿಂಗವಂತ ಕುರುಬರು ಆ ಸಂಗಡದ ಮಠಾಧೀಶ್ವರರಾಗಿದ್ದಾರೆ. ಲಿಂಗವಂತ ಗಾಣಿಗರಲ್ಲಿ (ಸಜ್ಜನ ಸಂಗಡದವರಲ್ಲಿ) ಆರಾಧ್ಯರೆಂದೂ ಶಾಸ್ತ್ರೀ ಎಂದೂ ಹೆಸರಿಟ್ಟುಕೊಂಡಿ ದ್ದಾರೆ. ಲಿಂಗವಂತರಾದ ಗೌಡವೀರಶೈವರೂ ಆರಾಧ್ಯರೆಂದು ಹೆಸರಿಟ್ಟು ಕೊಂಡಿರುತ್ತಾರೆ. ಲಿಂಗವಂತ ಕುಂಬಾರರು ಆರಾಧ್ಯರೆಂದು ಹೇಳಿಕೊಳ್ಳುತ್ತಾರೆ. ಅನೇಕ ಸ್ಥಳಗಳಲ್ಲಿ ಮಡಿವಾಳಾರಾಧ್ಯರಿದ್ದಾರೆ. ನಯನಜ ಕ್ಷತ್ರಿಯರೆಂಬ ನಾಯಿಂದರು ಲಿಂಗಧಾರಿಗಳಾಗಿದ್ದಾರೆ. ಅವರು ತಮ್ಮನ್ನು ಶೀಲವಂತರೆಂದು ಕರೆಸುತ್ತಾರೆ. ನಾವು ಇಷ್ಟೇಕೆ ವಿವರಗಳನ್ನು ಇಲ್ಲಿ ಹೇಳಬೇಕಾಯಿತೆಂದರೆ, 'ಶೂನ್ಯಪೀಠದ ಪ್ರಭಾವ' ಎಂಬ ಪುಸ್ತಕವನ್ನು ಬರೆದಿರುವ ಡಾ|| ಟಿ. ಜಿ. ಸಿದ್ದಪ್ಪಾರಾಧ್ಯರು ಹೇಳುವಂತೆ ಅಯ್ಯ ಎಂಬ ಪದದಂತೆಯೇ ಅನೇಕರು ಅವರ ಹೆಸರಿನಲ್ಲಿ ಆರಾಧ್ಯ ಪದವಿರುವುದರಿಂದ ಅವರೂ ಜಂಗಮರೆಂಬ ಭ್ರಮೆಯನ್ನು ಸಮಾಜದಲ್ಲಿ ತುಂಬುತ್ತಿದ್ದಾರೆಂದು ಸೂಚಿಸಲು ಈ ವಿವರಗಳನ್ನು ಬರೆಯ ಬೇಕಾಯಿತು. ಕೆಲವರು 'ಅಯ್ಯ' ಎಂದು ಹೆಸರಿಟ್ಟುಕೊಂಡು ಜಂಗಮವೆಂಬ ಭ್ರಮಾತ್ಮಕರಾಗಿದ್ದಾರೆಂದು ಅವರು ಹೇಳಿದ್ದಾರೆ. ಶ್ರೀ ಸಿದ್ದಪ್ಪಾರಾಧ್ಯರು ಶಿವಾರಾಧ್ಯ ಸಂಗಡದವರಲ್ಲ; ಶೈವಬ್ರಾಹ್ಮಣ್ಯದಿಂದ ಬಂದು ಅವರು ಲಿಂಗವಂತ ರಾದ ಆರಾಧ್ಯರಲ್ಲ. ಇದು ಶತಸ್ಸಿದ್ಧ! ಎಂದರೆ ಕಮ್ಮೆ ಕುಲದ ಬ್ರಾಹ್ಮಣ ಜಾತಿಯ ವಂಶ ಸಂಜಾತರಲ್ಲ! ಹಾಗಾದರೆ ಇವರು ಯಾವ ಆರಾಧ್ಯರೆಂಬು ದನ್ನು ಅವರೇ ಹೇಳಬೇಕು! ಆರಾಧ್ಯರೆಲ್ಲಾ ಜಂಗಮ ಪ್ರಭೇದದವರೇ ಆದರೆ, ಶೈವನಾರಾಧ್ಯರು, ನೊಣಬಾರಾಧ್ಯರು, ಕುರುಬಾರಾಧ್ಯರು, ಸಜ್ಜನಾರಾಧ್ಯರು, ಕುಲಾಲಾರಾಧ್ಯರು, ಮಡಿವಾಳಾರಾಧ್ಯರು, ಶೀಲವಂತ ಆರಾಧ್ಯರು, ಪಂಚಮ ಪ್ರಭೇದಾರಾಧ್ಯರು ಇಷ್ಟು ಸಂಗಡಗಳಲ್ಲಿ ಶ್ರೀ ಸಿದ್ದಪ್ಪಾರಾಧ್ಯರು ಯಾವ ಸಂಗಡದವರೋ ನಮಗೆ ಗೊತ್ತಿಲ್ಲ! ·ಹಾಗಾದರೆ, ಆರಾಧ್ಯರೆಲ್ಲಾ ಜಂಗಮ

ರೆಂದಾಯಿತೇನು ! ಕುಡಿಒಕ್ಕಲಿಗ ಸಿದ್ಧರಾಮದೇವರು ಮಹಾಜಂಗಮಸ್ವರೂಪಿ. ಆತನು ಅನೇಕ ಜಂಗಮ ಮನೆತನಗಳಿಗೆ ಗೋತ್ರ ಪುರುಷನಾಗಿಲ್ಲವೆ ? ಈ ಗೋತ್ರದ ಜಂಗಮರೆಲ್ಲಾ ಹನ್ನೆರಡನೆಯ ಶತಮಾನದಿಂದ ಈಚಿನವರಾದಂತಾಯಿತು. ಅವರು ಆಯ್ಯನವರಾಗಿದ್ದಾರೆ. ಹಾಗೆಯೇ, ಕೊಟ್ಟೂರು ಬಸವೇಶ್ವರನ ಕಾಲ ಕ್ರಿ.ಶ. ೧೬೫೦. ಅನೇಕರು ಶಿವದೀಕ್ಷಾನುಗ್ರಹದಿಂದ ಆಗ ಲಿಂಗವಂತರಾದರು; ಜಂಗಮರಾದರು. ಭಕ್ತ ಕೊಟ್ರಪ್ಪಗಳೆಲ್ಲಾ ಕೊಟ್ರಯ್ಯಗಳಾದರು. ಕೊಟ್ಟೂರು ಬಸವೇಶ್ವರ ಅನೇಕ ಜಂಗಮರ ಮನೆದೇವರಾಗಿದ್ದಾನೆ. ಎಂದರೆ ಅವರ ಗೋತ್ರಪುರುಷನೆಂದಾಯಿತು. ನಾಯಕನಹಟ್ಟಿ ತಿಪ್ಪೇರುದ್ರಸ್ವಾಮಿಯ ಕಾಲ ಕ್ರಿ. ಶ. ೧೬೫೦. ಅವನ ಕಾಲದಲ್ಲಿ ಅನೇಕರು ಲಿಂಗವಂತ ಜಂಗಮರಾದರು. ತಿಪ್ಪೇರುದ್ರಸ್ವಾಮಿ ಆ ಜಂಗಮ ಮನೆತನಗಳ ಮನೆದೇವರಾದನು. ಭಕ್ತ ತಿಪ್ಪಣ್ಣಗಳೆಲ್ಲಾ ಜಂಗಮ ತಿಪ್ಪೇಸ್ವಾಮಿಯಾದರು. ಶರಣ ಕರಿಸಿದ್ಧಸ್ವಾಮಿಯ ಬಳಗದವರೂ ಜಂಗಮರಾದರು. ಇವರೆಲ್ಲಾ 'ಅಯ್ಯ'ಗಳಾದರು. ತೋಂಟದ ಸಿದ್ಧಲಿಂಗರ ಕಾಲದಲ್ಲಿ ಏಳುನೂರು ಬುಡಕಟ್ಟುಗಳಾದುವು. ಲೋಚನ ಬುಡಕಟ್ಟು, ನೊಡ ಬುಡಕಟ್ಟು, ಶಿವಪೂಜೆ ಬುಡಕಟ್ಟು, ಪಚ್ಚೆ ಕಂಥೆ ಬುಡಕಟ್ಟು, ಒಪ್ಪತ್ತಿನ ಬುಡಕಟ್ಟು, ಬಿಸಿಅಗ್ಗಣಿ ಬುಡಕಟ್ಟು, ಸೋಮೇಕಟ್ಟೆ ಬುಡಕಟ್ಟು, ನಿಡುಗಲ್ಲು ಬುಡಕಟ್ಟು, ಸಂಪಿಗೆ ಬುಡಕಟ್ಟು ಮೊದಲಾದ ಬುಡಕಟ್ಟುಗಳ ಮನೆತನದವರನ್ನು ಗುರುಸ್ಥಲದವರೆಂದು ಕರೆಯುತ್ತಾರೆ. ಇವರಲ್ಲಿ ಜಂಗಮವೃತ್ತಿಯ ಕುಟುಂಬಗಳೂ ಉಂಟು. ತುಮಕೂರು, ಕೊರಟಗೆರೆ, ಮಧುಗಿರಿ, ಪಾವಗಡ, ಗೋರಿಬಿದನೂರು ಮತ್ತು ಕೋಲಾರ ಜಿಲ್ಲೆಯ ಕೆಲವು ಭಾಗಗಳಲ್ಲಿಯೂ ವೀರಶೈವ ಪಂಚಮ ಪ್ರಭೇದದವರಿದ್ದಾರೆ. "ತಥಾ ಸರ್ವೇಷು ವರ್ಣೇಷು ಶ್ರೇಷ್ಠಾಃ ಪಂಚಮವಂಶಜಾಃ" ಎಂಬಂತೆ ಈ ವರ್ಗದವರು ಎಲ್ಲ ವರ್ಗಗಳಿಗಿಂತಲೂ ಶ್ರೇಷ್ಠರೆಂದು ಸ್ವಾಯಂಭುವಾಗಮದಲ್ಲಿ ಹೇಳಿದೆ. ಆದ್ದರಿಂದ ಈ ಎಲ್ಲ ಪಂಗಡಗಳವರೂ ಅಯ್ಯಾಚಾರದವರಾಗಲೂ ಬಹುದು. ಇದು ಸನಾತನ ವೀರಶೈವ ಸಂಪ್ರದಾಯ. ಈ ವರ್ಗದವರು 'ಅಯ್ಯ' ಎಂದು ಹೇಳಿಕೊಳ್ಳುವಂತೆ ಶಾಸ್ತ್ರೀ, ದೇವರು, ಒಡೆಯರು, ಶರ್ಮ, ಆರಾಧ್ಯ, ಆರ್ಯ, ಮಠ ಎಂದೂ ಹೆಸರಿಟ್ಟುಕೊಳ್ಳುತ್ತಾರೆ. ಆದ್ದರಿಂದ 'ಅಯ್ಯ' ಪದಕ್ಕಿಂದ 'ಆರಾಧ್ಯ' ಪದದಲ್ಲಿ ಯಾವ ಜಂಗಮತ್ವವೂ ಸಿದ್ಧಿಸುವು

ಲ್ಲಿ. ಹೆಸರು ಏನೇ ಇದ್ದೀತು! ಮೂಲ ಕುಲ ಎಲ್ಲರಿಗೂ ಇದ್ದೇ ಇರುತ್ತದೆ. ನಾವು ದಕ್ಷಿಣ ಕರ್ಣಾಟಕದ ಸಮಾಜವನ್ನು ಅನುಲಕ್ಷಿಸಿ ಬರೆಯುತ್ತಿದ್ದೇವೆ. ಶಿವರು 'ದೇವರು' ಎಂದು ಅವರ ಹೆಸರಿನಲ್ಲಿ ಅಂಕಿತವನ್ನು ಸೂಚಿಸುತ್ತಾರೆ. ದೇವರು ಎಂದರೆ ಕನ್ನಡದಲ್ಲಿ ಸ್ವಾಮಿ ಎಂದು ಅರ್ಥ. ಕನ್ನಡದ ಜನ ಪ್ರೀತಿಯಿಂದ ಕಿರಿಯರನ್ನು ತಮ್ಮ ಎಂದು ಕರೆಯುವಂತೆ ಹಿರಿಯರನ್ನು ದೇವರು ಎಂದು ಅಕ್ಕರೆಯಿಂದ ಕರೆಯುತ್ತಾರೆ. ತಮಿಳು ಸಂಸ್ಕೃತಿಯ ಪ್ರಭಾವ ವೀರಶೈವದಮೇಲೆ ಆಗಿರುವುದರಿಂದಲೇ ತಮಿಳು ಶೈವ ಸಂತರು ದೇವರ್ ಎಂದು ಹೇಳಿಕೊಳ್ಳುವ ಪರಿಪಾಠದಂತೆ ಕನ್ನಡ ಶೈವಯತಿಗಳು ತಮ್ಮ ಹೆಸರಿನಲ್ಲಿ ದೇವರು ಎಂಬ ಪದವನ್ನು ಬಳಸಿದರು. ಅದು ಕನ್ನಡದ ದೇವರು ಎಂಬ ಪದದಂತೆ ರೂಢಿಯಾಗಿ ನಿಂತಿದೆ. ಆರಾಧ್ಯರು ಎಂಬ ಪದ ಶಿವಾರಾಧ್ಯ ಯುಗದ ಪ್ರಾಬಲ್ಯ ಕಾಲದಲ್ಲಿ ವೀರಶೈವದಮೇಲೆ ತನ್ನ ವರ್ಚಸ್ಸನ್ನು ಬೀರಿತು. ಸುಮಾರು ಹತ್ತನೆಯ ಶತಮಾನದ ಹೊತ್ತಿಗೆ ಪಂಚಪೀಠಾಚಾರ್ಯರೂ ಆರಾಧ್ಯ ಸಂಪ್ರದಾಯವನ್ನು ಅವಲಂಬಿಸಿದಂತೆ ಕಂಡುಬರುತ್ತದೆ. ಬಸವಣ್ಣ ನವರ ಕಾಲದಲ್ಲಿ ಶಿವಾರಾಧ್ಯ ಪ್ರಭೇದ ಸಂಪೂರ್ಣವಾಗಿ ವೀರಶೈವವೇ ಆಯಿತು. ಜಂಗಮ, ಪ್ರಮಥ, ಪುರಾತನ, ಶರಣ ಎಂಬ ಪದಗಳು ಶ್ರೇಷ್ಠವಾಗಿದ್ದರೂ ಏಕೋ ಅವು ಯಾವ ಹೆಸರಿನಲ್ಲಿಯೂ ಸೇರಿಕೊಂಡು ಬಂದಂತಿಲ್ಲ. ಇದು ವಿಚಾರಾರ್ಹವಾಗಿದೆ. ಇದನ್ನೆಲ್ಲಾ ಸಾವಧಾನಚಿತ್ತದಿಂದ ಪರ್ಯಾಲೋಚಿಸಿ ದರೆ, ಜಂಗಮವೆಂಬುದು ಒಂದು ಪ್ರಭೇದ; ಅದರಲ್ಲಿ ನಾನಾ ಕುಲಜಾತಿಗ ಳುಂಟು. ಇಷ್ಟಾದರೂ ಚಿತ್ರದುರ್ಗದ ವಿರಕ್ತ ಮಠದ ಮೂಲ ಸಂಸ್ಥಾಪಕ ಮುರಿಗೀಸ್ವಾಮಿಯನ್ನು ಮನೆದೇವರೆಂದು ಯಾರೂ ಭಾವಿಸುತ್ತಿಲ್ಲ. ಈತನು ಯಾವ ಜಂಗಮ ಮನೆತನಗಳಿಗೂ ಗೋತ್ರಪುರುಷನಲ್ಲ. ಕಾರಣ ಇಷ್ಟೆ. ಮುರಘರು ಅಲಿಂಗಿ; ಪುರಾತನರಲ್ಲಿ ಒಬ್ಬ ಸಂತ. ಅವನ ತರುವಾಯ ಮುರಘಾಪಂಥ ವೀರಶೈವವನ್ನು ಅವಲಂಬಿಸಿತೆಂದು ನಿರ್ಧರವಾಗಿ ತಿಳಿದು ಬರುತ್ತದೆ. ಮುರಘರು ಜಂಗಮವರ್ಗಜರಲ್ಲ. ಹದಿನಾರನೆಯ ಶತಮಾನ ದಲ್ಲಿ ಈ ಮುರಘಪಂಥದ ಶಾಂತವೀರ ಲಿಂಗವಂತ ದೀಕ್ಷೆಯಿಂದ ಈ ಸಂಪ್ರ ದಾಯದ ವಿರಕ್ತನಾದನು. ಮುರಘನ ಸೂತ್ರವಿಡಿದು ಚಿತ್ರದುರ್ಗದಲ್ಲಿ ಹದಿನೆಂಟನೆಯ ಶತಮಾನದಲ್ಲಿ ಮುರಿಗೇಂದ್ರಯ್ಯ (ರುದ್ರಪ್ಪ) ನೆಂಬ ವಿರಕ್ತ

ಚಿತ್ರದುರ್ಗದ ಪಾಳೆಯಗಾರನ ಆಶ್ರಯದಲ್ಲಿ ಇಲ್ಲಿಯೇ ಮಠ ಕಟ್ಟಿಸಿಕೊಂಡು ನಿಂತನೆಂಬುದು ಇತಿಹಾಸ ಪ್ರಮಾಣಬದ್ಧವಾಗಿದೆ. ಆದ್ದರಿಂದ ಜಂಗಮ ಪ್ರಭೇದದವರಲ್ಲಿ ನಾನಾ ಕುಲಗೋತ್ರಗಳವರಿರುವರೆಂಬುದನ್ನು ನಿರಾಕರಿಸು ವಂತಿಲ್ಲ. ಇದು ಶರಣಧರ್ಮ ಸೂತ್ರ. ಮುರಘಾಮಠ ಅಂಥ ಶರಣ ಸಂಪ್ರದಾಯವನ್ನು ಪ್ರಚಾರ ಮಾಡಲು ಹುಟ್ಟಿದ ಮಠ. ಶರಣಧರ್ಮದಲ್ಲಿ ನಿಷ್ಠರಾದ ಯಾವ ಪಂಗಡದ ವೀರಶೈವನಾದರೂ ಈ ಪೀಠದ ವಿರಕ್ತ ಸ್ವಾಮಿ ಯಾಗಲು ಅವಕಾಶವುಂಟು. ಬಸವಣ್ಣನವರ ಉದಾರತತ್ತ್ವವಾದರೂ ಇದೇ ಆಗಿರುತ್ತದೆ. 'ಶೂನ್ಯಸಿಂಹಾಸನ'ದ ಧ್ಯೇಯವೂ ಧೋರಣೆಯೂ ಇದೇ! ಸನಾತನ ವೀರಶೈವವನ್ನೂ ಶರಣಧರ್ಮವನ್ನೂ ಕೆಲವು ಪಂಡಿತರು ಬೇಕೆಂದಾಗ ಒಂದೆನ್ನುತ್ತಾರೆ; ಬೇಡವೆಂದಾಗ ಎರಡೆನ್ನುತ್ತಾರೆ! ಇದೇ ಎಲ್ಲ ಗೊಂದಲದ ಮೂಲ! ಶೂನ್ಯಪೀಠ ಶರಣಧರ್ಮ ಪೀಠವೇ ಹೊರತು ಅದು ಜಂಗಮ ಪ್ರಭೇದದವರ ಪೀಠವಲ್ಲವೆಂಬುದನ್ನು ಶಾಸ್ತ್ರಾಧಾರದಿಂದ ನಿರ್ಣಯಿಸಬಹುದು. ಶೂನ್ಯಪೀಠವನ್ನು ವಿಶಿಷ್ಟ ಪ್ರಭೇದದವರು ಅತಿಕ್ರಮಣ ಮಾಡಿಕೊಂಡಿರು ತ್ತಾರೆಂಬುದರಲ್ಲಿ ಸಂಶಯವಿಲ್ಲ. ಬಸವಣ್ಣನವರ ಮನೋಧರ್ಮವೇ ಶೂನ್ಯ ಪೀಠವನ್ನು ಶರಣಪೀಠವೆಂದು ಉದ್ಘೋಷಿಸಿತು! ಗುರುಬಸವ ಲಿಂಗಾಯನನು! ಬಸವಣ್ಣನವರನ್ನು ಕವಿ ಏಕೋ ಏನೋ ಚೋರಬಸವ ಎಂದು ವಿಡಂಬನ ಮಾಡಿದ್ದಾನೆ! ಇಂದು ಶೂನ್ಯಪೀಠವನ್ನು ಅತಿಕ್ರಮಿಸಿಕೊಂಡಿರುವವನನ್ನು ಕಂಡು ಚೋರ ಜಂಗಮನೆಂದು ಲೋಕ ನಗುತ್ತಿದೆ!

ಚಿತ್ರದುರ್ಗದ ಶೂನ್ಯಸಿಂಹಾಸನ ಮಠ ಮೂಲ ಶೂನ್ಯಸಿಂಹಾಸನ ಮಠ ವಲ್ಲವೆಂದು ನಾವು ದೃಢವಾಗಿ ನಂಬಿರುತ್ತೇವೆ. ಇದೂ ಒಂದು ಶಾಖಾ ಮಠ ವೆಂಬುದರಲ್ಲಿ ಅನುಮಾನವಿಲ್ಲ. ಹದಿನಾರನೆಯ ಶತಮಾನದಲ್ಲಿದ್ದ ಶಾಂತ ವೀರನನ್ನು ಹದಿನೆಂಟನೆಯ ಶತಮಾನದ ಮುರಿಗಿಸ್ವಾಮಿಯೆಂದು ನಾವು ಎಲ್ಲಿಯೂ ಹೇಳಿಲ್ಲ. ಆ ಶಾಂತವೀರನೇ ಬೇರೆ; ಚಿತ್ರದುರ್ಗದ ಎರಡನೇ ಮುರಿಗಿಸ್ವಾಮಿಯೇ ಬೇರೆ. ಚಿತ್ರದುರ್ಗದ ವಿರಕ್ತ ಮಠದಲ್ಲಿರುವ ಶೂನ್ಯ ಸಿಂಹಾಸನ ಎಂದೂ ಯಾವ ಬಾದಷಹನ ದರ್ಬಾರಿನಲ್ಲಿಯೂ ಇರಲಿಲ್ಲ. ಅವರ ಮಠದ ಕಥೆಯೆಲ್ಲಾ ಕಟ್ಟುಕಥೆ! ಈ ಶಾಖಾ ಮಠ ಬೃಹನ್ಮಠವೆಂದು ಸಾಧಿಸುತ್ತ ಬಂತು. ಮೂಲಮಠವನ್ನೇ ಮರೆಯಿತು. ಆನಂದಪುರವೇ ಜಗದ್ಗುರು

...ತ; ಚಿತ್ರದುರ್ಗದ ಮಠ ಸಾಮಂತ ಪೀಠ; ಈ ಬೃಹನ್ಮಠದ ವಿಚಾರದಲ್ಲಿ ...ಶೋಧನೆಯ ಕ್ಷ-ಕಿರಣ ಪ್ರಭೆಯನ್ನು ಹಾಯಿಸುವುದೆಂದರೆ ಸಾಮಾನ್ಯವಲ್ಲ. ...ಥ ಸಂಶೋಧನೆಯಿಂದ ಗೋಚರಿಸಬಹುದಾದ ಕೆಲವು ಸಂಗತಿಗಳು ...ದ್ಧಾವಂತರ ಮನಸ್ಸನ್ನು ನೋಯಿಸಬಹುದು; ಮೂಢ ನಂಬಿಕೆಗಳನ್ನು ...ಲುಗಾಡಿಸಬಹುದು.

* "ಆದರೆ, ಆಧುನಿಕ ಯುಗದಲ್ಲಿ ಐತಿಹಾಸಿಕ ದೃಷ್ಟಿ ವಿದ್ವತ್ತಿನ ಒಂದು ಮುಖ್ಯವಾದ ಅಂಗ. ಸಮಸ್ತ ವಿಷಯಗಳಿಗೂ-ಒಂದು ಮತಕ್ಕೆ, ಅದರ ...ಂಥಗಳಿಗೆ ಕೂಡ ಚರಿತ್ರೆಯುಂಟು ಎಂಬುದು ಇಂದಿನವರ ದೃಢವಾದ ...ವು. ಜಗತ್ತಿನ ಎಲ್ಲ ಮತಗಳ ವಿಷಯದಲ್ಲೂ ಈ ಬಗೆಯ ಶೋಧನೆ ...ಗಾಗಲೇ ನಡೆದಿದೆ, ಇನ್ನೂ ನಡೆಯುತ್ತಿದೆ. ನಮ್ಮ ದೇಶದಲ್ಲಿಯೇ ಆಸ್ತಿಕರು "ಅಪೌರುಷೇಯ"ವೆಂದು ನಂಬಿರುವ ವೇದಗಳ ಕರ್ತೃತ್ವ, ಕಾಲ ನಿರ್ಣಯ, ...ಠಸಂಶೋಧನೆ ಮೊದಲಾದವನ್ನು ಕುರಿತು ಪಾಶ್ಚಾತ್ಯರೂ, ಈಚೆಗೆ ನಮ್ಮ ...ಡ್ವಾಂಸರೂ ಪರಿಶೋಧನೆ ನಡೆಸಿ ಹೊಸ ಹೊಸ ವಾದಗಳನ್ನು ಮುಂದಿರಿಸಿಲ್ಲವೆ? ...ಸ್ತ ಮತದಲ್ಲಿ "ಸುವಾರ್ತೆ"ಗಳನ್ನು (The Gospels) ಕುರಿತು ವಿಸ್ತಾರ ...ದ ಸಂಶೋಧನೆ ನಡೆದು, ಅದರ ಹಲವು ನಿರ್ಣಯಗಳನ್ನು ಕ್ರೈಸ್ತ ಧಾರ್ಮಿಕರೇ ...ಪ್ಪಿಕೊಂಡಿಲ್ಲವೆ ? ದೇವಮೂಲ, ಋಷಿಮೂಲಗಳನ್ನು ಹುಡುಕಬಾರದೆಂಬುದು ...ದಿನಕಾಲದವರ ಭಾವನೆಯಾಯಿತು. ಅವುಗಳನ್ನು ಅರಿತುಕೊಂಡರೂ ...ರ್ಮದ ತಿರುಳಿಗೆ ಯಾವ ಕುಂದೂ ಬರಲಾರದೆಂಬುದು ನಮ್ಮ ನಂಬಿಕೆ ...ಗಬೇಕು." ಎಂಬುದಾಗಿ ಶ್ರೀ ಎಂ. ಚಿದಾನಂದಮೂರ್ತಿ ಎಂ.ಎ., ಅವರು ...ದಿರುವ "ಶೂನ್ಯಸಂಪಾದನೆಯನ್ನು ಕುರಿತು" ಎಂಬ ಪುಸ್ತಕದ ...ನ್ನುಡಿಯಲ್ಲಿ ದಿವಂಗತ ಪ್ರೊಫೆಸರ್ ತೀ. ನಂ. ಶ್ರೀಕಂಠಯ್ಯ, ಎಂ.ಎ., ...ರು ತಮ್ಮ ಅಪರಂಜಿಯ ಅಭಿಪ್ರಾಯವನ್ನು ಸೂಚಿಸಿದ್ದಾರೆ. ಇದನ್ನು ...ಪ್ತ ಮತೀಯರೂ ಒಪ್ಪಬಹುದಾಗಿದೆ. ಇತಿಹಾಸ ವಿಮರ್ಶನ ದೃಷ್ಟಿ ...ಮಾಜದಲ್ಲಿ ಬೆಳಗಬೇಕು; ದೃಷ್ಟಿಮಾಂದ್ಯ ದಾರಿ ತಪ್ಪಿಸೀತು ! ಚಿತ್ರದುರ್ಗದ ...ಕ್ತಿ ಮಠದ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ತಮ್ಮ ಮಠದ ಚರಿತ್ರೆಯನ್ನು ...ಹಾಸದ ಆಧಾರದಮೇಲೆ ಬರೆಯಿಸಲು ಒಪ್ಪಿರುತ್ತಾರೆಂಬುದು ಸಂತೋಷದ ...ಗತಿ. ವೀರಶೈವ ಧರ್ಮ ಅನಾದಿಯಾದುದು. ಬಸವಣ್ಣನವರು ಅಂದೇ

ಜಾತ್ಯತೀತ ಧರ್ಮರಾಷ್ಟ್ರದ ಪೂರ್ಣ ಸ್ವರೂಪವನ್ನು ನಿರ್ಮಿಸಿದರು. ಇಷ್ಟ ಲಿಂಗವೆಂಬುದು ಒಂದು ಸಹಯೋಗ ಸಂಕೇತವಾಗಿ ನಿಂತಿದೆ. ಈ ಪರಸ್ಪರ ಸಮಾನತೆಯನ್ನು ಧರ್ಮದಲ್ಲಿ ಸಾಧಿಸಬೇಕೆಂಬ ಉದ್ದೇಶದಿಂದ ಶೂನ್ಯಸಿಂಹಾಸನ ವನ್ನು ತಾತ್ತ್ವಿಕದೃಷ್ಟಿಯಿಂದ ನಿರ್ಮಿಸಿದರು. ಅದು ಧಾರ್ಮಿಕರೂಪದಲ್ಲಿ ಪರಿವರ್ತಿತವಾಯಿತು. ಶಿವಾನುಭವ ಮಂಟಪದಲ್ಲಿ ಎಲ್ಲ ಕುಲಜಾತಿಗಳ ಶರಣರೂ ಒಂದು ಧರ್ಮಸೂತ್ರದಿಂದ ಒಂದು ಕುಲವಾದರು. ಯಾವ ಜಾತಿ ಯಲ್ಲಿ ಹುಟ್ಟಿದರೂ ಶಿವನನ್ನು ಅರಿತವನು ಶ್ರೇಷ್ಠನೆಂಬುದನ್ನು ಬಸವಣ್ಣನವರು ನಂಬಿದರು. ಭರತಖಂಡದಲ್ಲಿ ಏಕತೆ ಮಾಡಲು ಬಸವಧರ್ಮ ಮಹಾಧರ್ಮ ವಾಗಿದೆ. ವಿಶ್ವಧರ್ಮವಾಗಲೂ ಇದು ಅರ್ಹವಾಗಿದೆ. ಇಂಥ ಉದಾತ್ತ ಧರ್ಮದಲ್ಲಿ ಯಾವ ಪಕ್ಷ ಪಂಥ ಪಂಗಡವೂ ಶ್ರೇಷ್ಠವಲ್ಲ. ಇದನ್ನು 'ಶೂನ್ಯ ಪೀಠದ ಪ್ರಭಾವ' ಅರಿತಿಲ್ಲ. ಅದು ಚಿತ್ರದುರ್ಗದ ಮುರಿಗಿಮಠದ ಶ್ರೀ ಮಲ್ಲಿಕಾರ್ಜುನಸ್ವಾಮಿಗಳು ತಾ|| ೨೫-೧೧-೧೯೬೭ ರಂದು ಮೈಸೂರು ನಗರಕ್ಕೆ ಬರಬೇಕಾಗಿದ್ದ ಸಂದರ್ಭಕ್ಕೆ ಸರಿಯಾಗಿ ಶ್ರೀ ಆರಾಧ್ಯರು ಈ ಪುಸ್ತಕವನ್ನು ಪ್ರಕಟಿಸಲು ಸಂಯೋಜಿಸಿದರು. ಆ ವೇಳೆಗೆ ನಮ್ಮ 'ಶೂನ್ಯ ಸಿಂಹಾಸನ' ಗ್ರಂಥ ಪ್ರಕಟವಾಗಬಹುದೆಂದು ನಿರೀಕ್ಷಿಸಿದ್ದರೇನೋ ! "ಸಿಡಿಲು ಹೊಡೆವೊಡೆ ಹಿಡಿದ ಕೊಡೆ ಕಾವುದೇ ?" ಈ 'ಶೂನ್ಯಪೀಠದ ಪ್ರಭಾವ' ಗ್ರಂಥದಿಂದ ಶೂನ್ಯ ಪೀಠದ ಪ್ರಭಾವ ಯಾವರೀತಿಯಿಂದಲೂ ಹೆಚ್ಚಲಿಲ್ಲ. ಅದರ ಪ್ರಭಾವ ಮೈಸೂರಿನಲ್ಲಿ ಕಾಂತಿಹೀನವಾಯಿತು ! ನಂಜನಗೂಡಿನಲ್ಲಿ ಮಾಯವಾಯಿತು ! ಶೂನ್ಯ ಪೀಠದ ಪ್ರಭಾವ–ಪುಸ್ತಕವನ್ನು ಓದಿಸಿ ವೀರಶೈವ ಸಮಾಜ ಕೆರಳಿತು. ಶ್ರೀ ಮಲ್ಲಿಕಾರ್ಜುನಸ್ವಾಮಿಗಳಿಗೆ ಸಮಾಜದ ಪ್ರಮುಖರು ತಮ್ಮ ಪ್ರತಿಭಟನೆ ಯನ್ನು ಬರಹದಮೂಲಕ ತಿಳಿಸಿದರು. ಸಕಾಲದಲ್ಲಿ ಚಿತ್ರದುರ್ಗದ ವಿರಕ್ತ ಮಠದಿಂದ ಸಮಂಜಸ ಉತ್ತರಬರಲಿಲ್ಲವೆಂದು ಕುಪಿತರಾದ ಸಮಾಜಬಾಂಧವರು ಮತ್ತೊಂದು ಪ್ರಕಟನೆಯನ್ನು ಹೊರಡಿಸಿ ಶ್ರೀ ಮಲ್ಲಿಕಾರ್ಜುನಸ್ವಾಮಿಗಳ ಉತ್ಸವವನ್ನು ಪ್ರತಿಬಂಧಿಸಲು ನಿರ್ಧರಿಸಿದರು. ನಿರ್ವಾಹವಿಲ್ಲದೆ, ಶ್ರೀ ಮಲ್ಲಿಕಾರ್ಜುನಸ್ವಾಮಿಗಳು ಆ ಶೂನ್ಯಪೀಠದ ಪ್ರಭಾವಕ್ಕೂ ತಮ್ಮ ಶ್ರೀ ಮಠಕ್ಕೂ ಯಾವ ಸಂಬಂಧವೂ ಇಲ್ಲವೆಂದು ಮಹಾಜನರಿಗೆ ತಿಳಿಸಿದಮೇಲೆ, ಮೈಸೂರು ವೀರಶೈವ ಸಮಾಜ ತನ್ನ ಘನತೆ ಗೌರವಗಳಿಗೆ ಅನುಗುಣವಾಗಿ

ಸ್ತನವನ್ನು ನಡೆಸಲು ನೆರವಾಯಿತು! ಸಮಾಜದ ಗೌರವವನ್ನು ಕಾಪಾಡ ಬೇಕೆಂಬ ಮಹೋದ್ದೇಶದಿಂದ ಸುತ್ತೂರು ಶ್ರೀ ಜಗದ್ಗುರುಗಳವರೂ ಆ ಸಮಯದಲ್ಲಿ ಮೈಸೂರು ನಗರದಲ್ಲಿ ಬಿಡಾರ ಮಾಡಿದ್ದ ಸಿರಿಗೆರೆ ಶ್ರೀ ಜಗದ್ಗುರುಗಳೂ ವೀರಶೈವ ಸಮಾಜದೊಂದಿಗೆ ಸಹಕರಿಸಿ ಮಾರ್ಗದರ್ಶನ ಮಾಡಿದುದು ಅಭಿನಂದನೀಯವಾಗಿದೆ. ಮೈಸೂರು ವೀರಶೈವ ಜನಾಂಗ ಈ ವೀರಶೈವ ಸಮಾಜದ ಕೃತಜ್ಞತೆಗೆ ಪಾತ್ರವಾಗಿದೆ. ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಅರಮನೆಗೆ ಹೋಗಿಬಂದರೂ ಅಲ್ಲಿ ಯಾವ ಧಾರ್ಮಿಕ ಕಟ್ಟಳೆಯೂ ನಡೆಯಲಿಲ್ಲ.

ಶೂನ್ಯಪೀಠದ ಪ್ರಭಾವ ಅವಸರ ಅವಸರದಲ್ಲಿ ಹುಟ್ಟಿದೆ. ಇದೊಂದು ಕೃಷ್ಟ ಪುಸ್ತಕ. ಇದರ ಜಾತಕ ಲಕ್ಷಣ ಶುಭಪ್ರದವಾಗಿಲ್ಲ. ಶ್ರೀ ಮಲ್ಲಿಕಾರ್ಜುನಸ್ವಾಮಿಗಳ ಮೆರವಣಿಗೆ ನಂಜನಗೂಡಿನಲ್ಲಿ ಇದ್ದಕ್ಕಿದ್ದಂತೆಯೇ ನಿಯಂತಾಯಿತು! ಮನೆಯದೀಪ ಮನೆಯಲ್ಲಿಯೇ ಚೆನ್ನಾಗಿ ಬೆಳಗೀತು! ಅನ್ನು ಬಯಲಿಗಿಟ್ಟರೆ ಆರಿಹೋದೀತು! ಗಾಳಿಯಲ್ಲಿಯೂ ಅದು ಬೆಳಗಬೇ ಕಾದರೆ ಅದರ ಕಾಂತಿಪ್ರಭಾವ ಅಸದೃಶವಾಗಿರಬೇಕಲ್ಲವೆ! ಚಿತ್ರದುರ್ಗದ ವಿರಕ್ತ ಮಠ ಎಲ್ಲ ವಿರಕ್ತಮಠಗಳಂತೆ ಒಂದು ಶಾಖಾ ಮಠವಾಗಿದೆ. ಶ್ರೀ ಜಯದೇವ ಸ್ವಾಮಿಗಳು ಅವರ ವಿರಕ್ತ ಜೀವನದ ಪೂರ್ಣ ಅವಧಿಯಲ್ಲಿ ಈ ಶಾಖಾಮಠದ ಮಹತ್ವವನ್ನು ಬೆಳಸಲು ಸಾಹಸಮಾಡಿದರು. ಮೂಲ ಮುರಘಾಮಠ ಬಸವಪುರ ವಿರಕ್ತಮಠವೆಂಬುದನ್ನು ಜನ ಮನದಿಂದ ಮರೆಮಾಡಿದರು. ಶ್ರೀ ಜಗದ್ಗುರು ಎಂದು ಮೆರೆಯಿಸಿಕೊಳ್ಳಲು ಅವರ ಪಟ್ಟಪರಿಶ್ರಮ ಸ್ವಲ್ಪವಲ್ಲ! ಶ್ರೀಮಠ ಅಷ್ಟೈಶ್ವರ್ಯ ಸಂಪನ್ನವಾಯಿತು! ಶೂನ್ಯಸಿಂಹಾಸನ ದ ಅರ್ಥ ಮಾತ್ರ ಇಂದೂ ಕಣ್ಮರೆಯಾಗಿದೆ! ಈಗ ಅದು ಸಕಲಸಿಂಹಾಸ ನವಾಗಿದೆ! ಇದು ಸರಿಯಲ್ಲ. ಅದು ನಿಷ್ಕಲ ಸಿಂಹಾಸನವಾಗಬೇಕಾದುದೇ ಬಸವಣ್ಣನವರ ಧರ್ಮಹೃದಯಾಕಾಂಕ್ಷೆ! ಶರಣಮನೋಧರ್ಮ! ಚಿತ್ರದುರ್ಗದ ಶ್ರೀಮಠ ಪಂಚ ಆಚಾರ್ಯಪೀಠಗಳಿಗಿಂತಲೂ ತಾನು ಹೆಚ್ಚೇನೋ! ಎಂಬಂತೆ ವರ್ತಿಸುತ್ತ ಬಂತು. ಈಗ ವಿಚಾರದೃಷ್ಟಿಯಿಂದ ಅದು ಒಂದು ಶಾಖಾ ಮಠದ ಸ್ಥಾನಮಾನವನ್ನು ಪಡೆದಿರುತ್ತದೆಯೆಂದು ನಿರ್ಧರವಾಗುತ್ತದೆ. ಶೂನ್ಯ ಪೀಠದ ಪ್ರಭಾವ ಎಂಬ ಪುಸ್ತಕ ಈ ಶಾಖಾಮಠವನ್ನು ಬೃಹನ್ಮಠವೆಂದೂ

ಜಗದ್ಗುರು ಪೀಠವೆಂದೂ ಪರಾಕು ಹೇಳುತ್ತಿದೆ. ಆ ಪುಸ್ತಕದ ಭಾಷಾಶೈಲಿ ಕರ್ಕಶ; ಹೊಲಸು! ಅದರಲ್ಲಿ ಪ್ರೌಢಭಾವಣೆಯಾಗಲಿ, ಪದಗಾಂಭೀರ್ಯವಾಗಲಿ, ವಿಷಯಪ್ರಭೆಯಾಗಲಿ, ಸಾಹಿತ್ಯಮಾಧುರ್ಯವಾಗಲಿ, ಶಾಸ್ತ್ರಮರ್ಯಾದೆಯಾಗಲಿ ಎಳ್ಳಷ್ಟೂ ಕಂಡುಬರುತ್ತಿಲ್ಲ. ಅದರಲ್ಲಿ ಅಸಹ್ಯಪದ ಪ್ರಯೋಗತುಂಬಿದೆ. ನಾವು ಅಂಥ ಪದ ಜಾಲವನ್ನು ಹೆಣೆಯಲಾರೆವು. ನಮ್ಮ ಸಂಸ್ಕೃತಿ ಅಂಥ ಮನೋವೃತ್ತಿಯನ್ನು ಪೋಷಿಸುವುದಿಲ್ಲ. ಶೈಲಿ ಸಾಹಿತಿಯ ಜೀವನ ಸೌಂದರ್ಯದ ಸಂಕೇತವೆಂದು ಪ್ರಾಜ್ಞರು ಹೇಳುತ್ತಾರೆ. ಶ್ರೀ ಆರಾಧ್ಯರು ಕೂಲಿಗಾಗಿ ಅತ್ತಿರುತ್ತಾರೆ! ಅವರು ಜ್ಞಾನಯಜ್ಞಹೋತಾರರು! ನಾವು ಅಜ್ಞಾನಯಜ್ಞಹೋತಾರರು! ಅವರು ಕೋಟಿಯಜ್ಞ ಮಾಡಿದರೂ ಚಿತ್ರದುರ್ಗದ ವಿರಕ್ತಮಠವನ್ನು ಮೂಲಮಠವೆಂದು ಸಾಧಿಸಲಾರರು! "ಶ್ರೀ ಮಲ್ಲಿಕಾರ್ಜುನ ಮುರಿಗಾರಾಜೇಂದ್ರ ಮಹಾಸ್ವಾಮಿಗಳಲ್ಲಿ ದ್ವೇಷವನ್ನು ಸಾಧಿಸಲು ಹೊರಟದ್ದರಿಂದ ಓ. ಎಸ್. ಲಿಂಗಣ್ಣಯ್ಯನವರು ಯಾವ ಪುಣ್ಯ-ಪುರುಷಾರ್ಥಗಳನ್ನು ಸಾಧಿಸುವರೆಂಬುದನ್ನು ಭಕ್ತವೃಂದವು ನಿರೀಕ್ಷಿಸುತ್ತಲಿದೆ" ಎಂದು ಸಿದ್ಧಸ್ವಾರಾಧ್ಯರು ಗೋಳಿಟ್ಟಿದ್ದಾರೆ! ನಮಗೆ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳಲ್ಲಿ ಲವಲೇಶವೂ ದ್ವೇಷವಿಲ್ಲ. ಅವರು ವಿದ್ವಾಂಸರು, ವಿಚಾರವಂತ ರಲ್ಲವೆಂದು ನಾವು ಕನಿಕರಪಡುತ್ತೇವೆ; ಅಷ್ಟೆ. ಅವರನ್ನು ದ್ವೇಷಿಸುವುದರಿಂದ ನಮಗೆ ಯಾವ ಪುಣ್ಯವೂ ಇಲ್ಲ; ಪುರುಷಾರ್ಥವೂ ಇಲ್ಲ. ಅವರನ್ನು ಪ್ರೀತಿಸು ವುದರಿಂದಲೂ ನಮಗೆ ಯಾವ ಪುಣ್ಯವೂ ಇಲ್ಲ; ಪುರುಷಾರ್ಥವೂ ಇಲ್ಲ ಎಂಬುದೂ ಅಷ್ಟೇ ನಿಜ. ನಾವು ರಾಗದ್ವೇಷರಹಿತರು; ನಮಗೆ ಎಲ್ಲ ಗುರುವಿರಕ್ತರೂ ಸಂಭಾವಿತರೇ. ಅದರಂತೆಯೇ, ಸಿದ್ಧಗಂಗಾ ಮಠಾಧೀಶ್ವರರೂ, ಸುತ್ತೂರು, ಸಿರಿಗೆರೆ ಪೀಠಾಚಾರ್ಯರುಗಳೂ, ನಿಡುಮಾಮಿಡಿ, ಎಳನಡು ಗುರುಪೀಠಾಧಿ ಕಾರಿಗಳೂ ನಮಗೆ ಪೂಜಾರ್ಹರೇ. ಬಸವಣ್ಣನವರ ಧರ್ಮವೇ ಶರಣ ಧರ್ಮ! ನಾವು ಶ್ರೀ ಆರಾಧ್ಯರಂತೆ ಕೆಲವು ಮಠಾಧೀಶ್ವರರನ್ನು ಅಗೌರವದಿಂದ ಕಾಣು ವುದಿಲ್ಲ! ಎಲ್ಲ ಮಠಾಧಿಕಾರಿಗಳಲ್ಲಿಯೂ ನಾವು ಗುರುಜಂಗಮ ಸ್ವರೂಪವನ್ನು ಕಾಣುತ್ತೇವೆ. ಅಂಥ ಶಕ್ತಿ ಅವರಲ್ಲಿ ವೀರಶೈವ ದೀಕ್ಷಾ ಸಂಸ್ಕಾರದಿಂದ ಮೂಡಿರುತ್ತದೆ. ಹಾಗಿಲ್ಲದಿದ್ದರೆ ಅಂಥ ದೀಕ್ಷೆಯಿಂದ ಪ್ರಯೋಜನವೇನು? ಅದು ಸಮತಾಭಾವದ ಪವಿತ್ರ ಸಂಕೇತವೆಂಬುದನ್ನು ನಿಜ ಭಕ್ತಾಗ್ರೇಸರ

..ಧ್ಯರು ಅರಿಯದಿರುವುದು ಶೋಚನೀಯ. ನಾವು ಶೂನ್ಯ ಪೀಠವನ್ನು ..ೂ ದ್ವೇಷಿಸುವುದಿಲ್ಲ. ಅವರ ಅಂತಶ್ಶಕ್ತಿಯನ್ನು ಅರಿಯಲು ನಿತ್ಯಾರಾಧನೆ ..ಸುತ್ತಿದ್ದೇವೆ. ಶ್ರೀ ಸಿದ್ಧಪ್ಪಾರಾಧ್ಯರು ದಾರಿತಪ್ಪಿದ ಹುಚ್ಚನಂತೆ ..ಯದಿಂದ ವಿಷಯಕ್ಕೆ ಅಲೆದಾಡಿರುತ್ತಾರೆ. ಅವರ ಥಾಟಿಯಲ್ಲಿ ವಿರೋಧಾ ..ಸಗಳೇ ತುಂಬಿವೆ. "ಸಿದ್ಧಗಂಗಾ ಸ್ವಾಮಿಗಳಲ್ಲೂ ಸಣ್ಣ ಜನರು ವ್ಯಭಿ ..ರವೇ ಮೊದಲಾದ ದೋಷಗಳನ್ನು ಆರೋಪಿಸುತ್ತಿರುವರು. ಇದನ್ನು ..ಸ್ಕೃತ ಜನರು ಒಪ್ಪಲಿಕ್ಕಾಗುತ್ತದೆಯೆ? ಹಾಗೆಯೇ ಸುತ್ತೂರು ..ಮಿಗಳಲ್ಲೂ ಅನೇಕರು ಆರೋಪ ಮಾಡುತ್ತಿರುವರು. ಜನರ ಬಾಯಿಗೆ ..ವ ತಡೆಯೂ ಇರಲಾರದು. ಹಾಗೆಯೇ ಹಾವೇರಿಯಲ್ಲಿದ್ದಾಗಲೂ ..ಮಿಗಳಲ್ಲಿ ದೋಷವನ್ನಾರೋಪಿಸುವುದೂ ಸಹ ನಿರಾಧಾರವೇ ಹೊರತು ..ಕ್ತವೆನಿಸುವುದಿಲ್ಲ" ಎಂದು ಸಂಸ್ಕೃತ ವಿದ್ವಾಂಸ ಶ್ರೀ ಸಿದ್ದಪ್ಪಾರಾಧ್ಯರು ..ಮುತ್ತಿನಂಥ ಮಾತುಗಳನ್ನು ಆಡಿದ್ದಾರೆ. (ಪುಟ 194) ಈ ಮಾತುಗಳು ..ರ ಸಂಸ್ಕೃತಿಯ ಮಟ್ಟವನ್ನು ಸೂಚಿಸುತ್ತವೆ. ಇವರ ವಿಚಾರ ಪರಿಶೀಲನೆ ..ಣಿಯು ಗೃಹಿಣೀ ಧರ್ಮವನ್ನು ಬೋಧಿಸಿದಂತಿದೆ! ಯಾವ ಸುಸಂಸ್ಕೃತಿಯ ..ಯವಾದರೂ ಈ ಮಾತುಗಳಿಂದ ಸುಖಪಡುವುದಿಲ್ಲ. ನಾವಂತೂ ..ನ್ಯ ಸಿಂಹಾಸನ'ದಲ್ಲಿ ಯಾರಲ್ಲಿಯೂ ದೋಷಾರೋಪಣೆಯನ್ನು ಮಾಡಿಲ್ಲ ..ಮೂಕ ಆರಾಧ್ಯರು ಅವರ ಆರಾಧ್ಯ ದೈವ ಶ್ರೀ ಮಲ್ಲಿಕಾರ್ಜುನಸ್ವಾಮಿಗಳಲ್ಲಿ ..ಹುದಾದ ದೋಷವನ್ನು ಮುಚ್ಚಲು ಇತರ ಸ್ವಾಮಿಗಳಲ್ಲಿಲ್ಲದ ದೋಷವನ್ನು ..ಪಿಸಿಕೊಂಡು ಬಹಳ ಬುದ್ಧಿವಂತರಂತೆ ಬರೆದಿರುತ್ತಾರೆ. ಶ್ರೀ ಪೂಜ್ಯ ..ಗಂಗಾ ಸ್ವಾಮಿಗಳಲ್ಲಿಯೂ ಶ್ರೀ ಪೂಜ್ಯ ಸುತ್ತೂರು ಸ್ವಾಮಿಗಳಲ್ಲಿಯೂ ..ವುದೋ ಅನೀತಿ ಇದೆಯೆಂಬುದನ್ನು ಆರಾಧ್ಯರಿಗೆ ಯಾರು ಹೇಳಿದರು? ..ಥ ನಿರಾಧಾರ ಸಂಗತಿಯನ್ನು ಬರೆಯಬಹುದೆ? ಶ್ರೀ ಮಲ್ಲಿಕಾರ್ಜುನ ..ಮಿಗಳು *ಹಾವೇರಿಯಲ್ಲಿದ್ದಾಗ ಅವರಲ್ಲಿ ವ್ಯಭಿಚಾರ ದೋಷದ ಆರೋಪಣೆ ..ತ್ತೆಂಬ ಶ್ರೀ ಆರಾಧ್ಯರೇ ದೃಢಪಡಿಸಿದಂತಾಗಲಿಲ್ಲವೆ! ಶಾಂತಂ ಪಾಪಂ! ..ು ಸರಿಯಲ್ಲ.

ಚಿತ್ರದುರ್ಗದ ವಿರಕ್ತ ಮಠ ಸುಮಾರು ಐವತ್ತು ವರ್ಷದಿಂದ ತನ್ನ

*ನಿರಂಜನ-ಗ್ರಂಥದಲ್ಲಿ ಬರುವ ಕೆಲವು ಪ್ರಸಂಗಗಳನ್ನು ಅವಲೋಕಿಸಿರಿ.

ಶಕ್ತಿಯನ್ನು ಬೆಳೆಸಿಕೊಳ್ಳುತ್ತಾ ಬಂತು. ನಿರಂಜನವಂಶ ರತ್ನಾಕರದಂಥ ಕಟ್ಟುಕಥೆಯ ಜಾಲವನ್ನು ಚಿತ್ರದುರ್ಗದಿಂದ ದೆಹಲಿಯವರೆಗೆ ಬೀಸಿತು! ಆ ಜಾಲದಲ್ಲಿ ಇತಿಹಾಸದ ಅಂಚನ್ನು ಕಟ್ಟಿತು! ಕ್ರಿ ಶ. ೧೬, ೧೭ ಮತ್ತು ೧೮ ನೆಯ ಶತಮಾನಗಳಲ್ಲಿ ಮುಸಲ್ಮಾನರ ಹಾವಳಿಯಲ್ಲಿ ಅನೇಕ ಮಠಗಳು ದೆಹಲಿಯ ಬಾದಷಹರ ಆಶ್ರಯವನ್ನು ತಮ್ಮ ಮಠಗಳಿಗೆ ಕಲ್ಪಿಸಿಕೊಂಡವು. ಅದರಿಂದ ಆಗಾಗ ದೇಶಮಧ್ಯದಲ್ಲಿ ಮುಸಲ್ಮಾನ ಸುಲ್ತಾನರ ದಂಡು ನುಗ್ಗಿದಾಗ ಮಠೀಯ ಸಂಸ್ಥೆಗಳಂತಿದ್ದ ಮಠಗಳು ದೆಹಲಿ ಬಾದಷಹರ ಕೃಪಾಶ್ರಯ ತಮಗೆ ಲಭಿಸಿದೆಯೆಂಬುದನ್ನು ಸೂಚಿಸುತ್ತಿದ್ದವು. ತಮ್ಮ ಶೂನ್ಯ ಸಿಂಹಾಸನ, ಶಿಖಾಶೈಲ ದೆಹಲಿ ದರ್ಬಾರಿನಿಂದ ಲಭಿಸಿದವೆಂದು ಚಿತ್ರದುರ್ಗದ ಮಠ ತನ್ನ ಕಥೆಯನ್ನು ತಾನೇ ಬರೆದಿಟ್ಟುಕೊಂಡಿತು. ಅಕ್ಬರ್ ಬಾದಷಹ ಕೊಟ್ಟೂರಿಗೆ ಬಂದಿದ್ದನೆಂದೂ, ಕೊಟ್ಟೂರು ಬಸವಯ್ಯಸ್ವಾಮಿಗಳಿಗೆ ಅಂತಃಪುರದ ಮಣಿ ಮಂಚವನ್ನು ಕೊಟ್ಟನೆಂದೂ ಕವಿ ಕಾವ್ಯದಲ್ಲಿ ಬರೆದಾಯಿತು! ಮಳೆಯ ಮಲ್ಲೇಶ ಮಕ್ಕಾಕ್ಕೆ ಹೋಗಿಬಂದಂತಾಯಿತು! ಲಿಂಗಾಯಿತರು ಧರಿಸುವ ಚೌಕಗಳನ್ನು ಮಸೀದಿಯ ಆಕಾರವಾಗಿ ಮಾಡಿಸಿಯಾಯಿತು! ವೈಷ್ಣವ ಮತ್ತು ಶ್ರೀವೈಷ್ಣವರ ಮಠಗಳಲ್ಲಿಯೂ ಇಂಥ ಪ್ರಸಂಗಗಳುಂಟು! ಸಮಾಜ ಧರ್ಮ ಸಂಶೋಧನೆಯ ದೃಷ್ಟಿಯಿಂದ ಸ್ವಸ್ವರೂಪವನ್ನು ಅರಿಯಬೇಕು. ಮಠಗಳು ಸಮಾಜದ ಅಜ್ಞಾನದಮೇಲೆ ಮೆರೆಯಲಾರವು. ಮಠಾಧೀಶ್ವರರೆಂದರೆ ಸಾತ್ವಿಕ ತೇಜೋ ಮೂರ್ತಿಯಾಗಿ ಸಮಾಜಾಭ್ಯುದಯವನ್ನು ಸಾಧಿಸಬೇಕು. ಅಡ್ಡ ಪಲ್ಲಕ್ಕಿ ಉತ್ಸವದಂಥ ಬಹಿರಾಡಂಬರಗಳನ್ನು ಮಠಗಳು ಬಿಡಬೇಕು; ಸಮಾಜ ಅಂಥ ಉತ್ಸವಗಳನ್ನು ನಿರೋಧಿಸಬೇಕು. ಎಲ್ಲ ಮಠಗಳೂ ದೀನಾನಾಥರ ಆಶ್ರಮಗಳಾಗಬೇಕು. ಇಪ್ಪತ್ತೊಂದನೆಯ ಶತಮಾನ ಮೂಡಿಬರುತ್ತಿದೆ! ಜನತಾರಾಧನೆಗೆ ಮಠ ಸಿದ್ಧವಾಗಬೇಕು! ಬಸವಣ್ಣನವರ ಶರಣಧರ್ಮ ವಾಹಿನಿಯಲ್ಲಿ ಸಮಾಜ ತೀರ್ಥಸ್ನಾನ ಮಾಡಿ ಪುನೀತವಾಗಬೇಕು! ಆದ್ದರಿಂದ "ಸಂಶೋಧನೆಗೆ ಹೆದರಲೇಕೆ? ಬೆದರಲೇಕೆ? ಈ 'ಶೂನ್ಯ ಸಿಂಹಾಸನ' ಗ್ರಂಥ ವಿಚಾರಮಥನದಿಂದ ಸಂಶೋಧನೆಯಿಂದ ಹುಟ್ಟಿದೆ; ವಿಮರ್ಶೆಯ ಒರೆಗಲ್ಲಿಗೆ ನಿಂತಿದೆ! ನಮಗೆ ವ್ಯಕ್ತಿ ದ್ವೇಷವಿಲ್ಲ; ಪಂಥ ಪಕ್ಷಪಾತವಿಲ್ಲ, ಸತ್ಯಾನ್ವೇಷಣೆಯೇ ನಮ್ಮ ಧ್ಯೇಯ. ಶೂನ್ಯ ಸಿಂಹಾಸನ ಜಂಗಮ ಸಿಂಹಾಸನವಲ್ಲ; ಅದು ಶರಣ

ಸಿಂಹಾಸನ. ಅದು ಶರಣತತ್ತ್ವ ಸಿಂಹಾಸನ; ಧರ್ಮ ಸಿಂಹಾಸನ. ಆನಂದಪುರ ಗುರುಘಾಮಠ, ಹುಬ್ಬಳ್ಳಿ ಮೂರುಸಾವಿರ ಮಠ, ಗದಗ ತೋಂಟದಾರ್ಯ ಮಠ, ಸಿದ್ಧಗಂಗಾಮಠ ಇವು ವಿರಕ್ತ ಜಗದ್ಗುರು ಪೀಠಗಳು. *"ಸಂಶೋಧಕನ ಮುಖ್ಯ ಕರ್ತವ್ಯವೆಂದರೆ – ಮೂಲ ಸಾಮಗ್ರಿ ಎಲ್ಲೆಲ್ಲಿದೆ ಎಂಬುದನ್ನು ಕಂಡು ಹಿಡಿದು ಅದರ ಸಾಕ್ಷಾತ್ತಾದ ಪರಿಚಯವನ್ನು ಪಡೆಯುವುದು; ತನ್ನ ಅನ್ವೇಷಣೆಯಲ್ಲಿ ದೊರೆತ ಯಾವ ಸತ್ಯಾಂಶವನ್ನೂ ಅದು ತನ್ನ ಮನಸ್ಸಿನ ಒಲವಿಗೆ, ಸಂಪ್ರದಾಯದ ನಂಬಿಕೆಗೆ, ಆ ವರೆಗಿನ ಗ್ರಹಿಕೆಗೆ ಹೊಂದಿಕೆಯಾಗ ದಂತೆ ತೋರಿದರೂ ಕೂಡ- ಕೈಬಿಡದೆ ತಿರಿಮುರಿ ಮಾಡದೆ ಯಥಾವತ್ತಾಗಿ ಉಲ್ಲೇಖಿಸುವುದು; ತನ್ನ ಎದುರಿಗಿರುವ ಎಲ್ಲ ಅಂಶಗಳನ್ನೂ ನ್ಯಾಯಾಧೀಶನಂತೆ ತೂಗಿ ವಿಮರ್ಶಿಸಿ, ವಸ್ತುನಿಷ್ಠವಾದ ಪರಿಶೀಲನೆಯಿಂದ ಹೊರಟ ನಿರ್ಣಯ ಗಳನ್ನು ಖಚಿತವಾಗಿ ನಿರೂಪಿಸುವುದು; ಸಂದೇಹಗಳು ಪರಿಹಾರವಾಗದಕಡೆ, ಹೆಚ್ಚಿನ ಸಾಮಗ್ರಿ ಒದಗುವತನಕ ಕೊನೆಯ ಮಾತನ್ನು ತಡೆಹಿಡಿಯುವುದು" ಎಂಬುದಾಗಿ ದಿವಂಗತ ಪ್ರೊ. ತೀ. ನಂ. ಶ್ರೀಕಂಠಯ್ಯ, ಎಂ. ಎ., ಅವರು ಸಂಶೋಧಕನ ಕರ್ತವ್ಯವನ್ನು ಕುರಿತು ನಿತ್ಯಸತ್ಯಪೂರ್ಣ ಅಭಿಪ್ರಾಯವನ್ನು ತಿಳಿಸಿರುತ್ತಾರೆ. ಈ ದೃಷ್ಟಿಯಿಂದಲೇ 'ಶೂನ್ಯಸಿಂಹಾಸ' ಗ್ರಂಥದಲ್ಲಿ ವೀರಶೈವ ಧರ್ಮದ ಆಚಾರ, ವಿಚಾರ, ಪ್ರಕ್ರಿಯೆ, ವಿವಿಧ ಸಂಪ್ರದಾಯ, ಬೆಡಗು, ರೀತಿ, ನೀತಿ ಪ್ರಭೇದಗಳನ್ನು ಕುರಿತು ಪ್ರಾಸಂಗಿಕವಾಗಿ ವಿವೇಚಿಸಲಾಗಿದೆ. ವೀರಶೈವದಲ್ಲಿ ಅನೇಕ ಪ್ರಭೇದಗಳುಂಟು. ಅವೆಲ್ಲಾ ಒಂದೇ ಧರ್ಮದ ಮೂಲದಿಂದ ಬಂದಿವೆ. ಲಿಂಗವಂತರೆಲ್ಲ ಸಮಾನರು ಎಂಬುದೇ ಶೂನ್ಯ ಸಿಂಹಾಸನದ ಅಂತರ್ವಾಣಿ! ಆದರೆ, ಕೇವಲ ಸ್ವಾರ್ಥಪರರು ಶರಣಧರ್ಮವನ್ನು ದುರುಪಯೋಗಪಡಿಸಿಕೊಳ್ಳುತ್ತಿದ್ದಾರೆ; ಶೂನ್ಯಸಿಂಹಾಸನ ಸಂಪ್ರದಾಯವನ್ನು ವಿರೂಪಗೊಳಿಸುತ್ತಿದ್ದಾರೆ. ಅಂಥವರು ಸಮಾಜದ ಹಿತವನ್ನು ಸಾಧಿಸಲು ಅಶಕ್ತರಾಗಿದ್ದಾರೆ. ವೀರಶೈವ ಧರ್ಮ, ಸಾಹಿತ್ಯ, ಸಂಸ್ಕೃತಿಗಳನ್ನು ಸಂವರ್ಧಿ ಸಲು ಪರಿಣತರು ದುಡಿಯಬೇಕು. ಶರಣಯುಗ ಪೂರ್ವದಲ್ಲಿಯೂ, ಅನಂತರವೂ ಅಪಾರ ಸಾಹಿತ್ಯ ಸೃಷ್ಟಿಯಾಯಿತು. ಅನೇಕ ಗ್ರಂಥಗಳು

* ಶ್ರೀ ಚಿದಾನಂದಮೂರ್ತಿ, ಎಂ.ಎ., ಅವರು ಬರೆದಿರುವ "ಶೂನ್ಯ ಸಂಪಾ ದನೆಯನ್ನು ಕುರಿತು" ಎಂಬ ಪುಸ್ತಕದ ಮುನ್ನುಡಿಯನ್ನು ಅವಲೋಕಿಸಿರಿ.

ಕಾಲಗರ್ಭದಲ್ಲಿ ಅಡಗಿರುತ್ತವೆ. ಅವುಗಳನ್ನು ಸಂಶೋಧಿಸಿ, ಪರಿಷ್ಕರಿಸಿ, ಮುದ್ರಣ ಮಾಡಿಸುವುದೇ ಪವಿತ್ರ ಕೈಂಕರ್ಯ. ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯವರೂ, ಕರ್ನಾಟಕ ವಿಶ್ವವಿದ್ಯಾನಿಲಯದವರೂ, ಹುಬ್ಬಳ್ಳಿ ಮೂರುಸಾವಿರ ಮಠದವರೂ, ಸುತ್ತೂರು ಗುರುಪೀಠದವರೂ, ಧಾರವಾಡ ಮುರುಘಾಮಠದವರೂ, ನಿಡುಮಾಮಿಡಿ ಗೂಳೂರು ಪೀಠದ ಜ. ಚ. ನಿ. ಅವರೂ, ನವಕಲ್ಯಾಣ ಮಠದ ಶ್ರೀ ಕುಮಾರಸ್ವಾಮಿಗಳೂ, ಕೈ|| ಎಸ್. ಎಸ್. ಬಸವನಾಳರೂ, ಡಾ|| ಎಸ್. ಸಿ. ನಂದಿಮಠ್ ಅವರೂ, ಡಾ|| ಎಸ್. ಎಸ್. ಭೂಸನೂರುಮಠ್ ಅವರೂ, ಶ್ರೀಯುತರುಗಳಾದ ವಿರೂಪಾಕ್ಷಪ್ಪ ಕೊಪ್ಪಳ; ನಿವೃತ್ತ ಜಸ್ಟೀಸ್ ಟಿ. ಎ. ಮಲ್ಲಪ್ಪ; ಬಿ. ಪುಟ್ಟ ಸ್ವಾಮಯ್ಯ; ಜೆ. ರುದ್ರಪ್ಪ; ಎಸ್. ಎಸ್. ಮಾಳವಾಡ; ಎಚ್. ದೇವೀರಪ್ಪ; ಜೀರಗೆಕಟ್ಟೆ ಬಸವಪ್ಪ; ಆಸ್ಥಾನ ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ; ವಿದ್ವಾನ್ ಪಂಡಿತ ಬಸಪ್ಪ; ಹಡಗಲಿ ಚಂದ್ರಶೇಖರಶಾಸ್ತ್ರಿ; ವೈ. ನಾಗೇಶಶಾಸ್ತ್ರಿ; ಮೈಸೂರು ಮಲ್ಲಿಕಾರ್ಜುನ ದೇಶಿಕೇಂದ್ರಸ್ವಾಮಿ; ಪಗಡದಿನ್ನಿ ಪಂಡಿತ ಬಸವ ರಾಜಶಾಸ್ತ್ರಿ; ಕೈ|| ಪಿ. ಜಿ. ಹಳಕಟ್ಟಿ; ಮಲ್ಲಾಬಾದಿ ವೀರಭದ್ರಪ್ಪ; ಕೈ|| ಚನ್ನಮಲ್ಲಿಕಾರ್ಜುನ ಮೊದಲಾದ ಅನೇಕ ವಿದ್ವಾಂಸರು ವೀರಶೈವ ಧಾರ್ಮಿಕ ಸಾಹಿತ್ಯ ಕ್ಷೇತ್ರದಲ್ಲಿ ವಿಖ್ಯಾತರಾಗಿರುತ್ತಾರೆ. ಡಾ|| ಆರ್. ಸಿ. ಹಿರೇಮಠ್ ಅವರು ಪ್ರಸಿದ್ಧ ಸಾಹಿತ್ಯ ಸಂಶೋಧಕರೂ, ವಿದ್ವಾಂಸರೂ, ಲೇಖಕರೂ ಆಗಿರು ತ್ತಾರೆ. ಅನೇಕ ತರುಣ ವೀರಶೈವ ವಿದ್ವಾಂಸರು ಬೆಂಗಳೂರು ಮತ್ತು ಮೈಸೂರು ವಿಶ್ವವಿದ್ಯಾನಿಲಯಗಳಲ್ಲಿ ಸಮರ್ಥ ಲೇಖಕರೂ, ವಾಗ್ಮಿಗಳೂ, ಕವಿಹೃದಯರೂ ಆಗಿ ಸಾಹಿತ್ಯ ಕ್ಷೇತ್ರದಲ್ಲಿ ದುಡಿಯುತ್ತಿದ್ದಾರೆ. ಇಷ್ಟಾದರೂ ನಮ್ಮ ಸಮಾಜ ದಲ್ಲಿ ಸಂಸ್ಕೃತ ಪಾಂಡಿತ್ಯ ಏನೇನೂ ಸಾಲದು. ಈಗೀಗ ತರುಣರು ಸಂಸ್ಕೃತ, ಸಾಹಿತ್ಯ, ತರ್ಕ, ವ್ಯಾಕರಣ ವೇದಾಂತ ಮೊದಲಾದ ವಿವಿಧ ಭಾಗಗಳಲ್ಲಿ ಪಂಡಿತರಾಗುತ್ತಿದ್ದಾರೆ. ಇದು ಶುಭಪ್ರದ. ವೀರಶೈವ ಧರ್ಮಶಾಸ್ತ್ರಗಳಲ್ಲಿ ವಿಶೇಷ ಅಧ್ಯಯನ ಮಾಡಿ ಉತ್ತಮ ಗ್ರಂಥಗಳನ್ನು ರಚಿಸಿ ಪ್ರಸಿದ್ಧರಾದ ಕೈ|| ಪಿ. ಆರ್. ಕರಿಬಸವಶಾಸ್ತ್ರಿಗಳೂ, ಕೈ|| ಎ.ಆರ್. ಕರಿಬಸವಶಾಸ್ತ್ರಿಗಳೂ, ಕೈ|| ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿಗಳೂ, ನಾಗನೂರು ಬೃಹನ್ಮಠದ ಪಂಡಿತ ಕೈ|| ಪಂಡಿತ ಕಾಶೀನಾಥಶಾಸ್ತ್ರಿಗಳೂ, ಆಸ್ಥಾನ ಮಹಾ ವಿದ್ವಾನ್

ಪಂಡಿತರತ್ನ ಕೈ|| ಶಿರಸಿ ಗುರುಶಾಂತಶಾಸ್ತ್ರಿಗಳೂ ಪ್ರಾತಸ್ಮರಣೀಯರಾಗಿದ್ದಾರೆ. ಎಲ್ಲ ಮಾನ್ಯ ವಿದ್ವಾಂಸರನ್ನೂ ಇಲ್ಲಿ ಸ್ಮರಿಸುತ್ತೇವೆ. ಮುಖ್ಯವಾಗಿ, ನಮ್ಮ ಸಂಶೋಧನೆಯಂತೆ, ಶಿಖಾಶೈಲ, ಶೂನ್ಯಸಿಂಹಾಸನಗಳು ದೆಹಲಿಯ ಬಾದಷಹ ಕೊಟ್ಟಿದ್ದುವೆಂಬುದಾಗಲಿ, ಚಿತ್ರದುರ್ಗದ ವಿರಕ್ತ ಮಠ ಮೂಲ ಮುರಘಾಮಠ ವೆಂಬುದಾಗಲಿ, ನಿರಾಧಾರವಾದ ಸಂಗತಿಗಳು. ಆದರಂತೆಯೇ ಶಿಖಾಪಟ್ಟ ವೆಂಬುದೂ ಅಶಾಸ್ತ್ರೀಯ; ಸ್ವಕಪೋಲಕಲ್ಪನೆ. ಚಿತ್ರದುರ್ಗ ಮುರಘಾ ಮಠ ಹದಿನೆಂಟನೆಯ ಶತಮಾನದಲ್ಲಿ ನಿರ್ಮಾಣವಾಯಿತು. ಶ್ರೀ ಸಿದ್ಧಪ್ಪಾ ರಾಧ್ಯರು ಹೇಳುವಂತೆ ಶಾಖಾ ಮಠವನ್ನು ಮೂಲಪೀಠದ ಅಂತಸ್ತಿಗೆ ಏರಿಸು ವುದಾಗಲೀ ಮೂಲ ಪೀಠವನ್ನು ಶಾಖಾ ಮಠದ ಅಂತಸ್ತಿಗೆ ಇಳಿಸುವುದಾಗಲಿ ಯುಕ್ತವಲ್ಲ. ಈ ಮಾತನ್ನು ನಾವೂ ಒಪ್ಪುತ್ತೇವೆ. ಆದರೆ ಶ್ರೀ ಸಿದ್ದಪ್ಪಾ ರಾಧ್ಯರೂ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳೂ ಶಾಖಾ ಮಠವನ್ನು ಮೂಲ ಮಠದ ಅಂತಸ್ತಿಗೆ ಏರಿಸಲು ಅಸಮಸಾಹಸಪಡುತ್ತಿದ್ದಾರೆ. ಅವರ ಪ್ರಯತ್ನ ಫಲದಾಯಕವಾಗಲಾರದು. ಸಿದ್ಧಗಂಗಾ, ಸುತ್ತೂರು, ದೇಗುಲ, ನಿಡುಮಾಮಿಡಿ ಸಿರಿಗೆರೆ ಈ ಮಠಗಳಲ್ಲಿ ಶೂನ್ಯಪೀಠವು ನೆಲೆಸಿದೆಯೆಂದು ಶೂನ್ಯಸಿಂಹಾಸನ ಗ್ರಂಥದಲ್ಲಿ ಎಲ್ಲಿಯೂ ಹೇಳಿಲ್ಲ. ಶ್ರೀ ಸಿದ್ಧಪ್ಪಾರಾಧ್ಯರು ಸತ್ಯವನ್ನೇ ನುಡಿರಿಯರು ! ಅವರು ಇಲ್ಲದುದನ್ನು ಹೇಳುತ್ತಾರೆ. ಶೂನ್ಯಸಿಂಹಾಸನ ಎಲ್ಲೆಲ್ಲಿಯೂ ಇರುತ್ತದೆ! ಎಲ್ಲ ವಿರಕ್ತ ಮಠಗಳೂ ಶೂನ್ಯಸಿಂಹಾಸನ ಮಠಗಳೇ! ಚಿತ್ರದುರ್ಗ ಮುರಘಾ ವಿರಕ್ತ ಮಠವೂ ಅಂಥ ಮಠಗಳಲ್ಲಿ ಒಂದು. ಇದರಲ್ಲಿ ಯಾವ ವೈಶಿಷ್ಟ್ಯವೂ ಇಲ್ಲ. 'ಶೂನ್ಯಪೀಠದ ಪ್ರಭಾವ' ಗಾಳಿಯನ್ನು ಗುದ್ದಿ ಕೈ ನೋಯಿಸಿಕೊಂಡಂತಿದೆ !

ಸುಮಾರು ಐವತ್ತು ವರ್ಷಗಳ ಹಿಂದೆ, ಸಮಾಜ ಹಿಂದುಳಿದಿತ್ತು. ಈಗಿರುವಷ್ಟು ವಿದ್ಯಾಭ್ಯಾಸ ಸೌಕರ್ಯಗಳಿರಲಿಲ್ಲ. ವಿದ್ಯಾವಂತರೂ ಕಡಮೆ. ಈಗ ಸಮಾಜದಲ್ಲಿ ವಿದ್ಯಾವಂತರ ಸಂಖ್ಯೆ ಹೆಚ್ಚಾಗುತ್ತಿದೆ. ವಿದ್ಯಾಪ್ರಸಾರ ಹೆಚ್ಚುತ್ತಿದೆ. ಭಾಷೆ, ಸಾಹಿತ್ಯ, ಧರ್ಮ ಸರ್ವತೋಮುಖವಾಗಿ ಬೆಳೆಯುತ್ತಿದೆ. ಗುರುಮಠಗಳೂ, ವಿರಕ್ತ ಮಠಗಳೂ ಸಮಾಜದ ಪ್ರಗತಿಯನ್ನು ಸಾಧಿಸಲು ಸಾಹಸಪಡುತ್ತಿವೆ. ನಾಡಿನ ಪುಣ್ಯೋದಯ ! ಕನ್ನಡನಾಡು ಒಂದಾಯಿತು. ಪ್ರಾಚೀನ ವೀರಶೈವಮಠ ನಿಷ್ಠರು ಮಹಾತ್ಮಾ ಬಸವಣ್ಣನವರ ಉದಾರ ತತ್ತ್ವ

ಗಳನ್ನು ಇನ್ನೂ ಮೈಗೂಡಿಸಿಕೊಂಡಿಲ್ಲ. ಶರಣತತ್ತ್ವ ವಿವೇಚನೆ ಸರಿಯಾಗಿ ಆಗಿಲ್ಲವೇನೋ! ಬಸವಣ್ಣನವರ ಎಂಟುನೂರನೆಯ ಪುಣ್ಯ ಜಯಂತಿ ಸಮೀಪಿಸುತ್ತಿದೆ. ಕಲ್ಯಾಣದಲ್ಲಿ ಆ ಪುಣ್ಯಪುರುಷನ ಶೂನ್ಯಸಿಂಹಾಸನ ಸಂಸ್ಥಾಪನೆಯಾಗಲಿ! ಶಿವಾನುಭವ ಮಂಟಪ ನಿರ್ಮಾಣವಾಗಲಿ! ಶಿವಯೋಗಾಶ್ರಮವೊಂದು ಉದಯವಾಗಲಿ! ಎಲ್ಲ ಬಣಗಳಿಗೂ ಅಲ್ಲಿ ಸಮಾನಾವಕಾಶವಿರಲಿ! ಅಲ್ಲಿ ಅಧ್ಯಾತ್ಮ ಶಿಕ್ಷಣ ದೊರೆಯಲಿ! ಶರಣಧರ್ಮ ನಿಷ್ಕಳವಾಗಿ ಬೆಳೆಯಲಿ! ಬಸವಣ್ಣನವರ ಕೀರ್ತಿ ಎಂದೆಂದೂ ಬೆಳಗುತ್ತಿರಲಿ. ಶರಣಧರ್ಮ ಶೂನ್ಯ-ಸಿಂಹಾಸನ ಸಮಾಜ ಹೃದಯದಲ್ಲಿ ನಿತ್ಯನೂತನವಾಗಿ ಮೆರೆಯಲಿ!

ಶುಭಂ ಭೂಯಾತ್

ಚಿತ್ರದುರ್ಗ
ಕೀಲಕ ಸಂವತ್ಸರ
ಯುಗಾದಿ ಹಬ್ಬ
ತಾ॥ ೨೯-೩-೧೯೬೮

ವಿದ್ಯಾವಿಭೂಷಣ, ಸಾಹಿತ್ಯ ಪ್ರವೀಣ
ಓ. ಎಂ. ಲಿಂಗಣ್ಣಯ್ಯ, ಬಿ.ಎ.,(ಆನರ್ಸ್)

## ಅನುಬಂಧ—೧

### ' ಜಗದ್ಗುರು ಉಪಾಧಿ ಇದೆಯೇ ?'

ಸೂಚನೆ:- ಈ ಅಂಕಿತಗಳಲ್ಲಿ 'ಜಗದ್ಗುರು' ಎಂಬ ಪದವನ್ನು ಪ್ರಯೋ ಗಿಲ್ಲವೆಂಬುದನ್ನು ಗಮನಿಸಬಹುದು.

ಚಿತ್ರದುರ್ಗ ಮುರುಘಾ ವಿರಕ್ತಮಠದ ಶ್ರೀ ಜಯದೇವಸ್ವಾಮಿಗಳವರ ನೆನಿಂದ ಬೆಂಗಳೂರು ನಗರದಲ್ಲಿ ನಿರ್ಮಿತವಾಗಿರುವ ವಿದ್ಯಾರ್ಥಿ ವಸತಿಗೃಹ ಷಾದ್ರಿ ರಸ್ತೆಯಲ್ಲಿ ಕಂಗೊಳಿಸುತ್ತಿದೆ. ಆ ಕಟ್ಟಡದ ಪ್ರಮುಖದ್ವಾರದ ಮೇಲುಗಡೆ ಮುಂಭಾಗದಲ್ಲಿ ಇಂಗ್ಲೀಷ್ ಭಾಷೆಯಲ್ಲಿ ೧) Sri Jayadeva Murugha Rajendra Veerasaiva Hostel ಎಂದು ಬರೆದಿರುತ್ತದೆ.

೨) ಆ ಕಟ್ಟಡದ ಮುಂಭಾಗದ ಗೋಡೆಯಲ್ಲಿ ಹಾಕಿರುವ ಶಂಕುಸ್ಥಾ ಪನೆಯ ಶಿಲಾಶಾಸನ ಇಂಗ್ಲಿಷ್ ಭಾಷೆಯಲ್ಲಿ ಹೀಗೆ ಬರೆಯಲಾಗಿದೆ.

This Foundation Ston was laid by
His Highness Sir Sri Kantirava
Narasimharaja Wodeyar Bahadur, G.C I.E.
Yuvaraja of Mysore
During the Reign of
His Highness
Sri Krishnaraja Wodeyar Bahadur, G.C.S.I.G.B.E.
Maharaja of Mysore — October 20th 1919.

೩) ಇದರಂತೆಯೇ ೧೯೩೮ ನೆಯ ಇಸವಿಯಲ್ಲಿ ಮೈಸೂರು ನಗರದಲ್ಲಿ ಕೃಷ್ಣರಾಜೇಂದ್ರ ಆಸ್ಪತ್ರೆಯ ಆವರಣದಲ್ಲಿ ಉತ್ತರಭಾಗದಲ್ಲಿ ಚಿತ್ರದುರ್ಗ ವಿರಕ್ತಮಠದ ಶ್ರೀ ಜಯದೇವ ಸ್ವಾಮಿಗಳ ನೆರವಿನಿಂದ ನಿರ್ಮಿತವಾಗಿರುವ ರೋಗನಿದಾನ ಸಂಶೋಧನೆಯ ಕಟ್ಟಡದ ಮುಂಭಾಗದಲ್ಲಿ ಮೇಲ್ಭಾಗದಲ್ಲಿ

"ಮುರಘರಾಜೇಂದ್ರ ರೋಗ ನಿದಾನ ನಿಲಯ" ಎಂಬ ಅಂಕಿತವನ್ನು ಹಾಕಿರುತ್ತಾರೆ. ಆ ದಿನ ಶ್ರೀಮನ್ಮಹಾರಾಜ ಶ್ರೀಕೃಷ್ಣರಾಜ ಒಡೆಯರ್ ಬಹಾದೂರ್ ಅವರು (ತಾ|| ೨೬-೨-೧೯೩೬) ಮಾಡಿದ ಭಾಷಣದಲ್ಲಿ ಚಿತ್ರದುರ್ಗದ ವಿರಕ್ತ ಮಠಾಧೀಶ್ವರರನ್ನು 'ಜಗದ್ಗುರು' ಎಂದು ಸಂಬೋಧಿಸಿರುವುದಿಲ್ಲ.

೬) ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರು ಚಿತ್ರದುರ್ಗದ ವಿರಕ್ತ ಮಠಾಧೀಶ್ವರರನ್ನು 'ಜಗದ್ಗುರು' ಎಂದು ಗೌರವಿಸಿದಂತೆ "ಶ್ರೀ ಜಗದ್ಗುರು ಜಯದೇವ ದಿಗ್ವಿಜಯ" ಎಂಬ ಪುಸ್ತಕದಲ್ಲಿ ಕೆಲವು ದಾಖಲೆಗಳನ್ನು ಕೊಟ್ಟಿರುತ್ತಾರೆ. ಆದರೆ ಅನೇಕ ದಾಖಲೆಗಳಲ್ಲಿ 'ಜಗದ್ಗುರು' ಪದವನ್ನು ಬಳಸಿರುವುದಿಲ್ಲ. ಇವು ಅಧಿಕೃತ ಭಾಷಾಂತರಗಳೆಂದು ನಂಬಲು ಸಾಧ್ಯವಿಲ್ಲ. ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರು ತಮ್ಮ ನಿರೂಪಗಳಲ್ಲಿ ಮತ್ತು ಕಾಗದ ಪತ್ರಗಳಲ್ಲಿ 'ಜಗದ್ಗುರು' ಪದವನ್ನು ಉಪಯೋಗಿಸಿದ್ದರೆ, ಧರ್ಮಪರಾಯಣರೂ, ಸತ್ಯಸ್ವರೂಪರೂ, ಸಂಪ್ರದಾಯಬದ್ಧರೂ ಆಗಿದ್ದ ಶ್ರೀ ಕೃಷ್ಣರಾಜ ಒಡೆಯರು ತಮ್ಮ ಹಿರಿಯರ ಮಾರ್ಗವನ್ನು ಅನುಸರಿಸದಿರುತ್ತಿರಲಿಲ್ಲ. ಇದು ಕೇವಲ ವೈಯಕ್ತಿಕ ಅಭಿರುಚಿಯೆಂದು ಹೇಳಬಹುದು.

[ಸೂಚನೆ :— ಈ ಗ್ರಂಥದ ೨೯೬ ರಿಂದ ೩೦೧ ನೆಯ ಪುಟಗಳನ್ನು ಅವಲೋಕಿಸಿರಿ.]

# ಅನುಬಂಧ—೨

## ವಿರಕ್ತಮಠಗಳ ಪಟ್ಟಾವಳಿ

೧

### ಆನಂದಪುರ ಮುರಘಾಮಠದ ವಿರಕ್ತ ಪರಂಪರೆ

೧) ಗಂಗಾಧರಸ್ವಾಮಿ ೨) ಶಬ್ದಮಣಿಸ್ವಾಮಿ ೩) ತೋಂಟದ ಸಿದ್ಧಲಿಂಗಸ್ವಾಮಿ ೪) ನಿರಕ್ಷರ ಬೋಳಬಸವಸ್ವಾಮಿ ೫) ಗುಮ್ಮಳಾಪುರದ ಸಿದ್ಧಲಿಂಗಸ್ವಾಮಿ ೬) ಗೂಳೂರು ಗುರುಸಿದ್ಧಸ್ವಾಮಿ ೭) ಗಗನದಾರ್ಯಸ್ವಾಮಿ ೮) ಕಟ್ಟಿಗೆಹಳ್ಳಿಸ್ವಾಮಿ ೯) ಮುರಿಗೆಯ ಶಾಂತವೀರಸ್ವಾಮಿ ೧೦) ಇಮ್ಮಡಿ ಗುರುಸಿದ್ಧಸ್ವಾಮಿ ೧೧) ತಾರೀಕಟ್ಟೆಮಠದ ಬಸವಲಿಂಗಸ್ವಾಮಿ ೧೨) ನ್ಯಾಮತಿ ಗದ್ದಿಗೆಮಠದಸ್ವಾಮಿ ೧೩) ಹಾರನಹಳ್ಳಿ ಚೌಕಿಮಠದ ಸಿದ್ಧಲಿಂಗಸ್ವಾಮಿ ೧೪) ಶಾಂತವೀರಸ್ವಾಮಿ ೧೫) ಬೆಕ್ಕಿನಕಲ್ಲುಮಠದ ಗುರುಬಸವಸ್ವಾಮಿ ೧೬) ಗವಿಮಠದ ಮುದ್ದುವೀರಸ್ವಾಮಿ ೧೭) ಲಿಂಗಮಹಾಸ್ವಾಮಿ ೧೮) ಈಗಿರುವ ಜಗದ್ಗುರು ಶ್ರೀ ಸಚ್ಚಿದಾನಂದ ಮುರಘ ರಾಜೇಂದ್ರ ಮಹಾಸ್ವಾಮಿಗಳು.

ಸೂಚನೆ:– ಇದರಲ್ಲಿ ೯ ನೆಯ ಮುರಿಗೆಯ ಶಾಂತವೀರಸ್ವಾಮಿಯ (ಕಾಲ ೧೫೬೦) ತರುವಾಯ ಸುಮಾರು ೧೩೦ ವರ್ಷಕಾಲ ಈ ಪೀಠದ ನಿರಾ ಭಾರಿಗಳು ಯಾರು ಯಾರು ಎಂಬುದನ್ನು ಈ ಗ್ರಂಥದಲ್ಲಿ ವಿವರಿಸಲಾಗಿದೆ.

೨

### ಚಿತ್ರದುರ್ಗದ ವಿರಕ್ತಮಠದ ಪಟ್ಟಾವಳಿ

೧) ತೋಂಟದ ಸಿದ್ಧಲಿಂಗಸ್ವಾಮಿ ೨) ನಿರಕ್ಷರಬೋಳಬಸವಸ್ವಾಮಿ ೩) ಸಿದ್ಧವೀರಸ್ವಾಮಿ ೪) ಸಿದ್ಧವೀರಣಾರ್ಯ ೫) ಗಗನದಾರ್ಯ ೬) ಕಟ್ಟಿಗೆಹಳ್ಳಿಸ್ವಾಮಿ ೭) ಇಮ್ಮಡಿ ಮುರಿಗೀಸ್ವಾಮಿ ೮) ಇಮ್ಮಡಿ ಗುರುಸಿದ್ಧಸ್ವಾಮಿ ೯) ಸ್ವಾದಿಯ ಚನ್ನಬಸವಸ್ವಾಮಿ ೧೦) ಸಿರಹಟ್ಟಿ ಸಿದ್ಧಲಿಂಗಸ್ವಾಮಿ ೧೧) ಗುರುಪಾದಸ್ವಾಮಿ ೧೨) ಮೂರುಸಾವಿರದ

ಗುರುಪಾದಸ್ವಾಮಿ ೧೩) ಮೂರುಸಾವಿರದ ಶಿವಲಿಂಗಸ್ವಾಮಿ ೧೪) ಚೆನ್ನ ವೀರಸ್ವಾಮಿ ೧೫) ವ್ಯಾಕರಣದ ಸಿದ್ಧಲಿಂಗಸ್ವಾಮಿ ೧೬) ನಿಘಂಟಿನ ಸಿದ್ಧವೃಷಭಸ್ವಾಮಿ ೧೭) ಸಣ್ಣಬರೆಹದ ರಾಚೋಟಿಸ್ವಾಮಿ ೧೮) ಸಾವಳಗಿ ಶಿವಲಿಂಗಸ್ವಾಮಿ ೧೯) ಸಣ್ಣಪಾದದ ಚನ್ನವೀರಸ್ವಾಮಿ ೨೦) ಸಿರಸಂಗಿ ಮಹಾಲಿಂಗಸ್ವಾಮಿ ೨೧) ಹೆಬ್ಬಾಳು ರುದ್ರಸ್ವಾಮಿ ೨೨) ಬ್ಯಾಡಗಿ ಮುಪ್ಪಿನ ಸ್ವಾಮಿ ೨೩) ಜಯದೇವಸ್ವಾಮಿ ೨೪) ಜಯವಿಭವಸ್ವಾಮಿ ೨೫) ಈಗ ಶ್ರೀ ಮಲ್ಲಿಕಾರ್ಜುನ ಮುರಘಾಸ್ವಾಮಿಗಳು ಈ ಪೀಠಾಧಿಕಾರಿಗಳಾಗಿರುತ್ತಾರೆ.

(ಚಿತ್ರದುರ್ಗದ ಹನ್ನೆರಡನೆಯ ಪಾಳೆಯಗಾರ ಬಿಚ್ಚುಕತ್ತಿ ಭರಮಪ್ಪ ನಾಯಕನ ಕಾಲ ೧೬೮೯—೧೭೫೦. ಈತನ ಕಾಲದಲ್ಲಿಯೇ ಇಮ್ಮಡಿ ಮುರಿಗೀ ಸ್ವಾಮಿಗಳಿದ್ದುದು.)

## ೩

## ಗದಗ–ತೋಂಟದಾರ್ಯ ಮಠದ ಪಟ್ಟವಲ್ಲರಿ

೧) ತೋಂಟದ ಸಿದ್ಧಲಿಂಗಸ್ವಾಮಿ ೨) ಬೋಳಬಸವಸ್ವಾಮಿ ೧೪೫೯-೧೪೭೧ ೩) ಗೂಳೂರು ಸಿದ್ಧವೀರಸ್ವಾಮಿ ೧೪೭೧-೧೪೮೭ ೪) ಉದ್ಧಾನಾರ್ಯಸ್ವಾಮಿ ೧೪೮೭-೧೫೦೭ ೫) ಹರಿಹರಸ್ವಾಮಿ ೧೫೦೯-೧೫೩೦ ೬) ಭಿಕ್ಷದ ಬಸವಲಿಂಗಸ್ವಾಮಿ ೧೫೩೦-೧೫೬೦ ೭) ಕಟ್ಟಿಗೆಹಳ್ಳಿ ರಾಚೋಟಿಸ್ವಾಮಿ ೧೫೬೦-೧೬೧೦ ೮) ಕೌದಿ ಮಹಾಂತಸ್ವಾಮಿ ೧೬೧೦-೧೬೭೫ ೯) ಅರ್ಧನಾರೀಶ್ವರಸ್ವಾಮಿ ೧೬೭೫-೧೭೧೫ ೧೦) ಈಸೂರು ನಂದೀಶ್ವರಸ್ವಾಮಿ ೧೭೨೫-೧೭೭೦ ೧೧) ಉಗ್ಗದ ತೋಂಟದಾರ್ಯಸ್ವಾಮಿ ೧೭೭೦-೧೭೭೬ ೧೨) ಸದಾಶಿವಸ್ವಾಮಿ ೧೭೭೬-೧೮೧೧ ೧೩) ಮಹಾಂತ ಸ್ವಾಮಿ ೧೮೧೧-೧೮೪೧ ೧೪) ವೃದ್ಧ ತೋಂಟದಾರ್ಯಸ್ವಾಮಿ ೧೮೪೧-೧೮೮೧ ೧೫) ಮೃತ್ಯುಂಜಯಸ್ವಾಮಿ ೧೮೮೧-೧೮೮೪ ೧೬) ಸಿದ್ಧೇಶ್ವರ ಸ್ವಾಮಿ ೧೮೮೪-೧೯೨೨ ೧೭) ಈಗಿರುವ ಜಗದ್ಗುರು ಶ್ರೀ ಗುರುಬಸವ ಸ್ವಾಮಿಗಳು ೧೯೨೨-

# ಅನುಬಂಧ—೩

## * ಕ್ರಿ.ಶ. ೧೪೭೦ ರಿಂದ ೧೭೨೦ ರ ಅವಧಿಯಲ್ಲಿ ಆದ ವಿರಕ್ತ ಪರಂಪರೆ:

ಹರದನಹಳ್ಳಿ ಗೋಸಲ ಚನ್ನಬಸವೇಶ್ವರ, ಅವನ ಶಿಷ್ಯ ಎಡೆಯೂರು ತೋಂಟದ ಸಿದ್ಧಲಿಂಗೇಶ್ವರ (ಕ್ರಿ. ಶ. ೧೪೭೦) ಅವನ ಶಿಷ್ಯ ಬೋಳ ಬಸವೇಶ್ವರ (ಶಿವಪೂಜಾರ್ಯ)- ಅವನಿಗೆ ನಾಲ್ಕು ಜನ ಪ್ರಮುಖ ಶಿಷ್ಯರಿದ್ದರು. ೧) ಉದ್ದನೆಯಗುರು ಎಂಬ ಗಗನದಾರ್ಯ ೨) ಸಂಪಾದನೆಯ ಚನ್ನಂಜೇದೇವ ೩) ಚನ್ನಾಚಾರ್ಯ ಮತ್ತು ೪) ಗೂಳೂರು ಸಿದ್ಧಲಿಂಗ ಈ ನಾಲ್ಕುಜನ ರಿಗೂ ಪ್ರತ್ಯೇಕ ಶಿಷ್ಯ ಪರಂಪರೆಯಿತ್ತು. ಅದು ಹೀಗಿದೆ : ಮೊದಲನೆಯ ಶಾಖೆ: ೧) ಉದ್ದನೆಯ ಗುರು ಎಂಬ ಗಗನದಾರ್ಯ; ಕಟ್ಟಿಗೆಹಳ್ಳಿದೇವ; ಮುರಿಗೆಯ ಶಾಂತವೀರ (ಕ್ರಿ. ಶ. ೧೫೬೦); ಮುರಿಗೆಯ ದೇಶಿಕ; ಅವನಿಗೆ ಇಬ್ಬರು ಶಿಷ್ಯರು (i) ಮಹಾಂತಯ್ಯ ಅಥವಾ ಮುರಿಗೀಸ್ವಾಮಿ; (ii) ಕಂಪಿನಂಜಯ್ಯ ಈ ಇಬ್ಬರಲ್ಲಿ ಮಹಾಂತಯ್ಯನೆಂಬ ಮೊದಲನೆಯ ಮುರಿಗೀಸ್ವಾಮಿಯ ಶಿಷ್ಯನೇ ಇಮ್ಮಡಿ ಮುರಿಗೀಸ್ವಾಮಿ. ಎರಡನೆಯ ಶಾಖೆ: ೧) ಸಂಪಾದನೆಯ ಚನ್ನಂಜೇದೇವ; ಅವನಿಗೆ ಪರ್ವತೇಂದ್ರ ಮತ್ತು ಎಳಮಲೆಯ ಗುರುಶಾಂತ ಎಂಬ ಇಬ್ಬರು ಶಿಷ್ಯರಿದ್ದರು. ಈ ಪರ್ವತೇಂದ್ರನ ಶಿಷ್ಯನೇ ವಿರಕ್ತ ತೋಂಟದಾರ್ಯ; ಎಳಮಲೆಯ ಗುರುಶಾಂತನ ಶಿಷ್ಯನೇ ಸಂಪಾದನೆಯ ವೀರಾರ್ಯ. ಅಲ್ಲಿಗೆ ಆ ಶಾಖೆ ನಿಂತುಹೋಯಿತು.

ಮೂರನೆಯ ಶಾಖೆ : ೧) ಚನ್ನಾಚಾರ್ಯ; ಅವನಶಿಷ್ಯ ಮಲಯಗುರು ಶಾಂತ; ಅವನ ಶಿಷ್ಯ ಸಿದ್ಧವೀರೇಶ; ಅವನ ಶಿಷ್ಯ ಚನ್ನಮಲ್ಲಿಕಾರ್ಜುನ; ಅವನ ಶಿಷ್ಯ ಪರ್ವತೇಶ್ವರ.

ನಾಲ್ಕನೆಯ ಶಾಖೆ : ೧) ಗೂಳೂರು ಸಿದ್ಧಲಿಂಗ; ೨) ಗುಮ್ಮಳಾಪುರದ ಸಿದ್ಧವೀರೇಶ; ೩) ಗಗನಾರ್ಯ; ೪) ಕಟ್ಟಿಗೆಹಳ್ಳಿ ದೇವ; ೫) ಮುರಿಗೆಯ ಶಾಂತವೀರ ೬) ಬಹಳ ಕಾಲಾನಂತರ ಈ ಪರಂಪರೆಯಲ್ಲಿ ಇಮ್ಮಡಿ ಗುರುಸಿದ್ಧೇಶ; ೭) ಸೋಮಶೇಖರಶಿವಯೋಗಿ;

---

* (ಆಧಾರ : ಕವಿಚರಿತೆ ಭಾಗ II ಪುಟ 97-ರಲ್ಲಿ ಹೇಳಿರುವ ಸಂಗತಿಗಳನ್ನು ಅನುಸರಿಸಿ ಬರೆಯಲಾಗಿದೆ.)

ತೋಂಟದ ಸಿದ್ಧಲಿಂಗೇಶ್ವರನ ಗುರು ಗೋಸಲ ಚನ್ನಬಸವೇಶ್ವರನೆಂದು ಎಡೆಯೂರು ಸಿದ್ಧಲಿಂಗತಿಯ ವಚನದಲ್ಲಿ ಸ್ಪಷ್ಟವಾಗಿ ಹೇಳಿದೆ. ಆದರೆ ಚಿತ್ರದುರ್ಗದ ವಿರಕ್ತಮಠದ ಪಟ್ಟವಲ್ಲರಿಯಲ್ಲಿ ತೋಂಟದ ಸಿದ್ಧಲಿಂಗೇಶ್ವರನ ಗುರು ಉಳವಿಯಲ್ಲಿ ಬಯಲಾದ ಚನ್ನಬಸವಣ್ಣನೆಂದು ಹೇಳಿದೆ. ಇದು ಸುತರಾಂ ಸರಿಯಲ್ಲ. ಈ ಪಟ್ಟವಲ್ಲರಿ ಜಯದೇವಸ್ವಾಮಿಗಳ ಕಾಲದಲ್ಲಿ ಸಿದ್ಧವಾಯಿತು. ಸಿದ್ಧಲಿಂಗಯತಿಯ 'ವಚನ'ದಲ್ಲಿ ಹೇಳಿರುವ ಗುರುಪರಂಪರೆಗೂ, ಗುರುಸಿದ್ಧೇಶ್ವರಕೃತ 'ನಿಜಾಚರಣೆ' ಎಂಬ ಗ್ರಂಥದಲ್ಲಿ ಹೇಳಿರುವ ಗುರು ಪರಂಪರೆಗೂ ಅಕ್ಷರಶಃ ಹೋಲಿಕೆ ಇದೆ.

## ಅನುಬಂಧ—೪

### ಪರಿಚಯ

ವಿದ್ಯಾವಿಭೂಷಣ, ಸಾಹಿತ್ಯಪ್ರವೀಣ ಶ್ರೀ ಓ. ಎಸ್. ಲಿಂಗಣ್ಣಯ್ಯ, ಬಿ.ಎ.,(ಆನರ್ಸ್) ಅವರು ಕನ್ನಡ ನಾಡಿಗೆ ಚಿರಪರಿತರಾಗಿದ್ದಾರೆ. 'ಶ್ರೀಶೈಲಂ' ಎಂಬುದು ಇವರ ಕಾವ್ಯನಾಮ. ಇವರು ಉತ್ತಮ ಲೇಖಕರು, ವಾಗ್ಮಿಗಳು. ಇವರು ಮೈಸೂರು ವಿಶ್ವವಿದ್ಯಾನಿಲಯದ ಪದವೀಧರರು. ಇವರು ಮೈಸೂರು ರಾಜ್ಯದ ಸಿವಿಲ್ ಸರ್ವಿಸ್‌ನಲ್ಲಿ ಅಸಿಸ್ಟೆಂಟ್ ಕಮಿಷನರ್ ಆಗಿದ್ದರು. ಇವರು ಕಾರ್ಯದಕ್ಷರು, ನೀತಿನಿರ್ಮಲರು, ಕ್ಷಮಾಶೀಲರು, ಸುಸಂಸ್ಕೃತರು, ವಿದ್ಯಾ ವಿನಯಸಂಪನ್ನರು. ಪ್ರಜೋಪಕಾರಕಾರ್ಯಗಳಲ್ಲಿ ಇವರು ನಿಸ್ಸೀಮ ಅಧಿಕಾರಿ ಎನಿಸಿಕೊಂಡಿದ್ದರು. ಬಡವರಲ್ಲಿ ಇವರಿಗೆ ತುಂಬ ಕನಿಕರ. ಇಷ್ಟಾದರೂ ಇವರು ಯಾರಿಗೂ ಅಂಜಿನಡೆಯುವ ಸ್ವಭಾವದವರಲ್ಲ. ಇವರ ಅಧಿಕಾರಾವಧಿಯಲ್ಲಿ ಅನೇಕ ಬಡವರು ಸಾಗುವಳಿಗೆ ಜಮೀನನ್ನು ನಿರಾಯಾಸವಾಗಿ ಪಡೆಯುತ್ತಿದ್ದರು. ಇಂದಿಗೂ ಜನಸಾಮಾನ್ಯರು ಇವರನ್ನು ತಮ್ಮ ಪರಮಾಪ್ತ ಮಿತ್ರನಂತೆ ಗೌರವಿಸುತ್ತಾರೆ. ಇವರು ತಾ॥ ೧೨—೧೨—೧೯೬೫ ರಂದು ಸರ್ಕಾರಿ ಅಧಿಕಾರದಿಂದ ನಿವೃತ್ತರಾದರು. ಇವರಿಗೆ ಸರ್ಕಾರಿ ಕೆಲಸದಲ್ಲಿ ನಿತಾಂತನಿಷ್ಠೆಯಿದ್ದಂತೆಯೇ ಜನಸೇವಾ ಕಾರ್ಯದಲ್ಲಿಯೂ ಆಸಕ್ತಿಯಿತ್ತು. ಇವರು ರೆವಿನ್ಯೂ ಇಲಾಖೆಯಲ್ಲಿರದೆ ವಿದ್ಯಾ ಇಲಾಖೆಯಲ್ಲಿದ್ದಿದ್ದರೆ, ಸಾಹಿತ್ಯ

ಕ್ಷೇತ್ರದಲ್ಲಿ ಅಪಾರ ಖ್ಯಾತಿವಂತರಾಗುತ್ತಿದ್ದರೆಂದು ಜನ ಹೇಳುತ್ತಿದ್ದರು. ಸಾಹಿತ್ಯದಲ್ಲಿ ಇದು ಉಪಾಧ್ಯಾಯ ಯುಗ. ಉಪಾಧ್ಯಾಯ ಸಾಹಿತಿಯೇ ಪ್ರಮುಖ; ಉಪಾಧ್ಯಾಯೇತರ ಸಾಹಿತಿ ಗೌಣ! ಅಪವಾದವೂ ಇರಬಹುದು. ಸ್ವಾತಂತ್ರ್ಯಪೂರ್ವದ ಆಡಳಿತದಲ್ಲಿ ಇವರು ಸಮರ್ಥ ಅಧಿಕಾರಿಯೆನಿಸಿಕೊಂಡು ಸಾಹಿತ್ಯಕ್ಷೇತ್ರದಲ್ಲಿ ದುಡಿದರೆಂದರೆ, ಅದು ಅವರ ಅಪೂರ್ವಸಾಮರ್ಥ್ಯ! ಶ್ರೀ ಲಿಂಗಣ್ಣಯ್ಯನವರ ಪೂರ್ವ ವಯಸ್ಸಿನಲ್ಲಿ ರೆವಿನ್ಯೂ ಇಲಾಖೆ ಸವ್ಯಸಾಚಿ ಯಂತಿತ್ತು! ಸ್ವಾತಂತ್ರ್ಯ ಬಂದಮೇಲೆ ಈ ಇಲಾಖೆ ಅಶಕ್ತ ಪೋಷಣಾಲಯ ವಾಯಿತು! ಆ ಇಲಾಖೆ ತನ್ನ ರೆಕ್ಕೆ ಪುಕ್ಕಗಳನ್ನು ಕಳೆದುಕೊಂಡಿತು. ಅದು ನಿಸ್ತೇಜವಾಯಿತು; ನಿರ್ಬಲವಾಯಿತು! ಸರ್ಕಾರವೂ ಆ ಇಲಾಖೆಯ ಶಕ್ತಿ ಯನ್ನು ಕುಗ್ಗಿಸಿತು. ರೆವಿನ್ಯೂ ಅಧಿಕಾರಿಗಳಲ್ಲಿ ಅನೇಕರಿಗೆ ಸಾಹಿತ್ಯ ಗಂಧವಿಲ್ಲ; ಸಂಸ್ಕೃತಿಯ ಪರಿಮಳವಿಲ್ಲ! ಇಂಥವರು ಅಪ್ರತ್ಯಕ್ಷವಾಗಿ ಶ್ರೀ ಲಿಂಗಣ್ಣಯ್ಯ ನವರನ್ನು ಕಂಡು ಕರುಬಿದರು; ಅಹಿತರಂತೆ ನಡೆದುಕೊಂಡರು! ಆದರೂ, ಇವರು ಅಂಥವರನ್ನು ನಿರ್ಲಕ್ಷಿಸಿದರು; ಎಚ್ಚರಿಸಿದರು! ಇವರು ಬರೆಯುತ್ತಿರುವ "ಸ್ಮೃತಿಪಥ" ಎಂಬ ಪುಸ್ತಕದಲ್ಲಿ ಈ ಇಲಾಖೆಯ ಅನೇಕ ಸ್ವಾರಸ್ಯಕರ ವ್ಯಕ್ತಿ ಚಿತ್ರಗಳನ್ನು ಮೂಡಿಸಿದ್ದಾರೆ!

ಶ್ರೀ ಲಿಂಗಣ್ಣಯ್ಯನವರ ಹಿರಿಯರು ವೇದಶಾಸ್ತ್ರ ಸಂಪನ್ನರು; ಉದ್ದಾಮ ಪಂಡಿತರು; ಪುರಾಣಪ್ರವಚನ ಪ್ರವೀಣರು; ವೀರಶೈವ ಮತ್ತು ಜೈನತತ್ತ್ವ ಶಾಸ್ತ್ರಗಳಲ್ಲಿ ನಿಪುಣರು. ಅಲ್ಲದೆ, ಅವರು ಹಿಂದೆ ನಿಡುಗಲ್ಲು ಪಾಳೆಯಗಾರರ ಆಶ್ರಯದಲ್ಲಿ ಜ್ಯೋತಿಷ ಮತ್ತು ತರ್ಕ ಶಾಸ್ತ್ರಗಳಲ್ಲಿ ಪಂಡಿತರಾಗಿ ಕೀರ್ತಿ ಗೌರವಗಳನ್ನು ಪಡೆದಿದ್ದರು. ಈ ವೀರಶೈವ ಗುರುಸ್ಥಲ ಕುಟುಂಬದವರು ಸಾಹಿತ್ಯ ಮತ್ತು ಸಂಸ್ಕೃತಿ ಸಂಪನ್ನರಾಗಿ ಸಮಾಜ ಹಿತೈಷಿಗಳಾಗಿದ್ದರು. ನಿಡುಗಲ್ಲು ಪಾಳೆಯಪಟ್ಟು ಹಾಳಾದಮೇಲೆ ಈ ಮನೆತನದವರು ಉತ್ತರ ಪಿನಾಕಿನಿ ಮತ್ತು ಜಯಮಂಗಳಾ ನದಿಗಳ ತೀರಪ್ರದೇಶಗಳಲ್ಲಿರುವ ಶ್ರಾವಂಡನ ಹಳ್ಳಿ, ಮುದಗೆರೆ, ಗೋಡಲಾಪುರ, ಹೊಳವನಹಳ್ಳಿ, ಎಲೆರಾಂಪುರ, ಊರಡಗೆರೆ ಮೊದಲಾದ ನಾನಾ ಗ್ರಾಮಗಳಲ್ಲಿ ನೆಲೆಸಿದರೆಂದು ತಿಳಿದುಬರುತ್ತದೆ. ಶ್ರೀ ಲಿಂಗಣ್ಣಯ್ಯನವರ ತಂದೆ ಶ್ರೀ ಓದಿನ ಎಳೆಯ ನಂಜುಂಡಯ್ಯನವರು; ತಾಯಿ ಶ್ರೀಮತಿ ಗಂಗಮ್ಮನವರು. ಈ ದಂಪತಿಗಳಿಗೆ ಬಹಳಕಾಲ ಸಂತಾನವಿರಲಿಲ್ಲ.

ಹಿಂದೆ ಬಾಳೇಹಳ್ಳಿ ಜಗದ್ಗುರು ಶ್ರೀ ಪಂಚಾಕ್ಷರ ಶಿವಾಚಾರ್ಯ ಮಹಾ ಸ್ವಾಮಿಗಳು ಮುದಗೆರೆ ಗ್ರಾಮಕ್ಕೆ ದಯಮಾಡಿಸಿದ್ದರು. ಅವರು ಈ ದಂಪತಿಗಳ ಭಕ್ತಿಭಾವಗಳನ್ನು ಪರಿಭಾವಿಸಿ, ರೇಣುಕನ ಕೃಪೆಯಿಂದ ನಿಮಗೆ ಪುತ್ರಸಂತಾನವಾಗುತ್ತದೆಂದು ಹರಸಿ, ವಿಭೂತಿಪ್ರಸಾದವನ್ನಿತ್ತು ಆಶೀರ್ವದಿಸಿದರು. ಅವರ ಅನುಗ್ರಹದ ಫಲವೇ ಶ್ರೀ ಲಿಂಗಣ್ಣಯ್ಯನವರು. ಈ ದಂಪತಿಗಳಿಗೆ ಇವರು ಒಬ್ಬರೇ ಮಗ; ನಾಲ್ಕು ಹೆಣ್ಣುಮಕ್ಕಳು. ಇವರ ಅಧಿಕಾರಾವಧಿಯಲ್ಲಿ ಇವರು ಸಾಹಿತ್ಯ, ಸಂಸ್ಕೃತಿ ಮತ್ತು ಕಲೆಗಳಿಗೆ ಆಶ್ರಯ ನೀಡಿದರು; ಇವರು ಹಿಡಿದ ಕೆಲಸವನ್ನು ಸಾಧಿಸುವುದರಲ್ಲಿ ಎಂದೂ ವಿಫಲರಾಗಿಲ್ಲ; ತುಂಬ ವ್ಯವಹಾರಕುಶಲರು. ಇವರ ಮೊದಲನೆಯ ಕುಟುಂಬ ಶ್ರೀಮತಿ ಸೌ|| ಸಂಜಮ್ಮನವರು ಪುತ್ರ ಸಂತಾನವನ್ನು ಪಡೆದು ತಾಯಿ, ಮಗು ಇಬ್ಬರೂ ಮೂರು ದಿನಗಳಲ್ಲಿಯೇ ಶಿವನೆಡೆಗೆ ಸಂದರು. ಆಗಿನ್ನೂ ಲಿಂಗಣ್ಣಯ್ಯನವರು ಕಾಲೇಜು ವಿದ್ಯಾರ್ಥಿ. ಇವರ ತಂದೆಯವರು ಪುನಃ ಐದು ತಿಂಗಳಲ್ಲಿಯೇ ಲಿಂಗಣ್ಣಯ್ಯನವರಿಗೆ ವಿವಾಹ ಮಾಡಿದರು. ಶ್ರೀಮತಿ ಸೌ|| ಪುಟ್ಟಗೌರಮ್ಮನವರು ಈಗ ಇವರ ಧರ್ಮಪತ್ನಿ. ಇವರು ಶಿವಭಕ್ತಿ ಸಂಪನ್ನೆಯರು; ಶಿವಪೂಜಾ ತೇಜಸ್ವಿನಿಯರು; ಎಂಟು ಮಕ್ಕಳ ತಾಯಿ. ಒಬ್ಬನೇ ಮಗ ಚಿ|| ವಿಜಯನಾಗಭೂಷಣ. ಇವನೇ ನಾಗಭೂಷಣಸ್ವಾಮಿ, ನಾಗಭೂಷಣಾರ್ಯ, ನಾಗಾನಂದ, ಪುಟ್ಟಣ್ಣ, ಕಂದಯ್ಯ. ಇವನಿಗೆ ಇನ್ನೂ ಎಷ್ಟೋ ಹೆಸರುಗಳಿವೆ. ಶ್ರೀ ಲಿಂಗಣ್ಣಯ್ಯನವರು ವಿದ್ವಾಂಸರು; ವಿನಯಶೀಲರು; ರಸಿಕರು. ಇವರು ಬಿಡುವಿಲ್ಲದೆ ಸಾಹಿತ್ಯ ಕ್ಷೇತ್ರದಲ್ಲಿ ದುಡಿಯುತ್ತಿದ್ದಾರೆ; ಸದಾ ಜ್ಞಾನಾರ್ಜನೆ ಮಾಡುತ್ತಿರುತ್ತಾರೆ. ಸಾಹಿತ್ಯಾನಂದವನ್ನೇ ಶಿವಾನಂದವೆಂದು ಅನುಭವಿಸುತ್ತ ಸಂತೃಪ್ತರಾಗಿದ್ದಾರೆ. ಇವರ 'ಶೂನ್ಯ ಸಿಂಹಾಸನ' ಗ್ರಂಥವನ್ನು ಪ್ರಕಟಿಸಲು ನಮಗೆ ಅನುಮತಿಯನ್ನು ಕೊಟ್ಟಿರುತ್ತಾರೆ. ನಾವು ಶ್ರೀ ಲಿಂಗಣ್ಣಯ್ಯನವರಿಗೆ ಕೃತಜ್ಞರಾಗಿದ್ದೇವೆ.

"ನಾಗಾನಂದ"
ಕೃಷ್ಣರಾಜಪುರಂ–ಬೆಂಗಳೂರು
ತಾ|| ೨೯–೩–೧೯೬೮

ಪ್ರಕಾಶಕರು
ಬಿ. ಎಸ್. ಗಂಗಾಧರಶಾಸ್ತ್ರಿ

# ಶೂನ್ಯ ಸಿಂಹಾಸನ

## ಪದವಾಕ್ಯಪ್ರಮಾಣ

| ಪುಟ | ಪಂಕ್ತಿ | ತಪ್ಪು | ಸರಿ |
|---|---|---|---|
| ೧೬ | ೧೬ | ಮನೋಹರಂ | ಮನೋರಮಂ |
| ೧೬ | ೧೭ | ಸಾಮೂಹಿತಃ | ಸಮಾಹಿತಃ |
| ೬೨ | ೨೯ | ಜ್ಞಾನತೇಜಸ್ಸು ಅವನ ಭಾವಲಿಂಗದ ಪ್ರಭಾವಳಿ ಯಾಗಿ | ಈ ಪದಸಮುದಾಯವನ್ನು ಬಿಟ್ಟು ಓದಬೇಕು |
| ೮೮ | ೨೪ | ಧಾಮಿಕ ಪೀಠ | ಧಾರ್ಮಿಕ ಪೀಠ |
| ೯೭ | ೨೭ | ಪಂಚಪರಮೇಷಿ | ಪಂಚಪರಮೇಷ್ಠಿ |
| ೧೧೧ | ೪ | ಜನರು ಇವರನ್ನು ತಿಪ್ಪೇರುದ್ರಸ್ವಾಮಿ ಎಂದು ಕರೆಯುತ್ತಾರೆ | ಈ ವಾಕ್ಯವನ್ನು ಬಿಟ್ಟು ಬಿಡಬೇಕು |
| ೧೧೬ | ೧ ಮತ್ತು ೪ | ಹರಪನಹಳ್ಳಿ | ಹರದನಹಳ್ಳಿ |
| ೧೨೨ | ೨೪ | ಹದಿನಾರನೆಯ | ಹದಿನೈದನೆಯ |
| ೧೪೪ | ೨೬ | "ನಿರಂಜನಪ್ರಭಾ" | "ನಿರಂಜನ" |
| ೧೫೬ | ೧೯ | ಸಿಂಗಾರಾರ್ಯ | ಸಿಂಗರಾರ್ಯ |
| ೧೬೬ | ೧೪ | ಕಟ್ಟಿಪ | ಕಟ್ಟಿಸ |
| ೧೬೭ | ೨೫ | 'ನಿರಂಜನವಂಶ ರತ್ನಾಕರ' | 'ಶ್ರೀ ಜಯದೇವ ಲೀಲೆ' |
| ೨೨೫ | ೧೭ | ಶಕ ೧೬೪೭ | ಶಕ ೧೬೪೨ |
| ೨೩೯ | ೨ | ತುಂಗಭದ್ರಾ ನದಿಯ | ತುಂಗಾ ನದಿಯ |
| ೨೪೧ | ೨೩ | ಜಯಿಸಿನನೆಂದೂ | ಜಯಿಸಿದನೆಂದೂ |
| ೨೪೭ | ೭ | ತರಂಗ ೧೫ | ತರಂಗ ೧೬ |
| ೨೭೨ | ೨೧ | ಪ್ರಯೊಬ್ಬರೂ | ಪ್ರತಿಯೊಬ್ಬರೂ |
| ೨೯೮ | ೧೪ | ಮುಂಭಾದಲ್ಲಿ | ಮುಂಭಾಗದಲ್ಲಿ |
| ೩೧೬ | ೨೪ | ಸಾಧವರ್ಯ | ಸಾಧುವರ್ಯ |

ಹಿಂದೆ ಬಾಳೇಹಳ್ಳಿ ಜಗದ್ಗುರು ಶ್ರೀ ಪಂಚಾಕ್ಷರ ಶಿವಾಚಾರ್ಯ ಮಹಾ ಸ್ವಾಮಿಗಳು ಮುಪಗೆರೆ ಗ್ರಾಮಕ್ಕೆ ದಯಮಾಡಿಸಿದ್ದರು. ಅವರು ಈ ದಂಪತಿಗಳ ಭಕ್ತಿಭಾವಗಳನ್ನು ಪರಿಭಾವಿಸಿ, ರೇಣುಕನ ಕೃಪೆಯಿಂದ ನಿಮಗೆ ಪುತ್ರಸಂತಾನವಾಗುತ್ತದೆಂದು ಹರಸಿ, ವಿಭೂತಿಪ್ರಸಾದವನ್ನಿತ್ತು ಆಶೀರ್ವದಿಸಿ ದರು. ಅವರ ಅನುಗ್ರಹದ ಫಲವೇ ಶ್ರೀ ಲಿಂಗಣ್ಣಯ್ಯನವರು. ಈ ದಂಪತಿಗಳಿಗೆ ಇವರು ಒಬ್ಬರೇ ಮಗ; ನಾಲ್ಕು ಹೆಣ್ಣುಮಕ್ಕಳು. ಇವರ ಅಧಿಕಾರಾವಧಿಯಲ್ಲಿ ಇವರು ಸಾಹಿತ್ಯ, ಸಂಸ್ಕೃತಿ ಮತ್ತು ಕಲೆಗಳಿಗೆ ಆಶ್ರಯ ನೀಡಿದರು; ಇವರು ಹಿಡಿದ ಕೆಲಸವನ್ನು ಸಾಧಿಸುವುದರಲ್ಲಿ ಎಂದೂ ವಿಫಲರಾಗಿಲ್ಲ; ತುಂಬ ವ್ಯವಹಾರಕುಶಲರು. ಇವರ ಮೊದಲನೆಯ ಕುಟುಂಬ ಶ್ರೀಮತಿ ಸೌ॥ ಸಂಜಮ್ಮನವರು ಪುತ್ರ ಸಂತಾನವನ್ನು ಪಡೆದು ತಾಯಿ, ಮಗು ಇಬ್ಬರೂ ಮೂರು ದಿನಗಳಲ್ಲಿಯೇ ಶಿವನೆಡೆಗೆ ಸಂದರು. ಆಗಿನ್ನೂ ಲಿಂಗಣ್ಣಯ್ಯನವರು ಕಾಲೇಜು ವಿದ್ಯಾರ್ಥಿ. ಇವರ ತಂದೆಯವರು ಪುನಃ ಐದು ತಿಂಗಳಲ್ಲಿಯೇ ಲಿಂಗಣ್ಣಯ್ಯನವರಿಗೆ ವಿವಾಹ ಮಾಡಿದರು. ಶ್ರೀಮತಿ ಸೌ॥ ಪುಟ್ಟಗೌರಮ್ಮ ನವರು ಈಗ ಇವರ ಧರ್ಮಪತ್ನಿ. ಇವರು ಶಿವಭಕ್ತಿ ಸಂಪನ್ನೆಯರು; ಶಿವ ಪೂಜಾ ತೇಜಸ್ವಿನಿಯರು; ಎಂಟು ಮಕ್ಕಳ ತಾಯಿ. ಒಬ್ಬನೇ ಮಗ ಚಿ॥ ವಿಜಯನಾಗಭೂಷಣ. ಇವನೇ ನಾಗಭೂಷಣಸ್ವಾಮಿ, ನಾಗಭೂಷಣಾರ್ಯ, ನಾಗಾನಂದ, ಪುಟ್ಟಣ್ಣ, ಕಂದಯ್ಯ. ಇವನಿಗೆ ಇನ್ನೂ ಎಷ್ಟೋ ಹೆಸರುಗಳಿವೆ. ಶ್ರೀ ಲಿಂಗಣ್ಣಯ್ಯನವರು ವಿದ್ವಾಂಸರು; ವಿನಯಶೀಲರು; ರಸಿಕರು. ಇವರು ಬಿಡುವಿಲ್ಲದೆ ಸಾಹಿತ್ಯ ಕ್ಷೇತ್ರದಲ್ಲಿ ದುಡಿಯುತ್ತಿದ್ದಾರೆ; ಸದಾ ಜ್ಞಾನಾರ್ಜನೆ ಮಾಡುತ್ತಿರುತ್ತಾರೆ. ಸಾಹಿತ್ಯಾನಂದವನ್ನೇ ಶಿವಾನಂದವೆಂದು ಅನುಭವಿಸುತ್ತ ಸಂತೃಪ್ತರಾಗಿದ್ದಾರೆ. ಇವರ 'ಶೂನ್ಯ ಸಿಂಹಾಸನ' ಗ್ರಂಥವನ್ನು ಪ್ರಕಟಿಸಲು ನಮಗೆ ಅನುಮತಿಯನ್ನು ಕೊಟ್ಟಿರುತ್ತಾರೆ. ನಾವು ಶ್ರೀ ಲಿಂಗಣ್ಣಯ್ಯನವರಿಗೆ ಕೃತಜ್ಞರಾಗಿದ್ದೇವೆ.

"ನಾಗಾನಂದ"
ಕೃಷ್ಣರಾಜಪುರಂ–ಬೆಂಗಳೂರು
ತಾ॥ ೨೯–೩–೧೯೬೮

ಪ್ರಕಾಶಕರು
ಬಿ. ಎಸ್. ಗಂಗಾಧರಶಾಸ್ತ್ರಿ

# ಶೂನ್ಯ ಸಿಂಹಾಸನ

## ಪದವಾಕ್ಯಪ್ರಮಾಣ

| ಪುಟ | ಪಂಕ್ತಿ | ತಪ್ಪು | ಸರಿ |
|---|---|---|---|
| ೧೬ | ೧೬ | ಮನೋಹರಂ | ಮನೋರಮಂ |
| ೧೬ | ೧೭ | ಸಾಮೂಹಿತಃ | ಸಮಾಹಿತಃ |
| ೬೩ | ೨೯ | ಜ್ಞಾನತೇಜಸ್ಸು ಅವನ ಭಾವಲಿಂಗದ ಪ್ರಭಾವಳಿ ಯಾಗಿ | ಈ ಪದಸಮುದಾಯವನ್ನು ಬಿಟ್ಟು ಓದಬೇಕು |
| ೮೮ | ೨೪ | ಧಾಮಿಕ ಪೀಠ | ಧಾರ್ಮಿಕ ಪೀಠ |
| ೯೭ | ೨೭ | ಪಂಚಪರಮೇಷಿ | ಪಂಚಪರಮೇಷ್ಠಿ |
| ೧೧೧ | ೪ | ಜನರು ಇವರನ್ನು ತಿಪ್ಪೇರುದ್ರಸ್ವಾಮಿ ಎಂದು ಕರೆಯುತ್ತಾರೆ | ಈ ವಾಕ್ಯವನ್ನು ಬಿಟ್ಟು ಬಿಡಬೇಕು |
| ೧೧೬ | ೧ ಮತ್ತು ೪ | ಹರಪನಹಳ್ಳಿ | ಹರದನಹಳ್ಳಿ |
| ೧೨೩ | ೨೪ | ಹದಿನಾರನೆಯ | ಹದಿನೈದನೆಯ |
| ೧೪೪ | ೨೬ | "ನಿರಂಜನಪ್ರಭಾ" | "ನಿರಂಜನ" |
| ೧೫೬ | ೧೯ | ಸಿಂಗಾರಾರ್ಯ | ಸಿಂಗರಾರ್ಯ |
| ೧೬೬ | ೧೪ | ಕಟ್ಟಪ | ಕಟ್ಟಸ |
| ೧೬೭ | ೨೫ | 'ನಿರಂಜನವಂಶ ರತ್ನಾಕರ' | 'ಶ್ರೀ ಜಯದೇವ ಲೀಲೆ' |
| ೩೩೫ | ೧೭ | ಶಕ ೧೬೪೭ | ಶಕ ೧೬೪೩ |
| ೩೩೯ | ೩ | ತುಂಗಭದ್ರಾ ನದಿಯ | ತುಂಗಾ ನದಿಯ |
| ೩೪೧ | ೨೩ | ಜಯಿಸಿನನೆಂದೂ | ಜಯಿಸಿದನೆಂದೂ |
| ೩೪೭ | ೭ | ತರಂಗ ೧೫ | ತರಂಗ ೧೬ |
| ೩೬೩ | ೨೧ | ಪ್ರಯೊಬ್ಬರೂ | ಪ್ರತಿಯೊಬ್ಬರೂ |
| ೩೯೮ | ೧೪ | ಮುಂಭಾದಲ್ಲಿ | ಮುಂಭಾಗದಲ್ಲಿ |
| ೪೧೬ | ೨೪ | ಸಾಧವರ್ಯ | ಸಾಧುವರ್ಯ |

## ಕ್ರಿ. ಶ. ೧೪೭೦ ರಿಂದ ೧೭೨೦ ರ ಅವಧಿಯಲ್ಲಿ ಆದ ವಿರಕ್ತ ಪರಂಪರೆ :—

ಹರದನಹಳ್ಳಿ ಗೋಸಲಚನ್ನಬಸವೇಶ್ವರ

|

ತೋಂಟದ ಸಿದ್ಧೇಶ್ವರ (ಸುಮಾರು ೧೪೭೦)

|

ಬೋಳಬಸವೇಶ್ವರ (ಶಿವಪೂಜಾರ್ಯ)

|

- ೧) ಉದ್ದಾನಯ್ಯ (ಗಗನದಾರ್ಯ)
  - ಕಟ್ಟಿಗೆಹಳ್ಳಿದೇವ
    - ಮುರಿಗೆಯ ಶಾಂತವೀರ (೧೫೬೦)
- ೨) ಸಂಪಾದನೆಯ (೧೫೩೦) ಚನ್ನಂಜೆದೇವನ
  - ೧) ಪರ್ವತೇಂದ್ರ
    - ವಿರಕ್ತ ತೋಂಟದಾರ್ಯ
  - ೨) ಎಳಮಲೆಯ ಗುರುಶಾಂತ
    - ಸಂಪಾದನೆಯ ವೀರಾರ್ಯ
- ೩) ಚನ್ನಾಚಾರ್ಯ
  - ಮಲಯ ಗುರುಶಾಂತ
    - ಸಿದ್ಧವೀರೇಶ
      - ಚನ್ನಮಲ್ಲಿಕಾರ್ಜುನ
        - ಪರ್ವತೇಶ್ವರ
- ೪) ಗೂಳೂರು ಸಿದ್ಧಲಿಂಗ
  - ಗುಮ್ಮಳಾಪುರ ಸಿದ್ಧವೀರೇಶ
    - ಗಗನಾರ್ಯ

ಮುರಿಗೆಯ ದೇಶಿಕ

೧) ಮಹಾಂತಯ್ಯ (ಮುರಿಗೆಯಸ್ವಾಮಿ ೧೬೨೦)
↳ ಇಮ್ಮಡಿ ಮುರಿಗೆಯಸ್ವಾಮಿ (೧೭೫೦)

೨) ಕಂಪಿನಂಜಯ್ಯ

ಕಟ್ಟಿಗೆಹಳ್ಳಿ ದೇವ
↳ ಮುರಿಗೆಯ ಶಾಂತವೀರೇಶ
↳ ಮುರಿಗೆಯ ಗುರುಸಿದ್ಧೇಶ
↳ ಸೋಮಶೇಖರ ಶಿವಯೋಗಿ

ಸೂಚನೆ :— ಇಮ್ಮಡಿ ಮುರಿಗೆಸ್ವಾಮಿಯೇ ಬೇರೆ ಮುರಿಗೆ ಶಾಂತವೀರನೇ ಬೇರೆ.
೩ ನೆಯ ಅನುಬಂಧವನ್ನು ಅವಲೋಕಿಸಿರಿ.

# ಪುಷ್ಪಾಂಜಲಿ

ಸನಾತನ ವೀರಶೈವ ಧರ್ಮವನ್ನು ವಿಶ್ವಧರ್ಮ ಶೂನ್ಯ ಸಿಂಹಾಸನದಲ್ಲಿ ಸಂಸ್ಥಾಪಿಸಿ ಮಾನವಕುಲವೆಲ್ಲ ಒಂದೇ ಎಂಬ ಸದ್ಭಾವನೆಯನ್ನು ಮಾಡಿಸಿ ಶರಣಧರ್ಮ ಸ್ವಾತಂತ್ರ್ಯವನ್ನು ಉದ್ಘೋಷಿಸಿದ ಮಹಾನುಭಾವಿ ಶ್ರೀ ಕಲ್ಯಾಣ ಬಸವಣ್ಣನವರ ಎಂಟನೆಯ ಶತಮಾನೋತ್ಸವದ ಶುಭ ಸಂಸ್ಮರಣೆಯಲ್ಲಿ ಈ 'ಶೂನ್ಯ ಸಿಂಹಾಸನ' ಗ್ರಂಥ ಮಂದಾರ ಪುಷ್ಪವನ್ನು ಮಹಾಗುರು ಶ್ರೀ ಕೂಡಲ ಸಂಗಮನಾಥಸ್ವಾಮಿಯ ದಿವ್ಯ ಸನ್ನಿಧಿಯಲ್ಲಿ ಅರ್ಪಣೆ ಮಾಡಿರುತ್ತೇನೆ.

ಚಿತ್ರದುರ್ಗ
ಕೀಲಕ ಸಂವತ್ಸರ
ಚೈತ್ರಶುದ್ಧ ಪಾಡ್ಯಮಿ
ಶುಕ್ರವಾರ – ಯುಗಾದಿ
ತಾ॥ ೨೯-೩-೧೯೬೮

ಗ್ರಂಥಕರ್ತರು :
ವಿದ್ಯಾ ವಿಭೂಷಣ
ಸಾಹಿತ್ಯ ಪ್ರವೀಣ
ಓ. ಎಸ್. ಲಿಂಗಣ್ಣಯ್ಯ